# ಕವಿರಾಜಮಾರ್ಗ ವಿವೇಕ



ಮುಳಿಯ ತಿಮ್ಮಪ್ಪಯ್ಯ



## ಕವಿರಾಜಮಾರ್ಗವಿವೇಕ—

ಈ ಗ್ರಂಥದ ಭಾಗ ಒಂದರಲ್ಲಿ—

ಕ್ರಿಸ್ತಪೂರ್ವ 8-9ನೆಯ ಶತಮಾನದ ಕನ್ನಡಿಗ ರಾಷ್ಟ್ರಕೂಟ ಮುಮ್ಮಡಿ ಗೋವಿಂದರಾಜನು ಅಖಿಲಭಾರತ ಚಕ್ರವರ್ತಿಯಾಗಿ ಮೆರೆದವನು, ಎಂಬ ಅಂಶವು ಯಾವ ಕನ್ನಡಿಗನ ಕುತೂಹಲವನ್ನು ತಾನೇ ಕೆರಳಿಸದು? ಮುಮ್ಮಡಿ ಗೋವಿಂದನ ಶೀಲಸ್ವಭಾವ, ದಿಗ್ವಿಜಯ ಕ್ರಮಗಳು ಶಾಸನಾಧಾರದೊಡನೆ ಇಲ್ಲಿ ನಿರೂಪಿತವಾಗಿವೆ. ದಂತಿವರ್ಮ (622) ನಿಂದ ತೊಡಗಿ ನೃಪತುಂಗ (802-877)ನ ವರೆಗಿನ ವಂಶವಿಚಾರಗಳೂ ಇಲ್ಲಿ ಬಂದಿವೆ.

ಕೀರ್ತಿನಾರಾಯಣ ಗೋವಿಂದರಾಜನ ರಾಜಧಾನಿ ಮಾನ್ಯಖೇಟವಲ್ಲ-ಅದು ಭಾರತಮಧ್ಯದ ವಿಂಧ್ಯಪಾದದಲ್ಲಿ ಕಂಗೊಳಿಸಿತ್ತು. ಆತನು ವಿಹರಿಸುತ್ತಿದ್ದ ಹೇಲಾನಗರವನ್ನು ಅವನ ಪುತ್ರ ಶರ್ವ ನೃಪತುಂಗನು ಸ್ವರಾಜಧಾನಿಯನ್ನಾಗಿ ಏಕ ಮಾರ್ಪಡಿಸಿಕೊಳ್ಳಬೇಕಾಯಿತು? ನೃಪತುಂಗನ ಸ್ಥಿತಿಗತಿಗಳೇನು, ಆತನು ಅನುಭವಿಸಿದ ದಾರುಣ ಕಷ್ಟಪರಂಪರೆಗಳೇನು, ಅವನ ರಾಜ್ಯಭಾರ ಕ್ರಮ ಹೇಗಿತ್ತು? ಅವನ ಮತಧರ್ಮಗಳೇನು, ಅಂದಿನ ಕನ್ನಡ ವ್ಯಾಪ್ತಿ ಎಷ್ಟು? ಇವೆಲ್ಲ ಐತಿಹಾಸಿಕ ಪ್ರಶ್ನೆಗಳಿಗೆ ಸಾಧಾರಣವಾದ ಉತ್ತರಗಳನ್ನು ಈ ಭಾಗದಲ್ಲ ನೋಡಿ. ಕನ್ನಡಕ್ಕೆ ಸೀಮಾ ಗ್ರಂಥವಾದ **'ಕವಿರಾಜಮಾರ್ಗ'**ವು ನೃಪತುಂಗ ರಚಿತವಾದ ಗ್ರಂಥವಲ್ಲ—ಅದು 'ನೃಪತುಂಗಾನುಮತ'ವಾದ ಗ್ರಂಥ. ನೃಪತುಂಗನ ಸಭಾಸದರಲ್ಲಿ ಒಬ್ಬನಾದ ಶ್ರೀ ವಿಜಯನೆಂದು ಹೆಸರು ಪಡೆದ 'ಜಯಾಬ್ಜಿ'ನೇ ಅದರ ಕರ್ತೃ ಎಂದು ಅಂತರ-ಬಾಹ್ಯ ಪ್ರಮಾಣಗಳಿಂದ ಸ್ಥಾಪಿತವಾದ ಸಿದ್ಧಾಂತಕ್ಕೆ ಈ ಭಾಗವನ್ನು ನೋಡಿ.

ತಿರುಳುಗನ್ನಡದ ಸಂಸ್ಕೃತಿಯೇನು? ಕನ್ನಡ ನಾಡಿನ ಬಾಹ್ಯಾಂತರಂಗ ಸ್ವರೂಪ ಆ ಕಾಲದಲ್ಲಿ ಹೇಗಿತ್ತು— ಎಂಬ ವಿವರಗಳು ಈ ಭಾಗದಲ್ಲಿವೆ.

[...ಹಿಂಬದಿಯ ಮಡಿಕೆಯನ್ನು ನೋಡಿ

ರೂ. 20·00



ನನ : ಮಾರ್ಚ್ ೩, ೧೮೮೮]     ಮುಳಿಯ ತಿಮ್ಮಪ್ಪಯ್ಯ     [ನಿಧನ : ಜನವರಿ ೧೬, ೧೯

ಮುಳಿಯ ತಿಮ್ಮಪ್ಪಯ್ಯ

---

# ಕವಿರಾಜಮಾರ್ಗ ವಿವೇಕ

ಸಂಪಾದಕ
ಎಂ. ಕೇಶವ ಭಟ್ಟ

ಪ್ರತಿಭಾವತ್ತ್ವಮುಮಕೃತಕ
ಚತುರತೆಯುಂ ಪರಮಬುಧಜನೋಪಾಸನಮುಂ
ಕೃತಿಪರಿಚಯಮುಮಂ ತರ್ಕಂ
ಪ್ರತೀತಿಯುಂ ವಾಗ್ವಿದಗ್ಧತಾನಿಪುಣತೆಯೊಳ್

—'ಕವಿರಾಜಮಾರ್ಗ', i-11

ಗೀತಾ ಬುಕ್ ಹೌಸ್
ನ್ಯೂ ಸ್ಟ್ಯಾಚ್ಯು ಸರ್ಕಲ್, ಮೈಸೂರು

# ಸಂಪಾದಕನ ಅರಿಕೆ

—ಇಪ್ಪತ್ತೈದು ವರ್ಷಗಳ ಹಿಂದೆ, ಮೇ ೧೯೪೪ರಲ್ಲಿ, ಈ ಗ್ರಂಥದ ಮೊದಲ ಭಾಗ ಪ್ರಕಟವಾಯಿತು.

—ಗ್ರಂಥಕರ್ತರು ಕಣ್ಮರೆಯಾಗಿ ಇಪ್ಪತ್ತಮೂರು ವರ್ಷಗಳು ಸಂದ ಮೇಲೆ, ಇದೀಗ ಸಮಗ್ರ ಗ್ರಂಥ ಕನ್ನಡಿಗರ ಕೈಸೇರುತ್ತಿದೆ.

ಮೊದಲ ಭಾಗ ಪ್ರಕಟವಾದ ತರುವಾಯ, ದ್ವಿತೀಯಭಾಗದ ಶುದ್ಧಪ್ರತಿಯನ್ನು ಸಿದ್ಧಪಡಿಸತೊಡಗಿ ಸುಮಾರು ೪೦ ಪುಟ ಬರೆದು ಮುಗಿಸುವ ಹೊತ್ತಿಗೆ, ಗ್ರಂಥಕರ್ತರು ಅನಾರೋಗ್ಯಕ್ಕೆ ಗುರಿಯಾದರು—ಮುದ್ರಣ ಪ್ರತಿ ಅಪೂರ್ಣವಾಗಿಯೇ ಉಳಿಯಿತು.

ಮತ್ತೆ, ಮೊದಲ ಹಸ್ತಪ್ರತಿಯನ್ನೂ ಅವರೇ ಬರೆಯತೊಡಗಿದ ಶುದ್ಧಪ್ರತಿಯನ್ನೂ ಇಟ್ಟುಕೊಂಡು ಸಮಗ್ರ ಹಸ್ತಪ್ರತಿಯನ್ನು ಸಿದ್ಧಪಡಿಸಲು ದೀರ್ಘಕಾಲ ಹಿಡಿಯಿತು.

ಸ್ವಯಂ ವಿದ್ವಾಂಸರೂ ಪಾಂಡಿತ್ಯ ಪಕ್ಷಪಾತಿಗಳೂ ಕನ್ನಡದ ಉತ್ಕಟಾಭಿಮಾನಿಗಳೂ ಈಗ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳೂ ಆದ ಪ್ರೊ. ದೇ. ಜವರೇಗೌಡರ ಸಲಹೆಯಂತೆ, ಮೈಸೂರಿನ 'ಗೀತಾ ಬುಕ್ ಹೌಸ್' ಸಂಸ್ಥೆಯ ಒಡೆಯರು ಈ ಗ್ರಂಥ ಪ್ರಕಟನೆಯ ಭಾರವನ್ನು ವಹಿಸಿಕೊಂಡರು.

ಹೀಗೆ ಪ್ರಕಟನೆಗೆ ನೆರವಾದ ಮಾನ್ಯ ಕುಲಪತಿಗಳಿಗೂ ಪ್ರಕಾಶಕರಿಗೂ ಸಂಪಾದಕನು ಚಿರಋಣಿಯಾಗಿದ್ದಾನೆ.

ಇವರಿಬ್ಬರ ನೆರವಿಲ್ಲದೆ ಹೋಗಿದ್ದರೆ, ಇದು ಬೆಳಕು ಕಾಣುವುದಕ್ಕೆ ಇನ್ನೆಷ್ಟು ಕಾಲ ಬೇಕಾಗುತ್ತಿದ್ದಿತೋ ತಿಳಿಯದು.

ಮುದ್ರಣಕಾರ್ಯದಲ್ಲಿ ನೆರವಾದವರು ಹಲವರು. ಒಂದನೆಯ ಅನುಬಂಧದಲ್ಲಿ ಅಮೋಘವರ್ಷ ನೃಪತುಂಗನ ಶಾಸನಗಳನ್ನು ಮುದ್ರಿಸಿದೆ. ಅವುಗಳಲ್ಲಿ ಕೆಲವನ್ನು ಪ್ರತಿಮಾಡಿಕೊಟ್ಟವರು ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಕಾರ್ಯಾಲಯದಲ್ಲಿ ಸಹಾಯಕ ಸಂಪಾದಕರಾಗಿದ್ದ ದಿವಂಗತ ಪಿ. ರಾಮಕೃಷ್ಣಭಟ್ಟ, ಎಂ.ಎ., ಅವರು. ಗ್ರಂಥಕರ್ತರ ಪ್ರಿಯಮಿತ್ರರಾಗಿದ್ದು, ಈ ಕೃತಿಯ ಬಗೆಗೆ ಮೊದಲಿನಿಂದಲೂ ಕಟ್ಟಾಸಕ್ತಿ ತಳೆದು, ಮುದ್ರಣದ ಪ್ರಗತಿಯನ್ನು ಆಗಾಗ ವಿಚಾರಿಸಿಕೊಂಡಿದ್ದ ಈ ಹಿರಿಯರು ಗ್ರಂಥ ಹೊರಬರುವುದಕ್ಕೆ ಕೆಲವೇ ದಿನಗಳ ಮುನ್ನ ದುರ್ಮರಣಕ್ಕೆ ಗುರಿಯಾದರು—ಈ ಸಂಪಾದಕನ ದೌರ್ಭಾಗ್ಯ !

ಈಚೆಗೆ 'ಕವಿರಾಜಮಾರ್ಗ'ವನ್ನು ಸಂಪಾದಿಸಿದ ಹಿರಿಯ ವಿದ್ವಾಂಸರಾದ ಪ್ರೊ. ಎಂ. ವಿ. ಸೀತಾರಾಮಯ್ಯ, ಎಂ.ಎ., ಅವರು ಈ ಗ್ರಂಥದ ಕರಡಚ್ಚುಗಳನ್ನು ತಾವಾಗಿಯೇ ಶೋಧಿಸಿಕೊಟ್ಟು ಉಪಕರಿಸಿದ್ದಾರೆ. ಇಂಥ ಹಿರಿಯರು ಈ ಗ್ರಂಥದ

ಕರಡಚ್ಚು ಶೋಧನೆಗೆ ನೆರವಾಗಿರುವುದು ಸಂಪಾದಕನ ಸುದೈವ. ಇವರೊಡನೆ, ಆಚಾರ್ಯ ಪಾಠಶಾಲಾ ಕಾಲೇಜಿನ ಕನ್ನಡ ಪ್ರಾಧ್ಯಾಪಕರೂ ನನ್ನ ಮಿತ್ರರೂ ಆಗಿರುವ ಶ್ರೀ ಟಿ. ಕೇಶವಭಟ್ಟ ಎಂ.ಎ., ಅವರು ಈ ಕೆಲಸದಲ್ಲಿ ಸಹಕರಿಸಿದ್ದಾರೆ. ಇವರಿಬ್ಬರು ವಿದ್ವಾಂಸರೂ 'ವಿನಯೋಪಚಾರ'ರು ; 'ನಿಲಯೈಕವೃತ್ತಿ'ಗಳು ; ['ಕೃತಿ ಬಿಂಬಿತಸತ್ತ್ವಸಾರ'ರು]. ಸ್ವಕಾರ್ಯಗೌರವವನ್ನು ಗಣಿಸದೆ, ದೇಹಶ್ರಮವನ್ನು ಲೆಕ್ಕಿಸದೆ, ಅಚ್ಚಿನ ಕೆಲಸದಲ್ಲಿ ನೆರವು ನೀಡಿದ ಈ ವಿದ್ವನ್ಮಿತ್ರರಿಗೆ ಕೃತಜ್ಞತೆ ಸಲ್ಲಿಸುವುದು ಸಂಪಾದಕನ ಆದ್ಯ ಕರ್ತವ್ಯ.

ಸಂಪಾದಕನ ಸಹೋದ್ಯೋಗಿಗಳಾದ ಶ್ರೀ ಎನ್. ಜಿ. ಶಿರಹಟ್ಟಿ, ಶ್ರೀ ಎಸ್. ಎನ್. ಕೋಡಕಣಿ, ಶ್ರೀ ಲಕ್ಷ್ಮಣರಾವ್—ಈ ಮೂವರು ಮಿತ್ರರು ಕರಡಚ್ಚು ತಿದ್ದಿ, ಅನುಬಂಧಗಳನ್ನೂ ಶಬ್ದಸೂಚಿಯನ್ನೂ ಸಿದ್ಧಪಡಿಸಿಕೊಟ್ಟಿದ್ದಾರೆ.

ಅಚ್ಚಿಗೆ ಅನುಕೂಲವಾಗುವಂತೆ ಇದನ್ನು ಟೈಪು ಮಾಡಿಕೊಟ್ಟವರು ಶ್ರೀ ಎಸ್. ಆರ್. ಸೂರ್ಯಪ್ರಕಾಶ್ ಅವರು.

ಮೈಸೂರಿನ ಪ್ರಸಿದ್ಧ ಮುದ್ರಣಕಾರರಾದ ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್ ಸಂಸ್ಥೆಯ ಶ್ರೀ ಜಿ. ಎಚ್. ಕೃಷ್ಣಮೂರ್ತಿಯವರು ಗ್ರಂಥವನ್ನು ಸುಂದರವಾಗಿ ಅಚ್ಚುಮಾಡಿಸಿಕೊಟ್ಟಿದ್ದಾರೆ.

ಪ್ರಸಿದ್ಧ ಕಲಾವಿದರಾದ ಶ್ರೀ ಹುಬ್ಳೀಕರ್ ಅವರು ರಕ್ಷಾಪುಟಕ್ಕೆ ಸುಂದರವಾದ ಸಾಂಕೇತಿಕ ವರ್ಣಚಿತ್ರವನ್ನು ಬರೆದು ಕೊಟ್ಟಿದ್ದಾರೆ.

ಇವರೆಲ್ಲರಿಗೂ ಹಾರ್ದಿಕ ವಂದನೆ.

**ಎಂ. ಕೇಶವ ಭಟ್ಟ**

'ಶುಭದಾ'
೧೬೬, ಜಯನಗರ ಬ್ಲಾಕ್ ೫,
ಬೆಂಗಳೂರು_೫೬೦೦೪೧
ಸೆಪ್ಟೆಂಬರ್ ೧೭, ೧೯೭೩

---

ವಿ. ಸೂ : ಈ ಗ್ರಂಥದಲ್ಲಿ ಉದ್ಧರಿಸಿದ 'ಕವಿರಾಜಮಾರ್ಗ'ದ ಪದ್ಯಗಳ ಸಂಖ್ಯಾನುಪೂರ್ವಿಯು ಡಾ. ಪಾಠಕರ ಪ್ರತಿಯನ್ನು ಅನುಸರಿಸಿದೆ.

## ಕಾಣಿಕೆ
## (ಪ್ರಥಮ ಭಾಗದ ಮುನ್ನುಡಿ)

ಮಂಗಳೂರು ಸೈಂಟ್ ಎಲೋಶಿಯಸ್ ಕಾಲೇಜಿನ ಕನ್ನಡ ವಿದ್ಯಾರ್ಥಿಗಳ ವರ್ಗಕ್ಕೆ, ವಿಶೇಷವಾಗಿ ಕನ್ನಡ ವಿದ್ಯಾರ್ಥಿ ಸಂಘಕ್ಕೆ, ನನ್ನಲ್ಲಿ ಅಪಾರವಾದ ವಿಶ್ವಾಸ. ಮೂವತ್ತು ವರ್ಷಗಳಿಂದ ಇಲ್ಲಿ ಉಪಾಧ್ಯಾಯನಾಗಿದ್ದು ಅವರೆದೆಯನ್ನೇ ನನ್ನ ಕನ್ನಡ ಸೇವೆಯ ಪ್ರಯೋಗಶಾಲೆಯನ್ನಾಗಿಸಿಕೊಂಡು ದುಡಿಯುತ್ತಿದ್ದೇನೆ. ಆ ಸಂಗತಿಯನ್ನು ಇತ್ತೀಚೆಗಿನ ವಿದ್ಯಾರ್ಥಿಗಳು ಮಾತ್ರವೇ ಅಲ್ಲ; ಅಂದಿನಿಂದಿಂದಿನವರೆಗಿನ ಪ್ರತಿ ವರ್ಷದವರೂ ಬಲ್ಲರು. ಅವರ ಆ ತಿಳಿವು, ಒಂದೆರಡು ಬಾರಿ ಉಕ್ಕಿ ಕಾರ್ಯರೂಪವಾಗಿ ಹರಿದುದೂ ಇದೆ. ಬಹುಶಃ, ೧೯೩೩ನೆಯ ಇಸವಿಯಲ್ಲೆಂದು ತೋರುತ್ತಿದೆ—ಈ ಕನ್ನಡ ವಿದ್ಯಾರ್ಥಿ ಸಂಘದ ಅಂದಿನ ಸದಸ್ಯರು ನಾನು ಬರೆದ 'ಸೊಬಗಿನ ಬಳ್ಳಿ' ಎಂಬ ಕಾವ್ಯವನ್ನು ಅಂದವಾಗಿ ಅಚ್ಚು ಹಾಕಿಸಿದರು. ಅದು ಅಚ್ಚಗನ್ನಡದಲ್ಲಿ—ಎಂದರೆ ಪ್ರತಿಜ್ಞಾಪೂರ್ವಕವಾಗಿ ಸಂಸ್ಕೃತರಹಿತವಾದ ತಿಳಿಗನ್ನಡದಲ್ಲಿ—ಬರೆದುದು. ಈವರೆಗೆ ತಿಳಿದುಬಂದಂತೆ, ಆ ರೀತಿಯ ಕನ್ನಡ ಕಾವ್ಯವೆಂದರೆ, ಸುಮಾರು ೧೩ನೆಯ ಶತಮಾನದಲ್ಲಿ ಅಂಡಯ್ಯನು ಬರೆದ 'ಕಬ್ಬಿಗರ ಕಾವ' ('ಕಾವನಗೆಲ್ಲ')ವೇ ಮೊದಲಿನದಾದರೆ, ಇದು ಆ ದಾರಿಯಲ್ಲಿ ಮತ್ತಿನದು. ಎರಡನೆಯ ಬಾರಿ ಹಾಗೆ ಕಾರ್ಯರೂಪದಲ್ಲಿ ಮುಂಬರಿದುದೆಂದರೆ ಕಳೆದ ಕಾಲೇಜಿನ ವರ್ಷಾಂತೋತ್ಸವದ ಸಮಾರಂಭದಲ್ಲಿ. ಉತ್ಸವಾಧ್ಯಕ್ಷರಾಗಿದ್ದ 'ಕರ್ಣಾಟಕ ಏಕೀಕರಣ' ಸಂಸ್ಥೆಯ ಪ್ರಮುಖರಾದ ನಮ್ಮ ಶ್ರೀ ಕೆ. ಬಿ. ಜಿನರಾಜ ಹೆಗ್ಗಡೆಯವರ ಹಸ್ತದಿಂದ ಈ ಕನ್ನಡ ಸಂಘದವರು ನನಗೊಂದು ನಿಧಿಯನ್ನೊಪ್ಪಿಸಿದರು. ಅದರ ಸ್ಮರಣಾರ್ಥವಾಗಿ ಈ 'ಕವಿರಾಜಮಾರ್ಗ ವಿವೇಕ'ದ ಪ್ರಥಮ ಭಾಗವನ್ನು ಅಚ್ಚು ಹಾಕಿಸಬೇಕು; ಕನ್ನಡ ಸಂಘಕ್ಕೆ, ಆಯಾ ಸದಸ್ಯರಿಗೆ, ಕಾಣಿಕೆಯಾಗಿ ಒಪ್ಪಿಸಬೇಕು —ಎಂದು ಭಾವಿಸಿದ್ದೆ. ಆದರೆ, ಕಳೆದ ವರ್ಷಕ್ಕದು 'ಮನಸ್ಸಿನ ಮಂಡಿಗೆ'ಯೇ ಆಗಿ ಬಿಟ್ಟಿತು. ಕಾಗದ ಮೊದಲಾದುವುಗಳ ಅನಾನುಕೂಲ್ಯದಿಂದಾಗಿ ಈ ವರ್ಷವೂ ಹಾಗೆಯೇ ಆಗಿಬಿಡುವುದೋ ಎಂಬ ಅಂಜಿಕೆಯೂ ಇದ್ದಿತು. ಅಂಜಿಕೆಯದು ಮಂಜಾಗಿ ಹಾರಿಹೋಗುವಂತೆ ಈಗ ಬೆಳಕಿನ ಬಿಸಿಲು ತಲೆದೋರಿದುದರಿಂದ ಆನಂದವಾಗುತ್ತಿದೆ.

'ಕವಿರಾಜಮಾರ್ಗ'ವೆಂದರೆ ಕನ್ನಡ ಸಾಹಿತ್ಯದೊಳಗೆ ಅತಿ ಪುರಾತನಗ್ರಂಥ ಮಾತ್ರವೇ ಅಲ್ಲ; ಕನ್ನಡ ಮಾರ್ಗ ಸಾಹಿತ್ಯರಚನೆಗೆ ಪಂಚಾಂಗ ಸ್ವರೂಪವಾದುದು ಎನ್ನಬೇಕು. ಆಗಿನ ಕನ್ನಡನಾಡಿನ ಚರಿತ್ರೆ, ನೃಪತುಂಗನ ರಾಜ್ಯದ ನಾಡವರ ವಿಚಾರ, ಭಾಷಾ ಸಾಹಿತ್ಯ ಸ್ವರೂಪ, ದೋಷ ಗುಣಾಲಂಕಾರ ವಿವೇಚನೆ, ಛಂದಸ್ಸಿನ ಪರಿಚಯ—ಇವುಗಳಿಂದಾಗಿ ನಿಜವಾಗಿಯೂ ಪಂಚಾಂಗವಿದು. ಇದಕ್ಕೆ ಸರಿಯಾದ

ವ್ಯಾಖ್ಯಾನ ಈವರೆಗೂ ಆಗಿಲ್ಲ. ಅದರಿಂದ, ಸರಿಯಾದ ಪಾಠಪ್ರವಚನಕ್ಕೂ ತಡೆಯಾಗಿದೆ ಎನ್ನಬೇಕು. ಗ್ರಂಥಕಾರನು ತನ್ನ ಗ್ರಂಥವನ್ನು ಅಂದಿನ ಕವಿಗಳ ಮತ್ತು ಉಪಾಧ್ಯಾಯ ವರ್ಗದ 'ಕೈಗನ್ನಡಿ'ಯಾಗಿ ಬರೆದುದೆಂದು ತೋರುತ್ತಿದೆ. ಅವನ ಆ ಗುರಿಯನ್ನು, ಈಗಿನ ವಿದ್ಯಾಪ್ರಸಾರಕರ ಎಡೆಗೊಪ್ಪಿಸುವುದೇ ನನ್ನ ಪ್ರಯತ್ನ. ಈ ಪ್ರಥಮ ಭಾಗದೊಳಗೆ ನೃಪತುಂಗನವರೆಗಿನ ರಾಷ್ಟ್ರಕೂಟ ವಂಶದ ಚರಿತ್ರ ಸಂಗ್ರಹ, ಅವರ ಹಿಂದಿನ ರಾಜಧಾನಿ, ನೃಪತುಂಗನ ಮತವಿವೇಚನೆ, ಈ ಗ್ರಂಥಕಾರನ ಹೊಲಬು—ಮೊದಲಾದುವು ಸಾಧಾರವಾಗಿ ಪರಿಶೀಲಿಸಲ್ಪಟ್ಟಿವೆ. ದ್ವಿತೀಯ ಭಾಗದಲ್ಲಿ, ಗ್ರಂಥದೊಳಗಿನ ಪದ್ಯಭಾಗವು ವಿವೇಚನಾಪೂರ್ವಕವಾಗಿ ವ್ಯಾಖ್ಯಾನಿಸಲ್ಪಡುವುದು. ಕನ್ನಡಿಗ ಮಹಾಶಯರು ಈ ಪ್ರಥಮ ಭಾಗವನ್ನು ಸರಿಯಾಗಿ ಪರಿಶೀಲಿಸಿ ತಮ್ಮ ಅಭಿಪ್ರಾಯವನ್ನು ತಿಳಿಸಿದಲ್ಲಿ ಮುಂದಿನ ಪ್ರಕಟನೆಗೆ ಹೆಚ್ಚಿನ ನೆರವಾಗುವುದು.

ಕನ್ನಡ ವಿದ್ಯಾರ್ಥಿ ಬಂಧುಗಳೆ, ನೃಪತುಂಗನು ತನ್ನ ಸಂಜಾನ ಶಾಸನದಲ್ಲಿ ಮುಂದಿನ ರಾಜರಾಗುವವರನ್ನು ಕುರಿತು "ಕೀರ್ತ್ಯೈ ಧರ್ಮಃ ಕೇವಲಂ ಪಾಲನೀಯಃ" ಎಂದು ಪ್ರಾರ್ಥಿಸಿಕೊಂಡುದು ಅಲ್ಲಲ್ಲಿ ಕಂಡುಬರುತ್ತಿದೆ. ಅಲ್ಲಿ ತೋರುವ 'ಧರ್ಮ' ಎಂದರೆ ಅಖಂಡ ಕನ್ನಡನಾಡನ್ನು ಸುಸಂಸ್ಕೃತಮಾರ್ಗದಲ್ಲಿ ಪಾಲಿಸುವುದೇ. ಕಬ್ಬಿನ ಹೋಲಿಕೆಯ ಬಿದಿರಿನಂತಾದರೂ ಸರಿ; ನಾನಿಲ್ಲಿ ನಿಮ್ಮನ್ನು ಪ್ರಾರ್ಥಿಸಿಕೊಳ್ಳುವುದೇನೆಂದರೆ :

ನಮ್ಮ ಭಾರತ ಭೂಮಿಯೊಳಗಿನ ಎಲ್ಲ ಪ್ರಾಂತಗಳಂತೆ ಭಿನ್ನ ಭಿನ್ನ ಕನ್ನಡಪ್ರಾಂತಗಳ ಏಕೀಕರಣವೂ ಅತ್ಯಗತ್ಯವಿದೆ. ಮುಂದಿನ ನಾಯಕರೆನ್ನಿಸಲಿಕ್ಕೆ ಕನ್ನಡದ ನಿಜವಾದ ಪೂರ್ವಚರಿತ್ರೆ ಸಾಹಿತ್ಯಸಂಸ್ಕೃತಿಗಳು ನಿಮ್ಮೆದೆಯಲ್ಲಿ ಹಾಸುಹೊಕ್ಕಾಗಲೇಬೇಕು. ಈ ವಿಷಯವನ್ನು ನೀವು ಯಾವ ಸಂದರ್ಭದಲ್ಲೂ ಮರೆಯಲಿಕ್ಕಿಲ್ಲವೆಂದು ನಂಬಿ, ಈ ಗ್ರಂಥವನ್ನು ನಿಮ್ಮ ಮೂಲಕವಾಗಿ ಕನ್ನಡಲೋಕಕ್ಕೆ ಅರ್ಪಿಸುತ್ತೇನೆ.

ಈ ಸಂದರ್ಭದಲ್ಲಿ ಆವಶ್ಯಕವಾದ ರಾಷ್ಟ್ರಕೂಟಾದಿ ಶಾಸನಭಾಗಗಳೊಳಗೆ ಕೆಲವನ್ನು ಪ್ರತಿಮಾಡಿ ಕಳುಹಿದ ಮೈಸೂರಿನ ಶ್ರೀ ಎನ್. ಅನಂತರಂಗಾಚಾರ್ಯರಿಗೂ, ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೂ, ಹಲವನ್ನು ಮದರಾಸಿನಿಂದ ಪ್ರತಿ ಮಾಡಿ ಕಳುಹಿಸಿದ ಶ್ರೀ ಯು. ಸೀತಾರಾಮ ಆಚಾರ್ಯರೇ ಮೊದಲಾದ ಆಪ್ತರಿಗೂ ವಂದಿಸುತ್ತೇನೆ. ಅಂದವಾಗಿ ಮುದ್ರಿಸಿ ಸಕಾಲದಲ್ಲಿ ಒದಗಿಸಿದ ಮಂಗಳೂರು ಶಾರದಾ ಅಚ್ಚುಕೂಟದವರಿಗೆ ನನ್ನ ವಂದನೆಗಳು ಮೀಸಲಾಗಿವೆ.

**ಮುಳಿಯ ತಿಮ್ಮಪ್ಪಯ್ಯ**

# ಅನುಕ್ರಮಣಿಕೆ

## ಭಾಗ ಎರಡು

ಅನುಬಂಧಗಳು

# ಭಾಗ ಒಂದು

ಸರ್ಪಂ ಪಾತುಮಸೌ ದದೌ ನಿಜತನುಂ ಜೀಮೂತಕೇತೋಸ್ಸ್ವತಃ
ಶ್ಯೇನಾಯಾಥ ಶಿಬಿಃ ಕಪೋತಪರಿರಕ್ಷಾರ್ಥಂ ದಧೀಚೋಽರ್ಥಿನೇ
ತೇಽಪ್ಯೇಕೈಕಮತರ್ಪಯನ್ ಕಿಲ ಮಹಾಲಕ್ಷ್ಮ್ಯೈ ಸ್ವವಾಮಾಂಗುಲಿಂ
ಲೋಕೋಪದ್ರವಶಾಂತಯೇ ಸ್ಮ ದಿಶತಿ ಶ್ರೀ ವೀರನಾರಾಯಣಃ

—ಸಂಜಾನ ಶಾಸನ

ಇರ್ಮಡಿ ಬಲಿಗೆ ದಧೀಚಿಗೆ
ಮೂರ್ಮಡಿ ಜೀಮೂತವಾಹನಂಗಂ ಬಗೆಯಲ್
ನೂರ್ಮಡಿ ಶಿಬಿಗಂ ದಿಟಂ ಸಾ
ಸಿರ್ಮಡಿ ಮಿಗಿಲಿಳೆಗೆ ಚಾಗದೊಳ್ ನೃಪತುಂಗಂ

—ಅಜ್ಞಾತಕರ್ತೃಕ

# ರಾಷ್ಟ್ರಕೂಟ ವಂಶ

## ರಾಷ್ಟ್ರಕೂಟರು ಹುಟ್ಟುಕನ್ನಡಿಗರು

ಹಿಂದುಸ್ತಾನದೊಳಗೆ ಆಗಿಹೋದ ಪ್ರಖ್ಯಾತ ರಾಜವಂಶಗಳಲ್ಲಿ ರಾಷ್ಟ್ರಕೂಟ ವಂಶವೂ ಒಂದು. ಆಯಾ ಪ್ರಾಂತಗಳಲ್ಲಿ ತಲೆದೋರಿ, ಅಲ್ಲಲ್ಲಿ ಜ್ವಲಿಸಿ, ಒಂದಷ್ಟು ಬೆಳಗಿ, ಆಮೇಲೆ ನಂದಿಹೋದ ಬೇರೆ ಹಲವು ಅರಸುಕುಲಗಳೂ ಇದ್ದುವು. ರಾಷ್ಟ್ರಕೂಟ ಕುಲ ಅಂತಹದಲ್ಲ. ಹುಟ್ಟುಕನ್ನಡಿಗರಾದರೂ ಈ ಕುಲದ ಅರಸರೊಳಗೆ ಕೆಲವರ ಅರಸಾಳಿಕೆ ಭಾರತ ಭೂಮಿಯಲ್ಲಿ ತುಂಬಿ ಹೊರಗೆ ತುಳುಕಿದೆ. ಈ 'ಕವಿರಾಜ ಮಾರ್ಗ'ವು ಯಾವ ಮಹಾರಾಜನ ಆಶ್ರಯದಲ್ಲಿ ತಲೆದೋರಿತೋ ಆ ಅಮೋಘವರ್ಷ ನೃಪತುಂಗನು ಸುಸಂಸ್ಕೃತರೂ ಸಮರ್ಥರೂ ಆದ ರಾಷ್ಟ್ರಕೂಟ ರಾಜರೊಳಗೆ ಒಬ್ಬನು. ಅವನ ಮಾನ್ಯಖೇಟಾಸ್ಥಾನಕ್ಕೆ ಚೈನ, ಅರೇಬಿಯಾ ಮೊದಲಾದ ಹೊರಗಣ ಭೂಭಾಗಗಳಿಂದ ರಾಯಭಾರಿಗಳು ಬರುತ್ತಿದ್ದರು. ಯಾವ ಭೇದಗಳೂ ಇಲ್ಲದೆ ಸರ್ವಮತೀಯರನ್ನೂ ಆತನು ಅವರವರ ಮನಸ್ಸಿಗೆ ಮೆಚ್ಚುಗೆಯಾಗುವಂತೆ ದಾನಮಾನಾದಿಗಳಿಂದ ಮನ್ನಿಸುತ್ತಿದ್ದುದನ್ನು ಶಾಸನಗಳೇ ಘಂಟಾಘೋಷವಾಗಿ ಸಾರುತ್ತಿವೆ. ಅವನು ಭಾರತಭೂಮಿಗೆ ಸಾರ್ಥಕ ಚಕ್ರವರ್ತಿ ಎನ್ನುವಂತಿಲ್ಲದಿದ್ದರೂ, ಆತನ ತಂದೆಯಾದ ಜಗತ್ತುಂಗ ಗೋವಿಂದರಾಜನು ನಿಜವಾಗಿಯೂ ಆ ಪದವಿಗೇರಿದವನು. ಇದು ಅಭಿಮಾನಗ್ರಸ್ತರಾಗಿ ಆಡುವ ಮಾತಲ್ಲ; ಮಹಾರಾಷ್ಟ್ರ ದೇಶೀಯರೇ ಆಗಿರುವ ಡಾ. ಅನಂತ ಸದಾಶಿವ ಅಲ್ತೇಕರರು ತಮ್ಮ ಪ್ರಸಿದ್ಧವಾದ 'ರಾಷ್ಟ್ರಕೂಟರು ಮತ್ತು ಅವರ ಕಾಲ'[1] ಎಂಬ ಗ್ರಂಥದಲ್ಲಿ ಸಾಧಾರವಾಗಿ ಹೇಳಿದ ಸಂಗತಿ ಇದು. ತನ್ನ ಇಪ್ಪತ್ತು ವರ್ಷಗಳ (ಕ್ರಿ. ಶ. ೭೯೨-೮೧೨) ರಾಜ್ಯಭಾರದಲ್ಲಿ ಹಿಮವತ್ಪರ್ವತದಿಂದ ತೆಂಕಣ ಲಂಕಾಂತವಾದ ಅಖಂಡ ಭಾರತಭೂಮಿ ಆ ಜಗತ್ತುಂಗ ಗೋವಿಂದರಾಜನ ಅಂಕಿತದೊಳಗೆ ಅಡಕವಾಗಿತ್ತೆಂಬುದು ವಿಶದವಾಗಿದೆ. ರಾಷ್ಟ್ರಕೂಟರು ಅಚ್ಚಗನ್ನಡಿಗರೇ ಎಂಬುದನ್ನೂ ಅವರು ಒಪ್ಪಿದ್ದಾರೆ. ಅದಕ್ಕಿಂತ ಕೆಲಗಾಲಕ್ಕೆ ಹಿಂದಿನ ವರೆಗೆ, ರಾಷ್ಟ್ರಕೂಟ ವಂಶೀಯರು ಜನ್ಮತಃ ಮರಾಠಿಯೇ ಮನೆಮಾತಾಗಿದ್ದವರು ಎಂದು ಕೆಲಮಂದಿ ವಾದಿಸುತ್ತಿದ್ದ ಸ್ಥಿತಿ ಇಂದು ಉಳಿದಿಲ್ಲ. ಕನ್ನಡ ಸಾಹಿತ್ಯವು ಎಂದಿಗೂ ಮರೆಯಲಾರದ ನೃಪತುಂಗದೇವನ ಕನ್ನಡ ಭಾಷಾ ಭಕ್ತಿ

[1] 'Dr. A. S. Altekar, *The Rashtrakutas and Their Times*, p. 59

ಹಾಗಿರಲಿ, ಗುಜರಾತ ಪ್ರಾಂತದಲ್ಲಿ ಉಪರಾಜಧಾನಿಯನ್ನೈಸಗಿಕೊಂಡಿದ್ದ, ಅವನ ಚಿಕ್ಕಪ್ಪ ಕರ್ಕರಾಜ ಸುವರ್ಣವರ್ಷ(ಕ್ರಿ. ಶ. ೮೧೨), ಮೊದಲಾದವರ ಅನೇಕ ಶಾಸನಗಳು ಆಯಾ ಪ್ರಾಂತಗಳಲ್ಲಿ ಸಿಕ್ಕಿವೆ. ಶಾಸನಗಳು ಸಂಸ್ಕೃತ ಭಾಷೆಯಲ್ಲಿದ್ದರೂ ಶಾಸನಕಾರ ರಾದ ಅರಸರ ಹೆಸರು ಕನ್ನಡದಲ್ಲೇ ಇರುವುದು ಕಂಡುಬಂದಿದೆ. 'ಸ್ವಹಸ್ತೋಽಯಂ ಮಮ ಶ್ರೀ ಕರ್ಕರಾಜಸ್ಯ ಶ್ರೀಮದಿಂದ್ರರಾಜಸುತಸ್ಯ'[1] ಎಂಬುದು ಒಂದು ದೃಷ್ಟಾಂತವಾದರೆ, ಕ್ರಿ. ಶ. ೮೮೪ರ ವರೆಗೆ ಈ ವಂಶೀಯರಾದ ಹಲವಂದಿ ರಾಜರ ಅಂಥ ಶಾಸನದೃಷ್ಟಾಂತ ಗಳೂ ಈಗ ದೊರೆತಿವೆ. ಈಚೆಗೆ ಗೋಕಾಕಿನಲ್ಲಿ ರಾಷ್ಟ್ರಕೂಟ ದೆಜ್ಜ ಮಹಾರಾಜನ ೬-೭ನೆಯ ಶತಮಾನದ ಕನ್ನಡ ಲಿಪಿಯ ಶಾಸನವೊಂದು ದೊರಕಿದೆ ಎಂಬುದು ಮೇಲಿನ ಹೇಳಿಕೆಗೆ ಮತ್ತಷ್ಟು ಸಾಧಕವಾಗಿದೆ. ಹದಕ್ಕಿಳಿದ ಹಿಟ್ಟನ್ನು ಇನ್ನೂ ಹಿಸುಕುವುದು ಅನಾವಶ್ಯಕ.

## ರಾಷ್ಟ್ರಕೂಟ ವಂಶದ ಮೂಲ ವಿಚಾರವೂ ವಂಶಚಿತ್ರವೂ

ಈ ಕುಲದವರ ಲಾಂಛನವಾಗಿ ನೇಗಿಲು, ಗರುಡ ಮುದ್ರೆಗಳು ಇದ್ದಂತೆ ಕಂಡುಬರುತ್ತಿವೆ. ನೇಗಿಲಿನಿಂದ ಒಕ್ಕಲುತನದವರೆಂದು ಭಾವಿಸಿದರೆ, ಗರುಡಚಿಹ್ನೆಯಿಂದ ಶ್ರೀಕೃಷ್ಣನ ವಂಶೀಯರೆಂದು ಊಹಿಸಬಹುದು. ಯಾದವಾನ್ವಯದೊಳಗೆ ಬಲಭದ್ರ ಶ್ರೀಕೃಷ್ಣರೆಂದರೆ ಪ್ರಖ್ಯಾತಿಗೊಂಡವರು. ಮೊದಲಿನವನಿಗೆ ನೇಗಿಲಿನ ಆಕಾರದ ಆಯುಧವಾದರೆ, ಮತ್ತಿ ನವನು ಗರುಡಧ್ವಜನು. ಲೋಕಪ್ರಸಿದ್ಧರಾದ ಬಲಭದ್ರ ಕೃಷ್ಣರು ನಿಜವಾಗಿ ಯಾದ ವಾನ್ವಯದವರಾದರೂ ಗೊಲ್ಲರೊಡನಾಡಿ ಗೋವಳರೆಂದೇ ಪ್ರಸಿದ್ಧಿಗೊಂಡವರಲ್ಲವೆ? ಅದರಿಂದ, ಮತ್ತಿನ ಪ್ರಾಬಲ್ಯಕ್ಕೇರಿದ 'ಗೊಲ್ಲ' ಅಥವಾ 'ಆಭೀರ' ವಂಶೀಯರು ತಾವು ಯಾದವ ವಂಶೀಯರೆನ್ನುವುದೂ, ಪುರಾಣ ಪ್ರಸಿದ್ಧವಾದ ಆಯಾ ವಿಶಿಷ್ಟ ವ್ಯಕ್ತಿಗಳ ಧ್ವಜ ಗಳನ್ನು ಧರಿಸಿಕೊಳ್ಳುವುದೂ ಸ್ವಾಭಾವಿಕವಾಗಿಯೇ ಬಂದುದು. ಪುರಾತನ ಕಾಲದಲ್ಲಿ ವಿಂಧ್ಯಾದ್ರಿಯಿಂದುಕ್ಕಿ ಹರಿದ ರೇವಾ, ಗೋದಾವರಿ ಮೊದಲಾದ ಪುಣ್ಯವಾಹಿನಿಗಳ ತೀರಗಳಲ್ಲಿ ರಸಿಕರೂ ವೀರರೂ ಆದ ಆಭೀರ (ಗೊಲ್ಲ)ರ ಅನವಧಿ ಸಂತಾನಗಳು ವಾಸಿಸು ತ್ತಿದ್ದುವು ಎಂಬುದು ಸುಮಾರು ಕ್ರಿ. ಶ. ೧–೨ನೇ ಶತಮಾನದ ಕುಂತಳಾಧಿಪತಿ ಶಾತ ವಾಹನನ ಅಲ್ಲವೆ ಹಾಲರಾಜನ ಆಸ್ಥಾನದಲ್ಲಿ ರಚಿತವಾದ 'ಗಾಥಾ ಸಪ್ತಶತಿ' ಎಂಬ ಪ್ರಾಕೃತ ಗ್ರಂಥದಿಂದ ಗೊತ್ತಾಗುತ್ತಿದೆ. ಕ್ರಿ. ಶ. ನಾಲ್ಕನೇ ಶತಕದ ಆದಿಯಲ್ಲಿ ನಾಸಿಕ-ಖಾನ್‌ದೇಶ ಗವಿಗಳೊಳಗೆ ದೊರಕಿದ ಶಾಸನದೊಳಗೆ ದಮರೀ–ಶಿವದತ್ತರೆಂಬ ದಂಪತಿಗಳ ಪುತ್ರನಾದ ವೀರಸೇನ ಆಭೀರ ಎಂಬವನ ಆಳಿಕೆಯ ವಿಚಾರ ಉಪಲಬ್ಧವಾಗಿದೆ.[2] ಈ ಆಭೀರ ವಂಶವೇ ಮುಂದೆ ಮೇಲ್ಮೆಗೇರಿ ಯಾದವವಂಶ ಮತ್ತು ರಾಷ್ಟ್ರಕೂಟ ವಂಶ ಎಂಬ

---

[1] ಶ್ರೀ ಎನ್. ಲಕ್ಷ್ಮೀನಾರಾಯಣರಾಯರು ಬರೆದ 'ಮಾಲ್‌ಖೇಡಿನ ರಾಷ್ಟ್ರಕೂಟರು ಎಲ್ಲಿ ಯವರು ?' ಎಂಬ ಲೇಖನ, 'ಪ್ರಬುದ್ಧ ಕರ್ಣಾಟಕ,' ಸಂಪುಟ ೨೦, ಸಂಚಿಕೆ ೪, ಪುಟ ೮೪.

[2] Dr. R. G. Bhandarkar, *Collected works*, Vol. 3, p. 63

ಹೆಸರನ್ನೊಂದಿರಬಹುದು ಎಂದು ತೋರುತ್ತಿದೆ. ಈ ರಾಜವಂಶದ ಚರಿತ್ರವನ್ನು ಆಮೂಲಾಗ್ರವಾಗಿ ವಿಸ್ತರಿಸುವುದು ಪ್ರಕೃತದ ಗುರಿಯಲ್ಲ. 'ಕವಿರಾಜಮಾರ್ಗ'ಕ್ಕೆ ಆಸರೆಯಾದ ನೃಪತುಂಗನ ಮತ್ತು ಮಾನ್ಯಖೇಟ ಆಸ್ಥಾನದ ವಿಚಾರವನ್ನು ಸಾಧ್ಯವಾದಷ್ಟು ಅರಿತುಕೊಳ್ಳುವುದೇ ನಮ್ಮ ಉದ್ದೇಶ. ಈ ಸಂದರ್ಭದಲ್ಲಿ ನೃಪತುಂಗನಿಗಿಂತಲೂ ಹಿಂದಿನ ಕೆಲಮಂದಿ ರಾಜರ ಸಾಮಾನ್ಯ ವಿಚಾರವು ಆವಶ್ಯಕವಾಗುತ್ತಿದೆ. ಮೊತ್ತಮೊದಲು ಆ ವಂಶಭಾಗದ ಚಿತ್ರವೊಂದನ್ನು ಮುಂದೆ ಸಮರ್ಪಿಸುವ :

ರಾಷ್ಟ್ರಕೂಟವಂಶ ಪ್ರಮುಖರ ಚಿತ್ರ




## ಆದಿಯ ಐವರ ಸಾಮಾನ್ಯ ಪರಿಚಯ

ಈ ವಂಶಶಾಖಾ ಚಿತ್ರದೊಳಗೆ ಗುಜರಾತ ಪ್ರಾಂತದ ಶಾಖೆಯ ಪ್ರಧಾನ ವ್ಯಕ್ತಿಗಳನ್ನು ಸಂಖ್ಯಾನುಪೂರ್ವಕವಾಗಿ ಕಾಣಿಸಿಲ್ಲ. ಗುಜರಾತ ಶಾಖೆಯುವರ ವಿಚಾರ ನಮಗೆ ಆವಶ್ಯಕ

[2] ಅದೇ ಗ್ರಂಥ, ಪು. ೧೦೩

ವಲ್ಲವೆಂದಾದರೆ, ಶುಭತುಂಗ ಕೃಷ್ಣನ ಪ್ರಥಮಪುತ್ರನಾದ ಎರಡನೆಯ ಗೋವಿಂದನ ಸಂಗತಿಯ ಅಧಿಕಾಂಶವೇನೂ ಈ ವರೆಗೆ ಗೊತ್ತಾಗಿಲ್ಲ ಎನ್ನಬಹುದು. ನಮಗಿಲ್ಲಿ ಚರಿತ್ರೆಗೆ ಅತ್ಯಾವಶ್ಯಕವಾದುವೆಂದರೆ ದಂತಿದುರ್ಗ, ಕೃಷ್ಣ (ಅಕಾಲವರ್ಷ ಶುಭತುಂಗ), ಧ್ರುವ ನಿರುಪಮ, ಮೂರನೆಯ ಗೋವಿಂದ, ನೃಪತುಂಗ—ಎಂಬ ಐದು ಮಂದಿಯ ವಿಚಾರಗಳು. ಆದರೂ, ಆದಿಯ ದಂತಿವರ್ಮನಿಂದ ಎರಡನೆಯ ಇಂದ್ರರಾಜನ ಪರ್ಯಂತದ ಐವರ ಹೊಲಬುಗಳನ್ನೂ ಮೇಲಿಂದ ಮೇಲೆ ಪರಿಶೀಲಿಸಬೇಕಾಗಿದೆ. ದಂತಿದುರ್ಗನಿಂದ ಹಿಂದಣವರ ಕಾಲದೇಶಗಳೆರಡೂ ಈ ವರೆಗೆ ಸ್ಫುಟವಾಗಿ ಗೊತ್ತಾಗಿಲ್ಲ. ಆದರೇನು, ಸಹೇತುಕವಾದ ಅನುಮಾನವೂ ಪ್ರಮಾಣವೇ ಅಲ್ಲವೆ?

ಮೇಲೆ ಕಾಣಿಸಿದ ಚಿತ್ರದಲ್ಲಿ ಆದಿಯ ಐವರ ಕಾಲವೂ ತೋರುವುದಿಲ್ಲ; ಆರನೆಯವನಾದ ದಂತಿದುರ್ಗನದು ತೋರುತ್ತಿದೆ. ಈತನ ತಂದೆಯ—ಎರಡನೆಯ ಇಂದ್ರರಾಜನ—ಹೆಸರಿನ ಮುಂಬದಿಯಲ್ಲಿ 'ರಾಷ್ಟ್ರಕೂಟ' ಎಂದು ಕಂಸದೊಳಗೆ ತೋರಿದರೂ ಆ ರಾಷ್ಟ್ರಕೂಟ ರಾಜ್ಯವನ್ನು ಸ್ಥಾಪಿಸಿದಾತನು ಮಗ ದಂತಿಗನೇ ಎಂದು ಶಾಸನಾದಿಗಳಿಂದ ವಿಶದವಾಗುತ್ತಿದೆ. ಗೊತ್ತಾದಂತೆ, ಈತನ ರಾಜ್ಯಭಾರವೆಂಬುದು ಏಳೆಂಟು ವರ್ಷ. ಇವನ ರಾಜಧಾನಿ ಯಾವುದು, ಎಲ್ಲಿ, ಮೊದಲಾದ ಹೊಲಬು ಇನ್ನೂ ಸಂದೇಹತರಂಗಗಳಲ್ಲೇ ತೇಲಾಡುತ್ತಿದೆ. ಹಾಗಿದ್ದರೂ ಕಾಲಮಾನದ ಸೂಚನೆಯೊಂದು ಮುಂದೆ ದೃಷ್ಟಾಂತಿಸುವ, ಈ ವರೆಗೆ ಲಭಿಸಿದ ಒಂದೇ ಒಂದಾದ, ಸಾಮನಗಡ ಎಂಬಲ್ಲಿಯ ಇವನ ಶಾಸನದ ಭಾಗದಿಂದ ಗೊತ್ತಾಗುತ್ತಿದೆ. ಶಾಸನಾಂಶವದು ಹೀಗಿದೆ :

> 'ಸ ಚ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ
> ಭಟ್ಟಾರಕ ಖಡ್ಗಾವಲೋಕ ಶ್ರೀ ದಂತಿದುರ್ಗರಾಜದೇವಃ ಸರ್ವಾನೇವ ರಾಷ್ಟ್ರಪತಿ
> ವಿಷಯಪತಿ ಗ್ರಾಮಕೂಟಾನ್ ಯಥಾರ್ಹಪ್ರತಿಪತ್ತ್ಯಾಽಜ್ಞಾಪಯತಿ :-
> ಅಸ್ತು ವಃ ಸಂವಿದಿತಂ ಯಥಾ ಪಂಚಸಪ್ತತ್ಯಧಿಕ ಶಕಕಾಲ ಸಂವತ್ಸರಶತಷಟ್ಕೇ
> ವ್ಯತೀತೇ ಸಂವತ್ಸರೇ (೬೭೫) ಪೊಚ್ಟಿಕಾಯ ಮಾಘಮಾಸರಥಸಪ್ತಮ್ಯಾಂ
> ತುಲಾಪುರುಷಸ್ಥಿತೇ ಮಾತಾಪಿತ್ರೋರಾತ್ಮನಶ್ಚ ಪುಣ್ಯಯಶೋಭಿವೃದ್ಧಯೇ
> ಕೊಪ್ಪಾರ ಪಂಚಶತಭುಕ್ತ್ಯಂತರ್ಗತ ಕರಂದೀವಡೇ ಜಘಿತ ದೆಳುವಾಡಗ್ರಾಮ....'[1]

ಈ ಶಾಸನಾವಸರದಲ್ಲಿ ಶಾಲಿವಾಹನಶಕ ಕಾಲದೊಳಗೆ ೬೭೫ ವತ್ಸರಗಳು—ಎಂದರೆ ಕ್ರಿ.ಶ. ೭೫೩ನೆಯ ವರ್ಷವು ಕಳೆದುಹೋಗಿ ಕ್ರಿ.ಶ. ೭೫೪ನೆಯ ವರ್ಷ ನಡೆಯುತ್ತಿತ್ತೆಂದು ಮೇಲಿನ ಹೇಳಿಕೆಯಲ್ಲಿ ವ್ಯಕ್ತವಾಗುವುದು. ಮತ್ತೆ ಬಹುಕಾಲ ದಂತಿದುರ್ಗನು ಆಳುತ್ತಿದ್ದಂತೆ ತೋರುವುದಿಲ್ಲ. ಸ್ವಲ್ಪವೇ ಕಾಲದಲ್ಲಿ ಆತನ ಚಿಕ್ಕಪ್ಪನಾದ ಶುಭತುಂಗ ಕೃಷ್ಣರಾಜನು ಪಟ್ಟವನ್ನೇರಿದಂತೆ ಗೊತ್ತಾಗುತ್ತಿದೆ. ದಂತಿದುರ್ಗನು ಕ್ರಿ.ಶ. ೭೪೭ರಲ್ಲಿ ಕನ್ನಡ ಚಕ್ರವರ್ತಿಯಾಗಿದ್ದ ಚಾಲುಕ್ಯ ಕೀರ್ತಿವರ್ಮನನ್ನು ಗೆದ್ದು ದಕ್ಷಿಣ ಚಕ್ರವರ್ತಿ ಎನಿಸಿದುದೂ ತಿಳಿದುಬಂದಿದೆ. ಅವನ ಆಳಿಕೆಯ ಆ ಕಾಲಮಾನಗಳನ್ನೇ ಮೇಲಿನ ವಂಶ

[1] S. Srikantha Sastri, *Sources of Karnataka History*, Vol. I, p. 58

ಚಿತ್ರದಲ್ಲಿ (ಕ್ರಿ. ಶ. ೭೪೭–೭೫೪) ಎಂದು ಕಾಣಿಸಿದುದು. ತಲೆಮಾರಿಗೆ ಸರಾಸರಿಯಾಗಿ ೨೫ರಂತೆ ವರ್ಷಗಣನೆ ಮಾಡುವುದು ಚಾರಿತ್ರಿಕರ ಪದ್ಧತಿಯಷ್ಟೆ. ಅದಕ್ಕನುವಾಗಿ ಅವನಿಂದ ಹಿಂದಿನ ಐವರ ಕಾಲವನ್ನು ಲೆಕ್ಕಿಸಿದಲ್ಲಿ, ಆದಿಯವನಾದ ದಂತಿವರ್ಮನು ಸುಮಾರು ಕ್ರಿ.ಶ. ೬೨೨ರ ಹಿಂದುಮುಂದಿನಲ್ಲಿ ಹುಟ್ಟಿರಬೇಕೆಂಬುದು ನಿಶ್ಚಯ. ಆ ಕಾಲವೆಂದರೆ, ಕನ್ನಡಿಗರ ಕೀರ್ತಿಗೆ ಕಣ್ಮಣಿ ಎನಿಸಿದ ಚಾಲುಕ್ಯ ಕುಲದ ಎರಡನೆಯ ಪುಲಿಕೇಶಿ ಮಹಾರಾಜನು (ಕ್ರಿ.ಶ. ೬೧೦–೬೫೪) ಬಾದಾಮಿಯ ಪಟ್ಟವನ್ನೇರಿ ಕನ್ನಡ ವನ್ನು ಮಾತ್ರವೇ ಅಲ್ಲ, ಇಡೀ ದಕ್ಷಿಣಾಪಥವನ್ನೇ ತನ್ನ ಅಂಕೆಯಲ್ಲಿಟ್ಟು ಆಳುತ್ತಿದ್ದ ಕಾಲ.[1] ಈ ಸಂದರ್ಭದಲ್ಲೇ ವಿಂಧ್ಯಾದುತ್ತರ ಭಾಗದ ಚಕ್ರಾಧೀಶನಾಗಿದ್ದ ಹರ್ಷವರ್ಧನನು ದಕ್ಷಿಣಕ್ಕೆ ದಾಳಿವಂದು ರೇವಾನದಿಯ ದಂಡೆಯಲ್ಲಿ ಸಸ್ಸೈನ್ಯನಾಗಿ ಹೋರಾಡಿ ಈ ಪುಲಿಕೇಶಿ ಯಿಂದ ಪರಾಜಿತನಾಗಿ ಹಿಂಜರಿದುದು. ಪೂರ್ವೋಕ್ತ ದಂತಿವರ್ಮನು ಹಾಗೆ ಕ್ರಿ. ಶ. ೬೨೨ರ ಸಂದಿನಲ್ಲಿ ಹುಟ್ಟಿಬೆಳೆದರೆ, ಅವನ ಮಗ ಒಂದನೆಯ ಇಂದ್ರನು ಕ್ರಿ.ಶ. ಸು. ೬೪೭ರ ಸಂದರ್ಭದಲ್ಲಿ ಉದಯಿಸಿರಬೇಕು. ಆಗ ಇಡೀ ಕರ್ಣಾಟಕಾಧೀಶ್ವರನೆಂದರೆ ಪುಲಿಕೇಶಿ ಮಹಾರಾಜನ ದ್ವಿತೀಯ ಪುತ್ರನಾದ ಚಾಲುಕ್ಯವಂಶದ ಒಂದನೆಯ ವಿಕ್ರಮಾದಿತ್ಯ. ಆತನು ಬಾದಾಮಿಯ ಪಟ್ಟವನ್ನೇರಿ ಕ್ರಿ. ಶ. ೬೫೪ರಿಂದ ೬೮೦ರ ವರೆಗೆ ಆಳಿದವನು. ಮೇಲೆ ಸೂಚಿಸಿದ ಒಂದನೆಯ ಇಂದ್ರನೂ ಆತನ ಮಗ ಒಂದನೆಯ ಗೋವಿಂದನೂ ಆ ಚಾಲುಕ್ಯ ವಿಕ್ರಮನ ಕಾಲದಲ್ಲೆ ಬಾಳುತ್ತಿದ್ದವರು. ಆ ವಿಕ್ರಮಾದಿತ್ಯನು ತಂದೆಯಾದ ಪುಲಿಕೇಶಿ ಯಂತೆಯೇ ಪ್ರಬಲ ಪ್ರತಾಪಿಯಾದುದರಿಂದ, ಪರಾಕ್ರಮಿಗಳಾಗಿರಬಹುದಾದರೂ ಮೇಲೆ ಸೂಚಿಸಿದ ಇಂದ್ರ, ಗೋವಿಂದರಾಜರಿಗೆ ಅವನನ್ನು ಮೀರಿ ಸ್ವತಂತ್ರಾಧಿಕಾರವನ್ನು ಸ್ಥಾಪಿಸುವುದು ಅಸಾಧ್ಯವಾಗಿರಬೇಕು. ಇಂದ್ರ ಗೋವಿಂದರಿಬ್ಬರ ಜೀವನ ಕಾಲವು ಸುಮಾರು ಕ್ರಿ. ಶ. ೬೯೨ರ ವರೆಗೆ ಸಾಗಿರಬಹುದು. ಆಗ ಕನ್ನಡ ಚಕ್ರಾಧೀಶನಾಗಿದ್ದ ಅರಸನೆಂದರೆ, ಹಿಂದೆಂದ ಒಂದನೆಯ ಚಾಲುಕ್ಯ ವಿಕ್ರಮಾದಿತ್ಯನ ಮಗ ವಿನಯಾದಿತ್ಯ (ಕ್ರಿ. ಶ. ೬೮೦–೬೯೨). ಹಿಂದೆ ಸೂಚಿಸಿದ ಗೋವಿಂದರಾಜನ ಕುಮಾರನು ಒಂದನೆಯ ಕಕ್ಕರಾಜ. ಅವನಿಗೇ 'ರಟ್ಟ' ಎಂಬ ನಾಮಾಂತರವೆಂಬುದು ಅದೇ ವಂಶೀಯನೂ ಪ್ರಖ್ಯಾತಿಗೊಂಡವನೂ ಆದ ಅಕಾಲವರ್ಷ ಕೃಷ್ಣ (ಕನ್ನರ) ರಾಜನ ಕರಹಾಡ ಶಾಸನದ ಮುಂದಿನ ಹೇಳಿಕೆಯಿಂದ ಸಿದ್ಧವಾಗುತ್ತಿದೆ:

ಕ್ಷಿತಿತಲತಿಲಕಸ್ತದನ್ವಯೇ ಚ ಕ್ಷತರಿಪುದಂತಿಘಟೋಽಜನಿಷ್ಟ ರಟ್ಟಃ
ತನುಸು ಚ ಸುತರಾಷ್ಟ್ರಕೂಟನಾಮ್ನಾ ಭುವಿ ವಿದಿತೋಽಜನಿ ರಾಷ್ಟ್ರಕೂಟ ವಂಶಃ[2]—

'ಭೂತಲಕ್ಕೂ ಅದರಂತೆ ಆ ವಂಶಕ್ಕೂ ತಿಲಕಪ್ರಾಯನಾದ, ಹಗೆಗಳೆಂಬ ಆನೆಗಳನ್ನು ನಾಶಿಸಿದ, 'ರಟ್ಟ'ನು ಜನಿಸಿದನು. ಅವನ 'ರಟ್ಟ' ನಾಮವೂ, ವಿಶೇಷವಾಗಿ ಅವನ ಮಗ

---

[1] Dr. R. G. Bhandarkar, *Early History of Dekkhan*, p. 46.
[2] Dr. R. G. Bhandarkar, *Collected Works*, III, p. 281.

ಇಂದ್ರರಾಜನ 'ರಾಷ್ಟ್ರಕೂಟ' ಎಂಬ ಬಿರುದೂ ಆ ವಂಶದ 'ರಾಷ್ಟ್ರಕೂಟ' ಎಂಬ ಹೆಸರಿಗೆ ಕಾರಣವಾಯಿತು.

ಇದರಿಂದ, ರಟ್ಟನೂ ರಾಷ್ಟ್ರಕೂಟನೂ ತಂದೆಮಕ್ಕಳೆಂಬುದು ವಿದಿತವಾಗುತ್ತಿದೆ. ಈ ರಟ್ಟ, ರಾಷ್ಟ್ರಕೂಟರೆಂಬ ವಿಶಿಷ್ಟ ನಾಮಗಳವರೆಂದರೆ ಬೇರೆ ಯಾರೂ ಅಲ್ಲ, ಕ್ರಮವಾಗಿ ಹಿಂದೆ ಸೂಚಿಸಿದ ಒಂದನೆಯ ಗೋವಿಂದನ ಮಗನಾದ ಕಕ್ಕರಾಜ ಮತ್ತು ತತ್ಪುತ್ರನಾದ ಎರಡನೆಯ ಇಂದ್ರರಾಜ—ಎಂಬುದು ಮೇಲೆ ಸೂಚಿಸಿದ ದಂತಿದುರ್ಗನ ಸಾಮನಗಡ ಶಾಸನಾಂಶದಿಂದಲೂ ಗೊತ್ತಾಗುತ್ತಿದೆ. 'ಶ್ರೀ ಕಕ್ಕರಾಜ ಇತಿ ಗೋತ್ರಮಣಿರ್ಬಭೂವ' ಎಂದು ಆ 'ರಟ್ಟ'ನ ಹುಟ್ಟನ್ನೂ, ಮುಂದೆ 'ಅಭೂತ್ತನೂಜಃ ಸದ್ರಾಷ್ಟ್ರಕೂಟ ಕನಕಾದ್ರಿರಿವೇಂದ್ರರಾಜಃ' ಎಂದು ಆತನ ಪುತ್ರ ಇಂದ್ರರಾಜನ ಜನನವನ್ನೂ ಶಾಸನಕಾರನು ಸೂಚಿಸಿದ್ದಾನೆ[1]. ಆ ಕಾಲದಲ್ಲಿ ಕ್ರಮವಾಗಿ ಬಾದಾಮಿಯ ಪಟ್ಟಾರೂಢರಾಗಿದ್ದ ಚಾಲುಕ್ಯರಾಜರೆಂದರೆ, ಹಿಂದೆ ಸೂಚಿಸಿದ ವಿನಯಾದಿತ್ಯನ ಕುಮಾರಕನಾದ ವಿಜಯಾದಿತ್ಯ (ಕ್ರಿ. ಶ. ೬೯೭–೭೩೩), ಅವನ ಪುತ್ರನಾದ ವಿಕ್ರಮಾದಿತ್ಯ (ಕ್ರಿ.ಶ. ೭೩೩–೭೪೭) ಎಂಬವರು. ಬಾದಾಮಿ ವಂಶದ ಚಾಲುಕ್ಯ ರಾಜರೊಳಗಿನ ಆ ರಾಜರಿಬ್ಬರೆಂದರೆ ತಮ್ಮ ಪೂರ್ವಜರಂತೆ ಅತಿ ಪರಾಕ್ರಮಿಗಳೆನ್ನಿಸಿದವರಲ್ಲ. ಆದರೆ ಹಿಂದೆಂದ ಆ ರಟ್ಟ, ರಾಷ್ಟ್ರಕೂಟರು ತಮ್ಮ ಪೂರ್ವಜರಿಗಿಂತಲೂ ಅಧಿಕಾಧಿಕವಾಗಿ ಹುರುಪೇರುತ್ತಾ ಬಂದವರು. ಇಂದ್ರರಾಜನು ಚಾಲುಕ್ಯ ನೃಪಾತ್ಮಜೆಯನ್ನು ರಾಕ್ಷಸೀ ವಿವಾಹದಿಂದ ವರಿಸಿದನೆಂದು ಸಂಜಾನ ಶಾಸನವು ಸಾರುತ್ತಿದೆ:

ಇಂದ್ರರಾಜಸ್ತತೋಽಗೃಹ್ಣಾತ್ ಯಶ್ಚಾಲುಕ್ಯನೃಪಾತ್ಮಜಾಂ
ರಾಕ್ಷಸೇನ ವಿವಾಹೇನ ರಣೇ ಖೇಟಕ ಮಂಡಪೇ[2]—

ಈ ಹೇಳಿಕೆ, ಹಿಂದೆ ಸೂಚಿಸಿದ ದಂತಿದುರ್ಗನ ಸಾಮನಗಡದ ಶಾಸನದೊಳಗಿನ 'ರಾಜ್ಞೀ ಸೋಮಾನ್ವಯೀ ತಸ್ಯ ಪಿತೃತಶ್ಚ ಸಳುಕ್ಯಜಾ'[3] ಎಂಬ ವ್ಯಕ್ತಸೂಚನೆಗೂ ಸರಿಯಾಗುತ್ತಿದೆ. ಆ ಚಾಲುಕ್ಯನೃಪಾತ್ಮಜೆಯಾದ ರಾಣಿಯಲ್ಲಿ ಇಂದ್ರರಾಜನಿಗೆ ಜನಿಸಿದ ವೀರಕುಮಾರನೇ ಈ ಸಾಮನಗಡದ ಶಾಸನವನ್ನು ಬರೆಯಿಸಿದ ದಂತಿಗನು. ಈ ರಾಣಿಯ ಹೆಸರು ನಿರ್ದಿಷ್ಟವಾಗಿಲ್ಲ. ಕಾಲಮಾನವನ್ನು ಭಾವಿಸಿದರೆ ಮೇಲೆ ನಿರ್ದೇಶಿಸಿದ ಚಾಲುಕ್ಯ ರಾಜರೊಳಗೆ ಕಡೆಯವನಾದ ವಿಕ್ರಮಾದಿತ್ಯನ ತಂಗಿಯನ್ನೋ ಮಗಳನ್ನೋ ಈ ಇಂದ್ರರಾಜನು ರಾಕ್ಷಸೀ ವಿವಾಹದಲ್ಲಿ ವರಿಸಿದುದೆಂದು ಭಾವಿಸಬೇಕು.

ಇದರಿಂದ, ಆ ಎರಡನೆಯ ಇಂದ್ರರಾಜನು ಆಗಿನ ಚಾಲುಕ್ಯಾಧಿಕಾರವನ್ನು ವಿಾರಿ

---

[1] S. Srikantha Sastri, *Sources of Karnataka History*, Vol. I, p. 57

[2] Epigraphia Indica, Vol, XVIII, *Sanjan plates of Amoghavarsha* v. 7

[3] S. Srikantha Sastri, *Sources of Karnataka History*, Vol. I, p. 57

ನಡೆಯಲಾರಂಭಿಸಿದುದು ವ್ಯಕ್ತವಾಗುತ್ತಿದೆ. ಅವನ ಮಗನಾದ ದಂತಿದುರ್ಗನು ಆಗಿನ ಚಾಲುಕ್ಯ ರಾಜನಾದ, ಹಿಂದೆ ತೋರುವ ವಿಕ್ರಮಾದಿತ್ಯನ ಮಗ ಕೀರ್ತಿವರ್ಮನ (ಕ್ರಿ.ಶ. ೭೪೭-೭೫೩) ರಾಜ್ಯಾಧಿಕಾರವನ್ನು ಸೆಳೆದುಕೊಂಡುದಲ್ಲದೆ ಅವನ ಕುಮಾರಿಯನ್ನೂ ವರಿಸಿದನೆಂಬುದು ಗೊತ್ತಾಗಿದೆ. ಹಿಂದೆ ರಾಷ್ಟ್ರಕೂಟ ವಂಶಚಿತ್ರವನ್ನು ಕೊಟ್ಟಿದ್ದೇವೆಯಷ್ಟೆ. ಆ ವಂಶದ ಆದಿಯ ವ್ಯಕ್ತಿಗಳಿಗೂ ಚಾಲುಕ್ಯ ವಂಶದವರಿಗೂ ಇರುವ ಸಂಬಂಧಗಳನ್ನು ಇನ್ನಷ್ಟು ವಿಶದವಾಗಿ ಭಾವಿಸಿಕೊಳ್ಳಲೆಂದು ಎರಡನೆಯ ಪುಲಿಕೇಶಿ ಮೊದಲ್ಗೊಂಡು ಕಡೆಯ ಕೀರ್ತಿವರ್ಮನ ಪರ್ಯಂತದ ಬಾದಾಮಿ ಚಾಲುಕ್ಯರ ವಂಶ ಚಿತ್ರವನ್ನೂ ಮುಂದೆ ಅಂಕಿಸುತ್ತೇವೆ:

### ಬಾದಾಮಿಯ ಚಾಲುಕ್ಯ ವಂಶದ ಕಡೆಯ ಭಾಗ[1]

೧. ಸತ್ಯಾಶ್ರಯ ಪುಲಿಕೇಶಿ II, ಶಾ. ಶ. ೫೩೨-೫೫೬ (ಕ್ರಿ.ಶ. ೬೧೦-೬೩೪)
೨. ವಿಕ್ರಮಾದಿತ್ಯ I, ಶಾ. ಶ. ೫೫೬-೬೦೨ (ಕ್ರಿ.ಶ. ೬೩೪-೬೮೦)
೩. ವಿನಯಾದಿತ್ಯ, ಶಾ. ಶ. ೬೦೨-೬೧೮ (ಕ್ರಿ.ಶ. ೬೮೦-೬೯೬)
೪. ವಿಜಯಾದಿತ್ಯ, ಶಾ. ಶ. ೬೧೮-೬೫೫ (ಕ್ರಿ.ಶ. ೬೯೬-೭೩೩)
೫. ವಿಕ್ರಮಾದಿತ್ಯ, ಶಾ. ಶ. ೬೫೫-೬೬೯ (ಕ್ರಿ.ಶ. ೭೩೩-೭೪೭)
೬. ಕೀರ್ತಿವರ್ಮನ್, ಶಾ. ಶ. ೬೬೯ (ಕ್ರಿ.ಶ. ೭೪೭)

## ರಟ್ಟ-ರಾಷ್ಟ್ರಕೂಟರು

ಮೇಲೆ ಸಂಗ್ರಹವಾಗಿ ಸೂಚಿಸಿದ ರಾಷ್ಟ್ರಕೂಟ ವಂಶದ ಮೂಲಪುರುಷರೊಳಗೆ ಮೊದಲಿನ ದಂತಿವರ್ಮ ಮೊದಲಾದ ಮೂವರಿಗೆ ರಾಷ್ಟ್ರಕೂಟ ಎಂಬ ಹೆಸರಿನ ಛಾಯೆಯಾದರೂ ಆಗಿನ ಕಾಲದಲ್ಲಿ ಇತ್ತೋ ಇಲ್ಲವೋ ಎಂದು ಸಂಶಯವಾಗುತ್ತಿದೆ. ವಿಂಧ್ಯಾದ್ರಿಯ ರೇವಾ ನದಿಯ ತಟಪ್ರದೇಶಗಳಲ್ಲಿ ಆದಿಯಿಂದಲೂ ಮನೆಮಾಡಿಕೊಂಡು ಹುಟ್ಟುಗನ್ನಡಿಗರಾದ ಗೊಲ್ಲರಿದ್ದರೆಂಬುದು ಪ್ರಸಿದ್ಧಿಗೊಂಡ ಸಂಗತಿ. ಅದೇ ವಂಶಕ್ಕೆ ಸೇರಿದ, ಕ್ರಮೇಣ ಒಂದಷ್ಟು ಮೇಲ್ಮೆ ಪಡೆದ ರಾಜವಂಶದ ಶಾಖೆಯೊಂದಕ್ಕೆ 'ಆಭೀರವಂಶ' ಎಂಬ ಹೆಸರಾಗಿತ್ತು. ಈ ರಾಷ್ಟ್ರಕೂಟ ವಂಶದ ಹಿಂದಿನವರು ಆ ಆಭೀರವಂಶದ ರಾಜರೆಂದೇ ನಮಗೆ ಭಾಸವಾಗುತ್ತಿದೆ. ನಾಲ್ಕನೆಯವನಾದ ಕಕ್ಕನಿಗಿದ್ದ ಬಿರುದು 'ರಟ್ಟ' ಎಂದಲ್ಲದೆ 'ರಾಷ್ಟ್ರಕೂಟ' ಎಂದಲ್ಲ. ರಟ್ಟ (ಕಕ್ಕ) ರಾಜನ ಮಗನಾದ ಇಂದ್ರನನ್ನು ಬಣ್ಣಿಸುವಲ್ಲಿ ಸಾಮನಗಡದ ಶಾಸನಕಾರನು ಪ್ರಯೋಗಿಸಿದ 'ಸದ್ರಾಷ್ಟ್ರಕೂಟ ಕನಕಾದ್ರಿರಿವೇಂದ್ರರಾಜ' ಎಂಬ ಪದವೈಶಿಷ್ಟ್ಯವನ್ನು ಭಾವಿಸಿರಿ. ಇದಕ್ಕೆ 'ಆ ರಾಷ್ಟ್ರಕೂಟ ವಂಶರೂಪದ ಕನಕಾದ್ರಿ(ಮೇರುಪರ್ವತ)ಯಂತೆ ಇಂದ್ರರಾಜನಿದ್ದನು' ಎಂಬ ಅರ್ಥವಾಗುತ್ತಿದೆ. 'ರಟ್ಟ' ಎಂಬ ದೇಶಿ ಪದವನ್ನೇ 'ರಾಷ್ಟ್ರ'ವನ್ನಾಗಿ ಸಂಸ್ಕೃತಕ್ಕೆ ಮಾರ್ಪಡಿಸಿಕೊಂಡುದಲ್ಲದೆ,

[1] Dr. R. G. Bhandarkar, *Early History of the Dekkhan*, p. 46

ಅದು ಮೂಲತಃ ಸಂಸ್ಕೃತವಲ್ಲ ಎಂಬುವನ್ನೂ ಮರೆಯಲಾಗದು. 'ರಟ್ಟರ ಕೂಡು' ಅಥವಾ 'ರಟ್ಟರ ಕೂಡಲ್' (ರಟ್ಟರ ಕೂಟ) ಎಂಬ ಪದವದು ಸಂಸ್ಕೃತೀಕೃತವಾಗಿ ರಾಷ್ಟ್ರಕೂಟ ಎಂದಾಗಿದೆ. ಇದರಿಂದ, ಇಂದ್ರರಾಜನು ಬರಿಯ 'ರಾಷ್ಟ್ರಕೂಟ'ನಷ್ಟೇ ಅಲ್ಲ, ಅಂಥ ಅನೇಕ ಕೂಟ(ಶಿಖರ)ಗಳಿಗಾಶ್ರಯವಾದ 'ರಾಷ್ಟ್ರಕೂಟ ಕನಕಾದ್ರಿ' ಎಂದಾಗುತ್ತಿದೆ; ಎಂದರೆ ಆ ಇಂದ್ರರಾಜನು ರಟ್ಟರ ಭಿನ್ನಭಿನ್ನ ಸೇನಾಸಮುದಾಯಗಳಿಂದ ಕೂಡಿ ಬಲಿಷ್ಠನಾದವನು ಎಂದು ತಾತ್ಪರ್ಯ. ಇಂದ್ರನು ದಂತಿದುರ್ಗನ ತಂದೆಯೇ ಆದುದರಿಂದ ಈ ಶಾಸನಕಾರನಿಗೆ ಅವನ ಯೋಗ್ಯತೆ ವಿಶದವಾಗಿ ತಿಳಿದಿರಬೇಕು. ಆ ಇಂದ್ರರಾಜನ ತಂದೆ ಬರಿಯ 'ರಟ್ಟ'ನಾಗಿದ್ದನು, ಮಗನಂತೆ 'ರಾಷ್ಟ್ರಕೂಟ' ಪದವಿಯನ್ನೊಂದಿರಲಿಲ್ಲ. 'ರಟ್ಟ' ಎಂದರೆ 'ಬಲಿಷ್ಠವಾದ ಬಾಹು ಮೂಲ' ಎಂಬರ್ಥವಿದೆ; ಅದಕ್ಕನುವಾಗಿ 'ರಟ್ಟ' ಎಂದರೆ ದಾಂಡಿಗ (ಬಲಿಷ್ಠ) ಎಂಬ ಅರ್ಥವೂ ಒದಗಬಹುದು. ಮಾತ್ರವಲ್ಲ, ಆ 'ರಟ್ಟ' ಪದವು 'ಲಟ್ಟ' ಎಂದೂ ಅಲ್ಲಲ್ಲಿ ಉಪಯುಕ್ತವಾಗಿದೆ. ಈ 'ಲಟ್ಟ'ರು ಅಥವಾ ಹಿಂದಣ ರಾಷ್ಟ್ರಕೂಟರು, ಮಾನ್ಯಖೇಟ ರಾಜಧಾನಿಗಿಂತ ಮೊದಲಿದ್ದುದು 'ಲಟ್ಟಲೂರ ನಗರ'ದಲ್ಲಿ ಎಂದು ಮೊದಲೊಮ್ಮೆ 'ಪ್ರಬುದ್ಧ ಕರ್ಣಾಟಕ'ದಲ್ಲಿ ಸಾಧಾರವಾಗಿ ಸೂಚಿತವಾಗಿದೆ.[1] ಹೇಗೂ ಇರಲಿ. 'ರಟ್ಟ' ಎಂಬ ಪದವೇ 'ರಾಷ್ಟ್ರಕೂಟ' ಪದಕ್ಕೆ ಆಶ್ರಯವೆಂಬಲ್ಲಿ ಸಂಶಯವಿಲ್ಲ. ಒಂದು ವೇಳೆ ನಿಜವಾಗಿ ರಾಷ್ಟ್ರಕೂಟ ವಂಶವನ್ನು ಸ್ಥಾಪಿಸಿದವನು ದಂತಿದುರ್ಗನೇ ಆಗಿದ್ದಿರಬಹುದಾದರೂ 'ರಾಷ್ಟ್ರಕೂಟ ಕನಕಾದ್ರಿ' ಎಂದು ತನ್ನ ತಂದೆಯಾದ ಇಂದ್ರರಾಜನನ್ನು ಬಣ್ಣಿಸಿದುದು ವೀರಕುಮಾರನಾದ ಆ ದಂತಿಗನ ಪಿತೃಭಕ್ತಿಗೆ ತಕ್ಕ ಗುಣವೇ ಸರಿ.

---

1 ದೇಸಾಯಿ ಪಾಂಡುರಂಗರಾಯ-'ರಾಷ್ಟ್ರಕೂಟರ ರಾಜಧಾನಿಗಳು' ಎಂಬ ಲೇಖನ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೨೬, ಸಂಚಿಕೆ ೨.

# ೨

# ರಾಷ್ಟ್ರಕೂಟ ತ್ರಿಮೂರ್ತಿಗಳು

## ದಂತಿದುರ್ಗನೂ ಅವನ ರಾಜಧಾನಿಯೂ

ರಾಷ್ಟ್ರಕೂಟ ಕುಲದ ತ್ರಿಮೂರ್ತಿಗಳೆಂದು ನಾವು ಹೆಸರಿಸುವುದು ಕ್ರಮವಾಗಿ ದಂತಿದುರ್ಗ, ಶುಭತುಂಗ ಕೃಷ್ಣರಾಜ, ನಿರುಪಮಧ್ರುವರನ್ನು. ಹಿಂದೆ ಸೂಚಿಸಿದ ಸಾಮನಗಡದ ಶಾಸನದಲ್ಲಿ 'ಯೋ ವಲ್ಲಭಂ ಸಪದಿ ಯೇನ ದಂಡಕಲೇನ ಜಿತ್ವಾ ರಾಜಾಧಿರಾಜ ಪರಮೇಶ್ವರ ತಾಮವಾಪ' ಎಂದು ತೋರುತ್ತಿದೆ.[1] ಇಲ್ಲಿ ತೋರುವಂತೆ ದಂತಿದುರ್ಗನು ಗೆದ್ದ 'ವಲ್ಲಭ'ನೆಂದರೆ, ಆ ವರೆಗೆ ಪರಂಪರಾಯಾತರೀತಿಗನುವಾಗಿ ಕನ್ನಡದಲ್ಲಿ ರಾಜಾಧಿರಾಜನಾಗಿದ್ದ ಚಾಲುಕ್ಯಕೀರ್ತಿವರ್ಮನೇ ಆಗಿದ್ದಿರಬೇಕೆಂದು ಭಾವಿಸಲೇಬೇಕು. ಅವನನ್ನು ಗೆದ್ದುದರಿಂದಲೆ ದಂತಿದುರ್ಗನು 'ರಾಜಾಧಿರಾಜ ಪರಮೇಶ್ವರ' ಎಂಬ ಬಿರುದಿಗೆ ಪಾತ್ರನಾಗಿರಬೇಕು. ಆ ಕೀರ್ತಿವರ್ಮನು ಪಟ್ಟವನ್ನೇರಿದುದು ಕ್ರಿ. ಶ. ೭೪೭ರಲ್ಲಿ ; ದಂತಿದುರ್ಗನ ಈ ಶಾಸನಕಾಲ ಕ್ರಿ. ಶ. ೭೫೪. ಆದರಿಂದ, ದಂತಿಗನು ಕೀರ್ತಿವರ್ಮನನ್ನು 'ದಂಡ'ದಿಂದ ಗೆದ್ದ ನಿರ್ದಿಷ್ಟ ಸಮಯದ ಗುರಿ ಸರಿಯಾಗಿ ಗೊತ್ತಾಗದಿದ್ದರೂ ಅದು ಪೂರ್ವೋಕ್ತವಾದ ಉಭಯಕಾಲಗಳ ಅಂತರದಲ್ಲಿ, ಎಂಬಲ್ಲಿ ಸಂಶಯವಿಲ್ಲ. ತಂದೆಯಾದ ಇಂದ್ರರಾಜನು ಚಾಲುಕ್ಯ ರಾಜಪುತ್ರಿಯನ್ನು ರಾಕ್ಷಸೀವಿವಾಹದಿಂದ ವರಿಸಿದರೆ, ಮಗನಾದ ಈ ದಂತಿಗನು ಜಿತನಾದ ಆ ಚಾಲುಕ್ಯ ಕೀರ್ತಿವರ್ಮನ ಕುಮಾರಿಯನ್ನು ವರಿಸಿದ್ದನೆಂಬುದು ನಿಶ್ಚಿತವಾಗಿದೆ. ಕೀರ್ತಿವರ್ಮನು ಎರಡನೆಯ ಪುಲಿಕೇಶಿಯಿಂದ ಸ್ಥಾಪಿತವಾದ ಬಾದಾಮಿಯ ರಾಜಧಾನಿಯಲ್ಲಾಳುತ್ತಿದ್ದನಷ್ಟೆ. ಗೆದ್ದವನಾದರೂ, ದಂತಿದುರ್ಗನು ತನಗೆ ಮಾವನಾದ ಕೀರ್ತಿವರ್ಮನನ್ನು ಆ ರಾಜಧಾನಿಯಿಂದ ಹೊರಡಿಸಲಿಲ್ಲ. ಅದು ವೀರ ಜಾಮಾತನ ವಿನಯಕ್ಕೊಪ್ಪುವ ಗುಣವೇ ಎನ್ನುವ. ಮಾತ್ರವಲ್ಲ, ತಂದೆಯಾದ ಇಂದ್ರನು ಚಾಲುಕ್ಯರನ್ನು ವಿರೋಧಿಸುತ್ತಲೇ ಇದ್ದರೆ, ಮಗನಾದ ರಾಜಾಧಿರಾಜ ದಂತಿಗನು ಚಾಲುಕ್ಯರ ಪ್ರೀತಿಯನ್ನು ಬಯಸುತ್ತಿದ್ದನೆಂಬುದು ಇದರಿಂದ ಗೊತ್ತಾಗುತ್ತಿದೆ. ರಾಷ್ಟ್ರಕೂಟ ಮೂರನೆಯ ಕೃಷ್ಣರಾಜನ ನವಸಾರಿ ಶಾಸನದಲ್ಲಿ 'ಚಾಲುಕ್ಯ ವಂಶಜಲಧೇಃ ಸ್ವಯಮೇವ ಲಕ್ಷ್ಮೀರ್ಯಂ ಶಂಖಚಕ್ರ ಕರಲಾಂಛನಮಾಜಗಾಮ'[2] ಎಂಬ ಶ್ಲೋಕಭಾಗವನ್ನು

[1] S. Srikantha Sastri, *Sources of Karnataka History*, Vol. I, p. 58

[2] Dr. R. G. Bhandarkar, *Collected Works*, Vol. III, p. 322

ಪರಾಂಬರಿಸಿರಿ. ಸಮುದ್ರಮಥನಕ್ಕೆ ಪ್ರಮುಖ ಸೂತ್ರಧಾರಿ ಎಂದರೆ ಶ್ರೀವಿಷ್ಣುವೇ ಅಲ್ಲವೆ? ಹಾಗೆ ತನ್ನ ತಂದೆಯಾದ ಸಮುದ್ರರಾಜನನ್ನು ಪರಾಜಿತನನ್ನಾಗಿ ಮಾಡಿದ ಶ್ರೀವಿಷ್ಣುವನ್ನು ಲಕ್ಷ್ಮೀದೇವಿ ಸ್ವಯಂವರಿಸಿದಳು; ಚಾಲುಕ್ಯವಂಶ ಜಲಧಿಯಿಂದುದ್ಭವಿಸಿದ ಆ ಲಕ್ಷ್ಮೀನಾಮಕ ರಾಜಕುಮಾರಿ (ಸ್ವಯಮೇವ ಲಕ್ಷ್ಮೀಃ) ಶಂಖಚಕ್ರಕರ ಲಾಂಛನನಾದ ದಂತಿದುರ್ಗನನ್ನು ಸ್ವಯಂವರಿಸಿದಳು. ಆ ಕುಮಾರಿಯ ಹೆಸರು ಲಕ್ಷ್ಮೀದೇವಿ ಎಂಬುದೊಂದು, ಆ ವಿವಾಹವೆಂದರೆ ಪ್ರೇಮಬದ್ಧವಾದುದು ಎಂಬುದಿನ್ನೊಂದು—ಹೀಗೆ ಎರಡು ವಿಷಯಗಳು ಈ ಹೇಳಿಕೆಯಿಂದ ಧ್ವನಿತವಾಗುತ್ತಿವೆ. ಅಂತೂ ದಂತಿದುರ್ಗನು ಕೀರ್ತಿವರ್ಮನನ್ನು ಗೆದ್ದು, ತಂದೆಯಂತೆ ರಾಕ್ಷಸೀವಿವಾಹಕ್ಕೆ ಕೈನೀಡಿದವನಲ್ಲ. ಆದರಿಂದಲೇ ಮೇಲೆ ಸೂಚಿಸಿದಂತೆ ಕೀರ್ತಿವರ್ಮನಲ್ಲಿ ಆತನಿಗಿದ್ದ ವಿನಯವೂ ವಿಶದವಾಗುತ್ತಿದೆ. ಆತನ ಸೇನಾಬಲವೆಂದರೆ ನಮ್ಮ ಕನ್ನಡ ಜನಾಂಗಕ್ಕೇ ಕೀರ್ತಿಯನ್ನೊದಗಿಸಿದಂತೆ ತೋರುತ್ತಿದೆ. ಅವನದೇ ಆದ ಸಾಮನಗಡ ಶಾಸನದ ಇನ್ನೊಂದು ಶ್ಲೋಕ ಭಾಗವನ್ನೀಕ್ಷಿಸಿರಿ:

> ಕಾಂಚೀಶ ಕೇರಳನರಾಧಿಪ ಚೋಳ ಪಾಂಡ್ಯ ಶ್ರೀಹರ್ಷ ವಜ್ರಟ ವಿಭೇದ ವಿಧಾನದಕ್ಷಂ
> ಕರ್ಣಾಟಕಂ ಬಲಮಚಿಂತ್ಯಮಜೇಯಮನ್ಯೈಃ...[1]

ಈ ದಂತಿದುರ್ಗನಿಂದ ಸ್ಥಾಪಿತವಾದ 'ಕರ್ಣಾಟಕಂ ಬಲ'ವು ಹಗೆಗಳ ಭಾವನೆಗೆ ಮೀರಿದುದೂ ಗಣಕರ ಲೆಕ್ಕಕ್ಕೆ ಸಿಕ್ಕದುದೂ ಆಗಿತ್ತಂತೆ. ಈ ಬಲದಿಂದಲೇ ಆತನು ಕಾಂಚೀ ಕೇರಳ ಚೋಳ ಪಾಂಡ್ಯರೆಂಬ ದಕ್ಷಿಣ ರಾಜರನ್ನೂ ಶ್ರೀಹರ್ಷ ವಜ್ರಟರೆಂಬ ಔತ್ತರೇಯರನ್ನೂ ಸಂಪುಟದೊಳಗಿಟ್ಟುದಂತೆ. ಈ ಶಾಸನದಲ್ಲಿ ದಂತಿದುರ್ಗನ ದಕ್ಷಿಣದೇಶ ವಿಜಯವೇನೋ ಸೂಚಿತವಾಗುತ್ತಿದೆ. ಆದರೆ, ಅದಕ್ಕಿಂತಲೂ ಹೆಚ್ಚಿನ ವಿಶಿಷ್ಟಾರ್ಥದಾಯಕವಾಗಿ, ಮೇಲೆ ಸೂಚಿಸಿದ ರಾಷ್ಟ್ರಕೂಟ ಕೃಷ್ಣನ (ಕನ್ನರನ) ನವಸಾರಿಯ ಶಾಸನಭಾಗದಲ್ಲಿ ಇದೇ ಸಂಗತಿ ನಿರ್ದಿಷ್ಟವಾಗಿದೆ:

> ಕೃತ್ವಾಸ್ಪದಂ ಹೃದಯಹಾರಿ ಜಘನ್ಯದೇಶೇ ಸ್ವೈರಂ ಪುನರ್ಮೃದು ವಿಮರ್ದ್ಯ ಚ ಮಧ್ಯದೇಶೇ
> ಯಸ್ಯಾಸಮಸ್ಯ ಸಮರೇ ವಸುಧಾಂಗನಾಯಾಃ ಕಾಂಚೀಪದೇ ಪದಮಕಾರಿ ಕರೇಣ ಭೂಯಃ[2]—

ಇಲ್ಲಿ ಭೂಮಿಯನ್ನೇ ನಾಯಿಕೆಯನ್ನಾಗಿಯೂ ದಂತಿದುರ್ಗನನ್ನೇ ನಾಯಕನನ್ನಾಗಿಯೂ ಮಾರ್ಪಡಿಸಿಕೊಂಡು ಶಾಸನಕವಿ ಎಸಗಿದ ಕೃತಕ ಶೃಂಗಾರ ವರ್ಣನೆ ಚಾರಿತ್ರಿಕ ವಿಮರ್ಶಕರಿಗೆ ಅನಾವಶ್ಯಕ. ಆದರೆ ಆ ವರ್ಣನೆಗೂ ಸರಿಯಾಗುವಂತೆ ಇಲ್ಲಿ ಸೂಚಿಸಿದ, ವಸುಧಾಂಗನೆಯನ್ನೊಂದಿ ಉಪಮುಕ್ತಗಳಾದ, ಜಘನ್ಯದೇಶ-ಮಧ್ಯದೇಶ-ಕಾಂಚೀಪದ ಎಂಬ

[1] S. Srikantha Sastri, *Sources of Karnataka History*, Vol. I, p. 58

[2] Dr. R. G. Bhandarkar, *Collected Works*, III, p. 322

ಪದಗಳ ಅರ್ಥವನ್ನು ವಿಮರ್ಶಕರು ಪರಾಂಬರಿಸಿ ನೋಡಲೇಬೇಕು ಎಂದು ನನ್ನ ಸೂಚನೆ. ದಂತಿದುರ್ಗನು ತನ್ನ ಹೃದಯವನ್ನು ಸೆಳೆದ ವಸುಧಾಂಗನೆಯು ಜಘನ್ಯದೇಶದಲ್ಲಿ[1] ನೆಲೆಗೊಂಡನಂತೆ. ಅದಕ್ಕಿಂತ ಒಂದಿಷ್ಟು ಮೇಲಣ, ಅಥವಾ ಉತ್ತರದ ಮಧ್ಯದೇಶದಲ್ಲಿ[2] ಯಥೇಚ್ಛವಾಗಿಯಾದರೂ ಮೆದುವಾಗಿ ಮರ್ದಿಸಿದನಂತೆ. ಆಮೇಲೆ, ಆ ವಸುಧಾಂಗನೆಯು ಕಾಂಚೀಪದದಲ್ಲಿ[3] ಕೈಮಾಡಿದನಂತೆ. ಕವಿಯ ಶೃಂಗಾರ ವರ್ಣನೆಯನ್ನು ಬಿಟ್ಟುಬಿಡುವ; ಆತನ ದಿಗ್ವಿಜಯ ಪ್ರದೇಶಗಳನ್ನೂ, ಈ ವರೆಗೆ ಚಾರಿತ್ರಿಕರಿಗೆ ಮರೆಯಾಗಿದ್ದ ಆಗಿನ ರಾಷ್ಟ್ರಕೂಟ ರಾಜಧಾನಿ ಯಾವುದು ಎಂಬುದನ್ನೂ ಇಲ್ಲಿ ಒಂದಿಷ್ಟು ವಿವೇಚಿಸಲಾಗುವುದೋ ನೋಡುವ. ದಿಗ್ವಿಜಯ ಪ್ರದೇಶಗಳೊಳಗಿನ ಮಧ್ಯದೇಶ ಎಂದರೆ ವಿಂಧ್ಯಾದುತ್ತರ ಭಾಗವೆಂದೂ ಕಾಂಚೀಪದ ಎಂದರೆ ತಮಿಳುನಾಡಿನೊಳಗಿನದೆಂದೂ ಮೇಲಿನಿಂದಲೇ ವಿಶದವಾಗುತ್ತಿದೆಯಷ್ಟೆ. ಆದರೆ, ಅವನು ತನಗೆ 'ಆಸ್ಪದ'ವಾಗಿ ಅಥವಾ ರಾಜಧಾನಿಯಾಗಿ ಮಾಡಿಕೊಂಡ ಆ ಭೂಭಾಗವಿದ್ದ 'ಜಘನ್ಯದೇಶ' ಎಂದರೆ ಯಾವುದು ? ಎಂಬುದನ್ನು ಪರಾಂಬರಿಸುವ.

'ಜಘನ್ಯದೇಶ' ಎಂದರೆ ಮಧ್ಯಭಾಗದಿಂದ ಒಂದಿಷ್ಟು ಕೆಳಗಿನ ಜಘನ ಅಥವಾ ನಿತಂಬ ಪ್ರದೇಶವೆಂಬ ಅರ್ಥ. 'ನಿತಂಬ' ಎಂದರೆ 'ಪರ್ವತದ ತಪ್ಪಲು' ಎಂದೂ ಅರ್ಥವಿದೆಯಷ್ಟೆ. ಅದರಿಂದ ವಿಂಧ್ಯಾದ್ರಿಯ ತಪ್ಪಲನ್ನೇ ಮನಸ್ಸಿನಲ್ಲಿರಿಸಿಕೊಂಡು ಶಾಸನಕವಿ ಹಾಗೆ ಬರೆದಿರಬೇಕು. ಈ ಸಂದರ್ಭದಲ್ಲಿ 'ಜಘನ್ಯದೇಶೇ' ಎಂಬುದಕ್ಕೆ ಬದಲಾಗಿ 'ನಿತಂಬದೇಶೇ'[4] ಎಂದು ಮಾರ್ಪಡಿಸುತ್ತಿದ್ದರೆ ಇನ್ನಷ್ಟು ವಿಶದವಾಗಿ ಉಭಯಾರ್ಥಗಳೂ ಭಾಸವಾಗುತ್ತಿದ್ದುದಲ್ಲವೆ ? ಎಂದು ಕೇಳಬಹುದು. ಹೌದು. ಆದರೆ ವಿಂಧ್ಯದಿಂದ ತೆಂಕಣ ಭಾಗವು ಮ್ಲೇಚ್ಛ (ಜಘನ್ಯ) ಪ್ರದೇಶ ಎಂಬ ಪೌರಾಣಿಕ ರೂಢಿಗನುವಾದ ಭಾವನೆ ಆ 'ನಿತಂಬ' ಪದದಿಂದ ಒದಗಲಾರದು. ಈ ಶಾಸನ ಕಾಲವೆಂದರೆ ಪೌರಾಣಿಕ ವಿಚಾರಕ್ಕೆ ಹೆಚ್ಚಿನ ಪ್ರಮಣತೆಯನ್ನೀಯುತ್ತಿದ್ದ ಕಾಲವಲ್ಲವೆ ? ಆದುದರಿಂದಲೇ ಕವಿ ಆ 'ಜಘನ್ಯ' ಪದವನ್ನೇ ಉಪಯೋಗಿಸಿರಬೇಕು. ಈ ವಿವೇಚನೆಗನುವಾಗಿ ಪರಾಂಬರಿಸಿದಲ್ಲಿ, 'ಕೃತ್ವಾಸ್ಪದಂ ಹೃದಯಹಾರಿ ಜಘನ್ಯದೇಶೇ' ಎಂಬ ಭಾಗಕ್ಕೆ ದಂತಿದುರ್ಗನ ಆಳಿಕೆಗೆ ಆಸ್ಪದವಾದ ರಾಜಧಾನಿಯು ವಿಂಧ್ಯಾದ್ರಿಯ ತಪ್ಪಲಿನಲ್ಲೇ ಇದ್ದಿರಬೇಕೆಂದು ಅರ್ಥವಾಗುವಂತೆ ತೋರುತ್ತಿದೆ. ಅಷ್ಟೇ ಅಲ್ಲ; ಹಿಂದೆ ಸೂಚಿಸಿದ ದಂತಿದುರ್ಗನ ಸಾಮನಗಡದ ಶಾಸನದೊಳಗಿನ ಇನ್ನೊಂದು ಶ್ಲೋಕವನ್ನೀಕ್ಷಿಸಿರಿ:

---

[1] ಜಘನ್ಯದೇಶ—(i) ಪುರಾತನ ಕಾಲದ ಆರ್ಯರಿಂದ ನೀಚದೇಶವಾಗಿ ಭಾವಿಸಲ್ಪಡುತ್ತಿದ್ದ ವಿಂಧ್ಯಾದ್ದಕ್ಷಿಣ ಭಾಗದ ದೇಶ; (ii) ನಿತಂಬ ಸಂಬಂಧವಾದ ಸ್ಥಾನ.

[2] ಮಧ್ಯದೇಶ—(i) ಹಿಮವದ್ ವಿಂಧ್ಯಗಳ ಮಧ್ಯಭಾಗ; (ii) ಶರೀರ ಮಧ್ಯಭಾಗ.

[3] ಕಾಂಚೀಪದ—(i) ದ್ರಾವಿಡ ದೇಶಗತವಾದ ಕಾಂಚೀದೇಶ; (ii) ಮೇಖಲೆ ಅಥವಾ ಡಾಬಿಗೆ ಆಶ್ರಯವಾದ ಸೊಂಟ.

[4] ನಿತಂಬ=(i) ಪರ್ವತದ ತಪ್ಪಲು; (ii) ಉಬ್ಬಿದ ನಿತಂಬ ಭಾಗ.

ಮಹೀಮಹಾನದೀರೇವಾ ರೋಧೋಭಿತ್ತಿ ವಿದಾರಣಂ
ಲೋಕಾ ವಿಲೋಕಯತ್ಯುಚ್ಚೈಃ ಕೃತಂ ಯಜ್ಜಯಕುಂಜರೈಃ[1]—

ದಂತಿದುರ್ಗನ ವಿಜಯಯಾತ್ರಾವಸರದಲ್ಲಿ ದಂತಿಗಳಿಂದ ಮಾಡಲ್ಪಡುವ ಜಲಕ್ರೀಡೆಯನ್ನು ಬಣ್ಣಿಸುವ ಶ್ಲೋಕವಿದು. ಇಲ್ಲಿ ತೋರುವ ಮಹೀ, ಮಹಾನದೀ, ರೇವಾ (ನರ್ಮದಾ ನದಿ)—ಎಂಬವುಗಳೊಳಗೆ ಮೊದಲಿನದು ಮಾಳವ ದೇಶದ ಪ್ರಾಂತಕ್ಕೆ ಹೊದ್ದಿಕೆಯಾಗಿ, ಉಳಿದುವು ಒಂದಿಷ್ಟು ಮೂಡಣ ಪ್ರಾಂತಕ್ಕೆ ಸೇರಿ, ವಿಂಧ್ಯಪರ್ವತದ ಸಾಲಿನಿಂದಲೇ ಉಕ್ಕಿ ಹರಿವವುಗಳು ಎಂಬುದನ್ನು ಮರೆಯಬಾರದು. ಆ ಮೇಲೆಯೇ ಅವನು (ಚಾಲುಕ್ಯ) ವಲ್ಲಭನನ್ನು ಜಯಿಸಿ 'ರಾಜಾಧಿರಾಜ ಪರಮೇಶ್ವರ' ಎಂಬ ಬಿರುದನ್ನು ಪಡೆದಂತೆ ವರ್ಣಿತವಾದುದು. ವಿಂಧ್ಯಾದ್ರಿಯ ನಿತಂಬಪ್ರದೇಶದಲ್ಲಿದ್ದ ತನ್ನ ರಾಜಧಾನಿಯಿಂದ ಸೇನಾಸಮೇತನಾಗಿ ಹೊರಟು ಚಾಲುಕ್ಯಕೀರ್ತಿವರ್ಮನ ಬಾದಾಮಿ ರಾಜಧಾನಿಯತ್ತ ಹರಿವಲ್ಲಿ ಈ ನದಿಗಳನ್ನು ದಾಟಿಕೊಂಡೇ ಬರಬೇಕಾಗುತ್ತಿದೆ ಎಂಬುದನ್ನು ಭಾವಿಸಿಕೊಳ್ಳಬೇಕು. ಮಾನ್ಯಖೇಟಕ್ಕಿಂತ ಹಿಂದಿನ ರಾಷ್ಟ್ರಕೂಟರ ರಾಜಧಾನಿ ಯಾವುದಾಗಿತ್ತು ಎಂಬುದರ ವಿವೇಚನೆ ಇಷ್ಟರಿಂದಲೇ ನಿರ್ಧಾರವಾಗುವಂತಿಲ್ಲ. ಆದರೆ ಅದರ ಗುರಿಯನ್ನು ಸರಿಯಾಗಿ ಮುಂದೆ ಕಂಡುಹಿಡಿಯುವುದಕ್ಕೆ ಇದೊಂದು ಪೀಠಿಕೆ ಎಂದು ಮಾತ್ರವೇ ಭಾವಿಸಬೇಕು.

## ಅಕಾಲವರ್ಷ ಕೃಷ್ಣರಾಜ

ದಂತಿದುರ್ಗನು ಕ್ರಿ. ಶ. ೭೫೪ರ ವರೆಗೆ ಆಳುತ್ತಿದ್ದನೆಂಬುದು ಅದೇ ವರ್ಷದಲ್ಲಿ ನೆಲೆಗೊಂಡ ಅವನ ಸಾಮನಗಡದ ಶಾಸನದಿಂದ ತಿಳಿದುಬರುತ್ತಿದೆ. ಆದರೆ ಅವನು ಸ್ವರ್ಗಂಗತನಾದ ಮತ್ತು ಶುಭತುಂಗ ಕೃಷ್ಣರಾಜನು ಪಟ್ಟವನ್ನೇರಿದ ನಿರ್ದಿಷ್ಟಕಾಲವಾವುದು ಎಂಬುದು ಇನ್ನೂ ಗೊತ್ತಾಗಿಲ್ಲ. ಅದರಂತೆ, ಶುಭತುಂಗ ಕೃಷ್ಣನು ಆಳಿದ ಕಾಲಾವಧಿಯೂ ವಿಶದವಾಗಿಲ್ಲ. ಆದರೆ ಶುಭ ತುಂಗಕೃಷ್ಣನು ದಂತಿದುರ್ಗನ ಮಗನಲ್ಲ, ಸಹೋದರನೂ ಅಲ್ಲ, ಅವನ ಚಿಕ್ಕಪ್ಪನು—ಎಂಬುದು ಮೇಲೆ ಕಾಣಿಸಿದ ನವಸಾರಿಯ ಶಾಸನಭಾಗದಿಂದ ವ್ಯಕ್ತವಾಗಿದೆ. 'ತತ್ರಾಭವತ್ ಪರಮಧಾಮ್ನಿ ಪದೇ ಪಿತೃವ್ಯಃ ಶ್ರೀಕೃಷ್ಣರಾಜನೃಪತಿಃ' ಎಂಬುದೇ ಆ ಶಾಸನಾಂಶವು. 'ಪಿತೃವ್ಯಃ' ಎಂದರೆ ಚಿಕ್ಕಪ್ಪ ಎಂಬಲ್ಲಿ ಸಂದೇಹವಿಲ್ಲವಷ್ಟೆ. ಈ ಕೃಷ್ಣರಾಜನೆಂದರೆ ಹಿಂದೆ ತೋರುವ ಕರ್ಕ(ರಟ್ಟ)ರಾಜನ ಎರಡನೆಯ ಮಗನು, ದಂತಿದುರ್ಗನ ತಂದೆಯಾದ ಇಂದ್ರರಾಜನ ತಮ್ಮನು, ಎಂದು ಸೂಚಿತವಾಗುತ್ತಿದೆ. ಇದರಿಂದ ದಂತಿದುರ್ಗನಿಗೆ ರಾಜ್ಯಭಾರಸಮರ್ಥನಾಗಿದ್ದ ಮಗನಾಗಲಿ ಸೋದರನಾಗಲಿ ಇದ್ದಿಲ್ಲವೆಂದೂ ಭಾಸವಾಗುತ್ತಿದೆ.

ಇಂಥ ಉಚ್ಚಾಧಿಕಾರ ಪ್ರಾಪ್ತಿಯ ಸಂದಿನಲ್ಲಿ ಕೆಲಕೆಲ ಸಂಚುಹೊಂಚುಗಳ ಒಳಗೈಯು

---

[1] S. Srikantha Sastri, *Sources of Karnataka History*, Vol. I, p. 57

ಸುಳಿದಾಟವಾಗುವುದುಂಟಷ್ಟೆ. ಅವುಗಳ ಬಲದಿಂದ ದಂತಿದುರ್ಗನ ಮಗನೇ ಮೊದಲಾದವರ ಅಧಿಕಾರಕ್ಕೆ ತಿಲಾಂಜಲಿ ಒದಗಿರಬಹುದೇ ಎಂದು ಕೆಲವರು ಊಹಿಸಿದುದುಂಟು. ಆದರೆ ಅದು ಸಂಶೋಧನಸಾರ ಎಂದು ನಮಗೆ ತೋರುವುದಿಲ್ಲ. ಶುಭತುಂಗಕೃಷ್ಣನ ಪ್ರತಾಪದ ಮೇಲ್ಮೆ ಹಾಗಿರಲಿ ; ದೈವಭಕ್ತಿ, ವ್ಯಾವಹಾರಿಕ ಮಾರ್ಗ, ಇವೆಲ್ಲವೂ ಅವನ ನಡವಳಿಯಲ್ಲಿ ಅಚ್ಚೊತ್ತಿ ಲೋಕವನ್ನು ಆಕರ್ಷಿಸಿದ ಧಾರ್ಮಿಕ ಕ್ರಿಯಾಕಲಾಪಗಳು ಅಂಥ ಸಂಶಯವನ್ನೆಲ್ಲ ತೊಳೆದು ಒರಸಿಬಿಡುತ್ತಿವೆ. ಏಲೂರು ಅಲ್ಲವೆ ಏಲಾಪುರ ಎಂಬುದು, ಕನ್ನಡಿಗರ ಶಿಲ್ಪಕಲಾಮಹಿಮೆಗೆ, ವಿಶೇಷವಾಗಿ ಈ ಶುಭತುಂಗನ ಭಕ್ತಿ ಶೀಲಗಳಿಗೆ, ಆದರ್ಶವೆನ್ನಿಸಿ ಇಂದಿಗೂ ಹೊಳೆಯುತ್ತಿದೆ. ಅಲ್ಲಿ ಒಂದೇ ಬಂಡೆಗಲ್ಲಿನಲ್ಲಿ ಕೊರೆದ ಕೈಲಾಸ ಎಂಬ ದೇವಾಲಯವನ್ನು ಈ ಮಹಾರಾಜನೇ ಕಟ್ಟಿಸಿದಾತನು. ರಚನಾನಂತರದಲ್ಲಿ ಆ ದೇವಾಲಯದ ಗೈಮೆಯ ಜಾಣ್ಮೆಯನ್ನೂ ಚೆಲುವಿನ ಮೇಲ್ಮೆಯನ್ನೂ ಸೊಂಪು ಗುಂಪುಗಳ ಬಲ್ಮೆಯನ್ನೂ ಪರಾಂಬರಿಸಿದ ಪ್ರಮುಖ ಶಿಲ್ಪಿಯೇ ಬೆರಗಾಗಿ ಹೋದನಂತೆ. ಆ ಶುಭತುಂಗನ ಪ್ರತಾಪವನ್ನೆಲ್ಲ ನಾವಿಲ್ಲಿ ವಿಸ್ತರಿಸುವುದಿಲ್ಲ. ಆತನ ರಾಜಧಾನಿ ಎಲ್ಲಿ ಇದ್ದಿರಬೇಕು ಎಂಬುದು ಇನ್ನೂ ಗೊತ್ತಾಗಲಿಲ್ಲ. ಮೇಲೆ ಸೂಚಿಸಿದ ಕೈಲಾಸ ದೇವಾಲಯಕ್ಕೆ ಆಸರೆಯಾದ ಏಲೋರವು, ಹಿಂದೆ ಕಾಣಿಸಿದ ಲಟ್ಟಲೂರು ಎಂಬಲ್ಲಿಗೆ ಅನತಿ ದೂರದಲ್ಲಿರುವಂತೆ ತಿಳಿದುಬರುತ್ತಿದೆ. ಶುಭತುಂಗನು ಸುಮಾರು ಕ್ರಿ. ಶ. ೭೭೫ ಕ್ಕಿಂತಲೂ ಮೇಲೆ ರಾಜ್ಯವನ್ನಾಳುತ್ತಿದ್ದಂತೆ ಗೊತ್ತಾಗಿದೆ.[1]

## ಧ್ರುವ ನಿರುಪಮ

ಅಕಾಲವರ್ಷ ಶುಭತುಂಗಕೃಷ್ಣನಿಗೆ ಗೋವಿಂದ, ಧ್ರುವ ಎಂಬ ಇಬ್ಬರು ಕುಮಾರಕರಿದ್ದರು. ಹಿರಿಯವನಾದ ಎರಡನೆಯ ಗೋವಿಂದನ ಆಳಿಕೆಯೇ ಮೊದಲಾದ ಚಾರಿತ್ರಿಕ ವಿಚಾರಗಳೆಲ್ಲ ಅಲ್ಲಿಂದಲ್ಲಿಗೆ ಸಂಪುಟದೊಳಗೇ ಅಣಗಿಸಿಬಿಟ್ಟಂತೆ ತೋರುತ್ತಿದೆ. ಹೇಗೂ ಇರಲಿ, ತಂದೆಯ ಅನಂತರ ಕ್ರಮದಂತೆ ಎರಡನೆಯ ಗೋವಿಂದನೇ ಪಟ್ಟವನ್ನೇರಿರಬೇಕು. ಆ ಮೇಲೆ ಅಣ್ಣತಮ್ಮಂದಿರ ಒಳಗವಲು ಹೊರಜಗಳವಾಗಿ ಮಾರ್ಪಟ್ಟು ಧ್ರುವನು ಪಟ್ಟಾಧಿರೂಢನಾದಂತೆ ಆ ಧ್ರುವನ ಹಿರಿಯ ಮಗನಾದ 'ಕಂಬದೇವನ' ಬಾದನಗುಪ್ಪೆಯ ಶಾಸನ ಭಾಗದಿಂದ ತಿಳಿದುಬರುತ್ತಿದೆ :

> ಜ್ಯೇಷ್ಠೋಲ್ಲಂಘನ ಜಾತಯಾಪ್ಯಮಲಯಾ ಲಕ್ಷ್ಮ್ಯಾ ಶ್ರಿ ಸಮೇತೋಽಪಿ ಸನ್
> ಯೋಽಭೂನ್ನಿರ್ಮಲ ಮಂಡಲ ಸ್ಥಿತಿಯುತೋ ದೋಷಾಕರೋ ನ ಕ್ವಚಿತ್[2]—

---

[1] Dr R. G. Bhandarkar, *Collected Works*, Vol. I, p. 89.
Dr. A. S Altekar, *The Rashtrakutas and Their Times*, p. 45.

[2] S. Srikantha Sastri, *Sources of Karnataka History*, Vol. I, p. 62

'ಲಕ್ಷ್ಮೀದೇವಿ ತನ್ನ ಅಕ್ಕನಾದ ಜ್ಯೇಷ್ಠೆ(ದಾರಿದ್ರ್ಯ ಲಕ್ಷ್ಮಿ)ಯನ್ನು ಉಲ್ಲಂಘಿಸಿದಾಕೆ ಯಾದರೂ ನಿರ್ಮಲ ಸ್ವಭಾವದಾಕೆ; ಈ ಧ್ರುವನು ಜ್ಯೇಷ್ಠನನ್ನು ಉಲ್ಲಂಘಿಸಿದರೂ ನಿರ್ಮಲ ಲಕ್ಷ್ಮೀಸಮೇತನು; ಮತ್ತು ನಿರ್ಮಲಮಂಡಲ (ಮಂಡಲ i. ಸಾಮಂತ ಮಂಡಲ; ii. ಚಂದ್ರಬಿಂಬ)ನಾದರೂ ದೋಷಾಕರನು; (i. ದೋಷಯುತನು; ii. ರಾತ್ರಿಯಲ್ಲಿ ಕರವುಳ್ಳ ಚಂದ್ರ.)'

ಶ್ಲೇಷಾಲಂಕಾರರಂಜಿತವಾದ ಪದ್ಯವಿದು ಧ್ರುವನು ತನ್ನ ಜ್ಯೇಷ್ಠ(ಅಣ್ಣ)ನಾದ ಗೋವಿಂದನನ್ನು ಉಲ್ಲಂಘಿಸಿದಾತನು ಎಂಬುದನ್ನು ಸೂಚಿಸುತ್ತಿದೆ. ಅಣ್ಣನನ್ನು ಹಾಗೆ ತಳ್ಳಿದುದು ನಿರುಪಮನ ಕೀರ್ತಿಗೆ ಕಳಂಕವಲ್ಲ ಎಂದು ಆ ಕಾಲದ ಶಾಸನಕಾರರು ವರ್ಣಿಸಿದರೂ ಈಗಿನ ಸಹೃದಯರು ಅದಕ್ಕೆ ಅಸ್ತುಗೊಡುವರೋ ಎಂಬಲ್ಲಿ ಸಂಶಯವಾಗುವುದು. ಆದರೆ ಆ ರಾಜಕುಮಾರರಿಬ್ಬರ ತಂದೆಯಾದ ಶುಭತುಂಗನು ಕೀರ್ತಿಶೇಷನಾದ ಸಮಯದಮು. ಆ ವರೆಗೆ ರಾಷ್ಟ್ರಕೂಟರಿಂದ ಸೋತು ಸುಣ್ಣವಾದುದರಿಂದ ತಮಗೆ ಅನುಕೂಲ ಸಮಯದ ಛಿದ್ರವನ್ನು ಪ್ರತೀಕ್ಷಿಸುತ್ತಲೇ ಇದ್ದ ಚಾಳುಕ್ಯ ವಂಶೀಯರೇ ಮೊದಲಾದ ಮಾಂಡಳಿಕರು ಮೆಲ್ಲನೆ ಪ್ರಯೋಗಿಸುತ್ತಿದ್ದ ತಂತ್ರಕ್ಕೆ ಧ್ರುವನ ಅಣ್ಣನಾದ ಗೋವಿಂದನು ಸಿಲುಕಿರಲೂಬಹುದು. ಅದನ್ನು ಪರಾಂಬರಿಸಿದ ಧ್ರುವನು ಅಣ್ಣನನ್ನು ಉಲ್ಲಂಘಿಸಿದುದಾಗಿರಲೂಬಹುದು. ಇರಲಿ, ಧ್ರುವನು ಸಮರಾಂಗಣ ಸಾಹಸನೆಂಬುದು ಶಾಸನ ಪ್ರಸಿದ್ಧವಾದ ಸಂಗತಿ. ಅವನು ವಿಂಧ್ಯಾದ್ದಕ್ಷಿಣದ ಅನೇಕಾನೇಕ ಪ್ರಾಂತಗಳ ಅರಸರನ್ನು ಗೆದ್ದುದಷ್ಟೇ ಅಲ್ಲ, ಉತ್ತರದ ರಾಜರೊಳಗೂ ಹಲವರನ್ನು ಸೋಲಿಸಿದನು; ಗೌಡರಾಜ್ಯ, ವತ್ಸರಾಜ್ಯ, ಮರು, ಮಧ್ಯದೇಶಗಳನ್ನು ಜಯಿಸಿದನು—ಎಂಬುದೂ ಅದೇ ಬಾದನ ಗುಪ್ಪೆಯ ಶಾಸನದಲ್ಲಿ ವಿಸ್ತೃತವಾಗಿದೆ.[1]

ನಿರುಪಮಧ್ರುವನು ಅಂಥ ಅಪ್ರತಿಪರಾಕ್ರಮಿ, ವಿಂಧ್ಯಾಚಲದ ದಕ್ಷಿಣೋತ್ತರ ಭೂಭಾಗಗಳನ್ನು ತನ್ನ ದಾಳಿಯಿಂದ ನಡುಗಿಸಿದಾತನು, ಎಂಬುದನ್ನು ಒಪ್ಪಿಕೊಳ್ಳುವ. ಅದರಿಂದ, ಹಿಂದೆ ಸೋತು ಸೊರಗಿಹೋಗಿದ್ದ ಚಾಲುಕ್ಯವಂಶದವರೊಳಗೆ ಒಬ್ಬನಾದ ಒಂದನೆಯ ಅರಿಕೇಸರಿ ಆತನನ್ನು ಹೇಗೆ ಅತಿಕ್ರಮಿಸಿದನು ? ಈ ಸಂಗತಿ 'ಪಂಪಭಾರತ'ದ ಪ್ರಥಮಾಶ್ವಾಸದಲ್ಲಿ ಹೀಗೆ ನಿರೂಪಿತವಾಗಿದೆ—

ನಿರುಪಮದೇವನ ರಾಜ್ಯದೊ
ಳರಿಕೇಸರಿ ವೆಂಗಿವಿಷಯಮುಂ ತ್ರಿಕಳಿಂಗಂ
ಬೆರಸೊತ್ತಿಕೊಂಡು ಗರ್ವದೆ
ಬರೆಯಿಸಿದಂ ಪೆಸರನಖಿಳದಿಗ್ಭಿತ್ತಿಗಳೊಳ್[2]—

ನಿರುಪಮದೇವನೆಂದರೆ ರಾಷ್ಟ್ರಕೂಟ ಧ್ರುವನೇ ಎಂಬುದನ್ನು ಆ ರಾಜರೊಳಗಿನ ಕಾಲಮಾನಾದಿಗಳನ್ನು ಪರಾಮರ್ಶಿಸಿ ಕೈ. ವಾ. ಡಾ. ಕೆ. ಬಿ. ಪಾಠಕರೇ ಮೊದಲಾದ

[1] ಅದೇ ಗ್ರಂಥ, ಪು. ೬೨

[2] ಪಂಪಭಾರತ I, ೨೦

ವಿದ್ವಾಂಸರು ಒಪ್ಪಿದ್ದಾರೆ. ಈ ಸಂಗತಿ ವಾಸ್ತವವೇ ಎನ್ನುವ. ಆದರೂ ಇದು ಧ್ರುವನ ನಿರುಪಮತಾಭಂಗವನ್ನೊದಗಿಸಲಾರದು. ಆತನು ತಂದೆಯ ಮರಣಾನಂತರ ಅಣ್ಣನ ಹಗೆತನಕ್ಕೂ ಆಸ್ಪದನಾಗಿ ರಾಷ್ಟ್ರಕೂಟ ರಾಜ್ಯವನ್ನು ಹರಡಿಸುತ್ತಿದ್ದ ಕಾಲವದು. ಒಂದೆಡೆ ಹೊಲಿವಲ್ಲಿ ಇನ್ನೊಂದೆಡೆ ಹರಿದುಹೋಗುವ ಅವಸ್ಥೆ ಹಳೆಯ ಬಟ್ಟೆಗೂ ಚಕ್ರಾಧಿಪತ್ಯಕ್ಕೂ ತಪ್ಪಿದುದಲ್ಲ. ಜಾಣನಾಗಿದ್ದ ಒಂದನೆಯ ಅರಿಕೇಸರಿ ಈ ಧ್ರುವನ ಅಣ್ಣನಾದ ಗೋವಿಂದನ ನೆರವನ್ನು ಪಡೆದುಕೊಂಡಿರಲೂಬಹುದು ; ಅಂತೂ ಸೆರೆ ನೋಡಿ ಉಳಿಹೊಡೆದು, ಎಂದರೆ ಧ್ರುವನು ನಾನಾ ಕಾರ್ಯಗಳಲ್ಲಿ ಪ್ರವೃತ್ತನಾಗಿರಬೇಕಾದ ಸಂದರ್ಭವನ್ನರಿತು, ಅವನು ಸ್ವಕಾರ್ಯವನ್ನು ಸಾಧಿಸಿಕೊಂಡಿರಬಹುದು. ಆ ಪದ್ಯದಲ್ಲಿ ಹೊಳೆಯುವ ಭಾವನೆಯನ್ನು ಪರಿಶೀಲಿಸಿರಿ : 'ವೆಂಗಿ ವಿಷಯಮುಂ....ಒತ್ತಿಕೊಂಡು' ಎಂದಲ್ಲವೆ ಆ ಮಾತಿನ ಮಟ್ಟು ? ಅವನು ನಿರುಪಮದೇವನ ರಾಜ್ಯದೊಳಗಿನ ಆ ವಿಶಿಷ್ಟಭಾಗವನ್ನು ಒತ್ತಿಕೊಂಡುದಲ್ಲದೆ, ಆ ಮಹಾಪ್ರತಾಪಿಯನ್ನು ರಣರಂಗದಲ್ಲಿ ಇದಿರಿಸಿ ಗೆದ್ದು ಆಕ್ರಮಿಸಿದುದಲ್ಲ. ನಡೆವಾತನು ಎಡಹುವಂತೆ, ವೀರನಾದವನಿಗೆ ಈ ಬಗೆಯ ಸೋಲವೂ ಸ್ವಾಭಾವಿಕವೇ ಸರಿ. ಈತನು ಆಳುತ್ತಿದ್ದ ರಾಜಧಾನಿ ಯಾವುದು ಎಂಬ ಗುಟ್ಟು ಇವನ ಹಿರಿಯರ ರಾಜಧಾನಿಯಂತೆ ಇನ್ನೂ ತೆರೆಯ ಮರೆಯಲ್ಲೇ ಇದೆ. ಆದರೂ ಹಿಂದಿನ ಇಬ್ಬರ ರಾಜಧಾನಿ ಎಲ್ಲಿ ಇದ್ದಿರಬಹುದು ಎಂಬುದನ್ನು ನಾವು ಸಾಧಾರವಾಗಿ ಊಹಿಸಿದಂತೆ ಈತನದನ್ನೂ ಪರಾಂಬರಿಸಲು ಆಧಾರವಿಲ್ಲವೆಂದಲ್ಲ. ಆದರೆ, ಅದನ್ನು ಈತನ ಮಗನಾದ ಜಗತ್ತುಂಗ ಗೋವಿಂದರಾಜನ ಚಾರಿತ್ರಿಕ ವಿವೇಚನಾವಸರದಲ್ಲಿ ಸೂಚಿಸುವುದೇ ಉತ್ತಮವೆಂದು ಭಾವಿಸುತ್ತೇವೆ. ಧ್ರುವನ ಆಳಿಕೆ ಸುಮಾರು ಕ್ರಿ. ಶ. ೭೯೨-೩೮ ವರೆಗೆ ಸಾಗಿರಬಹುದು.

೨

# ಪ್ರಭೂತವರ್ಷ ಗೋವಿಂದ

## ಜಗತ್ತುಂಗನ ವಿನಯೋದಾತ್ತತಾ ಪ್ರತಾಪಗಳು

ಅಕಾಲವರ್ಷ ಧ್ರುವನಿಗೆ ಗೋವಿಂದ, ಇಂದ್ರ ಎಂಬ ಇಬ್ಬರು ಕುಮಾರರಿದ್ದಂತೆ ಹಿಂದಿನ ಚಾರಿತ್ರಿಕರಿಗೆ ತಿಳಿದುಬಂದ ಸಂಗತಿ. ಆದರೆ, ಇವರಲ್ಲದೆ ಕಂಬ (ಸ್ತಂಭ ರಣಾವಲೋಕ), ಕರ್ಕ (ಸುವರ್ಣವರ್ಷ) ಎಂಬ ಮತ್ತಿಬ್ಬರು ಪುತ್ರರೂ ಇದ್ದಂತೆ ಇಂದಿನವರಿಗೆ ಸಾಧಾರವಾಗಿ ಗೊತ್ತಾಗಿದೆ.[1] ರಣಾವಲೋಕ ಕಂಬನೆಂದರೆ ಎಲ್ಲರಿಗೂ ಹಿರಿಯನು. ಆ ಹಂತಿಯಲ್ಲಿ ಗೋವಿಂದನು ದ್ವಿತೀಯನೆನ್ನಿಸಿದಲ್ಲಿ, ತೃತೀಯತೆ ಕರ್ಕನಿಗೊದಗಿ, ಇಂದ್ರನು ಚತುರ್ಥಸ್ಥಾನವನ್ನೊಂದುತ್ತಾನೆ. ಆದರೇನು ? ಸರ್ವಗುಣಸಂಪನ್ನತೆಯಿಂದಾಗಿ ತಂದೆಯ ಎದೆಗೊಪ್ಪಿದ, ನಂಬುಗೆಗಿಂಬಾದ, ಕುಮಾರನೆಂದರೆ ಗೋವಿಂದರಾಜನೇ ಆಗಿದ್ದನು. ಅಜ್ಜನಾದ ಶುಭತುಂಗನ ಉದಾತ್ತವೃತ್ತಿ, ಅಯ್ಯ ಹಿರಿಯಯ್ಯಂದಿರಾದ ನಿರುಪಮ, ದಂತಿದುರ್ಗರ ಅಸಾಮಾನ್ಯ ಪ್ರತಾಪ, ತನ್ನದೇ ಆದ ನಡವಳಿ ಜಾಣ್ಮೆಗೆಯ್ಮೆಗಳು ಆತನಲ್ಲಿ ಮುಪ್ಪುರಿವಡೆದು ಹೆಣೆದುಕೊಂಡಿದ್ದುವು. ಗೋವಿಂದನು ಪಿತೃಭಕ್ತನು ; ತಂದೆ ಜೀವಂತನಾಗಿದ್ದಾಗಲೇ ತನ್ನ ತೇಜಸ್ವಿತೆಯನ್ನು ಲೋಕದಲ್ಲಿ ಹೊಳೆಯಿಸಿದಾತನು. ಮಗನ ಅಸಮಾನ ಗುಣ ಪ್ರತಾಪಾದಿಗಳನ್ನೆಲ್ಲ ಪರಿಭಾವಿಸಿದ ತಂದೆ, ಈತನು ಕ್ರಮಕ್ಕನುವಾಗಿ ಪಟ್ಟಾಧಿಕಾರಿಯಲ್ಲದುದರಿಂದ ತನ್ನ ಪರೋಕ್ಷದಲ್ಲಿ ಅಧಿಕಾರವು ಅಸ್ಥಾನವನ್ನೊಂದಿ ದೇಶವು ಕ್ಷೋಭೆಗೊಳ್ಳಬಹುದು ಎಂದು ಶಂಕಿಸಿ ಗೋವಿಂದನಿಗೆ ಅಭಿಷೇಕವೆಸಗುವುದಕ್ಕೆ ಸಿದ್ಧನಾದನಂತೆ; ತತ್ಸೂಚಕವಾಗಿ ತನ್ನ ಕೊರಳಿನ ಪಟ್ಟಮಾಲಿಕೆಯನ್ನೆತ್ತಿ ಮಗನ ಕೊರಳಿಗೆ ತೊಡಿಸಲಿಕ್ಕೆ ಅನುವಾದನಂತೆ. ಆಗ ಮಗನು ವಿನಯಪೂರ್ವಕವಾಗಿ ಹಿಂಜರಿದು[2] "ಆಸ್ತಾಂ ತಾತ" ಎಂದರೆ—'ತಂದೆಯೆ, ಅದು ಹಾಗಿರಲಿ; ತಾವು ಪಟ್ಟಮಾಲಿಕೆಯನ್ನು

---

[1] Dr. A. S. Altekar, *The Rashtrakutas and Their Times*, p. 59.

[2] ಯಸ್ಯಾಕಾರಮನುಮಾನುಷಂ ತ್ರಿಭುವನ ವ್ಯಾಪತ್ತಿರಕ್ಷೋಚಿತಂ
ಕೃಷ್ಣಸ್ಯೇವ ನಿರೀಕ್ಷ್ಯಯಚ್ಛತಿ ಪಿತರ್ಯೇಕಾಧಿಪತ್ಯಂ ಭುವಃ
ಆಸ್ತಾಂ ತಾತ ತವೈತದಪ್ರತಿಹತಾ ದತ್ತಾ ಸ್ವಯಂ ಕಂಠಿಕಾ
ಕಿಂ ನಾಜ್ಞೇವ ಮಯಾ ಧೃತೇತಿ ಪಿತರಂ ಯುಕ್ತಂ ವಚೋ ಯೋಽಭ್ಯಧಾತ್—
—ರಾಧನಪುರ ಶಾಸನ, 'ಎಪಿಗ್ರಾಫಿಯಾ ಇಂಡಿಕಾ', ಸಂಪುಟ ೬, ಪುಟ ೨೪೨.

ಈಗಲೆ ತೊಡಿಸಿದರೇನು, ತೊಡಿಸದಿದ್ದರೇನು? ಪರಮಾತ್ಮನ ದಯೆಯಿಂದ ಎಲ್ಲವೂ ಸುಗಮವಾಗಿಯೇ ಸಾಗುವುದು' ಎಂದು ತಂದೆಯನ್ನು ಸಂತಯಿಸಿದನು ಎಂದು ಶಾಸನವೇ ಸಾರುತ್ತಿದೆ. ತಂದೆ ಅಸ್ತಂಗತನಾದನು. ಪ್ರಥಮ ಕುಮಾರನಾಗಿದ್ದ ಕಂಬನು ಕ್ರಮಪ್ರಾಪ್ತನಾಗಿದ್ದರೂ ಆತನನ್ನು ಅಧಿಕಾರಕ್ಕೇರಿಸಲು ಮಂತ್ರಿ ಮಹಾಜನಾದಿಗಳಾರೂ ಅನುಮೋದಿಸಲಿಲ್ಲ ಎಂದು ತೋರುತ್ತಿದೆ. ಸರ್ವಾನುಮತದಿಂದ ಜಗತ್ತುಂಗ ಗೋವಿಂದನಿಗೆ ಪಟ್ಟಾಭಿಷೇಕವಾಯಿತು. ಸಾಮಂತರಾಜರಲ್ಲಿ ತಂದೆ ವರ್ತಿಸುತ್ತಿದ್ದ ನಡವಳಿ ಅತಿ ಕಠಿನವಾಗಿ ತೋರಿದ ಮಗನಿಗೆ, ತಂದೆ ಇದ್ದಾಗಲೇ ಅಂತರಂಗವನ್ನದು ಕಲಕುತ್ತಿದ್ದಿರಬೇಕೆಂದು ಮತ್ತಿನ ಪ್ರಥಮ ಕಾರ್ಯದಿಂದ ವಿಶದವಾಗುತ್ತಿದೆ: "ಸಿಂಹಾಸನರೋಹಣವೆಸಗಿದ ಕೂಡಲೆ ನಿರುಪಮಕುಮಾರ ಗೋವಿಂದರಾಜನು ತನ್ನ ಮಂತ್ರಿವರ್ಗದೊಡನೆ ಮತ್ತು ಶಕ್ತಿತ್ರಯಾಧಿಕಾರಿಗಳೊಡನೆ ಆಲೋಚಿಸಿದನು. ರಾಜ್ಯಭ್ರಷ್ಟರಾಗಿದ್ದ ಸಾಮಂತ ಸಮುದಾಯವನ್ನೆಲ್ಲ ಅನುನಯದಿಂದ ಕರೆಯಿಸಿದನು. 'ನೀವೆಂದರೆ ನನಗೆ ಪಿತೃ ಸಮಾನರಾದ ಹಿರಿಯರು. ಅದರಿಂದ ನಿಂನಿಮ್ಮ ಪದವಿಗಳಲ್ಲಿ ಪುನಃ ನಿಮ್ಮನ್ನು ಸ್ಥಾಪಿಸುತ್ತೇನೆ,' ಎಂದು ಸಾರಿದನು; ಮಾತನ್ನು ಕಾರ್ಯದಲ್ಲಿ ಕಾಣಿಸಿದನು. ರಾಜಕಾರ್ಯದಕ್ಷನಾದ ಜಗತ್ತುಂಗನು, ಆ ವರೆಗೂ ಬದ್ಧನಾಗಿ ಸೆರೆಮನೆಯಲ್ಲಿದ್ದ ಗಂಗರಾಜನನ್ನು ಬಿಡಿಸಿದನು."[1] ಇದೀಗ ಗೋವಿಂದನ ಪ್ರಥಮ ವಿನಯೋದಾತ್ತತೆ. ಆ ವಿನಯೋದಾತ್ತತೆಯನ್ನುಣ್ಣುವ, ಉಂಡರಗಿಸುವ ಅಂತಶ್ಶಕ್ತಿ 'ಕೃತಘ್ನಗಂಗ'ನಿಗೆ ಎಲ್ಲಿಂದ ಬರಬೇಕು? ಕುದಿವ ಎಣ್ಣೆಗೆ ನೀರನ್ನೆರೆದಂತೆ ಆತನ ವಿಕೃತಿ ಉಕ್ಕಿ ಹಾರಲಾರಂಭಿಸಿತು. ಅಂಥವರಲ್ಲಿ ಕಾಣಿಸಿದ ಸಾಂತ್ವನ ಗುರಿಗೊಳ್ಳಲಾರದು; ಒಲೆಯಂತಿರುವ ಅಧಿಕಾರದಿಂದ ತಪ್ಪಿಸುವುದೇ ಸಾಧು—ಎಂದು ಭಾವಿಸಿ ಅವನೊಬ್ಬನನ್ನು ಗೋವಿಂದನು ಪುನಃ ಕಾರಾಗೃಹದಲ್ಲಿರಿಸಿದನು. ಇದಕ್ಕೆ ಕಾರಣ ಹೀಗಿದೆ: ಮಾಳವದಿಂದ ಕಾಂಚಿಯ ವರೆಗಿನ ಹನ್ನೆರಡು ಮಂದಿ ಸಾಮಂತರು ಮತ್ತೊಮ್ಮೆ ಗುಟ್ಟಾಗಿ ಕೂಟಗೂಡಿದರು; ರಾಜ್ಯಾಧಿಕಾರದಲ್ಲಿ ನಿರಾಶನಾದ ಗೋವಿಂದನ ಅಣ್ಣ ಕಂಬನೇ ಈ ಕೂಟರಚನೆಗೆ ಸ್ತಂಭವಾದರೆ, ಕೃತಘ್ನನಾದ ಗಂಗರಾಜನೇ ಮಾಡವಾದನು; ಉಳಿದವರು ಅನ್ಯಸಾಧನಗಳಾದರು. ಹಂಚಿಕೆಯದು ಗೋವಿಂದರಾಜನ ಚತುರದೃಷ್ಟಿಗೆ ಕಾಣದಿರಲಿಲ್ಲ. ಮೆದುಬೆಣ್ಣೆಯೆನ್ನಿಸಿದ್ದ ಅವನೆದೆ ಕಗ್ಗಲ್ಲಾಯಿತು. ಅವನ ಹುರುಪಿನ ಕೈವಾಡಕ್ಕಂಜಿ, ಆ ಹನ್ನೆರಡರಲ್ಲಿ ಹನ್ನೊಂದು ಮಂದಿ ಸಾಮಂತರು ತಂತಮ್ಮ ತಪ್ಪುಗಳನ್ನೊಪ್ಪಿ ಮುಂದೆ ಅಂಥ ಕೂಟಗುಳಿತನಕ್ಕಿಳಿಯಲಾರೆವು ಎಂದು ಮಾತುಗೊಟ್ಟು

[1] ಪ್ರಾಪ್ತೋ ರಾಜ್ಯಾಭಿಷೇಕಂ ನಿರುಪಮತನಯೋ ಯಃ ಸ್ವಸಾಮಂತವರ್ಗಾನ್
ಸ್ವೇಷಾಂ ಸ್ವೇಷಾಂ ಪದೇಷು ಪ್ರಕಟಮನುನಯೈಃ ಸ್ಥಾಪಯಿಷ್ಯಾಮ್ಯಶೇಷಾನ್
ಪಿತ್ರಾ ಯೂಯಂ ಸಮಾನಾ ಇತಿ ಗಿರಮರಣೀನ್ಮಂತ್ರ ವರ್ಗ ತ್ರಿವರ್ಗೋ
ದ್ಯುಕ್ತಃ ಕೃತ್ಯೇಷು ದಕ್ಷಃ ಕ್ಷಿತಿಯುವತಿ ಪತಿರ್ಮೋಚಯದ್ಬದ್ಧಗಂಗಂ—
—ಸಂಜಾನ ಶಾಸನ, ಪ. ೧೭, 'ಎಪಿಗ್ರಾಫಿಯಾ ಇಂಡಿಕಾ', ಸಂಪುಟ ೧೮

ವಿಮುಕ್ತರಾದರು. ಆದರೆ ಅವರೆಲ್ಲರನ್ನೂ ಹುರಿದುಂಬಿಸಿದ ಗಂಗನಿಗೆ ಕೆಟ್ಟ ಮೇಲಾದರೂ ಬುದ್ಧಿ ಹೇಗೆ ಬರಬೇಕು ?

> ಉಪಗತವಿಕೃತಿಃ ಕೃತಘ್ನಗಂಗೋ ಯದುದಿತ ದಂಡಪಲಾಯನೋನುಬಂಧಾತ್
> ಅಪಗತಪದಶೃಂಖಲೋ ಖಲೋ ಯಃ ಸ ನಿಗಲಬಂಧಗಲಃ ಕೃತಸ್ಸಯೇನ[1]—

ಕೃತಘ್ನನಾದ ಗಂಗನು ಗೋವಿಂದರಾಜನ ಉಪಕಾರದಿಂದಲೂ ವಿಕಾರಪರವಶನಾದನು. ಹೌದು, ಕುಡಿದುದು ಹಾಲಾದರೂ ಹಾವಿನ ಮುಖದಲ್ಲಿ ವಿಷವಾಗಿ ಮಾರ್ಪಡುತ್ತದೆ. ಕ್ರುದ್ಧನಾದ ಗೋವಿಂದನು ದಂಡಿಸಲು ಸಿದ್ಧನಾದಾಗ ಹೇಡಿ ಗಂಗನು ಪಲಾಯನಕ್ಕನುವಾದನು. ಅಂಥ ಗೋವಿಂದನ ಅಂಕೆಯನ್ನಗಲಿ ಓಡುವುದಾದರೂ ಎಲ್ಲಿಗೆ? ಎಂಬ ಪ್ರಶ್ನೆ ಆ ಮೂಢ ಗಂಗನ ಎದೆಯಲ್ಲಿ ಏಳಲಿಲ್ಲ. ಮೊದಲು ಕಾಲಿನಿಂದ ಕಳಚಿದ ಸಂಕಲೆ ಮತ್ತೆ ಕೊರಳಿಗೂ ಸುತ್ತಿತು. ಆ ಅಪರಾಧಿಗಳಿಗೆಲ್ಲ ತಕ್ಕ ಶಾಸ್ತಿಯಾಯಿತು ಎನ್ನುವ. ಆದರೆ, ಅಪರಾಧವೆಂಬುದು ಯಾರೆಸಗಿದರೂ ಅಪರಾಧವೇ ಅಲ್ಲವೆ? ತನ್ನಣ್ಣನಾದ ಕಂಭನೂ ಮತ್ಸರಗ್ರಸ್ತನಾಗಿ ಆ ಅಪರಾಧದಲ್ಲಿ ಸೇರಿದವನಾದುದರಿಂದ ಅವನನ್ನು ಏಕಾಂತದಲ್ಲಿ ಕರೆದು ವಿಚಾರಿಸಿರಬೇಕು. ಆ ಮೇಲೆ ಅವನ ಒಪ್ಪುಗೆಯಂತೆ, ಆತನನ್ನು ರಾಷ್ಟ್ರಕೂಟ ಪ್ರತಿನಿಧಿಯನ್ನಾಗಿ ಗಂಗರಾಜ್ಯದಲ್ಲಿ ನೆಲೆಗೊಳಿಸಿದಂತೆ ತಿಳಿದುಬರುತ್ತಿದೆ. ಈ ಸಂಗತಿ ಮೇಲೆ ಸೂಚಿಸಿದ ಕಂಭದೇವನ ಬಾದನಗುಪ್ಪೆ ಶಾಸನದ ಕಡೆಯ ವಾಕ್ಯದಲ್ಲಿ ಶಬ್ದಪೂರ್ವಕವಲ್ಲದಿದ್ದರೂ ತಾತ್ಪರ್ಯಾರ್ಥದಿಂದ ತಿಳಿದುಬರುತ್ತಿದೆ. ಈ ವಾಕ್ಯಾಂಶ ಹೀಗಿದೆ :

> ....ರಣಾವಲೋಕ ಶ್ರೀ ಕಂಭರಾಜಃ ಪುನ್ನಾಡ ಏಡೆನಾಡುವಿಷಯೇ
> ....ತಳವನ ನಗರಮಧಿವಸತಿ ವಿಜಯ ಸ್ಕಂಧಾವಾರೇ....[2]

ಇದರಿಂದ, ಕಂಭದೇವನು (ಆಗಿನ ಗಂಗರಾಜಧಾನಿಯಾದ) ತಳವನ ನಗರದೊಳಗಿನ ತನ್ನ ವಿಜಯ ಸ್ಕಂಧಾವಾರದಲ್ಲೇ (ಎಂದರೆ, ಜಯಿಸಿದ ಸೇನೆ ನೆಲೆನಡೆದ ಬೀಡಿನಲ್ಲೇ ಇದ್ದು ಆ ರಾಜ್ಯವನ್ನು ಪರಿಪಾಲಿಸುತ್ತಾ ಈ ದಾನಶಾಸನವನ್ನೆಸಗಿದುದೆಂದು ಸಿದ್ಧವಾಗುತ್ತಿದೆ. ಗಂಗರಾಜನು ಬದ್ಧನಾಗಿದ್ದುದರಿಂದ ಗೋವಿಂದನೂ ಆ ತನ್ನ ಪ್ರತಿನಿಧಿಯನ್ನು ಅಲ್ಲಿರಿಸಿ ರಾಜ್ಯರಕ್ಷಣವನ್ನೆಸಗುತ್ತಿದ್ದನೆಂದು ಇದರಿಂದ ವಿಶದವಾಗುತ್ತಿದೆ. ಈ ಶಾಸನವು 'ತ್ರಿಂಶದುತ್ತರೇಷ್ವತೀತೇಷು [ಸಪ್ತಶತೇಷು] ಶಕವರ್ಷೇಷು'[3] ಎಂದರೆ ಶಾ. ಶ. ೭೩೦ (ಕ್ರಿ. ಶ. ೮೦೮)ರಲ್ಲಿ ಸಾಂಗವಾಯಿತು. ಆ ಮೊದಲೆ ತನ್ನ ತಮ್ಮಂದಿರಾದ ಸುವರ್ಣವರ್ಷ ಕರ್ಕರಾಜ-ಇಂದ್ರರಾಜರನ್ನು ಗೋವಿಂದನು ಗುರ್ಜರ ಪ್ರಾಂತದ ತನ್ನ ಉಪರಾಜಧಾನಿಯಲ್ಲಿ ನೆಲೆಗೊಳಿಸಿದ್ದನು. ಸುವರ್ಣವರ್ಷನೆಂದರೆ ಎಲ್ಲ ವಿಚಾರದಲ್ಲಿಯೂ ಆ ಅಣ್ಣನಿಗೆ

---

[1] ಸಂಜಾನ ಶಾಸನ, ಪ. ೧೮.

[2] S. Srikantha Sastri, *Sources of Karnataka History*, Vol. I, p. 63

[3] ಅದೇ ಗ್ರಂಥ, ಪುಟ ೬೩

ತಕ್ಕ ತಮ್ಮನೇ ಆಗಿದ್ದನು; ಒಂದಿಷ್ಟು ದೂರದಲ್ಲಿದ್ದರೂ ಶ್ರೀರಾಮನಿಗೆ ಲಕ್ಷ್ಮಣನಂತಾಗಿದ್ದನು.

## ಭಾರತ ಚಕ್ರವರ್ತಿ ಗೋವಿಂದರಾಜ

ಈ ಜಗತ್ತುಂಗ ಗೋವಿಂದರಾಜನೆಂದರೆ, ನಮ್ಮ ಅಖಂಡ ಕರ್ಣಾಟಕಕ್ಕೆ ಮಾತ್ರವಲ್ಲ; ಅಥವಾ ಮತ್ತಿನ ವಿಜಯನಗರದ ಅರಸರಂತೆ ದಕ್ಷಿಣಾಪಥಕ್ಕೆ ಮಾತ್ರವೂ ಅಲ್ಲ; ಇಡಿ ಭಾರತಭೂಮಿಗೇ ಒಕ್ಕೊಡೆಯ ಚಕ್ರವರ್ತಿಯಾಗಿದ್ದನು. ಭಾರತಭೂಮಿಗೆ ಚಕ್ರವರ್ತಿಗಳೆನ್ನಿಸಿದ ಕೆಲಮಂದಿ ರಾಜರ ಹೆಸರನ್ನು ನಾವು ಪುರಾಣಗಳಲ್ಲಿ ಕಾಣುತ್ತೇವೆ. ಶಕಪುರುಷನಾದ ವಿಕ್ರಮಾದಿತ್ಯನು ಅಂಥವನೆಂದು ಹೇಳುತ್ತಾರಾದರೂ, ಪುರಾಣಚ್ಛಾಯಾಗ್ರಸ್ತವಾಗಿ ತೋರುವ ಅವನ ಚರಿತ್ರೆ ಇನ್ನೂ ಬೆಸುಗೆಯನ್ನುಳಿದ ಬಂಗಾರವಾಗಲಿಲ್ಲ. ಕುಂತಳದೇಶದ ಶಾಲಿವಾಹನನದಾದರೂ ಹಾಗೆಯೇ. ಅಶೋಕನನ್ನಾದರೂ ತಾತ್ತ್ವಿಕ ಚಕ್ರವರ್ತಿ ಎನ್ನಬೇಕಲ್ಲದೆ ರಾಜ್ಯಾಧಿಕಾರ ದೃಷ್ಟಿಯಿಂದಲ್ಲ. ಆದುದರಿಂದ ಭಾರತ ಭೂಮಿಯ ಈ ವರೆಗಿನ ಚಾರಿತ್ರಿಕ ಚಕ್ರವರ್ತಿ ಎಂಬ ಹೆಸರು ಸಾರ್ಥಕವಾಗಿ ಒಪ್ಪಗಿದವನೆಂದರೆ ರಾಷ್ಟ್ರಕೂಟ ವಂಶದ ಈ ಮೂರನೆಯ ಗೋವಿಂದರಾಜನಲ್ಲದೆ ಇನ್ನೊಬ್ಬನಿಲ್ಲ. ಇದನ್ನು ನಾವಾಡುವುದು ಮಾತ್ರವಲ್ಲ—ಡಾ. ಎ. ಎಸ್. ಅಳ್ತೇಕರರೂ ತಮ್ಮ ಗ್ರಂಥದಲ್ಲಿ ಸಂದೇಹವಿಲ್ಲದಂತೆ ವಿಸ್ತರಿಸಿ ತೋರಿದ್ದಾರೆ.[1] ಆದರೆ, ಅವರ ಆ ಗ್ರಂಥದಲ್ಲಿಯೂ ಈ ರಾಷ್ಟ್ರಕೂಟರ ಮಾನ್ಯಖೇಟಾತ್ ಪೂರ್ವದ ರಾಜಧಾನಿ ಯಾವುದೆಂಬುದು ಸಂದಿಗ್ಧವಾಗಿಯೇ ಉಳಿದಿದೆ. ಅದರಿಂದ, ಈ ಜಗತ್ತುಂಗ ಗೋವಿಂದ ಚಕ್ರವರ್ತಿಯ ಪ್ರತಾಪಾದಿಗಳನ್ನು ಅತಿ ಸಂಗ್ರಹವಾಗಿಯಾದರೂ ಒಂದಿಷ್ಟು ಸೂಚಿಸಬೇಕು. ಈ ಸೂಚನೆಯಿಂದ ಕನ್ನಡ ನಾಡಿನ ವಿಸ್ತಾರದ ಮತ್ತು ಕನ್ನಡ ಸಾಹಿತ್ಯದ ಮಾರ್ಗಭೇದಾದಿಗಳ ವಿವೇಚನೆಗೂ ಸುಗಮವಾದೀತು.

ಆಗ ಉತ್ತರ ಪ್ರಾಂತದಲ್ಲಿ ಬಂಗಾಲದ ಧರ್ಮಪಾಲನೆಂಬ ಅರಸನು ಪ್ರಬಲನಾಗಿದ್ದನು. ಇವನು ಕನೋಜದ ವತ್ಸರಾಜನನ್ನು ಗೆದ್ದು ತನ್ನವನಾದ ಚಕ್ರಾಯುಧನೆಂಬಾತನನ್ನು ಆ ಪ್ರತೀಹಾರ ಸಿಂಹಾಸನಕ್ಕೇರಿಸಿದ್ದನು. ಇದನ್ನವಲೋಕಿಸಿ, ಆ ಸಿಂಹಾಸನಕ್ಕೆ ದ್ವಿತೀಯ ದಾಯಾದಿ ಎಂದೆನ್ನಿಸಿದ 'ಎರಡನೆಯ ನಾಗಭಟ' ಎಂಬಾತನು ಉಕ್ಕುವ ಪರಾಕ್ರಮದಿಂದ ಹುರುಪೇರಿದನು. ಸಿಂಧು ದೇಶದ ರಾಜನ ಎಂದರೆ, ಬಹುಶಃ ಹೊಸತಾಗಿ ಹೊರಗಣಿಂದ ಬಂದು ಅಲ್ಲಿ ನೆಲಸಿದ್ದ ಮುಸಲ್ಮಾನ ರಾಜನ, ಮತ್ತು ವೆಂಗಿಯ ಚಾಳುಕ್ಯರೇ ಮೊದಲಾದವರ ನೆರವನ್ನೊಂದಿದ ನಾಗಭಟನು, ಆ ಧರ್ಮಪಾಲ ಚಕ್ರಾಯುಧರನ್ನು ಸೋಲಿಸಿದನು. ಅರಸಾಳಿಕೆ ಎಂಬುದು ಧರ್ಮಮಾರ್ಗದಲ್ಲಿ ನಡೆದರೆ ಲೋಕಕ್ಕೆ ಅಮೃತವಾಗುವುದು. ಅದು ತಪ್ಪಿ, ವ್ಯಕ್ತಿಗಳ ಹೆಮ್ಮೆಯ ನರಗಳಲ್ಲಿ ತುಂಬಿ ತುಳುಕಿ ಚಿಮ್ಮಿದರೆ ನಂಜಾಗಿ

[1] Dr. A. S. Altekar, The *Rashtrakutas and Their Times*, pp.59–71.

ಪರಿಣಮಿಸುವುದು. ಉತ್ತರಾಪಥದಲ್ಲಿ ಸಾಗುತ್ತಿದ್ದ ಈ ಅಧಿಕಾರಲಾಲಸೆಯ ಗೊಂದಲವನ್ನು ನಮ್ಮ ಗೋವಿಂದರಾಜನು ಅವಲೋಕಿಸಿದನು ; ಇದಮಿತ್ಥಂ ಎಂದು ನಿರ್ಧರಿಸಿದನು. ಆ ಮೇಲೆ ಸುಸಜ್ಜಿತವಾದ ಸೇನಾಬಲದೊಡನೆ ಅತ್ತ ದಾಳಿವರಿದನು. ಅದನ್ನೇ ಸಂಜಾನ ಶಾಸನಕಾರನು, 'ಮಾರ್ತಂಡಃ ಸ್ವಯಮುತ್ತರಾಯಣಗತಸ್ತೇಜೋನಿಧಿರ್ದುಸ್ಸಹಃ[1]—ಎಂದು ಬಣ್ಣಿಸುತ್ತಾನೆ. ಮಾತ್ರವಲ್ಲ, ನಾಗಭಟ, ಚಂದ್ರಗುಪ್ತ, ಧರ್ಮಪಾಲ, ಚಕ್ರಾಯುಧನೆಂಬ ಆಗಿನ ಕಾಲದಲ್ಲಿ ಇಡಿ ಉತ್ತರಾಪಥದಲ್ಲಿ ಪ್ರಬಲತೆಗೇರಿ ಕೈಬೀಸುತ್ತಿದ್ದ ಪ್ರತಾಪಿಗಳೆಲ್ಲರನ್ನೂ ಪಾದಾಕ್ರಾಂತರನ್ನಾಗಿ ಮಾಡಿದನು. ಆ ಮೇಲೆ ಅವರವರನ್ನು ಅಲ್ಲಲ್ಲಿ ತನ್ನ ರಾಷ್ಟ್ರಕೂಟ ಪೀಠಕ್ಕೆ ಬಾಗಿದ ಸಾಮಂತರನ್ನಾಗಿ ನೆಲೆಗೊಳಿಸಿ ಹಿಂದಿರುಗಿದ ದಿಗ್ವಿಜಯ ಕ್ರಮವು ಸಂದೇಹಕ್ಕೆಡೆ ಇಲ್ಲದಂತೆ ಸಂಜಾನ ಶಾಸನದಲ್ಲಿ ವರ್ಣಿತವಾಗಿದೆ.[2] ಕೀರ್ತಿನಾರಾಯಣನೆಂಬುದು ಜಗತ್ತುಂಗ ಗೋವಿಂದರಾಜನ ಬಿರುದುಗಳೊಳಗೊಂದು ಎಂಬ ಸಂಗತಿಯನ್ನು ಮರೆಯಬಾರದು. ಈ ಗೋವಿಂದನನ್ನು ಮಾರ್ತಂಡನೊಡನೆ ಒಂದುಗೂಡಿಸಿದ, ಎಂದರೆ ರೂಪಕಾಲಂಕಾರದಿಂದ ಬೆರಸಿದ, ಶಾಸನಕವಿ ಹಿಂದಣ ೨ನೇ ಶ್ಲೋಕದಲ್ಲಿ 'ಸ್ವಯಮುತ್ತರಾಯಣಗತಃ' ಎಂದು ಬಣ್ಣಿಸಿದ ಪದಯೋಜನೆಯನ್ನು ಭಾವಿಸಿರಿ. ಇದರಿಂದ ಗೋವಿಂದರಾಜನ ರಾಜಧಾನೀ ಪ್ರದೇಶವು ವಿಂಧ್ಯಾದುತ್ತರಭಾಗದಲ್ಲಲ್ಲ ಎಂಬುದು ಹೊಳೆಯುತ್ತಿದೆಯಲ್ಲವೆ ?

ತೆಂಕಣ ಪ್ರಾಂತದ ಹಲವರರಸರು ಗೋವಿಂದನ ಆಳಿಕೆಗೆ ಆ ಮೊದಲೇ ಬಾಗಿದ್ದರು. ಆದರೂ ಹೊರಗೆ ಬಾಗಿ ಒಳಗೆ ನಿಗುಚಿದವರು ಕೆಲವರಿರಬೇಕೆಂದು ತೋರಿತು. ಅದರಿಂದ ಆ ಕಡೆಗೆ ದಾಳಿವರಿದನು. ಮುಂಬರಿದು 'ಕೇರಳ ಪಾಂಡ್ಯ ಚೋಳಾ'ದಿ ದ್ರವಿಡ

---

[1] ಭೂಭೃನ್ಮೂರ್ಧ್ನಿ ಸುನೀತಪಾದನಿಕರಃ ಪುಷ್ಯೋದಯಸ್ತೇಜಸಾ
ಕ್ರಾಂತಾಶೇಷದಿಗಂತರಃ ಪ್ರತಿಪದಂ ಪ್ರಾಪ್ತಪ್ರತಾಪೋನ್ನತಿಃ
ಭೂಯೋ ಯೋಽಪ್ಯನುರಕ್ತಮಂಡಲಯುತಃ ಪದ್ಮಾಕರಾನಂದಿತಃ
ಮಾರ್ತಂಡಃ ಸ್ವಯಮುತ್ತರಾಯಣಗತಸ್ತೇಜೋನಿಧಿರ್ದುಸ್ಸಹಃ
—ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೮, ಸಂಜಾನ ಶಾಸನ, ಪ. ೨೧

[2] ಸ ನಾಗಭಟ ಚಂದ್ರಗುಪ್ತನೃಪಯೋರ್ಯ ಶೌರ್ಯಂ ರಣೇ
ಸ್ವಹಾರ್ಯಮಪಹಾಯ ಧೈರ್ಯವಿಕಲಾನಥೋನ್ಮೂಲಯನ್
ಯಶೋಽರ್ಜನಪರೋ ನೃಪಾನ್ಸ್ವಭುವಿ ಶಾಲಿಸಸ್ಯಾನಿವ
ಪುನಃ ಪುನರತಿಷ್ಠಿಪತ್ ಸ್ವಪದ ಏವ ಚಾನ್ಯಾನಪಿ

ಹಿಮವತ್ಪರ್ವತನಿರ್ಝರಾಂಬುತುರಗೈಃ ಪೀತಂ ಚ ಗಾಂಗಂ ಗಜೈಃ
ಧ್ವನಿತಂ ಮಜ್ಜನತೂರ್ಯಕೈರ್ದ್ವಿಗುಣಿತಂ ಭೂಯೋಽಪಿ ತತ್ಕಂದರೇ
ಸ್ವಯಮೇವೋಪನತೌ ಚ ಯಸ್ಯ ಮಹತಸ್ತೌ ಧರ್ಮಚಕ್ರಾಯುಧೌ
ಹಿಮವತ್ಕೀರ್ತಿ ಸರೂಪತಾಮುಪಗತಸ್ತತ್ಕೀರ್ತಿನಾರಾಯಣಃ
—ಸಂಜಾನ ಶಾಸನ, ಪದ್ಯಗಳು, ೨೨, ೨೩.

ಮಂಡಲದ ಅರಸರನ್ನೂ ಆಂಧ್ರರನ್ನೂ ಪಾದಾಕ್ರಾಂತರನ್ನಾಗಿ ಮಾಡಿದ ಚಕ್ರವರ್ತಿಯ ಮನಸ್ಸು ಸಿಂಹಳದ ಕಡೆಗೆ ಧಾವಿಸಿತು. ಆ ಧಾಟಿಕ್ರಮವನ್ನು ಶಾಸನಕವಿ ಹೀಗೆ ನಿರೂಪಿಸುತ್ತಾನೆ :

ರಾಜಾಮಾತ್ಯವರಾವಿವ ಸ್ವಹಿತ ಕಾರ್ಯಾಲಸ್ಯನಷ್ಟೌ ಹಠಾ
ದ್ದಂಡೇನೈವ ನಿರಸ್ಯ ಮೂಕಬಧಿರಾವಾನೀಯ ಹೇಲಾಪುರೇ
ಲಂಕಾತಃಕಿಲ ತತ್ತ್ರಭುಪ್ರತಿಕೃತೀ ಕಾಂಚೀಮುಪೇತೌ ತತಃ
ಕೀರ್ತಿಸ್ತಂಭನಿಭೌ ಶಿವಾಯತನಕೇ ಯೇನೇಹ ಸಂಸ್ಥಾಪಿತೌ

—ಸಂಜಾನ ಶಾಸನ, ಪದ್ಯ ೩೪.

ಈ ಶ್ಲೋಕದ ಅರ್ಥವನ್ನು ವಿವೇಚಕ ದೃಷ್ಟಿಯಿಂದ ಪರಾಂಬರಿಸಿರಿ :

ಧಾರ್ಮಿಕವೆನ್ನಿಸಿದ ರಾಜಕೀಯಕಾರ್ಯದಲ್ಲಿ ಆಲಸ್ಯವೆಸಗಿ, ಪ್ರಜಾವರ್ಗದ ಯಾವ ಪ್ರಾರ್ಥನೆಗೂ ಮೂಕರಾದ ಬಧಿರ (ಕಿವುಡ)ರಾದ ಲಂಕಾನಗರದ ರಾಜಾಮಾತ್ಯರನ್ನು ದಂಡಿಸಿದ ಮೇಲೆ ತತ್ಸಮಾನಗಳಾದ ಅವರ 'ಪ್ರತಿಕೃತಿ'ಗಳು (ಪ್ರತಿಮಾದ್ವಯ) ಮೊದಲು ಕಾಂಚೀ ನಗರಕ್ಕೆ ತರಲ್ಪಟ್ಟುವು. ಆ ಮೇಲೆ (ತನ್ನ) ಕೀರ್ತಿಸ್ತಂಭ ಸಮಾನ ಗಳಾಗಿ 'ಇಹ ಹೇಲಾಪುರೇ', ಎಂದರೆ 'ಈ ವಿಲಾಸ ನಗರಿಯಲ್ಲಿ', ಸಾಗಿಸಲ್ಪಟ್ಟು ಸ್ಥಾಪಿತಗಳಾದುವು.

## ಗೋವಿಂದನ ರಾಜಧಾನಿ

ಇದರಿಂದ ನಮ್ಮ ಜಗತ್ತುಂಗನು ಹಿಮಗಿರಿಯಿಂದ ಲಂಕಾಂತವಾದ ಭಾರತಭೂಮಿಗೆ ಚಕ್ರವರ್ತಿಯಾದನೆಂಬುದು ನಿಸ್ಸಂಶಯವಾಗಿ ವಿಶದವಾಗುತ್ತಿದೆ. ಇದನ್ನು ಡಾ. ಎ. ಎಸ್. ಅಳ್ತೇಕರರೂ ಸಾರಿರುವುದರಿಂದ, ನಾವು ಹೆಚ್ಚಾಗಿ ಹೇಳಬೇಕಾಗಿಲ್ಲ. ಆದರೆ ಇಂಥ ಚಕ್ರವರ್ತಿಯ ಮತ್ತು ಅವನ ಹಿಂದಿನವರ ರಾಜಧಾನಿ ಯಾವುದಾಗಿತ್ತು ಎಂಬುದು ಇನ್ನೂ ನಿರ್ಧಾರವಾಗಿಲ್ಲ. ಅದನ್ನು ಹಿಂದೆಯೂ ಒಂದಿಷ್ಟು ಸೂಚಿಸಿದ್ದೆನಷ್ಟೆ. ಇಲ್ಲಿಯೂ ಒಂದಿಷ್ಟು ಪರಾಂಬರಿಸುವ. ಹಿಂದೆ ವಿಸ್ತರಿಸಿದ ನೃಪತುಂಗನ ಸಂಜಾನ ಶ್ಲೋಕದಲ್ಲಿ ಲಂಕಾನಗರದ ರಾಜಾಮಾತ್ಯರ ಪ್ರತಿಕೃತಿ (ಪ್ರತಿಬಿಂಬ)ಗಳೆರಡು 'ಇಹ ಹೇಲಾಪುರೇ ಸಂಸ್ಥಾಪಿತೌ' ಎಂದರೆ 'ಈ ವಿಲಾಸ ನಗರಿಯಲ್ಲಿ ಸ್ಥಾಪಿತಗಳಾದುವು' ಎಂದು ಹೇಳಿದೆ. ಗೋವಿಂದರಾಜನ ಈ 'ಹೇಲಾಪುರ' ಎಂದರಾವುದು ? ಈ ಶಾಸನದ ಕೊನೆಯ ದೀರ್ಘ ವಾದ ಗದ್ಯಭಾಗದಲ್ಲಿ ಶಾಸನಕಾರನಾದ ನೃಪತುಂಗದೇವನು ತನ್ನ ರಾಜ್ಯಾಧಿಕಾರಿಗಳಾದ ರಾಷ್ಟ್ರಪತಿ, ವಿಷಯಪತಿ, ಮೊದಲಾದವರನ್ನು ಉದ್ದೇಶಿಸಿ ಆಡುವ ಈ ಮಾತನ್ನು ಅವ ಗಾಹಿಸಿರಿ : ಇಲ್ಲಿ 'ಅಸ್ತುವಃ ಸಂವಿದಿತಂ ಯಥಾ ಮಾನ್ಯಖೇಟ ರಾಜಧಾನ್ಯವಸ್ಥಿತೇನ ಮಯಾ' ಎಂದು ಸ್ಥಾನ ಸೂಚನೆ ಇದೆ. ಅದು ಈ 'ಇಹ' (ಇಲ್ಲಿ) ಎಂಬುದಕ್ಕೆ ಹೊಂದಿಕೆ ಯಾಗುತ್ತಿದೆ. ಹಾಗಿದ್ದರೆ, ಗೋವಿಂದ ಚಕ್ರವರ್ತಿಯ ಕಾಲದಲ್ಲಿ ಆತನ 'ಹೇಲಾಪುರ' ವಾಗಿದ್ದುದನ್ನು, ಆ ಮೇಲೆ ತತ್ಪುತ್ರನಾದ ನೃಪತುಂಗನು ತನ್ನ ಪ್ರಧಾನ ರಾಜಧಾನಿ

ಯನ್ನಾಗಿ ಮಾರ್ಪಡಿಸಿಕೊಂಡನು ಎಂದು ಭಾವಿಸುವಂತಿದೆಯಲ್ಲವೆ ? ಅವನು ಈ ತೆಂಕ ನಾಡಿಗೆ ಬಂದಲ್ಲಿ ತಾತ್ಕಾಲಿಕವಾಗಿ ವಾಸಿಸುವ ವಿಲಾಸ ನಗರಿಗಳು ಬೇರೆಯೂ ಇದ್ದಂತೆ ಆತನ ಮಂಡಲ ತಾಮ್ರಶಾಸನದ (ಶಾ. ಶ. ೭೩೨, ಕ್ರಿ. ಶ. ೮೧೦) 'ಶ್ರೀ ಮಯೂರ ಖಂಡೀ ಸಮಾವಾಸಿತೇನ ಮಯಾ....[1] ಎನ್ನುವ ಭಾಗದಿಂದಲೂ ಗೊತ್ತಾಗುತ್ತಿದೆ. ಮಯೂರಖಂಡೀ ಎಂದರೆ ನಾಸಿಕದ ಹತ್ತಿರದಲ್ಲಿರುವ, ಈಗ 'ಮೋರ್ಖಂಡಿ' ಎಂದು ಪ್ರಸಿದ್ಧವಾದ, ಭಾಗ ಎಂಬಲ್ಲಿ ಸಂಶಯವಿಲ್ಲ. 'ಸಮಾವಾಸಿತೇನ ಮಯಾ' ಎಂದರೆ, ಪ್ರಕೃತ ಬಂದು ಬಿಡುಗೊಂಡ ನನ್ನಿಂದ, ಎಂಬ ಅರ್ಥವಲ್ಲದೆ, 'ಅದೇ ರಾಜಧಾನಿ ಯಾಗಿರುವ ನನ್ನಿಂದ' ಎಂಬ ಅರ್ಥವಾಗಲಾರದು. ಈ ಕಾರಣದಿಂದ ಸಂಜಾನ ಶಾಸನದಲ್ಲಿ ತೋರುವ ಗೋವಿಂದರಾಜನ ಹೇಲಾಪುರವೇ ಮತ್ತೆ ಮಾನ್ಯಖೇಟ (ಮಲಖೇಡ)ವಾಗಿ ಮಾರ್ಪಟ್ಟಿತೆಂದು ಭಾಸವಾಗುತ್ತಿದೆ. ಮಾನ್ಯಖೇಟ ಎಂದರೆ ಮಾನಾರ್ಹರಾದ ರಾಜರೂ ರಾಜಬಂಧುಗಳೂ ಬಂದು ಖೇಲನ (ವಿಹಾರ)ಗೊಳ್ಳುವ ಪುರ ಎಂಬ ಅರ್ಥವಾಗುವುದ ರಿಂದ, 'ಹೇಲಾಪುರ' ಎಂಬುದರೊಡನೆ ಸಮಾನಾರ್ಥಕವೇ ಆಗುತ್ತಿದೆ. ಈ ಅಭಿಪ್ರಾಯವು ಕೆರಹಾಡದಲ್ಲೊದಗಿದ, ಕೆಳಗೆ ದೃಷ್ಟಾಂತಿಸುವ, ರಾಷ್ಟ್ರಕೂಟ ಶಾಸನಭಾಗವನ್ನು ಸರಿ ಯಾಗಿ ವಿವೇಚಿಸಿದಲ್ಲಿಯೂ ಹೊಳೆಯುವುದು.

ತಸ್ಯ ಶ್ರೀಮದಮೋಘವರ್ಷ ನೃಪತಿಶ್ಚಾಲುಕ್ಯ ಕಾಲಾನಲಃ
ಸೂನುರ್ಭೂಪತಿರೂರ್ಜಿತಾಹಿತ ವಧೂವೈಧವ್ಯದೀಕ್ಷಾಗುರುಃ
ಆಸೀದಿಂದ್ರಪುರಾಧಿಕಂ ಪುರಮಿದಂ ಶ್ರೀ ಮಾನ್ಯಖೇಟಾಭಿಧಂ
ಯೇನೇದಂ ಚ ಸರಃ ಕೃತಂ ಗುರುಕರುಪ್ರಾಸಾದಮಂತಃಪುರಂ[2]——

ಇದರ ಅರ್ಥವನ್ನು ವಿವೇಚಿಸಿರಿ: ಆ ಗೋವಿಂದರಾಜನಿಗೆ ಚಾಲುಕ್ಯ ಕಾಲಾಗ್ನಿ ಸ್ವರೂಪನೂ, ನೆಲೆಗೊಂಡ ಹಗೆ ರಾಯರ ಕುಲವನ್ನು ನಿರ್ಮೂಲಿಸಿದವನೂ ಆದ ನೃಪ ತುಂಗ ರಾಜನು ಜನಿಸಿದನು. ಇಂದ್ರ ರಾಜಧಾನಿಗಿಂತಲೂ ಮೇಲಾದ ಈ ಮಾನ್ಯಖೇಟ ನಾಮಕ ರಾಜಧಾನಿಯೂ ನೆಲೆಗೊಂಡಿತ್ತು. ಜಗತ್ತುಂಗಸೂನುವಾದ ನೃಪತುಂಗನಿಂದ (ಯೇನ) ಈ ಕೆರೆಯೂ ಎತ್ತರವಾದ ಮಾಳಿಗೆಯಿಂದೊಡಗೂಡಿದ ಅಂತಃಪುರವೂ ರಚಿತವಾದುವು.

ಇಲ್ಲಿಯ ವಾಕ್ಯಸ್ವರೂಪಗಳನ್ನು ಸರಿಯಾಗಿ ಪರಾಂಬರಿಸಬೇಕು. ಮೊದಲನೆಯ ವಾಕ್ಯಗಳು ಅಕರ್ಮಕ ಕರ್ತರಿ ಪ್ರಯೋಗಗಳಾಗಿಯೂ ಮತ್ತಿನದು 'ಕರ್ಮಣಿ' ಯಾಗಿಯೂ ರಚಿತಗಳಾಗಿವೆ. 'ಆಸೀದಿಂದ್ರಪುರಾಧಿಕಂ ಪುರಮಿದಂ...' ಎಂಬ ಅಕರ್ಮಕ ವಾಕ್ಯದಲ್ಲಿ ಮಾನ್ಯಖೇಟ ನಗರ ನಿರ್ಮಾಪಕನು ಯಾರೆಂದು ಗೊತ್ತಾಗುವುದಿಲ್ಲ. ಬಹುಶಃ ಅದು ಹಿಂದೆಯೇ ರಚಿತವಾದುದಿರಬೇಕು. 'ಯೇನೇದಂ ಚ ಸರಃ ಕೃತಂ....' ಎಂಬ

[1] ಭಾರತ ಇತಿಹಾಸ ಸಂಶೋಧಕ ಮಂಡಲದ ತ್ರೈಮಾಸಿಕ ಪತ್ರಿಕೆ, ಸಂಪುಟ ೧೬, ಸಂಚಿಕೆ ೪, ಮಂಡಲ ತಾಮ್ರ ಶಾಸನ.

[2] ಎರಡನೆಯ ಕರ್ಕನ ಕರ್ಡಾ ಶಾಸನ, ಇಂಡಿಯನ್ ಆಂಟಿಕ್ವೆರಿ, ಸಂಪುಟ ೧೨, ಪು. ೨೬೪.

ಮತ್ತಿನ ಭಿನ್ನ ಪ್ರಯೋಗ ವಾಕ್ಯದಲ್ಲಿ ನೃಪತುಂಗಕೃತವಾದುದು ಆ ಕೆರೆಯೂ ಅಂತಃಪುರವೂ ಎಂದು ವಿಶದವಾಗುತ್ತಿದೆ. ಭಿನ್ನ ಪ್ರಯೋಗಗಳ ಭಿನ್ನ ವಾಕ್ಯಗಳಿಗೆ ಒಂದೇ ಕರ್ತೃಪದವನ್ನು ಪ್ರಯೋಗಿಸುವುದು ವ್ಯಾಕರಣ ಮಾರ್ಗವಲ್ಲ ಎಂಬುದನ್ನು ಮರೆಯಲಾಗದು. ಆದರೆ 'ಹೇಲಾಪುರೇ....ಇಹ' ಎಂದು ಸಂಜಾನ ಶಾಸನದಲ್ಲಿ ತೋರುವುದರಿಂದ ಆ ಹೇಲಾಪುರ(ವಿಲಾಸಪುರ)ವೇ ಆ ಗೋವಿಂದರಾಜನ ರಾಜಧಾನಿಯಾಗಿತ್ತು ಎಂದು ಭಾವಿಸಲಿಕ್ಕೆಡೆಯೇ ಇಲ್ಲ.

ಅದಕ್ಕೆ ಬದಲಾಗಿ ಆತನ ರಾಜಧಾನಿ ಯಾವುದೆಂದು ವಿಶದವಾಗಿ ಗೊತ್ತಾಗುವುದೋ ನೋಡುವ. ಗೋವಿಂದನು ವಿಂಧ್ಯಾದುತ್ತರಭಾಗದ ದಿಗ್ವಿಜಯವನ್ನೆಸಗಿ ಹಿಂದಿರುಗಿದುದನ್ನು ಸಂಜಾನ ಶಾಸನಕಾರನು ವಿವರಿಸಿದುದನ್ನೀಕ್ಷಿಸಿರಿ—

ಪ್ರತ್ಯಾವೃತ್ತಃ ಪ್ರಾತಿರಾಜ್ಯಂ ವಿಧೇಯಂ
ಕೃತ್ವಾ ರೇವಾಮುತ್ತರಾಂ ವಿಂಧ್ಯಪಾದೇ
ಕುರ್ವನ್ ಧರ್ಮಾನ್ ಕೀರ್ತನೈಃ ಪುಣ್ಯವೃಂದೈ
ರಧ್ಯಷ್ಠಾತ್ತಾಂ ಸ್ವೋಚಿತಾಂ ರಾಜಧಾನೀಂ[1]—

ಈ ಶ್ಲೋಕದ ಅನ್ವಯಾನುಸಾರವಾದ ತಾತ್ಪರ್ಯಾರ್ಥವನ್ನು ವಿದ್ವಾಂಸರಾರೂ ಈ ವರೆಗೆ ಸರಿಯಾಗಿ ಲಕ್ಷಿಸಿದಂತೆ ತೋರುವುದಿಲ್ಲ. ಗೋವಿಂದರಸನು ವಿಂಧ್ಯಾದುತ್ತರದ ಪ್ರತಿರಾಜರೆಲ್ಲರನ್ನೂ ವಿಧೇಯರನ್ನಾಗಿ ಮಾಡಿ ಹಿಂದಿರುಗಿದನು. ಹಾಗೆ ಹಿಂದಿರುಗಿದುದು ಎಲ್ಲಿಗೆ ಎಂಬುದು ಇದಕ್ಕಿಂತಲೆ ಮೊದಲಿನದಾದ ೨೩ನೆಯ ಶ್ಲೋಕಭಾಗದಲ್ಲಿ 'ಪ್ರತಾಪಮಿವ ನರ್ಮದಾತಟಮನುಪ್ರಯಾತಃ ಪುನಃ' ಎಂದು ಸ್ಫುಟವಾಗಿದೆ. 'ತನ್ನ ಪ್ರತಾಪವೋ ಎಂಬಂತೆ ಪುನಃ ನರ್ಮದಾ ನದಿಯ ತಟವನ್ನು ಕುರಿತು ಬಂದನು' ಎಂಬುದೇ ಇದರ ಅರ್ಥ. ಇಲ್ಲಿ 'ಪುನಃ' ಎಂದಿರುವುದರಿಂದ ಮೊದಲು ದಿಗ್ವಿಜಯಕ್ಕೆ ಹೊರಟುದು ಇಲ್ಲಿಂದಲೇ ಎಂದು ಸರಿಯಾಗಿ ಹೊಳೆಯುತ್ತಿದೆ. ಮೇಲೆ ದೃಷ್ಟಾಂತಿಸಿದ ೨೪ನೆಯ ಶ್ಲೋಕದ ಅರ್ಥದಲ್ಲಿ ಕಣ್ಣಿಡಿರಿ: "ಹಿಂದಿರುಗಿದ ಗೋವಿಂದನು ವಿಂಧ್ಯಪಾದ (ತಪ್ಪಲು) ದಲ್ಲಿ 'ಉತ್ತರ' (ಉತ್ ತರ), ಎಂದರೆ ಎತ್ತರವಾಗಿ ನೆಲೆಗೊಂಡ 'ರೇವೆ (ರೇವಾಂ)'ಯನ್ನೊಂದಿ ದೇವತಾ ಕೀರ್ತನ ಪುಣ್ಯಾಚಾರಾದಿಗಳಿಂದ ಧರ್ಮಕಾರ್ಯಗಳನ್ನೆಸಗುತ್ತ ಆ ಸ್ವೋಚಿತ ರಾಜಧಾನಿಯಲ್ಲಿ ಅಧಿಷ್ಠಾನವೆಸಗಿದನು." ಇಲ್ಲಿ ಕಾಣುವ ಆ 'ತಾಂ' ಎಂಬ ಪದವು ಪೂರ್ವಾರ್ಧದ 'ರೇವಾಂ' ಎಂಬ ರಾಜಧಾನಿಯನ್ನೇ ಸೂಚಿಸುವುದು ವ್ಯಾಕರಣ ಮಾರ್ಗಕ್ಕೆ ಬದ್ಧವಾಗಿದೆ. ಹಾಗಲ್ಲವಾಗಿದ್ದರೆ 'ತಾಂ' (ಆ) ಎಂಬುದು ನಿರರ್ಥಕವೇ ಸರಿ. ಇದರಿಂದ ಗೋವಿಂದನು ವಿಂಧ್ಯ ಶಿಖರದ ರೇವಾನಾಮಕ ರಾಜಧಾನಿಯಲ್ಲಿ ನೆಲಸಿದ್ದನೆಂದು ಸ್ಫುಟವಾಗುತ್ತಿದೆ. 'ಉತ್ತರಾಂ' ಎಂಬುದಕ್ಕೆ ದಿಗ್ವಾಚಕಾರ್ಥವೂ, 'ರೇವಾಂ' ಎಂಬುದಕ್ಕೆ ನರ್ಮದಾನದೀ ವಾಚಕಾರ್ಥವೂ ಹೊಳೆದುದರಿಂದಲೇ ವಿದ್ವಾಂಸರಿಗೆ ಈ ಶ್ಲೋಕವು ಭ್ರಮೆಯನ್ನುಂಟುಮಾಡಿದಂತೆ ತೋರುತ್ತಿದೆ.

[1] ಸಂಜಾನ ಶಾಸನ, ಶ್ಲೋಕ ೨೪, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೮.

ಈ ಹೇಳಿಕೆಯೇ ನಿಜಸ್ಥಿತಿ ಎಂಬಂಶವನ್ನು ಸ್ವತಃ ಗೋವಿಂದರಾಜನದೇ ಆದ ಮಂಡಲ ಶಾಸನ ಶ್ಲೋಕವೂ, ಅದರೊಡನೆ ಅಭಿನ್ನವಾದ, ಅವನಣ್ಣ ಕಂಬರಾಜನ ಬಾದನಗುಪ್ಪೆ ಶಾಸನ ಶ್ಲೋಕವೂ ಏಕಸ್ವರೂಪವಾಗಿ ತಿಳಿಸುತ್ತಿವೆ.

ವಿಂಧ್ಯಾದ್ರೇಃ ಕಟಕೇ ನಿವಿಷ್ಟಕಟಕಂ ಶ್ರುತ್ವಾ ಚರೈರ್ಯ್ಯೈರ್ನಿಜೈಃ
ಸ್ವಂ ದೇಶಂ ಸಮುಪಾಗತಂ ಧ್ರುವಮಿತಿ ಜ್ಞಾತ್ವಾ ಧಿಯಾ ಪ್ರೇರಿತಃ
ಮಾರಾಶರ್ವಮಹೀಪತಿಃ ಪ್ರತಮುಗಾದಪ್ರಾಪ್ತಪೂರ್ವೈಃ ವರೈಃ
ಯಸ್ಯೇಚ್ಛಾಮನುಕೂಲಯನ್ ಕುಲಧನೈಃ ಪಾದಪ್ರಣಾಮೈರಪಿ[1]—

ತಾತ್ಪರ್ಯವನ್ನೀಕ್ಷಿಸಿರಿ:—'ವಿಂಧ್ಯಾಚಲದಲ್ಲಿ ನೆಲೆಗೊಂಡ 'ಕಟಕ'[2] (ರಾಜಧಾನಿ) ದಲ್ಲಿ, ಉತ್ತರಭಾಗದ ದಿಗ್ವಿಜಯದಿಂದ ತಿರುಗಿದ ಗೋವಿಂದರಾಜನು ಪ್ರವೇಶಿಸಿದುದನ್ನು ಮಾರಾಶರ್ವನೆಂಬ ಮಾಂಡಲಿಕರಾಜನು ತನ್ನ ಗೂಢಚಾರಕರ ಮೂಲಕವಾಗಿ ತಿಳಿದನು. ಒಡನೆ, ಸ್ವದೇಶವನ್ನು ಕುರಿತು ಪುನಃ ನಿರುಪಮ ಧ್ರುವನೇ ಬಂದನೋ ಎಂದು, ಆತನು ಭಯದಿಂದ ಭ್ರಮೆವಡೆದನಂತೆ. ಆ ಹೆದರಿಕೆಯಿಂದಾಗಿ ಬೇಗನೆ ಬಂದು, ಇತರರಾರಿಗೂ ದೊರಕದ ಅನರ್ಘ್ಯಗಳಾದ ಕುಲಧನಗಳಿಂದಲೂ ವಂದನೆಗಳಿಂದಲೂ ಆ ಮಾರಾಶರ್ವನು ಗೋವಿಂದರಾಜನನ್ನು ತೃಪ್ತಿಗೊಳಿಸಿದನು.'

ಇಲ್ಲಿಯ 'ಕಟಕೇ' ಎಂಬ ಪದವು, ವಿದ್ವಾಂಸರಿಗೆ ಉತ್ತರಾಪಥದಿಂದ ಹಿಂದಿರುಗಿ ಗೋವಿಂದರಾಜನು 'ಬೀಡುಬಿಟ್ಟ ಸ್ಥಾನ' ಎಂಬ ಭ್ರಮವನ್ನುಂಟುಮಾಡಿತಾಗಿ ತೋರುತ್ತಿದೆ. ಆದರೆ 'ಸ್ವಂ ದೇಶಂ ಪುನರಾಗತಂ ಧ್ರುವಮಿವ ಜ್ಞಾತ್ವಾ....' ಎಂಬ ಆಲಂಕಾರಿಕವಾದ ಹೇಳಿಕೆಯನ್ನು ಸರಿಯಾಗಿ ಪರಾಂಬರಿಸಿದಲ್ಲಿ, ಆ ಭ್ರಮೆ ತೊಲಗುವಂತಿದೆ. ಆ ಮಾತಿನಿಂದ ಗೋವಿಂದನ ತಂದೆಯಾದ ನಿರುಪಮ ಧ್ರುವನ ಸ್ವದೇಶವು, ಅಥವಾ ರಾಜಧಾನೀ ಪ್ರದೇಶವು, ಅದೇ ಆಗಿತ್ತೆಂಬುದು ಹೊಳೆಯುತ್ತಿದೆ. ಇದರಿಂದ ಆ ಮಾರಾಶರ್ವನೆಂಬವನು ಹಿಂದಿನ ಧ್ರುವನ ಪ್ರತಾಪಕ್ಕೊಮ್ಮೆ ಆಹುತಿಯಾದವನು, ಅವನು ಸ್ವರ್ಗಂಗತನಾದ ಮೇಲೆ ರಾಷ್ಟ್ರಕೂಟ ಸಿಂಹಾಸನವನ್ನು ಗರ್ವದಿಂದ ಅಲಕ್ಷಿಸುತ್ತಿದ್ದವನು ಎಂಬುದೂ ವಿಶದವಾಗುತ್ತಿದೆ. ಡಾ. ಎ. ಎಸ್. ಅಳ್ತೇಕರರು ತಮ್ಮ ಗ್ರಂಥದಲ್ಲಿ 'ಮಾರಾಶರ್ವನೆಂದರೆ ಆವರೆಗೂ ರಾಷ್ಟ್ರಕೂಟ ರಾಜರಿಗೆ ಬಾಗದ ಸ್ವತಂತ್ರವ್ಯಕ್ತಿ' ಎಂದು ಭಾವಿಸಿದುದು, ಈ ಶಾಸನೋಕ್ತಿಯಿಂದ ಸಡಿಲಾಗುತ್ತಿದೆ. ಧ್ರುವನು ಸ್ವರ್ಗಂಗತನಾದ ಮೇಲೆ ತಾನು ಸ್ವತಂತ್ರನೆಂದೆಣಿಸುತ್ತಿದ್ದ ಆ ಮಾರಾಶರ್ವನ ಭ್ರಮೆ, ಗೋವಿಂದನ ದಿಗ್ವಿಜಯ ಪ್ರತಾಪವನ್ನರಿತು ಮಾಯವಾಯಿತೆಂಬುದೇ ಆ ಮಾತಿನ ತಾತ್ಪರ್ಯ. ಮುಂದೆ ದೃಷ್ಟಾಂತಿಸುವ ಇನ್ನೊಂದು ಶ್ಲೋಕವು ಗೋವಿಂದನ ಮಂಡಲದ ಶಾಸನ, ಕಂಬದೇವನ ಬಾದನಗುಪ್ಪೆಯ ಶಾಸನಗಳೆರಡರಲ್ಲಿಯೂ ತೋರುತ್ತಿದೆ. ಇದನ್ನೂ ಅತ್ಯಾವಶ್ಯಕವಾಗಿ ಪರಿಭಾವಿಸಬೇಕು.

[1] S. Srikantha Sastri, *Sources of Karnataka History*, I, p. 63.

[2] 'ಕಟಕ' ಎಂಬುದಕ್ಕೆ ಸೇನಾನಿವೇಶ, ರಾಜಧಾನಿ ಮೊದಲಾದ ಹಲವು ಅರ್ಥಗಳಿವೆ. ಇಲ್ಲಿ 'ರಾಜಧಾನಿ' ಎಂದೇ ಅರ್ಥವಾಗಿರಬೇಕು.

ನೀತ್ವಾ ಶ್ರೀಭವನೇ ಘನಾಘನ ಘನವ್ಯಾಪ್ತಾಂಬರಾಂ ಪ್ರಾವೃಷಂ
ತಸ್ಮಾದಾಗತವಾನ್ ಸಮಂ ನಿಜಬಲೈರಾತುಂಗಭದ್ರಾತಟಂ[1]—

'ಜಡಿ' ಮುಗಿಲು ಮುಚ್ಚಿ ಮುಸುಕಾದ ಬಾಂದಳದಿಂದ ಕೂಡಿದ ಮಳೆಗಾಲವನ್ನು 'ಶ್ರೀಭವನ'ದಲ್ಲಿ ಕಳೆದನು. ಆ ಮೇಲೆ ಸೇನಾಸಮೇತನಾಗಿ ದಕ್ಷಿಣ ದಿಗ್ವಿಜಯ ಮಾನಸನಾಗಿ ತುಂಗಭದ್ರಾತಟದತ್ತ ಹರಿದನು.

ಈ ಶ್ರೀಭವನ ಎಂದರೆ ಬೇರಾವುದೂ ಅಲ್ಲ; ಅವನ ಸ್ವೋಚಿತ ರಾಜಧಾನಿಯಾದ ರೇವಾನಗರಿಯೊಳಗಣ ಅರಮನೆಯ ಹೆಸರೇ ಇದು. ಈ ಶ್ಲೋಕಭಾಗಗಳನ್ನೇ ಆದರಿಸಿ ಡಾ. ಅಳ್ತೇಕರರು ತಮ್ಮ ಗ್ರಂಥದಲ್ಲಿ ಹೀಗೆನ್ನುತ್ತಾರೆ:

'ಆಗ ಭರೋಚ ಪ್ರಾಂತದ ದೊರೆಯಾದ ಮಾರಾಶರ್ವನು ಬಂದು ಗೋವಿಂದನನ್ನು ನಯವಿನಯಗಳಿಂದ ಪೂಜಿಸಿ, ತನ್ನ ಎಂದರೆ ಮಾರಾಶರ್ವನ, 'ಶ್ರೀಭವನ'ಕ್ಕೆ, ಅಥವಾ ಈಗಿನ ಕಾಲದಲ್ಲಿ 'ಸರ್ಭೋನ್' (Sarbhon) ಎಂದು ಹೆಸರಾದ ತನ್ನ ಆ ರಾಜಧಾನೀ ಪ್ರದೇಶಕ್ಕೆ ಕರಕೊಂಡು ಹೋಗಿ ಸತ್ಕರಿಸಿದನು. ಗೋವಿಂದನು ಮಾರಾಶರ್ವನ ಆ ಶ್ರೀಭವನದಲ್ಲಿ ಆ ಮಳೆಗಾಲವನ್ನು—ಎಂದರೆ ಕ್ರಿ. ಶ. ೮೦೮ನೆ ಇಸವಿಯ ಮಳೆಗಾಲವನ್ನೆಲ್ಲ—ಕಳೆದನು. ಅವನ ಮಗನಾದ ನೃಪತುಂಗನು ಆಗ ಅಲ್ಲೇ ಜನಿಸಿದುದಾಗಿ ತೋರುತ್ತಿದೆ.'[2]

ಈ 'ಶ್ರೀಭವನ'ವೆಂದರೆ ಮಾರಾಶರ್ವನ ರಾಜಧಾನಿ ಎಂದು ಅವರು ಭಾವಿಸಿದುದು ಸರಿಯಲ್ಲವೆಂದೇ ನಮ್ಮ ವಿಶ್ವಾಸಪೂರ್ವಕ ಸೂಚನೆ. ಗರ್ಭಿಣಿಯಾಗಿದ್ದ ರಾಣಿಯನ್ನು ದಿಗ್ವಿಜಯಾವಸರದಲ್ಲಿ ಮಹಾಪ್ರತಾಪಿ ರಾಜರಾರಾದರೂ ಕರಕೊಂಡು ಹೋಗುವರೆ? ಹೋದರೂ, ಆ ವರೆಗೂ ಹಗೆತನದಲ್ಲಿದ್ದ ಮಾರಾಶರ್ವನ ಅರಮನೆಯಲ್ಲಿ ಆ ಮಹಾರಾಣಿ ಹೆರುವುದು ಎಂದರೇನು? ಅಲ್ಲಿ ಮಳೆಗಾಲವೆಲ್ಲವನ್ನೂ ಕಳೆವುದು ಎಂದರೇನು? ಡಾ. ಅಳ್ತೇಕರರೇ ಸಾರುವಂತೆ ಭಾರತ ಚಕ್ರವರ್ತಿಯಾದ ಗೋವಿಂದನು ಈ ಕಾರ್ಯವನ್ನು ಅನುಮತಿಸುವುದು ಎಂಬುದನ್ನು ಓದಿ ಭಾವಿಸಿ ನಮಗಂತೂ ನೀರಿನಲ್ಲಿ ಕಂಡೆರೆದಂತಾಗುತ್ತಿದೆ. ನಾವು ಮೇಲೆ ಸಾಧಾರವಾಗಿ ಚರ್ಚಿಸಿ ನಿರ್ಧರಿಸಿದ ಅಂಶವನ್ನು ಪರಾಂಬರಿಸಿದಲ್ಲಿ ಆ ತಾತ್ಕಾಲಿಕ ಭ್ರಮೆಯ ಮಂಜೆಲ್ಲವೂ ಮಾಸಿಹೋಗುವುದು—ದಂತಿದುರ್ಗಾದಿಗಳಾಗಿ ಗೋವಿಂದನ ವರೆಗಿನ ರಾಷ್ಟ್ರಕೂಟ ರಾಜರ ರಾಜಧಾನಿಯು ವಿಂಧ್ಯಾದ್ರಿಪಾದದಲ್ಲಿ, ರೇವಾನದಿಯ ಹತ್ತಿರದಲ್ಲಿ, ನೆಲೆನಡೆದು ಆ ಹೆಸರನ್ನೊಂದಿದ ರೇವಾನಗರಿಯೇ ಆಗಿತ್ತು; ಅವರೆಲ್ಲರ ಅಥವಾ ಗೋವಿಂದರಾಜನ ಅರಮನೆಯ ಹೆಸರು 'ಶ್ರೀಭವನ' ಎಂದಾಗಿತ್ತು ಎಂದು ಸಿದ್ಧಿಸುವುದು.

---

[1] S. Srikantha Sastry, *Sources of Karnataka History*, Vol. I, p. 63.

[2] Dr. A.S. Altekar, *The Rashtrakutas and Their Times*, pp. 67-68.

## ಪೋಷಕಾಧಾರ

ಇನ್ನೂ ಒಂದು ವಿಶೇಷವಾದ ಪೋಷಕಾಧಾರವಾಗಿರುವ ಅದೇ ಗೋವಿಂದನ ಮುಂಡಲದಾನ ಶಾಸನದೊಳಗಿನ ಈ ವಾಕ್ಯಗಳನ್ನು ಪರಾಂಬರಿಸಿ ನೋಡಿರಿ—

...ಶ್ರೀ ಮಯೂರಖಂಡೀಸಮಾವಾಸಿತೇನ ಮಯಾ
ಮಾತಾಪಿತ್ರೋರಾತ್ಮನಶ್ಚೈಹಿಕಾಮುಷ್ಮಿಕ ಪುಣ್ಯಯಶೋಭಿ
ವೃದ್ಧಯೇ ವಾ(ಧಾ ?) ರಾಶಿ ವಾಸ್ತವ್ಯತ ತ್ರೈವಿದ್ಯ
ಸಾಮಾನ್ಯ ಕಾಶ್ಯಪ ಗೋ (ತ್ರ) ಬಹ್ವೃಚ ಸಬ್ರಹ್ಮಚಾರಿ
ಮಾಸೋಪವಾಸಿಯ ಪೌತ್ರಾಯ ಸಣ್ಣ ಸಾವಿಭಟ್ಟ ಪುತ್ರಾಯ
ರಿಸಿಯಪ್ಪಭಟ್ಟಾಯ ತಥಾ ರಿಸಿಯಪ್ಪಭಟ್ಟೇನ ಏರಂಡವಲ್ಲೀ ವಾಸ್ತವ್ಯ
(ತ) ಗೌತಮಗೋತ್ರ ಮಹಿ(ಹೀ)ಧರಭಟ್ಟಾಯ ಭೂಮೇಃ

ನಿವರ್ತನ

ಶತಂ ಪತ್ತಂ ತಥಾ ಕರಹಾಡ ವಾಸ್ತವ್ಯತ ಚಾತುರ್ವಿದ್ಯ ಸಾಮಾನ್ಯ
ಕಾಶ್ಯಪ ಸಗೋತ್ರ ಏಂ...ಕ. ಸಬ್ರಹ್ಮಚಾರಿಣೇ ವ್ಯಾಸ
ಭಟ್ಟಾಯ ಅಶೀತಿನಿವರ್ತನಾನಿ ಸುಭೂಮೇಃ ದತ್ತಾನಿ ಖೇಡ ವಿಷ
ಯಾಂತರ್ಗತಃ ದಶಪುರ ಗ್ರಾಮಃ ತಥಾ ಸುಕಲೀ ನಾ
ಮ ಗ್ರಾಮಧಾನಂ ಪಿಪ್ಪರಿಕಾದ್ವಯಂ ತಿಯಡಿ ಗ್ರಾಮಧಾನಂ ಭಗ್ಗಾಲ
(ಗ್ಗಲಿ) ಗ್ರಾಮಧಾನಂ ಗ್ರಾಮಧಾನ ಪಂಚಕ ಸಮನ್ವಿತಃ ತಸ್ಯ
ಚಾಘಾಟನಾನಿ ಪೂರ್ವತಃ ಇಂದವುರಿಕಾಗ್ರಾಮಃ ದಕ್ಷಿಣತಃ ದೇವ

ಭೋಗ ತಿಯಡಿ ಗ್ರಾಮಃ

ಪಶ್ಚಿಮತಃ ಲಾಡಾವಲ್ಲಿಕಾಗ್ರಾಮಃ ಪಶ್ಚಿಮೋತ್ತರತಃ ಪಿಟ್ಟ...
ಕಾ ಗ್ರಾಮಃ ಉತ್ತರತಃ
ವಿಂಧ್ಯಪರ್ವತಃ ಏವಮಯಂ ಚತುರಾಘಾಟನೋಪಲಕ್ಷಿತೋ ಗ್ರಾಮಃ

ಸೋದ್ರಂಗಃ ಸಪರಿಕರಃ

.....................................[1]

ಆಗಿನ ಕಾಲದ ಕನ್ನಡನಾಡಿನ ವಿಸ್ತೃತಿಯನ್ನು ವಿವೇಚಿಸಲು ಈ ಶಾಸನಭಾಗವು ಹೆಚ್ಚಿನ ನೆರವಾಗುವುದೆಂಬಲ್ಲಿ ಸಂಶಯವಿಲ್ಲ. ಗೋವಿಂದರಾಜನ ರಾಜಧಾನಿ, ವಿಂಧ್ಯ ಪಾದದ ರೇವಾನಗರಿಯೇ ಎಂದು ಸಾಧಾರವಾಗಿ ಸೂಚಿಸಿದೆವಷ್ಟೆ. ಇಲ್ಲಿ ತತ್ಪೋಷಕಾಧಾರವೇನಿದೆ ? ಎಂಬುದನ್ನೀಕ್ಷಿಸುವ—

ದಾನಶಾಸನ ಭೂಮಿಯು ಬಡಗಣ ಗಡಿ, 'ಉತ್ತರತಃ ವಿಂಧ್ಯಪರ್ವತಃ' ಎಂಬ

[1] ಮುಂಡಲ ಶಾಸನ, ಪಂಕ್ತಿ ೩೭ರಿಂದ ೫೧—ಭಾರತ ಇತಿಹಾಸ ಸಂಶೋಧನ ಮಂಡಲದ ತ್ರೈಮಾಸಿಕ ಪತ್ರಿಕೆ, ಸಂಪುಟ ೧೬, ಅಂಕ ೪.

ಹೇಳಿಕೆಯಿಂದ ಸ್ಫುಟವಾಗುತ್ತಿದೆ. ಈ ದಾನಶಾಸನವು ದಕ್ಷಿಣಭಾಗದ ಮಯೂರ ಖಂಡಿಯ ಶಿಬಿರದಲ್ಲಿ ಅರಸನು ನೆಲಸಿದ್ದಾಗ ನಡೆದುದು ಎಂಬುದನ್ನು ಮರೆಯಬಾರದು. ದಕ್ಷಿಣ ಪ್ರಾಂತದೊಳಗೆ ನೆಲಸಿದ್ದ ಸ್ವಾಧ್ಯಾಯನಿರತರೆನ್ನಿಸಿ ಉತ್ತಮರಾದ ಕನ್ನಡಿಗ ಬ್ರಾಹ್ಮಣ ರನ್ನೇ ಆರಿಸಿ, ತನ್ನ ರಾಜಧಾನಿ ಇದ್ದ ಕನ್ನಡನಾಡಿನ 'ಉತ್ತರೋತ್ತರ' ಪ್ರಾಂತಕ್ಕೆ ಕರಕೊಂಡು ಹೋಗುವ ನಿರ್ಣಯದಿಂದಲೇ ಈ ದಾನಶಾಸನವನ್ನು ಅಲ್ಲಿ ಮಾಡಿದುದೆಂದು ಭಾವಿಸುವಂತಿದೆ. ದಾನಪಾತ್ರರಾದವರೊಳಗೆ ಒಬ್ಬನ ಹೆಸರು 'ರಿಸಿಯಪ್ಪಭಟ್ಟ' ಎಂದೂ ಅವನ ತಂದೆಯದು 'ಸಣ್ಣ ಸಾವಿಭಟ್ಟ' ಎಂದೂ ತೋರುವುದರಿಂದ, ಅವನಂತೂ ಕನ್ನಡಿಗ (ಕರ್ಣಾಟಕ) ಬ್ರಾಹ್ಮಣನೆಂಬಲ್ಲಿ ಸಂಶಯವಿಲ್ಲವಷ್ಟೆ. ಉಳಿದ ಮಹೀಧರಭಟ್ಟ, ವ್ಯಾಸ ಭಟ್ಟ, ಎಂಬ ಹೆಸರುಗಳು ಶುದ್ಧ ಸಂಸ್ಕೃತಗಳಾಗಿದ್ದರೂ ಅವರೂ ಕನ್ನಡಿಗರೇ ಆಗಿದ್ದಿರ ಬೇಕೆಂದು ನನ್ನೆಣಿಕೆ. ಈ ಶಾಸನ ವಾಕ್ಯಭಾಗದ ಭಾಷೆಯನ್ನೀಕ್ಷಿಸಿರಿ: ಮೂರನೆಯ ಹಂತಿಯಲ್ಲಿ 'ಮಾಸೋಪವಾಸಿಯ...' ಎಂಬ ಪದವು ಕನ್ನಡದ ಷಷ್ಠೀವಿಭಕ್ತಿ ಪ್ರತ್ಯಯ ಸಹಿತವಾಗಿರುವುದೂ ಎರಡನೇ ಮತ್ತು ನಾಲ್ಕನೇ ಹಂತಿಗಳ '...ವಾಸ್ತವ್ಯತ' ಎಂಬುವುಗಳ ಕಡೆಯ 'ತ' ಕಾರವು 'ದ' ಕಾರವಾಗಿದ್ದು ಕರದೋಷದಿಂದಲೇ 'ತ' ಕಾರವಾಗಿರುವು ದೆಂಬುದೂ ಭಾವಿಸಬೇಕಾದ ಸಂಗತಿ. 'ವಾಸ್ತವ್ಯದ' ಎಂಬ ಕನ್ನಡ ವಿಶೇಷಣ ಪದ ಸ್ವರೂಪಗಳೇ ಅವುಗಳೆಂಬಲ್ಲಿ ಯಾವ ಸಂದೇಹವೂ ಇಲ್ಲ. ಇದು ಹಾಗಿರಲಿ. ಶಾಸನ ಭಾಗದೊಳಗೆ ತೋರುವ ಇಂದವುರಿಕಾ (ಇಂದೂರು),—ಪಿಪ್ಪರಿಕಾ (ಪಿಪ್ಪರಿಗೆ), ತಿಯಡಿ, ಭಗ್ಗಲಿ-ಪಿಟ್ಟ....(ಪಿಟ್ಟಗೆ) ಮೊದಲಾದ ವಿಂಧ್ಯಪರ್ವತ ಪ್ರಾಂತದ ಆಗಿನ ಗ್ರಾಮಗಳ ಹೆಸರುಗಳೆಲ್ಲ ಕನ್ನಡಗಳಾಗಿಯೇ ತೋರುವುದರಿಂದ, ಅಂದಿನ ಆ ನಾಡುಗಳೆಲ್ಲ ಕನ್ನಡ ಗಳಾಗಿ ಇದ್ದುವೆಂದು ಪ್ರತೀತವಾಗುತ್ತಿದೆ. ಈ ಹೊತ್ತು ಆ ನಾಡುಗಳ ಹೆಸರುಗಳೆಲ್ಲ ಕಾಲಾನುಸಾರವಾಗಿ ಅಷ್ಟಿಷ್ಟು ರೂಪಾಂತರಗೊಂಡಿರಬಹುದಾದರೂ ಅಂದು ಹಾಗೆಯೇ ಇದ್ದುವು ಎಂಬುವನ್ನು ಗಮನಿಸಬೇಕು. ಈ ಸಂದರ್ಭದಲ್ಲಿ ಇನ್ನೂ ಒಂದು ವಿಷಯವನ್ನು ಸೂಚಿಸದಿರಲಾರೆವು. ಈ ರಾಷ್ಟ್ರಕೂಟ ವಂಶದ ರಾಜಕುಮಾರಿಯರೊಳಗೆ ಕೆಲವರಿಗೆ 'ರೇವಕನಿರ್ಮಡಿ' ಎಂಬ ಒಳಹೆಸರಿದ್ದಂತೆ ಶಾಸನಗಳಿಂದ ಗೊತ್ತಾಗುತ್ತಿದೆ. ಪಂಪ ಭಾರತಕ್ಕೆ ಆಶ್ರಯದಾತನಾದ ಚಾಲುಕ್ಯರಾಜ ಎರಡನೆಯ ಅರಿಕೇಸರಿಯ ರಾಣಿಯೂ, ಮೂರನೆಯ ರಾಷ್ಟ್ರಕೂಟ ಇಂದ್ರರಾಜನ ಪುತ್ರಿಯೂ ಆದ ಲೋಕಾಂಬಿಕೆಗೆ 'ರೇವಕ ನಿರ್ಮಡಿ' ಎಂಬ ಹೆಸರಿದ್ದುದು ವೇಮುಲವಾಡ ಶಾಸನದಲ್ಲಿದೆ. 'ದೇವೀಂ ರೇವಕ ನಿರ್ಮಡಿಂ' ಎಂದು ಪ್ರಾರಂಭವಾಗುವ ಆ ಶ್ಲೋಕವನ್ನು ನಾವು 'ನಾಡೋಜ ಪಂಪ'ದ ೫೨ನೇ ಪುಟದಲ್ಲಿ ಕಾಣಿಸಿದ್ದೇವೆ. 'ರೇವಕನಿರ್ಮಡಿ' ಎಂದರೆ 'ರೇವಕ್ಕನ ಇರ್ಮಡಿ' ಎಂಬುದರ ರೂಪಾಂತರ. ರೇವಕ (ಕೆ) ಎಂದರೆ, ರೇವಾ ನದಿಯು, ಮತ್ತು ಆ ವಂಶದವರ ಹಿಂದಿನ ರಾಜಧಾನಿಯಾಗಿದ್ದ ರೇವಾನಗರಿಯು, ಅಭಿನ್ನವಾದ ಹೆಸರಿಗೆ ಪೂಜ್ಯಾರ್ಥಕ ವಾದ 'ಅಕ್ಕ' ಪದವನ್ನು ಮುಂದಿರಿಸಿ ರೂಪಿಸಿದ ಪದ. 'ರೇವಾದೇವಿ' ಎಂಬುದೇ ಅದರ ಅರ್ಥ. ಆ ಹಿಂದಿನ ರಾಜಧಾನಿಯ ಹೆಸರನ್ನೇ ತಮ್ಮ ಕುಲಬಾಲಿಕೆಯರಿಗಿಡುವ ರಾಷ್ಟ್ರ

ಕೂಟ ರಾಜರ ಪದ್ಧತಿ ನಿಜವಾಗಿಯೂ ಆಕರ್ಷಕವಾಗಿದೆ. 'ಸಾಡೋಜ ಪಂಪ'ವನ್ನು ಬರೆವಲ್ಲಿ, ಆ ಹೆಸರಿನ ಸಾರ್ಥಕತೆ ಏನು ಎಂಬ ವಿಷಯವು ನಮಗೆ ಈಗಿನಷ್ಟು ಸ್ಫುಟವಾಗಿ ಹೊಳೆದಿಲ್ಲ. ಇವೆಲ್ಲ ಒಟ್ಟುಗೂಡಿದಲ್ಲಿ ರಾಷ್ಟ್ರಕೂಟರ ಮಾನ್ಯಖೇಟಾತ್ಪೂರ್ವದ ರಾಜಧಾನಿ, ವಿಂಧ್ಯಾದ್ರಿಯ ರೇವಾನಗರಿಯೇ ಎಂದು ಮತ್ತಿಷ್ಟು ಸಿದ್ಧವಾಗುತ್ತಿದೆ.

## ಗೋವಿಂದನ ಕಾಲದ ಕನ್ನಡ ಸಾಹಿತ್ಯದ ಸೂಚನೆ

ಗೋವಿಂದನು ಸು. ಕ್ರಿ.ಶ. ೭೯೩-೯೪ರಿಂದ ೮೧೩-೧೪ರ ವರೆಗೆ ರಾಜ್ಯಭಾರವನ್ನೆಸಗಿದ್ದನು. ದಿಗ್ವಿಜಯಗಳನ್ನೆಸಗಿ ಹಗೆಗಳ ಹುಟ್ಟನ್ನಡಗಿಸುವ, ಸಾರ್ವಭೌಮತ್ವವನ್ನು ಸಂಪಾದಿಸುವ, ಪ್ರಜಾವರ್ಗವನ್ನು ಪಾಲಿಸುವ ಕರ್ತವ್ಯಗಳಲ್ಲೇ ಪ್ರವಣನಾಗಿದ್ದ ಆತನಿಗೆ ಸ್ವಸುಖಸಾಧನಾದಿಗಳಿಗೆ ಎಡೆಯೇ ಇರಲಿಲ್ಲ. ಅವನಿಗೆ ಅದರಲ್ಲಿ ಆಸಕ್ತಿಯೂ ಇದ್ದಿಲ್ಲವಾಗಿ ತೋರುತ್ತದೆ. ಅವನ ಕಾಲದಲ್ಲಿ ಉಂಟಾದ ಕೆಲವು ಸಂಸ್ಕೃತಭಾಷಾ ಶಾಸನಗಳು ಸಿಕ್ಕಿವೆ. ಆದರೆ, ಅವನ ಕಾಲದ ಕನ್ನಡ ಶಾಸನ ಮತ್ತು ಕನ್ನಡ ಸಾಹಿತ್ಯಗಳು ಈ ವರೆಗೂ ತಿಳಿದುಬಂದಿಲ್ಲ ಎಂದೇ ಹೇಳಬೇಕು. ಆದರೂ, ನಮಗೊದಗಿದ ಒಂದು ಚಿಕ್ಕದಾದ ಗದ್ಯಶಾಸನದ ಪ್ರಮುಖ ಭಾಗವನ್ನು ಕೆಳಗೆ ಕಾಣಿಸುತ್ತೇವೆ :

> ಸ್ವಸ್ತಿ ಶ್ರೀ ಶಕನೃಪಕಾಲಾತೀತ ಸಂವ್ವತ್ಸರಂಗಳ್ ಏೞ್ನೂಱಿರ್ಪತ್ತಾಱನೆ
> ಯಾ ಸುಭಾನು ಎಮ್ಬಾ ವರ್ಷದ ವೈಸಾಖಮಾಸ ಕೃಷ್ಣ ಪಕ್ಷ
> ಪಞ್ಚಮಿ ಬೃಹಸ್ಪತಿವಾರಮಾಗೀ ಸ್ವಸ್ತೀ. ಪ್ರಭೂತವರ್ಷ
> ಶ್ರೀ ಪೃಥುವೀವಲ್ಲಭ ಮಹಾರಾಜಾಧೀರಾಜ ಪ (ರ) ಮೇ
> ಶ್ವರ ಗೋಯಿಂದರ ಭಟಾರರಾ ಗಾಮುಣ್ಡಬ್ಬೆಗಳ್ ಮಹಾದೇ
> ವಿಯಾರಾಗೀ ರಾಜ್ಯಾಪ್ರವರ್ಧಮಾನ ಕಾಲದೊಳ್....[1]

ಈ ಶಾಸನದೊಳಗೆ ಇದರ ಕಾಲ ಸ್ಫುಟವಾಗಿದೆ. ಶಾ. ಶ. ೭೨೬ ಎಂದರೆ ಕ್ರಿ. ಶ. ೮೦೪ನೆ ಇಸವಿಯಾಗುತ್ತದೆ. ಇದನ್ನು ರಾಜಾದೇಶದಂತೆ ಬರೆಯಿಸಿದಾತನು, ಕಡೆಯ 'ಮಹಾಸಂಧಿವಿಗ್ರಹಾಧಿಪತೇಃ ಶ್ರೀಧರಸ್ಯ ಜೇಶಿತಃ' ಎಂಬುದರಿಂದ, ಮಹಾ ಸಂಧಿವಿಗ್ರಹಾಧಿಪತಿಯಾಗಿದ್ದ ಶ್ರೀಧರನೆಂಬ ಪ್ರಧಾನನೆಂಬುದೂ ಗೊತ್ತಾಗುತ್ತದೆ. ಅರಸನ ಮಹಾರಾಣಿಯ ಹೆಸರು ಗಾಮುಂಡಬ್ಬೆ ಎಂದೂ ಕಾಣುತ್ತದೆ. ಆಕೆಯಲ್ಲಿ ಉದಯಿಸಿದ ರಾಜನ ಏಕಮಾತ್ರ ಕುಮಾರಕನೇ ಅಮೋಘವರ್ಷ ನೃಪತುಂಗನೆಂಬಲ್ಲಿ ಸಂಶಯವಿಲ್ಲ. ಈ ಶಾಸನದೊಳಗೆ, ರಾಮೇಶ್ವರ ತೀರ್ಥದಲ್ಲಿಯ ಕೆಲಮಂದಿ ಗೊರವರ ಸ್ಥಾನಮಾನಾದ್ಯನುಕೂಲತೆಗಳನ್ನು ನೆಲೆಗೊಳಿಸಿದ ವಿಷಯವು ನಿರೂಪಿತವಾಗಿದೆ. ಗೊರವರೆಂದರೆ, ಆಗಿನ ಕಾಲದಲ್ಲಿ ಅತಿ ಪೂಜ್ಯರಾದ ಪುರೋಹಿತರ ಪಂಗಡಕ್ಕೆ ಸೇರಿದವರೆಂಬುದು 'ಕವಿರಾಜಮಾರ್ಗ'ದೊಳಗಿನಿಂದಲೂ ಗೊತ್ತಾಗುತ್ತಿದೆ. ಇಲ್ಲಿ ತೋರುವ ರಾಮೇಶ್ವರ ತೀರ್ಥವೆಂದರೆ, ಭರತಭೂಮಿಯ

[1] A. C. Burnell, *Elements of South Indian Palaeography* (1878), p. 137.

ಅತಿ ದಕ್ಷಿಣಭಾಗದ ರಾಮೇಶ್ವರವೋ ಬೇರೆಯೋ ಎಂಬುದು ಗೊತ್ತಾಗಿಲ್ಲ. ಆದಿಯವೇ ಆಗಿದ್ದರೆ ಗೋವಿಂದನು ದಕ್ಷಿಣ ದಿಗ್ವಿಜಯಕ್ಕೆ ದಾಳಿಯಿಟ್ಟ ಕಾಲವಲ್ಲೇ ಈ ಶಾಸನವು ನೆಲೆಗೊಂಡುದಾಗಿರಬಹುದು.

ಜಗತ್ತುಂಗನವು, ಅಂಥ ಧರ್ಮವೀರತೆಯನ್ನು ಪ್ರಕಾಶಪಡಿಸುವ ಶೀಲ ಕಾಲಗಳು. ಅವನ ಕಾಲದಲ್ಲಿ ಕೆಲವಾದರೂ ಕನ್ನಡ ಸಾಹಿತ್ಯದ ಉದ್ಗ್ರಂಥಗಳು ತಲೆದೋರಿರ ಬೇಕಲ್ಲವೆ ? ನಾಗವರ್ಮನ 'ಕಾವ್ಯಾವಲೋಕನ'ದೊಳಗೆ ಒದಗುವ ಈ ದೃಷ್ಟಾಂತ ಪದ್ಯ ವನ್ನು ಪರಿಶೀಲಿಸಿರಿ :

ಕಾಯಲುಂ ಬಲಗರ್ವದಿಂ ನೆಲನೆಲ್ಲಮುಂ ನೆಲಕೆಲ್ಲಮಾ
ತ್ತೀಯಲುಂ ತನಗಾ ಚತುರ್ಭುಜಮುಂ ಭುಜದ್ವಯಮಾದನಿ
ತ್ತಾಯದಾಯತಿ ತೋಳೊಳೊಪ್ಪಿರೆ ಮಿಕ್ಕ ಪೆಂಪಿನ ಕೀರ್ತಿನಾ
ರಾಯಣಂ ದಯೆಗೆಯ್ಗೆ ಚಾಗಚತುರ್ಭುಜಂ ಗರುಡಧ್ವಜಂ[1]___

ಹಿಂದೆ ದೃಷ್ಟಾಂತಿಸಿದ ಸಂಜಾನ ಶಾಸನಭಾಗದಲ್ಲಿಯೂ ತೋರುವ ಈ 'ಕೀರ್ತಿ ನಾರಾ ಯಣ' ಎಂಬ ಬಿರುದು, ಜಗತ್ತುಂಗ ಗೋವಿಂದರಾಜನದು ಎಂಬಲ್ಲಿ ಸಂಶಯವಿಲ್ಲ. 'ಚಾಗಚತುರ್ಭುಜ' ಎಂಬುದು ಈತನ ಇನ್ನೊಂದು ಬಿರುದಾದರೆ 'ಗರುಡಧ್ವಜ' ಎಂಬುದು ರಾಷ್ಟ್ರಕೂಟ ರಾಜರಿಗೆಲ್ಲ ಸಾಮಾನ್ಯವಾದುದು. ಈ ಪದ್ಯಾರ್ಥವು ಆಲಂಕಾರಿಕ ಕ್ರಮಬದ್ಧವಾಗಿದ್ದರೂ ಲಲಿತವಾಗಿದೆ. ಆದರೂ ವಾಚಕರೆಲ್ಲರ ಅವಗಾಹನೆಗಾಗಿ ವಿಸ್ತರಿಸು ತ್ತೇವೆ :

'ಬಲಗರ್ವದಿಂದ ನೆಲವೆಲ್ಲವನ್ನು ಕಾಯುವುದು, ಸಾಮರ್ಥ್ಯಪೂರ್ವಕವಾಗಿ ನೆಲ ಕ್ಕೆಲ್ಲ ದಾನಮಾಡುವುದು ಎಂಬ ಎರಡು ಧಾರ್ಮಿಕ ಕಾರ್ಯಗಳೇ ಗೋವಿಂದರಾಜನ ಪ್ರಮುಖೋದ್ಯೋಗಗಳಾಗಿ ಪರಿಣಮಿಸಿದ್ದುವು. ಅದರಿಂದ, ಆ ಚಾಗ ಚತುರ್ಭುಜನ ಚತುರ್ಭುಜಗಳು ಕಾರ್ಯಗಳಿಗೆ ತಕ್ಕಂತೆ ಭುಜದ್ವಯವಾಗಿ ತೋರಿದುವು. ಅದರಿಂದ 'ಅನಿತ್ತಾಯದ ಆಯತಿ' ಆ ಎರಡೇ ತೋಳುಗಳೊಳಗೆ ಒಪ್ಪಿರುವಲ್ಲಿ, ಚಾಗಚತು ರ್ಭುಜನೂ ಗರುಡಧ್ವಜನೂ ಆದ ಕೀರ್ತಿನಾರಾಯಣನು ಲೋಕಕ್ಕೆ ದಯೆಗೆಯ್ಯಲಿ.'

ಪರಾಂಬರಿಸಿವಲ್ಲಿ, ಆತನ ಕಾಲದಲ್ಲಿ ರಚಿತವಾದ ಯಾವುದೋ ಒಂದು ಮಹಾಕಾವ್ಯದ ಆದಿಯ ಮಂಗಲಶ್ಲೋಕವಿದು ಎಂದು ಭಾಸವಾಗುತ್ತಿದೆ. ಇದನ್ನು ಎಲ್ಲರೂ ಒಪ್ಪ ಬಹುದು. 'ಕಾವ್ಯಾವಲೋಕನ'ದಲ್ಲಿ ಹಿಂದಿನ ಮಹಾಪ್ರಬಂಧಗಳಿಂದೆತ್ತಿದ, ಆಕರ ಗೊತ್ತಾ ಗದ, ಅನೇಕ ಪದ್ಯಗಳು ದೊರಕುತ್ತಿವೆ. ಅವುಗಳೊಳಗೆ ಸುಮಾರು ಹದಿಮೂರು-ಹದಿ ನಾಲ್ಕು ಪದ್ಯಗಳು ಹಿಂದಿನ ವಿಶಿಷ್ಟವಾದೊಂದು 'ಭಾರತ'ದಿಂದ ಎತ್ತಿಕೊಂಡುವುಗಳು ಎಂಬಲ್ಲಿ ಸಂಶಯವಿಲ್ಲ. ಶ್ರೀಕೃಷ್ಣನು ಭಾರತ ಕಥಾನಕದಲ್ಲಿ ಅತಿ ಪ್ರಮುಖನಷ್ಟೆ.

---

[1] ನಾಗವರ್ಮನ 'ಕರ್ಣಾಟಕ ಕಾವ್ಯಾವಲೋಕನ' (ದ್ವಿತೀಯ ಮುದ್ರಣ, ಮೈಸೂರಿನ ಓರಿಯಂಟಲ್ ಲೈಬ್ರರಿ ಪ್ರತಿ), ಪದ್ಯ ೩೫೮.

ಅದರಿಂದ ಈ ಕೀರ್ತಿನಾರಾಯಣ ಗೋವಿಂದನನ್ನೇ ಗರುಡಧ್ವಜ ಶ್ರೀಕೃಷ್ಣನೊಡನೆ ಅಭಿನ್ನನನ್ನಾಗಿ ಮಾಡಿ ಬಣ್ಣಿಸಿದ ಆ ಭಾರತಕಾವ್ಯದ ಆದಿಯ ಶ್ಲೋಕವೇ ಇದಾಗಿರಬಹುದೆಂದು ನಮ್ಮ ಭಾವನೆ.

ಈ ಗೋವಿಂದರಾಜನು ಬಹುಶಃ ಕ್ರಿ. ಶ. ೮೧೩-೧೪ರ ಮಧ್ಯದಲ್ಲಿ ಅಥವಾ ಒಂದಿಷ್ಟು ಹಿಂದೆ ಮುಂದೆ ಕೀರ್ತಿಶರೀರನಾಗಿರಬೇಕು. ಯಾಕೆಂದರೆ, ನೃಪತುಂಗನು ಪಟ್ಟವನ್ನೇರಿದುದು ಸುಮಾರು ಅದೇ ಕಾಲದಲ್ಲೆಂದು ಊಹಿಸಲ್ಪಟ್ಟಿದೆ. ಹಿಂದೆ ವಿಸ್ತರಿಸಿದ 'ಹೇಲಾಪುರ'ದ ಸಂಗತಿ, ಸಂಜಾನ ಶಾಸನದ ೩೪ನೇ ಪದ್ಯದಲ್ಲಿ ತೋರಿದರೆ, ಮತ್ತಿನ ೩೫ನೆಯದರಲ್ಲಿ ಗೋವಿಂದರಾಜನು ಸ್ವರ್ಗಂಗತನಾದನೆಂಬುದು ನಿರೂಪಿತವಾಗಿದೆ. ತಂದೆ ಗೋವಿಂದನಿಗೆ ಬೀಡುಪಾಣಗಳು ಅಲ್ಲಲ್ಲಿ ಹಲವಿದ್ದರೂ, ಮತ್ತಿನ ಸಂದರ್ಭಕ್ಕನುವಾಗಿ ಪುತ್ರ ನೃಪತುಂಗನು ಆ ಹೇಲಾಪುರವನ್ನೇ ಮಾನ್ಯಖೇಟವೆಂಬ ನಾಮಾಂತರವೆಸಗಿ ತನ್ನ ರಾಜಧಾನಿಯನ್ನಾಗಿ ಮಾರ್ಪಡಿಸಿಕೊಂಡನು. ಅದಕ್ಕೆ ತಂದೆ ಅಲ್ಲಿಯೇ ಸ್ವರ್ಗಂಗತನಾದುದೆಂಬ ಸ್ಮಾರಕ ಭಾವನೆಯೂ ಪ್ರಮುಖ ಕಾರಣವಾಗಿ ಇದ್ದಿರಬಹುದು. ಆ ೩೫ನೇ ಶ್ಲೋಕದಲ್ಲಿ 'ಪುತ್ರಶ್ಚಾಸ್ಮಾಕಮೇಕಃ' ಎಂದು ಕಾಣುವುದರಿಂದ ನೃಪತುಂಗನೊಬ್ಬನೇ ಅವನ ಮಗನೆಂಬಲ್ಲಿ ಸಂಶಯವಿಲ್ಲ.

ಈ ವಿಷಯಗಳನ್ನೆಲ್ಲ ಪರಿಭಾವಿಸಿದಲ್ಲಿ ನನಗೆ ಹೀಗೆ ತೋರುತ್ತಿದೆ: ದಂತಿದುರ್ಗನಿಗಿಂತಲೂ ಹಿಂದಿನವರ ರಾಜಧಾನಿ ಎಲ್ಲಿತ್ತೆಂಬುದು ಇನ್ನೂ ತಿಳಿದಿಲ್ಲ. ಆದರೆ, ದಂತಿದುರ್ಗ, ಶುಭತುಂಗ ಕೃಷ್ಣರಾಜ, ಧ್ರುವ ನಿರುಪಮ, ಜಗತ್ತುಂಗ ಗೋವಿಂದ ಎಂಬ ನಾಲ್ಕು ಮಂದಿ ಪ್ರಮುಖ ರಾಜರ—ಎಂದರೆ ರಾಷ್ಟ್ರಕೂಟ ಸಿಂಹಾಸನಸ್ಥಾಪನಾಚಾರ್ಯರ—ಅರಮನೆ ಇದ್ದುದು, ವಿಂಧ್ಯಾದ್ರಿಯನ್ನೊಂದಿದ ರೇವಾ ರಾಜಧಾನಿಯಲ್ಲೇ. ಉಳಿದವರ ಅರಮನೆಯ ಹೆಸರು ಆಗಾಗ ಭಿನ್ನರೂಪವನ್ನೊಂದಿರಲೂಬಹುದು. ಜಗತ್ತುಂಗನದಕ್ಕೆ ಶ್ರೀಭವನ ಎಂದೇ ಹೆಸರಾಗಿತ್ತು. ಈ ಸಂದರ್ಭದಲ್ಲಿ ಡಾ. ಅಳ್ತೇಕರರು ತಮ್ಮ ಗ್ರಂಥದೊಳಗೆ, ಶ್ರೀ ಕಸಿನ್ಸ್ ಅವರ ಅಭಿಪ್ರಾಯವನ್ನೆತ್ತಿಕೊಂಡು ವಿಸ್ತರಿಸಿದ ಅಂಶವನ್ನು ಸೂಚಿಸಿದರೆ ಉಚಿತವಾದೀತೆಂದು ಭಾವಿಸುತ್ತೇನೆ:

> "ನೃಪತುಂಗನಿಂದ ಹಿಂದಿನವರಾದ ದಂತಿದುರ್ಗಾದಿಗಳ ಕಾಲದ ರಾಷ್ಟ್ರಕೂಟ ರಾಜರ ರಾಜಧಾನಿ ಎಲೋರ ಗವಿಗಳ ಹತ್ತಿರ ಇದ್ದಿರಬೇಕೆಂದು ಡಾ. ಕಸಿನ್ಸ್‌ರವರು ಸೂಚಿಸುತ್ತಾರೆ. ಇಂಡಿಯ ಎಟ್ಲಾಸಿನಲ್ಲಿ ತೋರುವ, ಎಲೋರ ಗವಿಗಳಿಂದ ಮೇಲಿರುವ ಸೂಲೂಭಂಜನ್ ಎಂಬ ಸ್ಥಳವೇ ಆ ಸ್ಥಳವಾಗಿದ್ದಿರಬೇಕು. ಅಲ್ಲಿ ಪ್ರಾಚೀನಕಾಲದ ಒಂದು ಮಹಾನಗರದ ಅವಶೇಷಗಳೂ, ಬಲು ದೊಡ್ಡದಾದ ಕೆರೆಯೂ ತೋರುತ್ತಿರುವುದೇ ಅವರ ಈ ಭಾವನೆಗೆ ಕಾರಣ. ಅಭಿಪ್ರಾಯವಿದು ಬಹುಶಃ ಸರಿಯಾಗಿರಲೂ ಬಹುದು. ಆದರೆ ಮಳ್ಖೇಡಕ್ಕಿಂತ ಹಿಂದಿನ ರಾಜಧಾನಿ ಈ ಸೂಲೂಭಂಜನ್ ಎಂಬ ಪ್ರದೇಶದಲ್ಲೇ ಇದ್ದಿರಬೇಕೆಂಬ ಹೇಳಿಕೆಯನ್ನು ಇದಕ್ಕಿಂತಲೂ ಹೆಚ್ಚಿನ ಸಾಧನಗಳಿಲ್ಲದೆ

ಸ್ವೀಕರಿಸಲಾರೆವು. ಪ್ರಕೃತ ಆ ಹಿಂದಿನ ರಾಜಧಾನಿ ಯಾವುದು ಎಂಬಲ್ಲಿ ನಮಗೆ ನಿಶ್ಚಿತವಾದ ತಿಳಿವಳಿಕೆ ಇಲ್ಲ."[1]

ಡಾ. ಅಳ್ತೇಕರರು ನಮ್ಮ ಈ ಸಾಧನಗಳನ್ನೂ ಸಿದ್ಧಾಂತವನ್ನೂ ವಿವೇಚಿಸುವರಾಗಿ ನಂಬುತ್ತೇವೆ.

---

[1] Dr. A. S. Altekar, *The Rashtrakutas and Their Times*, p. 48.

# ಅಮೋಘವರ್ಷ ನೃಪತುಂಗ

## ರಾಜ್ಯ ವಿಪ್ಲವ

ರಾಷ್ಟ್ರಕೂಟರ ಕುಲವಿರೋಧಿಗಳಾಗಿದ್ದ ಕೆಲಮಂದಿ ಮಾಂಡಲಿಕರಿಗೆ ಗೋವಿಂದನು ಕೀರ್ತಿಶೇಷನಾದುದೆಂದರೆ ಅದೊಂದು ಹಬ್ಬವೇ ಆಯಿತು. ಇವರೊಳಗೆ, ವೆಂಗಿಯ ಅಥವಾ ಮೂಡಣ ಚಾಲುಕ್ಯವಂಶದ ಎರಡನೆಯ ವಿಜಯಾದಿತ್ಯನೆಂದರೆ ಮೇಲುಗೈಯವನು. ಇವನು ಸುಮಾರು ಕ್ರಿ. ಶ. ೭೯೯ರಲ್ಲಿ ಪಟ್ಟವನ್ನೇರಿ ಆ ಮೇಲೆ ೪೪ ವರ್ಷ ದೊರೆಯಾಗಿದ್ದನು ಎಂದು ಗೊತ್ತಾಗಿದೆ.[1] ಇದರಿಂದ ಕ್ರಿ. ಶ. ೮೪೩ರ ವರೆಗೂ ಈತನು ಜೀವಂತನಾಗಿದ್ದನೆಂದೂ ಜಗತ್ತುಂಗ ಗೋವಿಂದನ ಸಮಕಾಲದಲ್ಲೇ ತನ್ನ ಪಟ್ಟವನ್ನೇರಿದವನೆಂದೂ ಸಿದ್ಧವಾಗುತ್ತಿದೆ. ಈ ವಿಜಯಾದಿತ್ಯ ನರೇಂದ್ರನಿಗೆ 'ಮೃಗರಾಜ' ಎಂಬ ಬಿರುದಿದ್ದಂತೆ ನಮ್ಮ 'ನಾಡೋಜ ಪಂಪ'ದಲ್ಲಿ ಕೊಟ್ಟ ಕುಲಚಿತ್ರಕ್ಕಾಧಾರವಾದ ಶಾಸನದಿಂದ ಗೊತ್ತಾಗಿದೆ. ಈತನು ಮಹಾ ಪರಾಕ್ರಮಿ; ಜಗತ್ತುಂಗ ಗೋವಿಂದನೊಡನೆ ಬಲುಬಾರಿ ಹೋರಾಡಿ ಸೋತು ಶರಗಿ ಸೊಪ್ಪಾದವನು. ಗೋವಿಂದನು ಅಸ್ತಂಗತನಾದನೆಂಬುದನ್ನರಿತೊಡನೆ ವಿಜಯಾದಿತ್ಯನು ಸೇನಾಸಮೇತನಾಗಿ ರಾಷ್ಟ್ರಕೂಟ ರಾಜಧಾನಿಗೆ ದಾಳಿಯಿಟ್ಟು, ಅದನ್ನು ಸೂರೆಮಾಡಿದನೆಂದೂ 'ರಾಜಾಧಿರಾಜ', 'ರಾಜಪರಮೇಶ್ವರ' ಮೊದಲಾದ ಚಕ್ರವರ್ತಿತ್ವದ ಬಿರುದುಗಳನ್ನು ಧರಿಸಿಕೊಂಡನೆಂದೂ ಶ್ರೀ ಡಿ. ಸಿ. ಗಂಗುಲಿಯವರು ಹೇಳುತ್ತಾರೆ.[2]

ಆ ಎರಡನೇ ವಿಜಯಾದಿತ್ಯನು ಆಕ್ರಮಿಸಿದ ರಾಷ್ಟ್ರಕೂಟ ರಾಜಧಾನಿಯ ಹೆಸರೇನೆಂದು ಶ್ರೀ ಗಂಗುಲಿಯವರು ಸೂಚಿಸುವುದಿಲ್ಲ. ಬಹುಶಃ ಅದು ಮಾನ್ಯಖೇಟವೇ ಎಂಬುದು ಅವರ ಭಾವನೆಯಾಗಿದ್ದಿರಬೇಕು. ಗೋವಿಂದರಾಜನು ಕೀರ್ತಿಶರೀರನಾದುದು ತನ್ನ ಹೇಲಾಪುರದಲ್ಲೇ ಆಗಿರಬೇಕೆಂಬುದನ್ನು ಹಿಂದೆ ಸೂಚಿಸಿದೆವಷ್ಟೆ. ಆಗ ಮಹಾರಾಣಿ ಗಾಮುಂಡಬ್ಬೆ, ರಾಜಕುಮಾರ ನೃಪತುಂಗ ಮೊದಲಾದ ರಾಜಬಂಧುಗಳೂ ಬಹುಶಃ ಅಲ್ಲೇ ಇದ್ದಿರಬೇಕು. ರೇವಾ ರಾಜಧಾನಿಯಲ್ಲಿ ಮಂತ್ರಿ ಪ್ರಮುಖರಾದ ಅಧಿಕಾರಿಗಳೂ ಸೈನಿಕರೂ ಇದ್ದಿರ

---

[1] ನಾಡೋಜ ಪಂಪ, ಪುಟ ೧೭೩

[2] D. C. Ganguly, *Eastern Chalukyas*, pp. 57–64

ಬಹುದು. ಅವರೆದೆಯೂ ಚಕ್ರವರ್ತಿಯ ಮರಣವಾರ್ತೆಯಿಂದ ಅಸ್ತವ್ಯಸ್ತವಾಗಿದ್ದಿರಬೇಕು. ವಿಜಯಾದಿತ್ಯನಿಗೆ ಅದು ಸುಸಂಧಿಯೇ ಆಯಿತು. ಈ ಮೂಡಣ ಚಾಲುಕ್ಯ ರಾಜನೇ ಆಕ್ರಮಿಸಿದುದೆಂದು ಹೇಳದಿದ್ದರೂ ಸಂಜಾನಶಾಸನಕಾರನು ವಿಸ್ತರಿಸಿದ ಆ ಸಂಗತಿಯನ್ನು ಮನನಮಾಡಲೇಬೇಕು. ಈ ಶ್ಲೋಕದಲ್ಲಿ ಪ್ರತಿಮಾಡಿದವನ ಕರದೋಷದಿಂದಾಗಿ ಬಹಳ ಅಕ್ಷರ ದೋಷಗಳಿದ್ದರೂ ತಾತ್ಪರ್ಯವು ಸುಗಮವಾಗಿದೆ.

ದೃಷ್ಟ್ವಾ ತನ್ನವರಾಜ್ಯಮೂರ್ಜಿತ ಬೃಹದ್ಧರ್ಮಪ್ರಭಾವಂ ನೃಪಂ
ಭೂಯಃ ಷೋಡಶರಾಜ್ಯವತ್ಕೃತಯುಗ ಪ್ರಾರಂಭ ಇತ್ಯಾಕುಲಃ
ನಶ್ಯನ್ನಂತರನುಪ್ರವಿಶ್ಯ ವಿಷಮೋ ಮಾಯಾಮಯೋऽಸೌ ಕಲಿಃ
ಸಾಮಂತಾನ್ ಸಚಿವಾನ್ ಸಬಾಂಧವಜನಾನಕ್ಷೋಭಯತ್ ಸ್ವೀಕೃತಾನ್

ಶಠಮಂತ್ರಂ ಪ್ರವಿಧಾಯ ಕೂಟಶಪಥೈರೀಶ ಸ್ವತಂತ್ರಾಃ ಸ್ವಯಂ
ವಿನಿಪತ್ಯೋಚಿತಯುಕ್ತಕಾರಿ (ದಿ) ಪುರುಷಾನ್ ಸರ್ವೇ ಸ್ವಯಂ ಗ್ರಾಹಿಣಃ
ಪರಯೋಷಿದ್ದುಹಿತಾ ಸ್ವಸೇತಿ ನ ಪುನರ್ಭೇದಃ ಪಶೂನಾಮಿವ
ಪ್ರಭುರೇವಂ ಕಲಿಕಾಲ ಇತ್ಯವಸಿತಂ ಸದ್ವೃತ್ತಮುದ್ವೃತ್ತತಃ[1]—

ಈ ಶ್ಲೋಕಗಳೆರಡರ ತಾತ್ಪರ್ಯಗಳನ್ನೇ ಸಂಗ್ರಹಿಸಿ ಕೆಳಗೆ ಕಾಣಿಸುತ್ತೇವೆ:

'ಈ ನೂತನ ರಾಜ್ಯಾಧಿಕಾರವನ್ನೊಂದಿದ ನೃಪತುಂಗನನ್ನೂ ಆವನ ಧಾರ್ಮಿಕ ವರ್ತನವನ್ನೂ ನೋಡಿ, ಧಾರ್ಮಿಕವಾದ ಕೃತಯುಗವೇ ತಲೆದೋರಿತೆಂದು ವ್ಯಾಕುಲನಾದ 'ಈ ಕಲಿ' (ಅಸೌ ಕಲಿಃ) ಅಶಕ್ತನಾದರೂ ಮೆಲ್ಲನೆ ಒಳಹೊಕ್ಕು ಸಾಮಂತ-ಮಂತ್ರಿ-ಬಾಂಧವರನ್ನು ಕ್ಷೋಭೆಗೊಳಿಸಿದನು (೩೮). ಈ ಕಲಿ ಕಪಟೋಪಾಯದಿಂದ ಪ್ರಜಾವರ್ಗವನ್ನೂ, ಯುಕ್ತಕ ನಿಯುಕ್ತಕಾದ್ಯಧಿಕಾರಿಗಳನ್ನೂ ಭೇದಗೊಳಿಸಿದನು. ಪ್ರಜೆಗಳಲ್ಲಿ ನೆಲೆಗೊಂಡ ಪುರುಷಾರ್ಥಭಾವನೆ ಕೆಟ್ಟುಹೋದರೆ ಮತ್ತೇನು? ಎಲ್ಲರೂ ಪಶುಸಮಾನರಾಗುತ್ತಾರೆ. ಅಂಥ ಪಶುಪ್ರಾಯರಿಗೆ ಪರಸ್ತ್ರೀ, ಪುತ್ರಿ, ಸೊಸೆ ಎಂಬ ವಿಚಾರವಾದರೂ ಇದೆಯೆ? ಇಲ್ಲ. ಕಲಿಕಾಲವೇ ಹೀಗೆ ಪ್ರಭು ಎನ್ನಿಸಿತು. ಹಿಂದಿನ ಸದ್ವೃತ್ತಿಯೇ ದುರ್ವೃತ್ತಿಯಾಗಿ ಮಾರ್ಪುಗೊಂಡಿತು.'

ಇದರಿಂದ ಆ ಕೊಳ್ಳೆಗಾರರೆಸಗಿದ ಅತಿಕ್ರಮದ ಪರಿಮಿತಿ ಎಷ್ಟೆಂದು ಹೊಳೆದು ತೋರುತ್ತಿದೆ. ವಿಪ್ಲವಕ್ಕೆ ನಾಯಕನಾದವನ ಹೆಸರು ಇಲ್ಲಿ ತೋರಲಿಲ್ಲ. ಆದರೂ 'ಮಾಯಾಮಯಃ ಅಸೌ ಕಲಿಃ' ಎಂದು ಬೆರಳೆತ್ತಿ ತೋರಿಸುವ ಮಾತಿನಿಂದ 'ಈ ಕಲಿ' ಎಂದರೆ ಯಾರೋ ಒಬ್ಬ ವಿರೋಧಿ ನಾಯಕನು ಎಂದು ಭಾಸವಾಗುತ್ತಿದೆ. ಆ ಮೂಡಣ ಚಾಳುಕ್ಯರಾಜನಾದ ಎರಡನೆಯ ವಿಜಯಾದಿತ್ಯನಿಗೆ 'ಕಲಿ ವಿಷ್ಣುವರ್ಧನ' ಎಂಬ ಮಗನೊಬ್ಬನಿದ್ದುದು ಆ ರಾಜವಂಶಾವಳಿಯಲ್ಲೇ ತೋರುತ್ತಿದೆ.[2] ಅಲ್ಲಿಯ 'ಕಲಿ' (ಪರಾಕ್ರಮಿ)

1 ಸಂಜಾನ ಶಾಸನ, ಪದ್ಯಗಳು ೩೮, ೩೯, 'ಎಪಿಗ್ರಾಫಿಯಾ ಇಂಡಿಕಾ', ಸಂಪುಟ ೪.

2 ನಾಡೋಜ ಪಂಪ, ಪುಟ ೧೭೩.

ಎಂಬ ಕನ್ನಡದ ವಿಶೇಷಣ ಪದವು ಆತನ ಪರಾಕ್ರಮದ್ಯೋತಕವೇ ಆಗಿರಬೇಕು. ಆದರೆ, ಸಂಸ್ಕೃತ ಭಾಷೆಯಲ್ಲಿ ಅದೇ ಪದವು 'ಕಲಿಪುರುಷ' ಎಂಬ ಅರ್ಥದ ನೀಚಾರ್ಥದಲ್ಲಿ ಉಪಯುಕ್ತವಾಗುತ್ತಿದೆ. ಎರಡನೆಯ ವಿಜಯಾದಿತ್ಯನಾಗಲಿ ಅವನ ಮಗನಾದ ಆ ಕಲಿ ವಿಷ್ಣುವರ್ಧನನಾಗಲಿ ರೇವಾ ನಗರಿಯನ್ನೇ ಕೊಳ್ಳೆ ಹೊಡೆದಿರಬೇಕೆಂದು ನನ್ನ ಭಾವನೆ. ಆದರಿಂದಲೇ ಮತ್ತಿನ ಪದ್ಯದಲ್ಲಿ 'ಪ್ರಭುರೇವಂ ಕಲಿಕಾಲ ಇತ್ಯವಸಿತಂ' ಎಂದರೆ 'ಹೀಗೆ ಕಲಿಕಾಲವೇ ಪ್ರಭು(ದೊರೆ)ವಾಗಿ ಮಾರ್ಪಟ್ಟುದು' ಎಂದು ಬಣ್ಣಿಸಿದ್ದಾನೆ.

'ಹೇಲಾಪುರ'ದಲ್ಲೇ ಗೋವಿಂದನು ದಿವಂಗತನಾಗಿರಬೇಕು; ಆಗ ರಾಜಬಂಧುಗಳೆಲ್ಲ ಅಲ್ಲಿಗೆ ಬಂದಿರಬೇಕು, ಎಂಬುದು ನನ್ನ ಊಹೆ ಮಾತ್ರವೇ. ಅದು ಹೇಗೂ ಇರಲಿ; ನೃಪತುಂಗನು ರೇವಾ ರಾಜಧಾನಿಯಲ್ಲೇ ಪಟ್ಟಾಭಿಷಿಕ್ತನಾದುದೋ ಅಲ್ಲವೋ ಎಂಬುದನ್ನು ನಿರ್ಧರಿಸಲು ಸರಿಯಾದ ಆಧಾರವಿನ್ನೂ ನಮಗೆ ದೊರೆತಿಲ್ಲ. ಆದರೆ, ಹಿಂದೆ ವಿಸ್ತರಿಸಿದ ಸಂಜಾನ ಶಾಸನದ ೩೮ನೇ ಪದ್ಯದೊಳಗಿನ 'ದೃಷ್ಟ್ವಾ ತನ್ನವರಾಜ್ಯಂ ಊರ್ಜಿತ ಬೃಹದ್ಧರ್ಮ ಪ್ರಭಾವಂ ನೃಪಂ' ಎಂಬ ಆದಿಯ ಪಾದವನ್ನೀಕ್ಷಿಸಿರಿ. ಇದರಿಂದ ಧಾರ್ಮಿಕ ಪ್ರಭಾವನಾದ ನೃಪತುಂಗನು ತನ್ನ 'ನವರಾಜ್ಯ'ವನ್ನು ಏಳಿಗೆಗೇರಿಸುತ್ತಿದ್ದ ಕಾಲವದು ಎಂಬ ಅರ್ಥವಾಗುತ್ತದೆ. ಈ ಭಾವನಾನುಸಾರವಾಗಿ ನೋಡಿದರೆ ಪರಂಪರಾನುಗತವಾದ 'ರೇವೆ'ಯಲ್ಲೇ ಆತನ ಪಟ್ಟಾಭಿಷೇಕವಾಗಿದ್ದಿರಬೇಕು ಎಂದು ಭಾಸವಾಗುತ್ತಿದೆ. ಅದು ಹಾಗಿರಲಿ; ಅಂಥ ಭಾರತ ಚಕ್ರವರ್ತಿಯಾಗಿದ್ದ ತಂದೆಯನ್ನು ಕಳಕೊಂಡ ಪುತ್ರನಿಗೆ, ಪಟ್ಟವನ್ನೇರಿದೊಡನೆ, ಅಥವಾ ಸ್ವಲ್ಪವೇ ಕಾಲದಲ್ಲಿ-ರಾಜ್ಯಭ್ರಷ್ಟನಾಗಬೇಕಾದ ದುರವಸ್ಥೆ ಒದಗಿತು.

## ವಿಪ್ಲವವೂ ತನ್ನಿವಾರಣೋಪಾಯವೂ

'ಕವಿರಾಜಮಾರ್ಗ'ದೊಳಗೆ ದೃಷ್ಟಾಂತಿಸಿದ ಹಲವು ಪದ್ಯಗಳು ಹಿಂದಿನ ಮತ್ತು ಸಮ ಕಾಲದ ಪ್ರಬಂಧಗಳಿಂದ ಎತ್ತಿದುವಾಗಿರಲೇಬೇಕು. ಅವುಗಳೊಳಗೆ ಹಲವು ಸ್ವತಃ ನೃಪ ತುಂಗನ ಜೀವನವನ್ನೇ ವಾಚ್ಯವಾಗಿಯೋ ವ್ಯಂಗ್ಯವಾಗಿಯೋ ಚಿತ್ರಿಸಿದ ಯಾವುದೋ ಪ್ರಬಂಧದಿಂದ ಆರಿಸಿಕೊಂಡವುಗಳೇ ಆಗಿರಬಹುದು. ಹೀಗೆ ರಾಜ್ಯವಿಪ್ಲವದಿಂದ ದುರವಸ್ಥೆ ಗೀಡಾದ ಉತ್ತಮ ವಂಶದ ರಾಜಕುಮಾರನ ಸ್ಥಿತಿಯನ್ನೇ ವರ್ಣಿಸಿ ಸಮಾಸೋಕ್ತ್ಯ ಲಂಕಾರಕ್ಕೆ ಕೊಟ್ಟ ದೃಷ್ಟಾಂತ ಪದ್ಯವನ್ನೀಕ್ಷಿಸಿರಿ—

ದಾನಪರನಂ ನಿಜೋನ್ನತ
ಮಾನನನಾರೂಢ ವಿಪುಳವಂಶನನಂತೊಂ
ದಾನೆಯನಪಾಯಪಂಕದೊ
ಳೇನುಂ ತಳ್ವಿಲ್ಲದಿರ್ದುದಂ ಕಾಣಿಸಿದಂ (iii, 129)

ಬೇಟೆಗಾರನೊಬ್ಬನಿಂದ ರಚಿತವಾದ ಒಂದು 'ಅಪಾಯಪಂಕ'(ಕೆಪ್ಪಿನಲ್ಲಿ)ದಲ್ಲಿ ಸಿಲುಕಿ ಕಷ್ಟಪಡುವ 'ದಾನಪರನಂ' [(i) ಮದ ಸುರಿಯುತ್ತಿರುವ; (ii) ದಾನವೀಯುವುದರಲ್ಲಿ (ಆಸಕ್ತನಾದ)] ಉನ್ನತಮಾನ [(i) ಮದವೇರಿದ; (ii) ಅಭಿಮಾನಿಯಾದ]' ವಿಪುಳ

ವಂಶನಂ' [(i) ಬಿದಿರು ಹಿಂಡುಗಳ ಮಧ್ಯದಲ್ಲಿರುವ; (ii) ಉತ್ತಮ (ವಂಶಜನಾದ)] ಒಂದಾನೆಯನ್ನು ಕಾಣಿಸಿದನು—ಎಂಬುದೇ ಇದರ ಅರ್ಥ. ಅಂಥ ಆನೆಯನ್ನೆ ಪ್ರಮುಖಾರ್ಥದಿಂದ ಸೂಚಿಸಿದುದಾದರೂ, ಇದರಲ್ಲಿ ಹೊಳೆವ ದ್ವಿತೀಯಾರ್ಥವನ್ನು ಮುಂದಿನ ಪದ್ಯದಲ್ಲಿ ಕವಿಯೇ ವಿಸ್ತರಿಸಿದ್ದಾನೆ:

ತ್ಯಾಗಾದಿಗುಣಗಣೋನ್ನತ
ಭಾಗಿಯನೇನಾನುಮೊಂದುಪಾಯಾಂತರದಿಂ
ನೀಗಲ್ ನೆಱೆಯದೆಯನುಪಮ
ನೀ ಗಣಿದದಿನಾನೆ ಮಾಡಿ ನುಡಿದಂ ಬಗೆಯಂ (iii, 130)

ಇಲ್ಲಿ ವಿಸ್ತರಿಸಿದಂತೆ 'ಈ ಗಣಿದದಿಂ ಆನೆ ಮಾಡಿ' ನುಡಿದುದೆಂದರೆ, ಇಂಥ ಅವಸ್ಥೆಯಲ್ಲಿ ಹಗೆಗಳ ಬಲೆಗೆ ಸಿಲುಕಿಹೋದ ನೃಪತುಂಗರಾಜನ ಅವಸ್ಥೆಯನ್ನೆ ಸೂಚಿಸಿದುವಾಗಿ ತೋರುತ್ತಿದೆ. ಈ ರೀತಿಯಲ್ಲಿ ಹೊಳೆಯುವ ನೃಪತುಂಗರಾಜನ ಭಿನ್ನಾಭಿನ್ನಾವಸ್ಥೆಗಳು ಅನೇಕ ದೃಷ್ಟಾಂತಪದ್ಯಗಳಲ್ಲಿ ಅಲ್ಲಲ್ಲಿ ದೊರೆಯುತ್ತಿವೆ. ಪ್ರಬಲರಾದ ಹಗೆಗಳನ್ನು ಗೆಲ್ಲ ಬೇಕಾದರೆ ಯಾವ ರೀತಿಯ ಮಂತ್ರೋತ್ಸಾಹ ಕಾಲನಿರೀಕ್ಷಣೆಗಳೊಂದನೆ ಕಾರ್ಯವೆಸಗ ಬೇಕು ಎಂಬುದನ್ನು ನಿದರ್ಶನಾಲಂಕಾರದ ದೃಷ್ಟಾಂತ ಪದ್ಯಗಳಲ್ಲಿ ಸೂಚಿಸುತ್ತಾನೆ. ಅವುಗಳೊಳಗೆ ಕೆಲವನ್ನು ಕೆಳಗೆ ಸೂಚಿಸುತ್ತೇವೆ:

ಪ್ರತಿಕೂಲನಾಗಿ ನಿಲೆ ವಿಧಿ
ಮತನಯಮನುಕೂಲಮಾಗಿ ನಿಲೆಯುಂ ಕಾರ್ಯ
ಸ್ಥಿತಿಯಂ ಸಾಧಿಸಲಾಗದು
ಮೃತಕಕೃತೋಪಕೃತಿಯವೊಲನರ್ಥಾಯಾಸಂ[1] (iii, 145)

ಪದೆದುದಯಿಸಲೆಂದುಂ ಕಾ
ಲದೊಳಲ್ಲದುದಾರತೇಜನರ್ಕನುಮಲ್ಲಂ
ಸಮುದಿತ ಗುಣನದಱಿಂ ನಯ
ವಿದನಪ್ಪಂ ಕಾಲಮುಂ ನೆರಂ ತೋರ್ಕೆ ನೃಪಂ (iii, 146)

ಪಡೆಯಱಿಯಲಾದೊಡರಿಯುಂ
ಕಿಡಿಸುಗುಮಂತಃಕಳಂಕ ನೃಪಮಂಡಳಮುಂ
ತಡೆಯದೆ ತಮಸ್ಸ್ವಭಾವಂ
ಕಿಡಿಸುವವೋಲಱಿದು ರಾಹು ಶಶಿಮಂಡಲಮುಂ (iii, 147)

ಕಿಱಿದೆಂದೇಳಿಸಿ ಪಗೆಯಂ
ಪಱಿಪಡೆ ಕಿಡಿಸದೊಡೆ ಪೆತ್ತು ಕಾಲದ ಬಲಮುಂ
ನೆಱೆದಿಱುಗುಂ ನೆಱೆದನುವಿಂ
ಮಱಸುವವೋಲ್ ದಿವಸಕರನನಂಬುದನಿಕರಂ (iii, 148)

---

[1] ಕೌಟಲೀಯ ಅರ್ಥಶಾಸ್ತ್ರದ ಕೊನೆಗೆ ಅನುಬಂಧ ರೂಪದಲ್ಲಿರುವ 'ಚಾಣಕ್ಯ ಸೂತ್ರ' ಗಳೊಳಗೆ ಒಂದಾದ 'ನ ಮೃತಸ್ಯ ಔಷಧಂ ಪ್ರಯೋಜನಂ' (ಸೂ. ೨೬೨) ಎಂಬ ಸೂತ್ರಾರ್ಥ ವನ್ನೊಂದಿ ಈ ಹೋಲಿಕೆ ಬಂದಂತಿದೆ.

ಒಳಗಿರ್ದ್ದ ವೈರಿಗಳ್ ಮೊ
ಕ್ಕಳವಿಾಯರ್ ಪೆರ್ಚಲಧಿಕ ವಿಭವರ್ಕ್ಕಳುಮಂ
ತಳರದೊಡನಿರ್ದು ಬಡಬಾ
ನಳನೆಂದುಂ ಪೆರ್ಚಲೀಯದಂತಂಬುಧಿಯಂ (iii, 149)

ಪರಪಕ್ಷಮುಳ್ಳಿನಂ ತನ
ಗಿರವುಬ್ಬಸಮುದಜಿಸಜಿುವುದದನೇಗೆಯ್ದುಂ
ಪರೆದ ಪುಡಿಯೆಲ್ಲಮಂ ನೀರ್
ನೆರೆದು ಕೆಸರ್ಮಾಡದನ್ನೆಗಂ ನೆಲಸುಗುಮೇ (iii, 150)

ಇವೆಲ್ಲವೂ ರಾಜನೀತಿ ತತ್ತ್ವವನ್ನೂ, ಹಿಂದೆ ಕಾಣಿಸಿದಂತೆ ನೃಪತುಂಗನು ಅನುಭವಿಸಿದ ಅವಸ್ಥೆಗಳನ್ನೂ, ತನ್ನಿವಾರಣೋಪಾಯವನ್ನೂ ಹೊಳೆಯಿಸುವ ಮಾತುಗಳು.

## ಪುನರುದಯ

ಅಂಥ ಅಪಾಯಪಂಕದಿಂದ ನೃಪತುಂಗನು ಹೇಗೆ ಮೇಲೇರಿದನೆಂಬ ವಿಷಯವು ಸಂಜಾನ ಶಾಸನಭಾಗದಲ್ಲಿ ಸರಿಯಾಗಿ ತೋರುತ್ತಿದೆ:

ಗುರುಬುಧಮನುಯಾತಸ್ಸ್ವಾ ? [ಶ್ಚಾ]ರ್ಯಪಾತಾಳ ? [ದಾಳ್ವ] ಮಲ್ಲಾ
ದುದಯಗಿರಿಮಿವಾಹ್ನೋ ರಟ್ಟ ಮಾರ್ತಂಡದೇವಃ
ಪುನರುದಯಮುಪೇತ್ಯೋದ್ವೃತ್ತ ತೇಜಸ್ವಿ ಚಕ್ರಂ
ಪ್ರತಿಹತಮಥ ಕೃತ್ವಾಲೋಕಮೇಕಃ ಪುನಾತಿ[1]—

ಇಲ್ಲಿ ತೋರುವಂತೆ ರಟ್ಟಮಾರ್ತಂಡ ದೇವನೆನ್ನಿಸಿದ ನೃಪತುಂಗನು ಪುನರುದಯವನ್ನೊಂದಲು 'ಆರ್ಯ ಪಾತಾಳಮಲ್ಲ'ನೇ ಉದಯಗಿರಿಯಂತೆ ಆಧಾರಭೂತನಾದನೆಂದು ನಿರ್ಧಾರವಾಗುತ್ತಿದೆ. ಈ ಪೂಜ್ಯಾರ್ಥಕವಾದ 'ಆರ್ಯ' ಎಂಬ ವಿಶೇಷಣಕ್ಕೆ ಪಾತ್ರನಾದ ಆ 'ಪಾತಾಳಮಲ್ಲ' ಎಂಬರೆ ಯಾರು ? ಎಂಬುದು ಡಾ. ಅಳ್ತೇಕರರಿಗೂ ನಿಸ್ಸಂದೇಹವಾಗಿ ಗೊತ್ತಾಗಿಲ್ಲ. ಅವರು ಅದು ನೃಪತುಂಗನ ಚಿಕ್ಕಪ್ಪನಾದ ಗುಜರಾತಿನ ಸುವರ್ಣವರ್ಷ ಕರ್ಕನೇ ಆಗಿರಬೇಕೆಂದು ಊಹಿಸುತ್ತಾರೆ.[2] ಆದರೆ, ಅವನಿಗೆ 'ಪಾತಾಳಮಲ್ಲ' ಎಂಬ ಬಿರುದಾದರೂ ಇದ್ದಂತೆ ಬೇರಾವ ಆಧಾರವೂ ತೋರುವುದಿಲ್ಲ. ನಮ್ಮೆಣಿಕೆಯಂತೆ ಈ ಶ್ಲೋಕದ ಆ ಭಾಗದಲ್ಲೇ ಒಂದಿಷ್ಟು ತಪ್ಪು ಬಿದ್ದಿರುವಂತೆಯೂ, ಮೂಲದಲ್ಲಿ ಅದು 'ಸ್ವಾಮಿಪಾತಾಳಮಲ್ಲಾತ್' ಎಂದು ಇದ್ದಿರಬೇಕಾಗಿಯೂ ತೋರುತ್ತಿದೆ. ಈ ಭಾವನೆಗೆ ಕಾರಣವೇನೆಂಬುದನ್ನು ಮುಂದೆ 'ಕವಿರಾಜಮಾರ್ಗಕಾರನಾರು ?' ಎಂಬ ಪರಿಚ್ಛೇದದಲ್ಲಿ ಸರಿಯಾಗಿ ವಿಸ್ತರಿಸುತ್ತೇವೆ. ಅಂತೂ 'ರಟ್ಟ ಮಾರ್ತಾಂಡದೇವ'ನು ಪುನರುದಯವನ್ನೊಂದಿದ, ಅಥವಾ ನೃಪತುಂಗನು ಹಗೆಗಳನ್ನು ಗೆದ್ದು ತನ್ನ ರಾಜ್ಯಾಧಿಕಾರವನ್ನು ನೆಲೆಗೊಳಿಸಿದ, ಸಂಗತಿ ಇಲ್ಲಿ ವಿಶದವಾಗಿದೆ.

---

[1] ಸಂಜಾನ ಶಾಸನ, ಪದ್ಯ ೪೧

[2] Dr. A. S. Altekar, *The Rashtrakutas and Their Times*, p. 72–73

ಮತ್ತಿನ ಶಾಸನಪದ್ಯವು ನೃಪತುಂಗನ ಸ್ವಭಾವವನ್ನೂ ಅದಕ್ಕನುವಾಗಿಯೇ ಆತನು ಮೇಲ್ಮೆಗೇರಿದ ಸಂಗತಿಯನ್ನೂ ವಿಸ್ತರಿಸುತ್ತಿದೆ—

ರಾಜಾತ್ಮಾ ಮನ ಏವ ತಸ್ಯ ಸಚಿವಃ ಸಾಮಂತಚಕ್ರಂ ಪುನಃ
ತನ್ನಿತ್ಯೇಂದ್ರಿಯವರ್ಗ ಏಷ ವಿಧಿವದ್ವ್ಯಾಗಾದಯಸ್ಸೇವಕಾಃ
ದೇಹಸ್ಥಾನಮಧಿಷ್ಠಿತಃ ಸ್ವವಿಷಯಂ ಭೋಕ್ತುಂ ಸ್ವತಂತ್ರಃ ಕ್ಷಮಃ
ತಸ್ಮಿನ್ ಭೋಕ್ತರಿಸನ್ನಿಪಾತವಿವಶೇ ಸರ್ವೇಽಪಿ ನಶ್ಯಂತಿ ತೇ[1]

—ಸಂಜಾನ ಶಾಸನ, ಪದ್ಯ ೪೩

ಈ ಪದ್ಯದಲ್ಲಿ ಶಾಸನಕವಿ ಆಲಂಕಾರಿಕವಾಗಿ ನೃಪತುಂಗನ ತಾತ್ತ್ವಿಕನಾದ ರಾಜಕೀಯ ಚಾತುರ್ಯ ಭಾವನೆಯನ್ನು ವಿಸ್ತರಿಸಿದ್ದಾನೆ:

ಆತ್ಮವೇ ರಾಜನು ; ಮನಸ್ಸೇ ಅವನ ಮಂತ್ರಿ ; ಆ ಇಂದ್ರಿಯವರ್ಗವೇ ಸಾಮಂತ ಚಕ್ರವು. ಶುದ್ಧಜೀವನವಿಧಾನಕ್ಕನುವಾದ ವಾಗಾದಿಗಳೇ ಸೇವಕರಾಗಿ (ಆತ್ಮರಾಜನು) ದೇಹವೆಂಬ ಆಸ್ಥಾನಪೀಠವನ್ನಧಿಷ್ಠಾನವೆಸಗಿದಲ್ಲಿ, ತನ್ನ 'ವಿಷಯ'ವನ್ನು [(i) ಇಂದ್ರಿಯ ಗ್ರಾಹ್ಯ ರೂಪ ರಸಾದಿಗಳನ್ನು ; (ii) ದೇಶವನ್ನು] ಅನುಭವಿಸಲು ಸ್ವತಂತ್ರನೂ ಸಮರ್ಥನೂ ಆಗುತ್ತಾನೆ. 'ಸನ್ನಿಪಾತ' [(i) ಸನ್ನಿಪಾತರೋಗ ; (ii) ಸಜ್ಜನ ಸಂಕಷ್ಟ]ದಿಂದ ವಿವಶನಾದ ಅವನು ಹಾಗೆ ಪಥ್ಯಸೇವನೆಗೆಯ್ಯುತ್ತಿರುವಲ್ಲಿ ನಾನಾ ಬಗೆಯ ಆ 'ಸನ್ನಿಪಾತ' ರೂಪದ ಲೋಕಕ್ಷೋಭೆಗಳು ತಾವಾಗಿ ಶಾಂತತೆಯನ್ನೊಂದುತ್ತಿವೆ.

ಆಧುನಿಕ ವೈದ್ಯಕೀಯ ಸಂಶೋಧನೆಗನುವಾಗಿ ನೋಡಿದರೂ ಸನ್ನಿಪಾತ ರೋಗದ ನಿವಾರಕೌಷಧವೆಂದರೆ ಅಂಥ ಪಥ್ಯವೊಂದೇ ಎಂದು ಸಿದ್ಧವಾಗಿದೆಯಲ್ಲವೆ ? ಇದರಿಂದ ಅಮೋಘವರ್ಷನು ಎಷ್ಟು ಜಾಣ್ಮೆಯಿಂದ, ರಾಜನೀತಿಯ ಶುದ್ಧ ಧರ್ಮಕ್ಕನುಸಾರವಾಗಿ, ವರ್ತಿಸಿ ಶತ್ರುನಿವಾರಣವೆಸಗಿಪನೆಂಬುದು ವ್ಯಕ್ತವಾಗುತ್ತಿದೆ.[1]

---

[1] ಈ ಸಂದರ್ಭದಲ್ಲಿ ಶಾಸನಕವಿ ವೈದ್ಯಶಾಸ್ತ್ರಕ್ಕನುವಾಗಿ ಬಣ್ಣಿಸಿದರೆ, 'ಕವಿರಾಜಮಾರ್ಗ' ಕಾರನು ನಿದರ್ಶನಾಲಂಕೃತಿಯ ಮತ್ತಿನ ಉದಾಹರಣೆಗಳಲ್ಲಿ ಅದೇ ವೈದ್ಯಮಾರ್ಗವಿಡಿದು ವಿಸ್ತರಿಸಿದುದನ್ನೀಕ್ಷಿಸಿರಿ :

ಕುಱುಗೊಂಡು ನೆಗಟ್ಟನಿಚ್ಚೆಯ
ನಱಿಯದೆ ತನ್ನಿಚ್ಚೆಯಿಂದೆ ಕಜ್ಜಂಬೆಟ್ಟಂ
ತಱಸಲಿಸಲಾಜನಾರ್ತನ
ತೆಱನಱಿಯದೆ ಮದ್ದುವೇಱ್ದ ಬೆಜ್ಜನ ತೆಱದಿಂ (iii, 151)

ಪರಿಣಾಮ ಪಥ್ಯಮುಂ ಸುಖ
ಪರಿಕರಮುಂ ಮೆಚ್ಚದನ್ನರಾರೀ ಮಾತಂ
ನಿರತಿಶಯರಸಸಮೇತಮ
ನರೋಚಕಂ ಮೆಚ್ಚದಂತೆ ಸೊಗಯಿಸುವೌಷಸಂ (iii, 152)

ಅದಂತಿರಲಿ. ನೃಪತುಂಗನು ಪ್ರಥಮತಃ ಪಟ್ಟಾಭಿಷಿಕ್ತನಾದುದು ರೇವಾ ರಾಜಧಾನಿಯಲ್ಲೇ ಆಗಿರಬೇಕು ಎಂಬ ನಮ್ಮ ಸಂದೇಹವನ್ನು ಹಿಂದೆ ಸೂಚಿಸಿದ್ದೆವಷ್ಟೆ; 'ಪುನರುದಯ'ವನ್ನೊಂದಿದ ಮೇಲಂತೂ ಮಾನ್ಯಖೇಟವನ್ನೇ ರಾಜಧಾನಿಯನ್ನಾಗಿ ಮಾಡಿದನು, ಎಂಬಲ್ಲಿ ಸಂದೇಹವಿಲ್ಲ. ಅದೇ ಸಂಜಾನ ಶಾಸನದೊಳಗೆ ಮುಂದಿನ ಹಳಸೇ ಗದ್ಯಭಾಗದಲ್ಲಿ ತೋರುವ 'ಮಾನ್ಯಖೇಟ ರಾಜಧಾನ್ಯವಸ್ಥಿತೇನ ಮಯಾ' ಎಂಬ ನೃಪತುಂಗನ ಮಾತೇ ಆ ಸಂಗತಿಯನ್ನು ನಿರ್ಧರಿಸುತ್ತಿದೆ.

## ಮತ್ತಿನ ಸಂಕಟ

ನೃಪತುಂಗನು ಬಲು ಚಿಕ್ಕವನಾಗಿದ್ದಾಗಲೇ ಪಟ್ಟವನ್ನೇರಿದ್ದನು, ಎಂದು ಶ್ರೀ ಅಳ್ತೇಕರರು ತಮ್ಮ ಗ್ರಂಥದಲ್ಲಿ ವಿಸ್ತರಿಸಿದ್ದಾರೆ.[1] ಅದು ಹೇಗೂ ಇರಲಿ. ಆದಿಯ ವಿಪ್ಲವಕಾರಿಗಳೇ ಮೊದಲಾದ ಹಗೆಗಳನ್ನಡಗಿಸಿ ಮಾನ್ಯಖೇಟ ರಾಜಧಾನಿಯಲ್ಲಿ ಪಟ್ಟವೇರಿ ತನ್ನ ರಾಜ್ಯವನ್ನು ಒಂದು ನೆಲೆಗೆ ತರುವಲ್ಲಿ ಕೆಲಗಾಲ ದಾಟಿರಲೇಬೇಕು. ಆ ಬಗೆಯ ರಾಜಕಾರ್ಯವನ್ನು ಕೈಕೊಂಡು ನಡೆಯಿಸಲು ಪ್ರಾಯಸ್ಥರಲ್ಲದ ಕಿರಿಯರಿಗೆ ಸಾಧ್ಯವೂ ಆಗದಲ್ಲವೆ? ನೃಪತುಂಗನಿಗೆ ವಿರೋಧಿಗಳಿಂದೊದಗಿದ ಮತ್ತಿನ ಸಂಕಟವೆಂದರೆ, ಅವನ ಮಗನಾದ ಎರಡನೆಯ ಕೃಷ್ಣರಾಜನು ಯುವರಾಜನಾಗಿದ್ದ ಸಮಯದಲ್ಲಿ. ಈ ಮತ್ತಿನ ಸಂಕಟದ ಸಂಗತಿ ಶಾ.ಶ. ೭೮೮ರಲ್ಲಿ, ಎಂದರೆ ಕ್ರಿ.ಶ.೮೬೬ರಲ್ಲಿ, ಕೊರೆಯಲ್ಪಟ್ಟ ನೃಪ

---

ಇಲ್ಲಿ 'ಸೇಗೆಯ್ವ' ಎಂದರೆ ರಾಜಕಾರ್ಯಧುರಂಧರನಾದ ಅರಸನ, ಬುದ್ಧಿಪೂರ್ವಕವಾದ ಸೂಚನೆಯನ್ನರಿಯದೆ ಕಂಡ ಬಟ್ಟೆಯಲ್ಲಿ ಕಾಲಿಡುವ ಮಂತ್ರಿಯೇ ಮೊದಲಾದ ಅಧಿಕಾರಿಗಳನ್ನು ರೋಗಿಯ ರೋಗನಿದಾನವನ್ನರಿಯದೆ ಮದ್ದುಗೊಡುವ ವೈದ್ಯರೆಂಬವರೊಡನೆ ಹೋಲಿಸಿದ್ದಾನೆ; ಅದರಿಂದ, ಕೂಡಲೆ ಪಥ್ಯ(ಹಿತ)ವಾಗಿ ತೋರದಿದ್ದರೂ ಪರಿಣಾಮದಲ್ಲಿ ಹಿತಕಾರಿಯಾದ ಈ ಮಾತನ್ನು ಎಲ್ಲರೂ ಸ್ವೀಕರಿಸುವರೆಂದು ನಂಬುತ್ತಾನೆ; ಹಾಗೆ ನಂಬದವರನ್ನು ಆರೋಗ್ಯಕಾರಿಯಾದ, ಹಿತಮಿತವಾದ ಪಥ್ಯಭೋಜನವನ್ನು ಮೆಚ್ಚದ, 'ಅರೋಚಕಿ'ಗಳೊಡನೆ ಹೋಲಿಸುತ್ತಾನೆ. 'ಸೊಗಯಿಸುವ ಉಣಿಸು' ಎಂದರೆ, ಹಿಂದೆ ವರ್ಣಿಸಿದ ಸನ್ನಿಪಾತ ರೋಗಕ್ಕೆ ಔಷಧ ಸಮಾನವಾದ 'ಪರಿಣಾಮಪಥ್ಯ'ವಾದ ಆಹಾರವೇ. ಅದನ್ನು ಹಿತಮಿತವಾಗಿ ಸೇವಿಸಿದಲ್ಲಿ ವಾಸಿಯಾಗುವ ರೋಗವೆಂದರೆ ಸನ್ನಿಪಾತವೇ ಸರಿ. ಅದರಿಂದ, ಹಿಂದೆ ದೃಷ್ಟಾಂತಿಸಿದ ಶಾಸನ ಶ್ಲೋಕವೂ 'ಕವಿರಾಜಮಾರ್ಗ'ದ ಈ ದೃಷ್ಟಾಂತ ಪದ್ಯಗಳೂ ಏಕಾರ್ಥಕಗಳೂ ಏಕಸಂದರ್ಭವನ್ನೇ ಸೂಚಿಸುವವುಗಳೂ ಎಂಬಲ್ಲಿ ಸಂಶಯವಿಲ್ಲ. ಈ ಪದ್ಯಗಳೂ, ಇನ್ನೂ 'ಕವಿರಾಜಮಾರ್ಗ'ದೊಳಗೆ ಅಲ್ಲಲ್ಲಿ ತೋರುವ, ಈ ರೀತಿಯ ಸಂದರ್ಭವನ್ನೇ ಹೊಳೆಯಿಸುವ ಹಲವು ಪದ್ಯಗಳೂ ಯಾವ ಗ್ರಂಥಗಳಿಂದ ಎತ್ತಿಕೊಂಡವುಗಳೆಂಬುದು ಗೊತ್ತಾಗಿಲ್ಲ. ಬಹುಶಃ ನೃಪತುಂಗನ ಕಾಲದಲ್ಲೇ ಪ್ರಕಟಿತವಾದ—'ಅಮೋಘವರ್ಷ ಯಶ'ಸ್ಸನ್ನು ಮಿರುಗಿಸುವ ಯಾವುದೋ ಒಂದು ಪ್ರಬಂಧದಿಂದ—ಎತ್ತಿಕೊಂಡವುಗಳಾಗಿರಬೇಕು, ಎಂದು ಭಾವಿಸುತ್ತೇವೆ.

[1] Dr. A. S. Altekar, *The Rashtrakutas and Their Times*, p. 72.

ತುಂಗನ ಕೊಣ್ಣೂರು ಶಾಸನದಿಂದ ತಿಳಿದುಬರುತ್ತದೆ.[1] ಈ ಸಂಕಷ್ಟದ ವಿಷಯವೆಂದರೆ ಮುಂದಿನದು :

ಕಾವೇರೀ ತೀರದಲ್ಲಿರುವ ಕೇದಲ ಎಂಬ ದುರ್ಗದಲ್ಲಿ ಗಂಗರಾಜನು ನೃಪತುಂಗನ ಸಾಮಂತನಾಗಿ ಆಳುತ್ತಿದ್ದನು. ಈ ಗಂಗರಾಜರು ಮೊದಲಿನಿಂದಲೂ ರಾಷ್ಟ್ರಕೂಟಕುಲ ವಿರೋಧಿಗಳು ಎಂಬುದು ಹಿಂದೆಯೇ ಗೊತ್ತಾಗಿದೆಯಷ್ಟೆ. ಆಗ ಗುಜರಾತಿನಲ್ಲಾಳುತ್ತಿದ್ದ ರಾಷ್ಟ್ರಕೂಟ ಧ್ರುವನೆಂಬವನೂ ನೃಪತುಂಗನನ್ನು ವಿರೋಧಿಸುತ್ತಿದ್ದು, ಸಂಭವಿಸಿದ ಯುದ್ಧದಲ್ಲಿ ಮಡಿದುಹೋಗಿದ್ದನು. ಆದರಿಂದ ಮತ್ತಿನ ಅಲ್ಲಿಯ ರಾಷ್ಟ್ರಕೂಟರೂ ನೃಪತುಂಗನ ಪತನವನ್ನೇ ಹಾರಯಿಸುತ್ತಿದ್ದರು ಎನ್ನಬಹುದು. ಹಿಂದೆ ಸೂಚಿಸಿದಂತೆ 'ಕವಿರಾಜಮಾರ್ಗ'ದ ದೃಷ್ಟಾಂತ ಪದ್ಯದೊಳಗೊಂದರಲ್ಲಿ ತೋರುವ 'ಒಳಗಿರ್ದ ವೈರಿಗಳ್ ......'(iii, ೧೪೯) ಎಂಬುದು ಅಂಥ ಅಂತಶ್ಶತ್ರುಗಳನ್ನೇ ಸೂಚಿಸಿದುದಾಗಿರಬೇಕು. ಆಗ, ಹಿಂದೆ ಸೂಚಿಸಿದಂತೆ, ಕ್ರಿ.ಶ. ೮೪೧ರ ವರೆಗೆ ಆಳಿದ ವೆಂಗಿಯ ಚಾಲುಕ್ಯ ವಿಜಯಾದಿತ್ಯನೂ ಅವನ ಮಗ ಕಲಿ ವಿಷ್ಣುವರ್ಧನನೂ ತೀರಿಹೋಗಿದ್ದರು. ಆ ವಿಷ್ಣುವರ್ಧನನು ಬರಿಯ ಎರಡೂವರೆ ವರ್ಷವೇ ಆಳಿದುದೆಂದು ಮೂಡಣ ಚಾಳುಕ್ಯರ ವಂಶಚಿತ್ರದಿಂದಲೂ ಅಲ್ಲಿಯೇ ಸೂಚಿಸಿದ 'ತತ್ಸುತಃ ಕಲಿ ವಿಷ್ಣುವರ್ಧನೋ ದ್ವ್ಯ(ರ್ಧ) ವಷ(ರ್ಷಾ)ಣಿ' ಎಂಬ ಕಳಿಂಗ ಚಾಳುಕ್ಯ ಎರಡನೆಯ ಅಮ್ಮರಾಜನ ಶಾಸನ ಭಾಗದಿಂದಲೂ ಸ್ಪಷ್ಟವಾಗುತ್ತಿದೆ.[2] ಆ ವಿಷ್ಣುವರ್ಧನನ ಮಗನಾದ ಗುಣಗಾಂಕ ವಿಜಯಾದಿತ್ಯನು ಆಗ ಆಳುತ್ತಿದ್ದನು. ಆತನು ಮತ್ತೆ ೪೪ ವರ್ಷ ಆಳಿದನೆಂಬುದೂ ಆ ಶಾಸನದಿಂದಲೇ ತಿಳಿದುಬರುತ್ತಿದೆ. ಆದಿಯಲ್ಲಿ ಸೂಚಿಸಿದ ಕೇದಲದುರ್ಗದ ಗಂಗರಾಜನೇ ಮತ್ತಿನವರೆಲ್ಲರ ನೆರವನ್ನೂ ಪಡೆದು ನೃಪತುಂಗನಿಗೆ ಕರುಳು ಕೊರೆಯುವ ದುಃಖಸಂಕಷ್ಟಗಳನ್ನೊದಗಿಸಿದಾತನು. ಸ್ವತಃ ನೃಪತುಂಗನ ಮಗನಾದ ಎರಡನೆಯ ಕೃಷ್ಣರಾಜನನ್ನೇ ಗಂಗರಾಜನು ಆಕರ್ಷಿಸಿದ್ದನು. ಅದೇ ನೃಪತುಂಗನ ಆ ಮರುಕಕ್ಕೆ ಕಾರಣ.

ಒಂದು ರೀತಿಯಲ್ಲಿ ನೋಡಿದರೆ ಅಮೋಘವರ್ಷನ ಬಾಲ್ಯದಲ್ಲೊದಗಿದ್ದ ರಾಜ್ಯವಿಪ್ಲವವು ಇದಕ್ಕಿಂತಲೂ ಭಯಂಕರವಾಗಿ ತೋರಬಹುದು. ಆದರೂ ಇದರೊಳಗೆ ತನ್ನ ಏಕಮಾತ್ರ ಕುಮಾರನೇ ವೈರಿವರ್ಗದೊಳಗಾದುದರಿಂದ ಅವನ ಅಂತರಂಗದಲ್ಲಿ ಮೊದಲಿನದಕ್ಕಿಂತಲೂ ಇದು ಹೆಚ್ಚು ದುಃಖದಾಯಕವಾಗಿ ಇದ್ದಿರಬೇಕು. ಹೊರಗಣ ಹೋರಾಟವು ಅವನನ್ನು ಬಗ್ಗಿಸಲಾಗಲಿಲ್ಲ. ಆದರೆ ಒಡಲುರಿ ಏರಿ ಆತನೆದೆಯನ್ನು ಕುಗ್ಗಿಸಿತು.

## ಸಂಕಟದ ನಿವೃತ್ತಿಯೂ ರಾಜ್ಯಶಾಂತಿಯೂ

ಹೀಗೆ ಸಂಗ್ರಹವಾಗಿ ಸೂಚಿಸಿದ ಸಂಗತಿಯನ್ನು ಸಾಧಾರವಾಗಿ ಒಂದಿಷ್ಟು ವಿಸ್ತರಿಸದಿದ್ದರೆ ಚಾರಿತ್ರಿಕ ಪದ್ಧತಿ ನೇರವಾಗಿ ಸಾಗಲಾರದು. ಆದರಿಂದ ಒಂದಿಷ್ಟು ವಿವೇಚಿಸುವ :

1 ಕೊಣ್ಣೂರು ಶಾಸನ, ಶ್ಲೋಕ ೧೯–೨೨, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೪.

2 ನಾಡೋಜ ಪಂಪ, ಪು. ೧೭೩–೧೭೪.

ಮುಗಿಲೊಡ್ಡಿದಂತೆ ಮುಸುಕುತ್ತಾ ಬರುವ ಹಗೆಗಳ ಸಂಚು ವಿವೇಕಿಯಾದ ಅಮೋಘ ವರ್ಷನಿಗೆ ಹೊಳೆಯಲಾರಂಭಿಸಿತು. 'ಹಿಂಪೆ ಹಗೆ ಕಿರಿದು ಎಂದು ತಾನು ಅಲಕ್ಷಿಸುತ್ತಿದ್ದುದು ತಪ್ಪಾಯಿತು' ಎಂದಾತನಿಗೆ ಮನದಟ್ಟಾಯಿತು. ಆದರಿಂದ ತನ್ನ ಸಾಮಂತನೂ ತಮ್ಮ ರಾಷ್ಟ್ರಕೂಟ ರಾಜಧಾನಿಗೆ ವಂಶಾನುಕ್ರಮವಾಗಿ ಬಾಗಿದ ಬಂಟನೂ ಆದ ವೀರ ಬಂಕೆಯನನ್ನು ಸೇನೆಯಿಂದ ಸಜ್ಜುಗೊಳಿಸಿ ಆ ಗಂಗವಾಡಿಯನ್ನು ಸಂಪೂರ್ಣವಾಗಿ ಹದಗೊಳಿಸಲೆಂದು ಆಜ್ಞಾಪಿಸಿದನು. ಈ ಸಂಗತಿ ಸ್ವತಃ ನೃಪತುಂಗನ ಮಾತಿನಿಂದಲೇ ಕೊಣ್ಣೂರು ಶಾಸನದಲ್ಲಿ ವರ್ಣಿತವಾಗಿದೆ:

......ಬಂಕೇಶಃ ಸೆಲ್ಲಕೇತನಃ

ಮದೀಯೋ ವಿತತಜ್ಯೋತಿರ್ನಿಶಿತಾಸಿರಿವಾಪರಃ
ಉನ್ಮೂಲಿತದ್ವಿಷತ್ಪಕ್ಷಮೂಲೋ ಮೌಲಬಲಪ್ರಭುಃ

ಮತ್ಪ್ರಸಾದೇನ ಸಂಲಬ್ಧ ವನವಾಸಿಪುರಸ್ಸರಾನ್
ಗ್ರಾಮಾನ್ ತ್ರಿಂಶತ್ಸಹಸ್ರಾಣಿ ಭುನಕ್ತ್ಯವಿರತೋದಯಃ

ಮಹಾಪ್ರತಾಪಾದುಚ್ಛೇದನುದ್ಯಚ್ಛನ್ಮದಿಚ್ಛಯಾ
ಮೂಲಾದುಚ್ಛೇತ್ತುಮುತ್ತುಂಗಾಂ ಗಂಗವಾಡಿವಟಾಟವೀಂ[1]___

ಈ ಶಾಸನ ಭಾಗಾರ್ಥವು ಸುಲಭವಾಗಿಯೇ ಗೊತ್ತಾಗುವಂತಿದ್ದರೂ ಸಂಸ್ಕೃತ ಭಾಷೆಯಲ್ಲಿರುವುದರಿಂದಾಗಿ ನೋಲಿಂದ ಮೇಲೆ ವಿಸ್ತರಿಸುತ್ತೇವೆ :

'ಸೆಲ್ಲಕೇತನನಾದ ಬಂಕೆಯನೆಂದರೆ ನನ್ನ ಕೈಯನ್ನೊಂದಿ ಪ್ರಜ್ವಲಿಸುವ ಜೇರೊಂದು ನಿಶಿತಾಸಿಯೋ ಎಂಬಂತಿರುವವನು; ಅಗಣಿತವಾದ ಹಗೆಗಳ ಸಂದಣಿಯನ್ನು ನಿರ್ಮೂಲಿಸಿ ಹೆಸರುಗೊಂಡು, ಮೂಲಬಲದಿಂದ ಯುಕ್ತನಾದವನು; ಮತ್ತು ನನ್ನ ದಯೆಗೆ ಪಾತ್ರನಾಗಿ ಬನವಾಸಿಯೇ ಮೊದಲಾದ ಮೂವತ್ತು ಸಾವಿರ ಗ್ರಾಮಗಳಿಗೆ ಒಡೆಯನಾಗಿರುವವನು. ಅಂಥ ವೀರ ಬಂಕೆಯನು, ಗಂಗವಾಡಿ ಎಂಬ ವಟಾಟವಿ (ಗೋಳಿಮರಗಳ ಕಾಡು)ಯ ಮೂಲಚ್ಛೇದವನ್ನೆಸಗಲು ನನ್ನ ಇಚ್ಛೆಗನುವಾಗಿ ದಾಳಿವರಿದನು.'

ಈ ಹೇಳಿಕೆಯಿಂದ, ಆಗ ನೃಪತುಂಗನ ಮನಸ್ಸು ಎಷ್ಟು ಉದ್ರೇಕವಡೆದಿತ್ತು ಎಂಬುದು ವಿದಿತವಾಗುತ್ತಿದೆ. ಬಂಕೆಯನು ಹಾಗೆ ಗಂಗವಾಡಿಯ ಕೇದಲ ದುರ್ಗಕ್ಕೆ ಸೇನಾಸಮೇತನಾಗಿ ಮುಂದುವರಿಯುತ್ತಿರುವಲ್ಲಿ, ಹಗೆಗಳಾದ ಉಳಿದ ಸಾಮಂತವರ್ಗದವರು ಮಾಡಲಾರಂಭಿಸಿದ ಕಿರುಕುಳಗಳನ್ನು ನೃಪತುಂಗನ ಮಾತಿನಿಂದಲೇ ಕವಿ ಬಣ್ಣಿಸುತ್ತಾನೆ.

ತತ್ರಾಂತರೇಽಸ್ಮತ್ಸಾಮಂತೈರ್ಮತ್ಸಯರ್ಮಾಹಿತಮಾನಸ್ಯೈಃ
ಉಪದ್ರುತೋಽಪಿ ಕೋಪೋದ್ಯತ್ಸಾಹಸ್ಯೈಕಸಖಃ ಸ್ವಯಂ

ಧ್ವಸ್ತರಿಪುನೀತಿಮಾರ್ಗೋಃ ರಣವಿಕ್ರಮಬುದ್ಧಿಮೇಕಮಭಿನೀಯ

[1] ಕೊಣ್ಣೂರು ಶಾಸನ, ಶ್ಲೋಕಗಳು ೧೯–೨೨, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೪.

ಸ ಮದೀಯ ಹೃದಯಸಂಗತಮವಂಧ್ಯಕೋಪತ್ವಮಾವಹತಿ
ಯೇನ—
ತತ್ಕೇದಲಾಭಿಧಾನಂ ದುರ್ಗಂ ವಪ್ರಾರ್ಗಲಾದಿ ದುರ್ಲಂಘ್ಯಂ
ಮೂಲಬಲಾಧಿಷ್ಠಿತಮಪಿ ಸದ್ಯಃ ಪ್ರೋಲ್ಲಂಘ್ಯ ಹೇಲಯಾsಗ್ರಾಹಿ[1]—

ಮಾತ್ಸರ್ಯದಿಂದುಕ್ಕಿದ ಇತರ ಸಾಮಂತರು ಬಂಕೆಯನಿಗೆ ತರತರವಾಗಿ ಉಪದ್ರವಿಸಿದರು. ಉತ್ಸಾಹಶಕ್ತಿಯ ಪ್ರತಿಬಿಂಬವೋ ಎಂಬಂತಿರುವ ಬಂಕೆಯನು ಅದನ್ನು ಲೆಕ್ಕಿಸುವನೆ? ಅವರ ಕಾಟವೆಲ್ಲ ಬಿರುಗಾಳಿಗಿದಿರಾದ ಹತ್ತಿಯಂತಾಯಿತು. ಆತನು ಮುಂಬರಿದು ಗಂಗರಾಜರ ಕಾವೇರೀ ತಟದಲ್ಲಿದ್ದ ಕೇದಲದುರ್ಗವನ್ನಾಕ್ರಮಿಸಿದನು; ವೈರಿವರ್ಗವನ್ನು ಅಸ್ತವ್ಯಸ್ತವಾಗಿ ಸದೆಬಡಿಯಲಾರಂಭಿಸಿದನು.[2]

ಆ ಸಮಯಕ್ಕೆ ಸರಿಯಾಗಿ ಅತ್ತ ಮಾನ್ಯಖೇಟ ನಗರದಲ್ಲಿಯೂ ಗೊಂದಲಕ್ಕಾರಂಭವಾಯಿತೆಂಬುದು ಈ ಮುಂದಿನ ಪದ್ಯದಿಂದ ವಿಶದವಾಗುತ್ತಿದೆ:

ತತ್ರಾಂತರೇ ಮದಂತಿಕಮಂತರ್ಭೇದೇನ ಜಾತಸಂಕ್ಷೋಭೇ
ಪ್ರತ್ಯಾಗಂತವ್ಯಮಿತಿ ತ್ವಯೇತಿ ಮದ್ವಚನಮಾತ್ರೇಣ[2]—

ಮಂತ್ರಿ ಪ್ರಮುಖಾಧಿಕಾರಿಗಳಲ್ಲಿ, ಪರಿವಾರ ಪ್ರಜೆಗಳಲ್ಲಿ, ಪಟ್ಟಣಿಗರಲ್ಲಿ ಉಂಟಾದ ವೈಮನಸ್ಯವನ್ನೂ ಅದರ ಫಲವಾದ ಗಲಭೆಯನ್ನೂ 'ಸಂಕ್ಷೋಭ' ಎಂಬ ಪದವೇ ಸೂಚಿಸುತ್ತಿದೆ. ಇಂಥ ಅಂತರ್ಭೇದ ಸಂಕ್ಷೋಭವು ಬರಿಯ ಹೊರಗಣ ಹಗೆಗಳಿಂದ ಸಾಗುವುದೆ? ಹಾಗೆ ರಾಜಧಾನಿಯೊಳಗೆ ಗಲಭೆ ತಲೆಯೆತ್ತಿದಲ್ಲಿ ಕುಮಾರಕನೂ ಯುವರಾಜನೂ ಆಗಿದ್ದ ಕೃಷ್ಣನು ಅಲ್ಲಿರಲಿಲ್ಲ; ಆತನ ಹಿಂದಿನ ಕೆಲಕೆಲವು ವರ್ತನೆಗಳಲ್ಲಿಯೂ ಮಹಾರಾಜನಿಗೆ ಸಂದೇಹ ತೋರಿರಬೇಕು. ಅದರಿಂದಲೇ 'ನೀನು ಕೂಡಲೆ ನನ್ನ ಹತ್ತಿರಕ್ಕೆ ಬರಬೇಕು' ಎಂಬ ನಿರೂಪದೊಡನೆ ಬಂಕೆಯನಿದ್ದಲ್ಲಿಗೆ ದೂತನೊಬ್ಬನನ್ನು ಕಳುಹಿಸಿದನು. ಬಾಹ್ಯಶತ್ರುಗಳಿಂದ ತಾತ್ಕಾಲಿಕವಾಗಿ ತಲೆದೋರಿದ ಕ್ಷೋಭೆ ಮಾತ್ರವೇ ಆದಾಗುತ್ತಿದ್ದರೆ, ತಾನೇ ಕಳುಹಿದ ಬಂಕೆಯನನ್ನು ಅಷ್ಟು ಬೇಗನೆ ಹಿಂದಕ್ಕೆ ಕರೆಯುತ್ತಿರಲಿಲ್ಲ. ಬಂಕೆಯನಿಲ್ಲದೆ ಯಾವುದೊಂದು ರಾಜಕಾರ್ಯವನ್ನೂ ನಡೆಯಿಸಲಾರದವನು ನೃಪತುಂಗನಲ್ಲ. ತನ್ನ ಮಗನೇ 'ಗಂಗವಾಡಿಯ ಶತ್ರುಗಳ ಬಲೆಗೆ ಸಿಲುಕಿ ಅಲ್ಲಿದ್ದಾನೆ' ಎಂಬುದು ಬಹುಶಃ ಗುಪ್ತದೂತರ ಮುಖದಿಂದ ಅವನಿಗೆ ಮತ್ತೆ ಗೊತ್ತಾಗಿರಬೇಕು. ಹಾಗಿದ್ದ ಸಂದರ್ಭದಲ್ಲಿ ಗಂಗವಾಡಿಯವರೊಡನೆ ಹೋರಾಟವೆಸಗುವುದು ಬೇಡ, ಎಂಬುದಕ್ಕಾಗಿಯೇ ದೂತನನ್ನು ಬಂಕೆಯನಲ್ಲಿಗೆ ಕಳುಹಿಸಿದುದೂ ಆಗಿರಬೇಕು. ಶಾಸನದಲ್ಲಿರುವ ದೂತೋಕ್ತಿಯಲ್ಲಿ ಆ ವಿಷಯವೇ ತೋರುವುದಿಲ್ಲ. ಆದರೆ, ಆ ಮೇಲೆ ಬಂಕೆಯನು ಭಾವಿಸುವ ಮಾತಿನಲ್ಲಿ ಅದು ಹೊಳೆಯುತ್ತಿದೆ. ಬಹುಶಃ ಅದನ್ನು ಬಾಯಿಮಾತಾಗಿ ಆಡಿರಲೂಬಹುದು. ಬಂಕೆಯನ ಭಾವನಾತ್ಮಕಗಳಾದ ಮುಂದಿನ ಶ್ಲೋಕಗಳನ್ನು ಪರಿಭಾವಿಸಿರಿ:

---

[1] ಕೊಣ್ಣೂರು ಶಾಸನ, ಶ್ಲೋಕಗಳು ೨೩-೨೫, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೪.

[2] ಕೊಣ್ಣೂರು ಶಾಸನ, ಶ್ಲೋಕ ೨೮, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೮.

ಅಪ್ರಾಪ್ತೇ ವಲ್ಲಭೇಂದ್ರೇ ಮಯಿ ಜಯತಿ ಯದಾ ವಿದ್ವಿಷಃ ಸ್ವಾಂತದಾಹಂ
ಸನ್ನ್ಯಸ್ತಾಶೇಷಸಂಗೋ ಮುನಿರಥ ವಿಧಿನಾ ವಿದ್ವಿಷಾಂ ಸ್ಯಾಜ್ಜಯಶ್ರೀಃ
ತತ್ರಾಪ್ಯುದ್ದಾಮಧೂಮಧ್ವಜವಿತತಶಿಖಾಸೂತ್ಪತಾಮಿ ಪ್ರತಾಪಾತ್
ಇತ್ಯಾರೂಢಪ್ರತಿಜ್ಞಃ ಕತಿಪಯದಿವಸೈಃ ಪ್ರಾಪದಸ್ಮತ್ಸಮೀಪಂ

ಮಾಸತ್ರಯಸ್ಯ ಮಧ್ಯೇ ಯದಿ ಭೋಜಯಿತುಂ ನ ಶಕ್ಯತೇ ಸ್ವಾಮೀ
ಕ್ಷೀರಂ ವಿಜಿತ್ಯ ಶತ್ರೂನ್ ತಥಾಪಿ ವಹ್ನಿಂ ವಿಶಾಮ್ಯೇವ[1]—

ಈ ಶ್ಲೋಕಗಳೆರಡರಲ್ಲಿ ನೃಪತುಂಗನು ಹೇಳಿ ಕಳುಹಿದ, ಅದಕ್ಕುತ್ತರವಾಗಿ ಬಂಕೆಯನು ನಿರ್ಧರಿಸಿ ಪ್ರತ್ಯುತ್ತರಿಸಿದ, ವಿಷಯಗಳೆರಡೂ ಹೊಳೆದು ತೋರುತ್ತವೆ. ಅದರಿಂದ ಈ ಶ್ಲೋಕಾರ್ಥವನ್ನು ಸರಿಯಾಗಿ ಪರಾಂಬರಿಸಲೇಬೇಕು. ಮೊದಲಿನ ಶ್ಲೋಕದ ಪ್ರಥಮ ಪಾದದಲ್ಲಿ ಒಂದಿಷ್ಟು ಕರಡೋಷವಿರುವಂತೆ ತೋರಿದರೂ ತಾತ್ಪರ್ಯಕ್ಕೆ ಭಂಗವಾಗುವಂತಿಲ್ಲ:

'ನಾನು ವಿರೋಧಿಗಳನ್ನು ನಾಶಿಸಿ ಹಿಂದಿರುಗುವಲ್ಲಿ ಸ್ವಾಮಿಯಾದ ವಲ್ಲಭೇಂದ್ರನ ದರ್ಶನ ದೊರೆಯದಂತಾದರೆ, ಸರ್ವಸಂಗ ಪರಿತ್ಯಾಗವೆಸಗಿ ಮುನಿಯಾಗುವೆನು; ಅಥವಾ, ವಿಧಿವಶದಿಂದ ವಿರೋಧಿಗಳಿಗೆ ಜಯವಾದಲ್ಲಿ, ಉರಿಯುವ ಬಿರುಬೆಂಕಿಯ ನಾಲಗೆಗೆ ಆಹುತಿಯನ್ನಾಗಿ ಈ ಸೋತ ಮೆಯ್ಯನ್ನು ಸಮರ್ಪಿಸುವೆನು—ಎಂದು ಬಂಕೆಯನು ಆರೂಢಪ್ರತಿಜ್ಞನಾದನು. ಮೂರು ತಿಂಗಳು ಮಧ್ಯದಲ್ಲಿ ಸ್ವಾಮಿಯು ಹಾಲನ್ನು ಸೇವಿಸುವಂತೆ ಮಾಡದಿದ್ದಲ್ಲಿ, ಶತ್ರುಗಳನ್ನು ಜಯಿಸಿದರೂ ಅಗ್ನಿಯನ್ನು ಪ್ರವೇಶಿಸುವೆನು, ಎಂದು ಹೇಳಿ ಹಿಂದಿರುಗಿಸಿದ ದೂತನು ಕೆಲದಿನಗಳಲ್ಲಿ ನನ್ನು ಸಮೀಪವನ್ನೊಂದಿದನು.'

ಇದರಿಂದ ನೃಪತುಂಗನು ಬಂಕೆಯನಿಗೆ ಹೇಳಿ ಕಳುಹಿದುದು ಹೀಗೆಂದು ಭಾಸವಾಗುತ್ತಿದೆ: "ಈ ನಮ್ಮ ರಾಜಧಾನಿಯೊಳಗೆ ಕಠಿಣವಾದ ಅಂತಃಕ್ಷೋಭವು ಪ್ರಾಪ್ತವಾಗಿದೆ. ಅದರ ಪರಿಣಾಮವು ಹೇಗಾಗುವುದೋ ಊಹಿಸುವಂತಿಲ್ಲ. ಅದರಿಂದ ಮಾಸತ್ರಯದ ವರೆಗೆ ಕ್ಷೀರವನ್ನು ತ್ಯಜಿಸುವ ವ್ರತವನ್ನು ಕೈಕೊಂಡಿರುತ್ತೇನೆ. ಇದನ್ನರಿತ ಕೂಡಲೆ ನೀನು ಹಿಂದಿರುಗಿ ಬರಬೇಕು". ಯುವರಾಜ ಕೃಷ್ಣನು ವೈರಿಗಳ ಕುತಂತ್ರಕ್ಕೆ ಸಿಲುಕಿದನೆಂದು ತನಗೆ ಗೊತ್ತಾದುದು ಮೊದಲಾದ ಸಂಗತಿ ಇಲ್ಲಿ ಅಕ್ಷರಶಃ ಸೂಚಿತವಾಗಲಿಲ್ಲ. ಆದರೂ, ರಾಜನು ಕ್ಷೀರತ್ಯಾಗವ್ರತವನ್ನು ಕೈಕೊಂಡುದು ಬರಿಯ ಅಂತಃಕ್ಷೋಭದ ನಿವೃತ್ತಿಗಾಗಿ ಆಗಿರಲಿಕ್ಕಿಲ್ಲ ಎಂಬುದು ಬಂಕೆಯನಿಗೂ ಗೊತ್ತಾಗಿರಬೇಕು.

ದೂತನನ್ನು ಹಿಂದಿರುಗಿಸಿದ ವೀರ ಬಂಕೆಯನು, ಗಂಗವಾಡಿಯ ದುರ್ಗವನ್ನು ಪ್ರಬಲ ಸೈನಿಕರೊಡನೆ ಪ್ರವೇಶಿಸಿದನು. ಕೋಟೆಯನ್ನು ಧೂಳೀಪಟವೆಸಗಿ ವೈರಿಸೇನಾಸಮು

[1] ಕೊಣ್ಣೂರು ಶಾಸನ, ಶ್ಲೋಕಗಳು ೨೯, ೩೦, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೪

ದಾಯವನ್ನು ಅಸ್ತವ್ಯಸ್ತವನ್ನಾಗಿ ಮಾಡಿದನು. ಆ ಸಂದರ್ಭದಲ್ಲಿ ಬಂಕೆಯನ ಕಣ್ಣಿಗೆ ತೋರಿದ ದೃಶ್ಯವನ್ನು ನೃಪತುಂಗನ ಮಾತಿನಿಂದಲೇ ಶಾಸನಕವಿ ಬಣ್ಣಿಸುವುದನ್ನೀಕ್ಷಿಸಿರಿ:

ಇತ್ಯುಕ್ತ್ವಾ ಕ್ರಮವಿಕ್ರಮೋಚ್ಚಿ ಖಶಿಖಿಜ್ವಾಲಾವಲೀಢೇ ವ್ರಜೇ
ಧೂಮಶ್ಯಾಮಲಿತೇ ತಿರೋಹಿತತನೌ ಪ್ರಾಯಃ ಪರಪ್ರೇಷಿತೇ
ಯಾತೇ ಮತ್ತನಯೇ ಸ್ಥಿತಾನ್ಯನೃಪತೀನ್ ನಿರ್ಜಿತ್ಯ ಯೋ ಜಿತ್ವರೋ
ವಂದೀಕೃತ್ಯ ರಿಪೂನ್ ನಿಹತ್ಯ ಚ ತದಾ ತೀರ್ಣಪ್ರತಿಜ್ಞೋಽಭವತ್[1]—

ಬಂಕೆಯನ ವೀರ ಸೈನಿಕರು ಮುಂಬರಿದು ಅಲ್ಲಿಯ ಗೊಲ್ಲಗೇರಿಗೆ ಬೆಂಕಿಯಿತ್ತರು. ಆ ಬೆಂಕಿಯ ಹೊಗೆ ಎತ್ತೆತ್ತಲೂ ವ್ಯಾಪಿಸಿತು. ಮುಂದಿನ 'ಧೂಮಶ್ಯಾಮಲಿತೇ ತಿರೋಹಿತ ತನೌ ಪ್ರಾಯಃ ಪರಪ್ರೇಷಿತೇ ಯಾತೇ ಮತ್ತನಯೇ' ಎಂಬ ಭಾಗವನ್ನೀಕ್ಷಿಸಿರಿ: ಹೊಗೆಯಿಂದ ಆವೃತವಾಗಿ ಕಪ್ಪಾದ ಮೈಯುಳ್ಳ, ಬಹುಶಃ 'ಪರಪ್ರೇಷಿತ'ನಾದ ಎಂದರೆ ವಿರೋಧಿಗಳಿಂದ ಪ್ರೇರಿತನಾಗಿ ಬಂದ, ನನ್ನ ತನಯ(ಕುಮಾರ ಕೃಷ್ಣ)ನು ಅಲ್ಲಿಂದ ಹೊರಟುಹೋದನು—ಎಂಬುದು ಈ ಮಾತಿನ ಅರ್ಥ. ಇದರಿಂದ ನೃಪತುಂಗನು ಚಕಿತ ಚಿತ್ತನಾದುದಕ್ಕೂ ಕ್ಷೀರತ್ಯಾಗವ್ರತವನ್ನಾರಂಭಿಸಿದುದಕ್ಕೂ ಇದ್ದ ಕಾರಣವು ವ್ಯಕ್ತವಾಗುತ್ತಿದೆ. ಆ ಮೇಲೆ 'ತೀರ್ಣಪ್ರತಿಜ್ಞ'ನಾದ ಬಂಕೆಯನು ವೈರಿಗಳನ್ನೆಲ್ಲ ಗೆದ್ದು ಜಯಶಾಲಿಯಾಗಿ ಹಿಂದಿರುಗಿ ದೊರೆಯನ್ನು ಸಂದರ್ಶಿಸಿದನು.

ನೃಪತುಂಗನಿಗೆ ಅಕಾಲವರ್ಷ ಕೃಷ್ಣ ಎಂಬೊಬ್ಬನೇ ಕುಮಾರಕನೂ ಚಂದ್ರಬ್ಬಲಬ್ಬೆ ಶಂಖಾದೇವಿ ಎಂಬ ಇಬ್ಬರು ಕುಮಾರಿಕೆಯರೂ ಇದ್ದರೆಂಬುದು ಚಾರಿತ್ರಿಕರಿಗೆಲ್ಲ ಗೊತ್ತಿರುವ ಸಂಗತಿ. ಮೊದಲನೆಯವಳನ್ನು ಗಂಗರಾಜನಾದ ಒಂದನೆಯ ಬೂತುಗನಿಗೂ ಮತ್ತಿನಾಕೆಯನ್ನು ಪಲ್ಲವರಾಜಕುಮಾರನಾದ ಪಲ್ಲವನಂದಿ ಎಂಬವನಿಗೂ ವಿವಾಹವಾದಂತೆ ಗೊತ್ತಾಗಿದೆ. ಇಂಥ ವಿರೋಧಿರಾಜರು ಯುವರಾಜ ಅಕಾಲವರ್ಷ ಕೃಷ್ಣನನ್ನು ಹಿಂದೆ ವಶೀಕರಿಸಿದುದು ನಿರರ್ಥಕವಾದರೂ, ಮುಂದಿನ ಬಂಧುತ್ವಕ್ಕೆ ಆ ಹಿಂದಿನ ಸ್ನೇಹವೇ ಕಾರಣವಾಗಿ ಪರಿಣಮಿಸಿರಬೇಕೆಂದು ತೋರುತ್ತಿದೆ. ಅಮೋಘವರ್ಷನು ಧಾರ್ಮಿಕ ರಾಜನೀತಿಯಲ್ಲಿ ಆಚಾರ್ಯಪುರುಷನಷ್ಟೆ. ತನಗೆ ಪ್ರಾಯವೇರುತ್ತಾ ಬಂದುದನ್ನೂ ಚಂಚಲಚಿತ್ತನಾದ ಕುಮಾರನ ರಾಜ್ಯಭಾರಕ್ರಮವು ನಿರಾಬಾಧವಾಗಿ ನಡೆಯಬೇಕು ಎಂಬುದನ್ನೂ ಮನನವೆಸಗಿ, ಪೂರ್ವವಿರೋಧಿಗಳಾಗಿದ್ದರೂ ಮಗನ ಮಿತ್ರರಾದ ಗಂಗಪಲ್ಲವರನ್ನು ಈ ಬಗೆಯ ಬಾಂಧವ್ಯದಿಂದ ತನ್ನವರನ್ನಾಗಿ ಮಾರ್ಪಡಿಸಿಕೊಂಡನು—ಎಂದು ಭಾವಿಸಬೇಕು.

ಸಂಜಾನ ಶಾಸನದ ೪೮ನೆಯ ಪದ್ಯದಲ್ಲಿ 'ಯೇನಾತ್ಯಾಜಿ ತನುಃ ಸ್ವರಾಜ್ಯಮಸಕೃತ್' ಎಂಬುದಾಗಿ ನೃಪತುಂಗನು ವರ್ಣಿತನಾಗಿದ್ದಾನೆ. 'ನೃಪತುಂಗನಿಂದ ಬಲುಬಾರಿ ತನ್ನ ಶರೀರವೂ ಸ್ವರಾಜ್ಯವೂ ತ್ಯಜಿಸಲ್ಪಟ್ಟಿದೆ' ಎಂದು ಅದರ ತಾತ್ಪರ್ಯ. ಇದರಿಂದ ಅವನಿಗೆ

[1] ಕೊಣ್ಣೂರು ಶಾಸನ, ಶ್ಲೋಕ ೩೧, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೪.

ಹಲಬಾರಿ ಒದಗಿದ ರಾಜ್ಯಭ್ರಂಶವೂ, ಧಾರ್ಮಿಕ ರಾಜ್ಯಮಾರ್ಗವನ್ನು ಏನಾದರೂ ಬಿಡದೆ ಕಷ್ಟಗಳನ್ನು ಬಗೆಹರಿಸಿದ ಸಂಗತಿಯೂ ವಿದಿತವಾಗುತ್ತಿದೆ.

ಇಲ್ಲಿಗೆ ನೃಪತುಂಗನ ರಾಜ್ಯಕ್ಷೋಭದ ಗೊಂದಲಗಳೆಲ್ಲ ಕೊನೆಗೊಂಡಂತಾಯಿತು. ಮತ್ತೆ ಹಗೆಗಳಾರೂ ತಲೆಯೆತ್ತಲಿಲ್ಲ. ಯುವರಾಜ ಕೃಷ್ಣನಾದರೂ ತನ್ನ ತಪ್ಪನ್ನೊಪ್ಪಿ ತಂದೆಯಿಂದ ಕ್ಷಮಾಪಣೆಗೊಂಡಿರಬೇಕು. ಅದಂತಿರಲಿ; ತನ್ನ ಏಕಮಾತ್ರ ಕುಮಾರಕನೂ ಮುಂದಿನ ರಾಜ್ಯಾಧಿಪತಿಯೂ ಆದ ಅಕಾಲವರ್ಷ ಕೃಷ್ಣನ ಅಪರಾಧಕ್ಕಾಗಿ ಅಮೋಘ ವರ್ಷ ನೃಪತುಂಗನು ಈ ಕ್ಷೀರತ್ಯಾಗ ವ್ರತವನ್ನು ಸ್ವೀಕರಿಸಿದುದೂ ಅವನ ಅಪರಾಧ ವನ್ನು ಶಾಸನಪೂರ್ವಕವಾಗಿ ಪ್ರಪಂಚಕ್ಕೆಲ್ಲ ಸಾರಿದುದೂ ಆತನ ನಿಷ್ಕಲಂಕ ಧಾರ್ಮಿಕ ಶೀಲವನ್ನು ಲೋಕಕ್ಕೆ ಸೂಚಿಸುತ್ತಿದೆ. ಈ ಶಾಸನಭಾಗದಿಂದ ಅಂಥ ಅಸಾಮಾನ್ಯ ಗುಣ ವೇನು ನೃಪತುಂಗನಲ್ಲಿ ಕಂಡುಬರುತ್ತಿದೆ? ಎಂದು ಯಾರಾದರೂ ಸಂಶಯಿಸಿದಲ್ಲಿ, ಅವರು ಇದನ್ನು ಭಾವಿಸಬೇಕು: ತನ್ನ ಮತ್ತು ತನ್ನವರ ಅಪರಾಧಗಳನ್ನು ಲೋಕದ ಮುಂದೆ ಒಪ್ಪಿಕೊಳ್ಳಲಿಕ್ಕೆ ಅಲ್ಪನಾದರೂ ಹಿಂಜರಿಯುತ್ತಾನೆ. ತನ್ನ ಮನ್ನಣೆಗೆ ಕೆರೆಯುಂಟಾಗು ವುದೆಂಬ ಭೀತಿಯೇ ಅದಕ್ಕೆ ಕಾರಣ. ಲೋಕಸ್ಥಿತಿ ಹಾಗಿರುವಲ್ಲಿ, ನಮ್ಮ ಈ ಕನ್ನಡ ಚಕ್ರವರ್ತಿ ಘಂಟಾಘೋಷವಾಗಿ ಅದನ್ನು ಸಾರಿ ಹೇಳಿದುದೆಂದರೆ ಸಾಮಾನ್ಯವೆ? ನಡ ವಳಿಯ ಆಣಿಮುತ್ತಿದು ಆತನೊಬ್ಬನ ಎದೆಯ ಚಿಪ್ಪಿನಿಂದಲೇ ಉದಯಿಸಿತು. ಬೇರೆಲ್ಲಿ ಹುಡುಕಿದರೂ ದೊರೆಯಲಾರದ ರತ್ನವಿದು. ಇದನ್ನು ಕನ್ನಡಿಗರು—ಯಾಕೆ? ಭಾರತ ಭೂಮಿಯೇ ಮರೆಯದಿರಬೇಕು.

# ನೃಪತುಂಗನ ಆಳಿಕೆ

## ಅಧಿಕಾರಿಗಳ ಸ್ವರೂಪ

ಸಾಮಾನ್ಯವಾಗಿ ನೋಡಿದರೆ ಹಿಂದುಸ್ತಾನದ ಹಿಂದಿನ ರಾಜರ ರಾಜ್ಯಪದ್ಧತಿಗಳೆಲ್ಲ ಪುರಾತನ ಧರ್ಮಶಾಸ್ತ್ರಕ್ಕನುಗುಣವಾಗಿ ನಡೆದವುಗಳು. ಅವುಗಳೊಳಗೂ ರಾಷ್ಟ್ರಕೂಟ ವಂಶೀಯರ ಆ ಕಟ್ಟುಪಾಡಿನ ರಚನೆ ಅದೊಂದು ವಿಶಿಷ್ಟವಾದ ಹೆಜ್ಜೆಯಿಟ್ಟಂತೆ ತೋರುತ್ತಿದೆ. ಆ ವಂಶದ ಪ್ರಮುಖರಾದ ದಂತಿದುರ್ಗಾದಿಗಳೆಲ್ಲರ ಪದ್ಧತಿಗಳನ್ನೂ ಬೇರೆಬೇರೆಯಾಗಿ ವಿಸ್ತರಿಸದೆ, ಗ್ರಂಥನಾಯಕನಾದ ಈ ನೃಪತುಂಗನನ್ನು ಮಾತ್ರವೇ ಮೇಲಿಂದ ಮೇಲೆ ಅತಿಸಂಗ್ರಹವಾಗಿ ಕಾಣಿಸುತ್ತೇವೆ. ಅದರ ಆಧಾರದಿಂದ, ಉಳಿದವರ ಆ ರಾಜ್ಯ ಪದ್ಧತಿಯ ಹೊಲಬನ್ನೂ ಭಾವಿಸಿಕೊಳ್ಳಬಹುದು. ಇದರಿಂದ, ಹಿಂದಿನ ನಮ್ಮ ಕನ್ನಡ ನಾಡು ಯಾವ ರೀತಿಯಲ್ಲಿ ಪಾಲಿಸಲ್ಪಡುತ್ತಿತ್ತು? ಅದೇ ಆದರ್ಶವು ಮತ್ತಿನ ಭಿನ್ನ ಪದ್ಧತಿಯಿಂದ, ಎಂದರೆ ಈಗಿನದಕ್ಕಿಂತ, ಕೀಳೋ ಮೇಲೋ? ಎಂಬ ಪರಾಂಬರಿಕೆಯನ್ನೂ ಮಾಡಿಕೊಳ್ಳಬಹುದೆಂದು ಭಾವಿಸುತ್ತೇವೆ. ನೃಪತುಂಗನ ಆಳಿಕೆಯಲ್ಲಿ ಕನ್ನಡ ನಾಡು ಮಾತ್ರವೇ ಅಡಕವಾಗಿದ್ದುದಲ್ಲ. ಅವನು ಯಾವ ಪಂಕ್ತಿಭೇದವೂ ಇಲ್ಲದೆ, ಅವುಗಳೊಳಗಿನ ಸರ್ವಮತೀಯ ಪ್ರಜಾವರ್ಗವನ್ನೂ ತನ್ನಾಳಿಕೆಯ ಎಲ್ಲ ಪ್ರಾಂತಗಳನ್ನೂ ಏಕ ರೀತಿಯಲ್ಲಿ ಪಾಲಿಸುತ್ತಿದ್ದನು. ಆದರೂ ನಾವಿಲ್ಲಿ ಪ್ರಕೃತಸಂದರ್ಭಕ್ಕನುವಾಗಿ ಕನ್ನಡ ನಾಡಿನ ರಾಜ್ಯಭರಣ ಕ್ರಮವನ್ನು ಮಾತ್ರವೇ ಗುರಿಯಲ್ಲಿರಿಸಿಕೊಂಡಿದ್ದೇವೆ. ಪರಂಪರಾಯಾತ ಕ್ರಮಕ್ಕನುವಾಗಿ ಪ್ರಮುಖ ರಾಜ್ಯಾಧಿಕಾರಿಗಳನ್ನು ಈ ಕೆಳಗೆ ಸೂಚಿತವಾದ ಭಿನ್ನಭಿನ್ನ ಶಾಸನಗಳಿಂದ ತಿಳಿದುಕೊಳ್ಳಬಹುದು.

ಕೊಣ್ಣೂರು ಶಾಸನ (ಕ್ರಿ.ಶ. ೮೬೧): '...ಶ್ರೀಮದಮೋಘವರ್ಷ ಶ್ರೀವಲ್ಲಭನರೇಂದ್ರ ದೇವಃ ಸರ್ವಾನೇವ ಯಥಾ ಸಂಬಧ್ಯಮಾನಕಾನ್ ರಾಷ್ಟ್ರಪತಿ ವಿಷಯಪತಿ ಗ್ರಾಮಕೂಟ ಯುಕ್ತಕ ನಿಯುಕ್ತಕಾಧಿಕಾರಿಕ ಮಹತ್ತರಾದೀನ್ ಸಮಾದಿಶತಿ ಅಸ್ತು ವಃ ಸಂವಿದಿತಂ. . . . . . . . . . . . . . . . . . . . . . . . . . . .'[1]—

ಸಂಜಾನ ಶಾಸನ (ಕ್ರಿ.ಶ. ೮೭೧): '. . . . ರಾಷ್ಟ್ರಪತಿ ವಿಷಯಪತಿ ಗ್ರಾಮಕೂಟ

---

1 ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೬.

ಯುಕ್ತಕ ನಿಯುಕ್ತಕಾಧಿಕಾರಿಕ ಮಹತ್ತರಾದೀನ್ ಸಮಾದಿಶತಿ. . . .'[1]

ಇದು ಪರಂಪರಾಯಾತವಾದ ರಾಜ್ಯಾಧಿಕಾರ ಕ್ರಮವೇ ಎಂಬುದನ್ನು ನಿರ್ಧರಿಸಿ ಕೊಳ್ಳಲಿಕ್ಕೆ ಆತನ ತಂದೆಯಾದ ಗೋವಿಂದರಾಜನ ರಾಧನಪುರ ಶಾಸನದೊಳಗಿನ ಆ ವಿಶಿಷ್ಟಾಂಶವನ್ನು ಕೆಳಗೆ ಕಾಣಿಸುತ್ತೇವೆ:

ಗೋವಿಂದರಾಜನ ರಾಧನಪುರ ಶಾಸನ (ಕ್ರಿ.ಶ. ೮೦೯) : 'ಶ್ರೀಮತ್ ಪ್ರಭೂತವರ್ಷಃ ಶ್ರೀ ವಲ್ಲಭನರೇಂದ್ರದೇವಃ ಕುಶಲೀ ಸರ್ವಾನೇವ ಯಥಾ ಸಂಬಧ್ಯಮಾನಕಾನ್ ರಾಷ್ಟ್ರಪತಿ ವಿಷಯ ಪತಿ ಗ್ರಾಮಕೂಟಾಯುಕ್ತಕ ನಿಯುಕ್ತಕಾಧಿಕಾರಿಕ ಮಹತ್ತರಾದೀನ್ ಸಮಾದಿಶತಿ. . .'[2]—

ಈ ಮೂರರಲ್ಲಿಯೂ ಕ್ರಮವಾಗಿ ತೋರುವ ರಾಜ್ಯಪರಿಪಾಲನಾಧಿಕಾರಿಗಳ ಹೆಸರು ಗಳೆಂದರೆ, ರಾಷ್ಟ್ರಪತಿ, ವಿಷಯಪತಿ, ಗ್ರಾಮಕೂಟ, ಆಯುಕ್ತಕ, ನಿಯುಕ್ತಕ—ಎಂಬ ಐದು. ಇವರು 'ಅಧಿಕಾರಿಕ ಮಹತ್ತರರು', ಎಂದರೆ ಅಧಿಕಾರಿಗಳೊಳಗೆ ಮೇಲುತರಗತಿ ಯವರು, ಎಂದು ತಾತ್ಪರ್ಯ. 'ಆದೀನ್' ಎಂದು ಮುಂದೆಯೇ ತೋರುವುದರಿಂದ, ಅವರೊಳಗೆ ಇನ್ನೂ ಹಲಮಂದಿ ಇದ್ದರೆಂಬುದು ವಿದಿತವಾಗುತ್ತಿದೆ. ಮಾತ್ರವಲ್ಲ, ಈ ಈ ಐದು ಮಂದಿ 'ಯಥಾ ಸಂಬಧ್ಯಮಾನ'ರು ಎಂದರೆ ನಿರಂತರವಾದ ಅನ್ಯೋನ್ಯಸಂಬಂಧ ವುಳ್ಳವರು ಎಂದು ಅರ್ಥ. ಭೂಮಿಯ ಕಂದಾಯ, ಸುಂಕ ಮೊದಲಾದ ತೆರಿಗೆಗಳನ್ನು ಇವರೇ ಪ್ರಜೆಗಳಿಂದ ಪಡಕೊಳ್ಳುವವರು. ಆದರೆ, ಈ ದಾನಶಾಸನಗಳನ್ನು ಪಡೆದವರಿಂದ ಅವುಗಳನ್ನು ಸ್ವೀಕರಿಸಬಾರದು ಎಂಬ ಅಂಶವು ಎಲ್ಲ ಶಾಸನಗಳಲ್ಲಿಯೂ ಸ್ಪಷ್ಟವಾಗಿ ತೋರುತ್ತಿದೆ. ಅಧಿಕಾರಿಗಳನ್ನುದ್ದೇಶಿಸಿ ಆಡುವ ಈ ಸೂಚನೆ ಸಂಜಾನ ಶಾಸನದ ಕಡೆಯ ಗದ್ಯಭಾಗದಲ್ಲಿ ಸ್ಫುಟವಾಗಿದೆ:

ಶುಂಕಂ ನ ಶುಷ್ಣ ಯಾಮಿ. . . . ಸರ್ವ ರಾಜಕೀಯಾನಾಮಹಸ್ತ
ಪ್ರಕ್ಷೇಪಣೀಯಃ ಆಚಂದ್ರಾರ್ಕಾರ್ಣವಕ್ಷಿತಿಸರಿತ್ಪರ್ವತಕಾಲೀನಃ ಪುತ್ರ
ಪೌತ್ರಾನ್ವಯ ಕ್ರಮೋಪಭೋಗ್ಯಃ . . .[3]—

ಇದರ ಅರ್ಥವನ್ನವಧರಿಸಿರಿ:

'ಈ ಸ್ಥಳದಿಂದ ನಾನು ಸುಂಕವನ್ನು ಸ್ವೀಕರಿಸುವುದಿಲ್ಲ. ಇದರೊಳಗೆ ಯಾವ ರಾಜಾಧಿಕಾರಿಗಳೂ ಕೈಹಾಕಬಾರದು. ದಾನಪಾತ್ರನಾದವನು ತನ್ನ ಪುತ್ರಪೌತ್ರಾದಿ ವಂಶ ಕ್ರಮವಿಡಿದು ಚಂದ್ರಸಮುದ್ರಾದಿಗಳಿರುವ ವರೆಗೆ ಈ ಭಾಗದಿಂದ ತೆರಲಿಕ್ಕಿದ್ದ ಬ್ರಹ್ಮದಾಯ ದೇವದಾಯಗಳನ್ನು ಸಲ್ಲಿಸುತ್ತಾ ಈ ದತ್ತಭಾಗವನ್ನು ಅನುಭವಿಸ ತಕ್ಕುದು.'

---

[1] ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೮.

[2] ರಾಧನಪುರ ಶಾಸನ, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೬.

[3] ಸಂಜಾನ ಶಾಸನ, ೫೫ನೆಯ ಶ್ಲೋಕದ ಹಿಂದಿರುವ ಗದ್ಯಭಾಗ, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೮

ಇದರಿಂದ ರಾಷ್ಟ್ರಪತ್ಯಾದಿ ಅಧಿಕಾರಿಗಳನ್ನು ಬೋಧಿಸಿದುದರ ಉದ್ದೇಶ ವಿದಿತವಾಗುತ್ತಿದೆ. ಸುಂಕವೇ ಮೊದಲಾದ ಯಾವ ಬಗೆಯ ತೆರಿಗೆಗಳನ್ನೂ ಅಜ್ಞಾನದಿಂದಾಗಿ ಈ ದಾನಭೂಮಿಯಿಂದ ಸ್ವೀಕರಿಸಬಾರದು ಎಂಬುದನ್ನು ಎಚ್ಚರಿಸುವುದೇ ಆ ಉದ್ದೇಶ. ಆದರಿಂದಲೆ 'ಅಸ್ತು ವಃ ಸಂವಿದಿತಂ' ಎಂದು ಅವರನ್ನುದ್ದೇಶಿಸಿ ಸೂಚಿಸಿದುದು.

ಈ ರಾಷ್ಟ್ರಪತಿ ಮೊದಲಾದವರನ್ನು ಈಗಿನ ಅಧಿಕಾರಿಗಳೊಡನೆ ಸಾಮಾನ್ಯವಾಗಿ ಹೀಗೆ ಹೋಲಿಸಬಹುದು :

| ರಾಷ್ಟ್ರಕೂಟ ರಾಜ್ಯಾಧಿಕಾರ ಸಂಸ್ಥಾಕ್ರಮ | ಆಧುನಿಕ ರಾಜ್ಯಾಧಿಕಾರ ಸಂಸ್ಥಾಕ್ರಮ |
|---|---|
| ೧. ರಾಷ್ಟ್ರಪತಿ | ೧. ಗವರ್ನರ್ ಅಥವಾ ವೈಸರಾಯಿ |
| ೨. ವಿಷಯಪತಿ | ೨. ಕಲೆಕ್ಟರ್ |
| ೩. ಗ್ರಾಮಕೂಟ | ೩. ತಹಶಿಲ್ದಾರ |
| ೪. ಯುಕ್ತಕ | ೪. ಶ್ಯಾನಭೋಗ ಅಥವಾ ಮಣೆಗಾರ |
| ೫. ನಿಯುಕ್ತಕ | ೫. ಪಟೇಲ |

ಇದು ಸಾಮಾನ್ಯವಾಗಿ ಹೋಲಿಸಿಕೊಳ್ಳುವುದಕ್ಕಾಗಿ ತೋರಿಸಿದುದು. ಆದರೆ ಈ ಉಭಯ ಸಂಸ್ಥೆಗಳೊಳಗಿನ ಅಧಿಕಾರಗಳೂ ಏಕರೀತಿಯವುಗಳು ಎಂದು ಭಾವಿಸಬಾರದು. ಈ ಎರಡು ಪುರಾತನಾಧುನಿಕ ಪದ್ಧತಿಗಳು ಭಿನ್ನಭಿನ್ನೋದ್ದೇಶಗಳಿಗನುವಾಗಿ ಸಾಗುವವುಗಳಾದುದರಿಂದ, ಆಯಾ ಅಧಿಕಾರಗಳ ಇತಿಮಿತಿ ಸ್ವರೂಪಾದಿಗಳೂ ಕೆಲನುಟ್ಟಿಗೆ ಭಿನ್ನಭಿನ್ನಗಳಾಗಿರಬಹುದು. ಆದಗೂ ಬಾಹ್ಯಕ್ರಮಗಳ ಹೋಲಿಕೆಯನ್ನು ಮಾತ್ರವೆ ಇಲ್ಲಿ ತೋರಿದುದಾಗಿದೆ.

## ರಾಷ್ಟ್ರಪತಿ

ಇನ್ನು, ಆ ಹಿಂದಿನ ಕ್ರಮದಂತೆ ಈ ಐದು ಮಂದಿ ಅಧಿಕಾರಿಗಳ ಉದ್ಯೋಗರೀತಿ ಹೇಗೆ ಇದ್ದಿರಬಹುದು ಎಂಬುದನ್ನೀಕ್ಷಿಸುವ. ಈ ನಿರೀಕ್ಷಣೆ ಎಂದರೆ ಹಿಂದಣ ಧರ್ಮಶಾಸ್ತ್ರದ ಆಧಾರವನ್ನಿಟ್ಟುಕೊಂಡು ವಿಸ್ತರಿಸುವುದಿಲ್ಲ. ಹಾಗೆ ಮಾಡಿದರೆ 'ತಲೆಗಿಂತ ದೊಡ್ಡ ಮುಂಡಾಸು' ಎಂಬಂತಾಗುವುದು. ಮೇಲಿಂದ ಮೇಲೆ ಮಾತ್ರವೆ ಅವನ್ನು ಸಂಗ್ರಹವಾಗಿ ಪರಾಂಬರಿಸುತ್ತೇವೆ: 'ರಾಷ್ಟ್ರ' ಎಂದರೆ, ಸಮ್ರಾಟ(ಚಕ್ರವರ್ತಿ)ನಾದವನ ಆಳಿಕೆಗೊಳಪಟ್ಟ ಇಡಿ ಭೂಭಾಗ. ಆ ಚಕ್ರಾಧಿಪತ್ಯ ಭೂಭಾಗವನ್ನು ಪ್ರಜಾವರ್ಗದವರೆಲ್ಲರ ಆನುಕೂಲ್ಯ ಪ್ರಾತಿಕೂಲ್ಯಗಳನ್ನರಿತು ಧಾರ್ಮಿಕತತ್ತ್ವಕ್ಕನುವಾಗಿ ರಾಜಪ್ರತಿನಿಧಿ ಎನ್ನಿಸಿ ಪಾಲಿಸುವಾತನೇ ರಾಷ್ಟ್ರಪತಿ. ಈ ಹೆಸರು ಆ ಅಧಿಕಾರಕ್ಕೆ ನಮ್ಮ ಹಿಂದಿನ ಅನೇಕ ಧರ್ಮಶಾಸ್ತ್ರ ಗ್ರಂಥಗಳಲ್ಲಿಯೂ ಏಕರೀತಿಯಾಗಿ ತೋರುವುದು. ಸ್ವತಃ ಚಕ್ರವರ್ತಿಯೇ ಈ ಅಧಿಕಾರವನ್ನು ನಡೆಯಿಸಬೇಕು. ನಿರಂತರವಾಗಿ ಈ ಅಧಿಕಾರ ಪ್ರವಣನಾಗಿರುವುದು ಸಾವಿರದೊಳಗೊಬ್ಬ ವಿಶಿಷ್ಟ ವ್ಯಕ್ತಿಗೆ ಒಂದು ವೇಳೆ ಸಾಧ್ಯವಾದರೂ ಅರಸರೆಲ್ಲರಿಗೂ ಸಾಧ್ಯವಾಗದು. ದೇವಯಜ್ಞ ಪಿತೃಯಜ್ಞಾ(ಶ್ರಾದ್ಧಾ)ದಿಗಳನ್ನು ಮನೆಯ

ಹಿರಿಯನಾದವನೇ ಸ್ವತಃ ನಡೆಯಿಸಬೇಕು. ಅದರಿಂದಲೆ, ಮನೆಯ ಮೇಲಾಳಿಗೆ 'ಯಜಮಾನ' ಎಂಬ ಹೆಸರು ರೂಢವಾಗಿದೆಯಲ್ಲವೆ ? ಅದು ಹಿಂದಿನ ಕಾಲದಲ್ಲಿಯೂ ಕೆಲವರಿಗೆ ಮಾತ್ರ ಸಾಧ್ಯವಾಗಿದ್ದರೂ ಇಂದು ಬರಿಯ ಗೊಡ್ಡು ಹೆಸರಾಗಿಬಿಟ್ಟಿದೆ, ಎನ್ನಿ. ಹೇಗೂ ಇರಲಿ. ಹೇಗೆ ಆ ಯಜ್ಞಾದಿಗಳನ್ನು ಮಾಡಿಸಲು ಪುರೋಹಿತನು ನಿಯಮಿತನಾದನೋ ಹಾಗೆ, ಈ ಸಾಮ್ರಾಜ್ಯಕಾರ್ಯಗಳನ್ನು ನಡೆಯಿಸಲು ರಾಜಪ್ರತಿನಿಧಿಯಾದ 'ರಾಷ್ಟ್ರಪತಿ' ಎಂಬ ಪ್ರಮುಖಾಧಿಕಾರಿ ನೆಲೆಗೊಂಡನು. ಅವನ ಅಧಿಕಾರಸ್ಥಾನ ರಾಜಧಾನಿಯ ಸಮೀಪದಲ್ಲೇ ಇದ್ದಿರಬೇಕೆಂದು ತೋರುತ್ತದೆ. ಇದು ಮತಾನುಸಾರವಾಗಿ ಬಂದ ಹೆಸರಲ್ಲ. ಇಡೀ 'ರಾಷ್ಟ್ರಕ್ಕೆ' ವಿಶಿಷ್ಟವಾದ ಒಂದು ಮತವಿಲ್ಲ. ಅದರೊಳಗಿನ ಭಿನ್ನ ಭಿನ್ನ 'ವಿಷಯ'ಗಳ ಮತಸಮೂಹವೇ ರಾಷ್ಟ್ರಮತ. ಇಂಥ ರಾಷ್ಟ್ರದ ಪಾಲನಾಧಿಕಾರಿಯೇ **'ರಾಷ್ಟ್ರಪತಿ'.**

## ವಿಷಯಪತಿ

'ವಿಷಯ' ಎಂದರೆ ದೇಶ ಎಂದು ಸಾಮಾನ್ಯವಾದ ಅರ್ಥ. ಆಚಾರವ್ಯವಹಾರಾದಿಗಳೆಲ್ಲ ಪ್ರಮುಖವಾಗಿ ಒಂದೇ ಭಾಷೆಯಿಂದ ನಡೆಯುವ ಒಂದೊಂದು ವಿಶಿಷ್ಟ ಭೂಭಾಗಕ್ಕೆ 'ವಿಷಯ' ಎಂಬ ಹೆಸರಾಗಿ ತೋರುತ್ತಿದೆ. ಅದರಿಂದಲೆ ಇರಬೇಕು, 'ಕವಿರಾಜಮಾರ್ಗ ಕಾರನು ಕನ್ನಡನಾಡಿನ ಪ್ರಮಾಣವನ್ನು ವಿಸ್ತರಿಸುವಲ್ಲಿ '. . . .ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಳಯ ವಿಲೀನ ವಿಶದ ವಿಷಯ ವಿಶೇಷಂ '(i, 36) ಎಂದು ಕನ್ನಡ ನಾಡನ್ನು ಗಡಿಯೊಡನೆ ವಿಭಾಗಿಸಿ ಕಾಣಿಸುತ್ತಾನೆ. ಇದರಿಂದ, 'ವಿಷಯ', 'ಜನಪದ' ಎಂದರೆ ಏಕಾರ್ಥಗಳಾಗಿ ಕಾಣುತ್ತಿವೆ. ನಾಗವರ್ಮನು ತನ್ನ 'ಛಂದೋಂಬುಧಿ'ಯಲ್ಲಿ ಕನ್ನಡಕ್ಕೆ ಮೀಸಲಾದ ಛಂದಸ್ಸನ್ನು 'ಕರ್ಣಾಟಕ ವಿಷಯಜಾತಿ' ಎನ್ನುತ್ತಾನಲ್ಲದೆ 'ಕರ್ಣಾಟಕ ರಾಷ್ಟ್ರಜಾತಿ' ಎಂದಿಲ್ಲ. ನಾಗವರ್ಮನ ಈ ಹೇಳಿಕೆ, ವಿಶಿಷ್ಟ ಭಾಷಾ ಪ್ರಾಂತಕ್ಕೇ 'ವಿಷಯ' ಎಂಬ ಹೆಸರಾಗಿರಬೇಕು ಎಂಬ ನನ್ನ ಆಶಯವನ್ನು ಮತ್ತಷ್ಟು ಸಮರ್ಥಿಸುತ್ತಿದೆ. ಅಂಥ ಇಡೀ 'ವಿಷಯ'ಕ್ಕೆ 'ಪತಿ'ಯಾಗಿರುವ, ಮತ್ತು 'ರಾಷ್ಟ್ರಪತಿ'ಗೆ ದ್ವಿತೀಯನಾಗಿರುವ ಅಧಿಕಾರಿಯ ಹೆಸರು 'ವಿಷಯಪತಿ' ಎಂದು.

ಇದರಿಂದ, ಕರ್ಣಾಟಕ, ದ್ರಾವಿಡ, ಆಂಧ್ರ, ಗುರ್ಜರ, ವಂಗ ಮೊದಲಾಗಿ ವಿಶಿಷ್ಟ ಭಾಷಾಸಾಹಿತ್ಯಗಳುಳ್ಳ ನಾಡುಗಳಿಗೆ 'ರಾಷ್ಟ್ರ' ಎಂಬ ಹೆಸರಲ್ಲ. 'ಕರ್ಣಾಟಕ ವಿಷಯ', 'ದ್ರಾವಿಡ ವಿಷಯ' ಮೊದಲಾಗಿ ಶಾಸ್ತ್ರೀಯ ನಾಮಗಳಿದ್ದುವು ಎಂದು ಗೊತ್ತಾಗುತ್ತಿದೆ.

## ಗ್ರಾಮಕೂಟ

'ಗ್ರಾಮಕೂಟ' ಎಂಬ ಪುರಾತನ ನಾಮದ ಅಧಿಕಾರಿ, ವಿಷಯಪತಿಯಿಂದಲೇ ಕೆಳಗಿನವನು. 'ಗ್ರಾಮಗಳ ಶಿಖರ(ಕೂಟ)ಪ್ರಾಯನಾದ ಮೇಲಾಳು' ಎಂಬುದನ್ನಿದು ವ್ಯಕ್ತವಾಗಿ ಸೂಚಿಸುತ್ತಿದೆ. ಆಯಾ ಗ್ರಾಮಗಳ ಪ್ರಮಾಣಾನುಸಾರವಾಗಿ ಒಬ್ಬನೋ ಹೆಚ್ಚೋ

'ಗ್ರಾಮಕೂಟ'ರು ಇದ್ದಿರಬಹುದು ; ಅಥವಾ ಹೇಗಿದ್ದರೂ, ಪ್ರತಿಯೊಂದು ಗ್ರಾಮಕ್ಕೆ ಒಬ್ಬನಂತೆ 'ಗ್ರಾಮಕೂಟ'ನನ್ನು ನಿಯಮಿಸುವ ಪದ್ಧತಿಯಾಗಿದ್ದಿರಲೂಬಹುದು. ಈ 'ಗ್ರಾಮಕೂಟ' ಎಂಬ ಅಧಿಕಾರಿಯ ಹೆಸರೇ, ಹಿಂದಣ ಕನ್ನಡ ಶಾಸನ, ಸಾಹಿತ್ಯಾದಿಗಳಲ್ಲಿ 'ಗಾವುಂಡ' ಎಂಬ ತದ್ಭವರೂಪವನ್ನೊಂದಿತ್ತು. ಆ 'ಗಾವುಂಡ', ಗೌಡ ಪದಗಳಿಗೆ ಪರಸ್ಪರ ಸಂಬಂಧವಿಲ್ಲವೆಂದೇ ನನ್ನ ಭಾವನೆ. ಯಾಕೆಂದರೆ, ಈ ಜಾತೀಯ ಸಂಬಂಧವಿಲ್ಲದ, ಹಿಂದಿನ ಆ 'ಗಾವುಂಡ' ಎಂಬ ಮನೆತನ ಹಿಡಿದು ಬಂದ ಹೆಸರುಳ್ಳವರು, ಕನ್ನಡ ನಾಡಿನೊಳಗೆ ಬ್ರಾಹ್ಮಣಾದಿಗಳಾದ ಎಲ್ಲಾ ಜಾತಿಗಳೊಳಗೂ ಇರುತ್ತಾರೆ. ಅದರಿಂದ, ಆ ಜಾತಿವಾಚಕ ಗೌಡಪದಕ್ಕೂ ಈ 'ಗಾವುಂಡ' (ಗಾಮುಂಡ ಅಥವಾ ಗ್ರಾಮಕೂಟ) ಪದಕ್ಕೂ ಏನೇನೂ ಸಂಬಂಧವಿಲ್ಲ. ಅದರಂತೆ ದೇಶಸಂಬಂಧವಿಡಿದು ಬಂದ ಸಂಸ್ಕೃತ ಭಾಷೆಯ 'ಗೌಡ ದೇಶ' (ಬಂಗಾಳ ದೇಶ) ಮತ್ತು 'ಗೌಡ ಭಾಷೆ' ಎಂಬವುಗಳೊಳಗಿನ 'ಗೌಡ' ಪದಕ್ಕೂ ಇದಕ್ಕೂ ಸಂಬಂಧವಿಲ್ಲ. ಅವುಗಳನ್ನು ವಿವೇಚಿಸುವುದಕ್ಕೆ ಇದು ಅಪ್ರಕೃತ ಸಂದರ್ಭವಾದುದರಿಂದ, ಪ್ರಕೃತವನ್ನನುಸರಿಸುವ.

ಈ 'ಗಾವುಂಡ' (ಗ್ರಾಮಕೂಟ) ಎಂಬ ಅಧಿಕಾರದೊಳಗೆ 'ಊರ್ಗಾವುಂಡ' ಎಂದೂ 'ನಾಟ್ಗಾವುಂಡ' ಎಂದೂ ಶಾಸನಾನುಸಾರವಾಗಿರುವ ಒಳಗವಲುಗಳು ಗೊತ್ತಾಗಿವೆ. 'ಊರ್ಗಾವುಂಡ'ವು 'ಪುರಗ್ರಾಮಕೂಟ' ಎಂಬುದರ ತದ್ಭವ. 'ನಾಟ್ಗಾವುಂಡ' ಎಂಬುದು 'ನಾಟ ಗ್ರಾಮಕೂಟ' ಎಂಬುದರ ರೂಪಾಂತರ. 'ಪುರ' ಪದವು ಪಟ್ಟಣವನ್ನು ಸೂಚಿಸಿದರೆ, 'ನಾಟ'ವು 'ಜನಪದ, ಅಥವಾ 'ವಿಷಯ' ಎಂಬ ಅರ್ಥವನ್ನು ಬೋಧಿಸುತ್ತಿದೆ. ಅದರಿಂದ, 'ಊರ್ಗಾವುಂಡ' ಪದವು, ಪುರವು ಯಾವ ಗ್ರಾಮದೊಳಗಿದೆಯೋ ಆ ಗ್ರಾಮದ ಗಾವುಂಡನನ್ನೂ, 'ನಾಟ್ಗಾವುಂಡ' ಪದವು ಜನಪದದೊಳಗಿನ ಎಷ್ಟು ಗ್ರಾಮಗಳು ಆತನ ಆಳಿಕೆಗೊಳಪಟ್ಟಿವೆಯೋ ಅಷ್ಟು ಗ್ರಾಮಗಳ ಗಾವುಂಡನನ್ನೂ ಸೂಚಿಸುವುದು ಎಂದು ಗೊತ್ತಾಗುತ್ತಿದೆ. ಅದರಿಂದಲೇ ಹಿಂದೆ ಈ 'ಗ್ರಾಮಕೂಟ'ನ ಅಧಿಕಾರದೊಳಗೆ ಒಂದೇ ಅಲ್ಲದೆ ಹೆಚ್ಚು ಗ್ರಾಮಗಳೂ ಸೇರಿದ್ದಿರಬಹುದು ಎಂದು ಶಂಕಿಸಿದುದು.

ಹಿಂದಿನ ನಮ್ಮ ಧರ್ಮಶಾಸ್ತ್ರಗಳ ಹಜ್ಜೆವಿಡಿದು ರೂಪಿಸಿದ ಈ ಮೂರು ಅಧಿಕಾರವಾಚಕ ಪದಗಳೂ ಕ್ರಮವಾಗಿ 'ರಾಷ್ಟ್ರ', 'ವಿಷಯ', 'ಗ್ರಾಮ' ಎಂಬ ದೇಶಸಂಬದ್ಧಗಳಾದ ಪದಗಳನ್ನೊಂದಿಯೇ ರೂಪಿಸಿರುವುದನ್ನು ಭಾವಿಸಬೇಕು. ಉಳಿದ 'ಯುಕ್ತಕ', 'ನಿಯುಕ್ತಕ' ಎಂಬವರು ಇವರೊಡನೆ ಯೋಜನೆ(ಕೂಟ)ಗೊಂಡು ಮತ್ತು ನಿಯೋಜನೆ (ಅಪ್ಪಣೆ)ಗೊಂಡು ವರ್ತಿಸುವ ಅಧಿಕಾರಿಗಳು ಎಂದು ಭಾಸವಾಗುತ್ತಿದೆ. ಆ ಹೆಸರುಗಳಲ್ಲಿ ವ್ಯಕ್ತವಾಗಿ ದೇಶವಾಚಕ ಪದಗಳು ಸೇರಿಲ್ಲ. ಅದರಿಂದ, ಕಡೆಯ ಅವರು ಹಿಂದಿನ ಪ್ರಮುಖರಾದ ದೇಶಸಂಬದ್ಧಾಧಿಕಾರಿಗಳಿಗೆ ಆಯಾ ಸಂದರ್ಭಗಳಲ್ಲಿ ನೆರವಾಗುವ ಅಧಿಕಾರಿಗಳೆಂಬುದು ವಿದಿತವಾಗುತ್ತಿದೆ. ಈ ಸಂಗತಿ ಹಾಗಿರಲಿ ; ಹಿಂದಿನ ಮೂರು ಮಂದಿ ಅಧಿಕಾರಿಗಳ ಕಡೆಯ ಪದಗಳು ಕ್ರಮವಾಗಿ 'ಪತಿ', 'ಪತಿ' 'ಕೂಟ' ಎಂದರೆ 'ಮೇಲಾಳು' ಎಂಬ ಅರ್ಥದಾಯಕವಾಗಿರುವುದರಿಂದ, ತಂತಮ್ಮ ಆಳಿಕೆಯ ಕಾರ್ಯ

ಗಳಲ್ಲಿ ಅವರೇ 'ಪತಿ'ಗಳು ಅಥವಾ 'ಕೂಟಪುರುಷರು' ಎಂಬ ತಾತ್ಪರ್ಯವು ಸೂಚಿತವಾಗುತ್ತಿದೆ. ಈ ವಿಷಯವನ್ನು ಪರಿಭಾವಿಸಿದಲ್ಲಿ 'ಗ್ರಾಮಕೂಟ' ಎಂಬುದರ ತುದಿಯ ಪದವನ್ನು ಎತ್ತಿಕೊಂಡೇ ಆದಿಯಲ್ಲಿ 'ರಾಷ್ಟ್ರಕೂಟ' ಎಂಬ ಈ ರಾಜಕುಲನಾಮವು ರೂಪಿತವಾಗಿರಬಹುದೆಂದು ಭಾವಿಸಬಹುದು.

## ಯುಕ್ತಕ, ನಿಯುಕ್ತಕರು

'ಯುಕ್ತಕ', 'ನಿಯುಕ್ತಕ' ಎಂಬ ಪದಗಳಿಂದ ಅವರ ಉದ್ಯೋಗ ಪದ್ಧತಿ ಯಾವುದೆಂಬುದು ವಿಶದವಾಗುವುದಿಲ್ಲ. ಆದರೂ ಕಡೆಯಲ್ಲಿಯೇ ಅವರ ಹೆಸರುಗಳಿರುವುದರಿಂದ, ಮತ್ತು 'ಯಥಾ ಸಂಬಂಧ್ಯಮಾನಾನ್' ಎಂದು ವಿಶದವಾಗಿ ತೋರುವುದರಿಂದ, ಆ 'ರಾಷ್ಟ್ರಪತಿ' ಮುಂತಾದವರ ವರ್ಗದಲ್ಲಿ ಅವರು ತುದಿಯವರೆಂಬುದು ನಿಶ್ಚಿತವಾಗುತ್ತಿದೆ. 'ನಿಯುಕ್ತಕ' ಎಂಬುದು ನೀತಿಶಾಸ್ತ್ರದಲ್ಲಿ ನಿಪುಣರಾಗಿದ್ದು ಇತರ ರಾಜ್ಯಗಳಲ್ಲಿ ರಾಯಭಾರಿಗಳಾಗಿ ನಿಯೋಜಿಸಲ್ಪಡುವ 'ನಿಯೋಗಿ'ಗಳಾಗಿರಬಹುದೋ ಎಂದು ತೋರುತ್ತಿದೆ. ಹೇಗೂ ಇರಲಿ; ಈ ಐವರನ್ನೂ ಹಿಂದೆ ದೃಷ್ಟಾಂತಿಸಿದ ಮೂರು ಶಾಸನಗಳ ಗದ್ಯಭಾಗಗಳಲ್ಲಿಯೂ 'ಆಧಿಕಾರಿಕ ಮಹತ್ತರ' ಎಂದು ಕರೆದುದರಿಂದ, ಇವರು ಪ್ರಮುಖರಾಗಿದ್ದ ಅಧಿಕಾರಿಗಳೆಂಬಲ್ಲಿ ಸಂಶಯವಿಲ್ಲ. ಆ 'ಮಹತ್ತರ' ಪದದ ಮುಂದೆ ಆ ಎಲ್ಲ ಶಾಸನಗಳಲ್ಲಿಯೂ 'ಆದೀನ್' ಎಂದಿರುವುದರಿಂದ, ಇನ್ನೂ ಹಲವು ಅಧಿಕಾರಿಗಳು ಆ ಸಾಲಿನಲ್ಲಿದ್ದರೆಂಬುದು ಗೊತ್ತಾಗುತ್ತಿದೆ. ಕೆಲವು ಕನ್ನಡ ಶಾಸನಗಳಲ್ಲಿ 'ನಾಳ್ಪೆರ್ಗಡೆ' (ನಾಡಿನ ಹೆಗ್ಗಡೆ) ಎಂದೂ 'ನಾಳ್ಪ್ರಭು' ಎಂದೂ ಕಾಣುತ್ತಿದೆಯಷ್ಟೆ: ಇವು ಚಿಕ್ಕ ಚಿಕ್ಕ ಸಾಮಂತ ಸಮಾನರಾದ ಪಾಳೆಯಗಾರರ ಅಧಿಕಾರನಾಮಗಳಾಗಿದ್ದರೂ ಇರಬಹುದು; ಅಥವಾ ಹಿಂದೆ ಸೂಚಿಸಿದ 'ನಾಳ್ಗಾವುಂಡ' ಎಂಬುದರ ನಾಮಾಂತರಗಳಿರಲೂಬಹುದು.

## 'ಮಹಾಜನ'ವೂ ಅದರ ಅಧಿಕಾರ ಸ್ವರೂಪಗಳೂ

ಇಡೀ ದೇಶದ ಅಧಿಕಾರಸಂಸ್ಥೆ ಸಾಂಗವಾಗಿ ತಡೆತೊಡಕುಗಳಿಲ್ಲದೆ ಸಾಗಬೇಕಾದರೆ ಬರಿಯ ಅಧಿಕಾರವರ್ಗಮಾತ್ರದಿಂದ ಸಾಧ್ಯವಲ್ಲ; ಹಳ್ಳಿಹಳ್ಳಿಗಳಲ್ಲಿ ಊರೂರುಗಳಲ್ಲಿ ಹಬ್ಬಿಹರಡಿದ ಪ್ರಜಾಸಮೂಹವು ಸುಸಂಸ್ಕೃತವಾಗಿರಬೇಕು.[1] ಹಾಗೆ ಸುಸಂಸ್ಕೃತವಾಗಿದ್ದ ಪ್ರಜಾವರ್ಗವು ಗ್ರಾಮಗ್ರಾಮಗಳಲ್ಲಿ ತನ್ನದೇ ಆದ ಒಂದೊಂದು ಸ್ವತಂತ್ರಸಂಸ್ಥೆಯನ್ನು ನೆಲೆಗೊಳಿಸುತ್ತಿದ್ದುದು ಶಾಸನಗಳಿಂದ ಗೊತ್ತಾಗುತ್ತಿದೆ. ಆ ಸಂಸ್ಥೆಗೆ 'ಮಹಾಜನ' ಎಂಬ ಹೆಸರು. ಹೆಸರಿನಿಂದಲೇ ಅದು ಪ್ರಜಾಸಂಸ್ಥೆ ಎಂದು ಸೂಚಿತವಾಗುತ್ತಿದೆ. ಅದಕ್ಕೆ ಆಗಿನ ಸರಕಾರದ ಸಹಾಯವೂ ಇದ್ದಂತೆ ತಿಳಿದುಬರುತ್ತಿದೆ. ಎಲ್ಲದಕ್ಕೂ ಹೆಚ್ಚಿನದೆಂದರೆ, ಆ ಸಂಸ್ಥೆಯಲ್ಲಿ ನಿಯ

[1] ನೃಪತುಂಗನ ಆಳಿಕೆಯಲ್ಲಿ ಆ ಪ್ರಜಾಸಮೂಹವು ಯಾವ ಬಗೆಯ ಆಂತರಿಕಶಕ್ತಿಯುಳ್ಳುದಾಗಿತ್ತು ಎಂಬುದನ್ನು 'ಕವಿರಾಜಮಾರ್ಗ'ಕಾರನು ಸಂಗ್ರಹವಾಗಿಯಾದರೂ ಮುಂದಟ್ಟಾಗುವಂತೆ ವಿಸ್ತರಿಸಿದ್ದಾನೆ. ಅದನ್ನು ಮುಂದಿನ ಭಾಗದಲ್ಲಿ ಸೂಚಿಸುತ್ತೇವೆ.

ಮಿತ ಸದಸ್ಯರಿದ್ದು ಅವರ ಒಪ್ಪಿಗೆಯಂತೆ ಕಾರ್ಯಕಲಾಪಗಳು ಸಾಗಿಸಲ್ಪಡುತ್ತಿದ್ದ ವೆಂಬುದು. ಈ ಹೇಳಿಕೆಯನ್ನು, ನೃಪತುಂಗನ ಕಾಲದ ಭಿನ್ನಭಿನ್ನ ಶಾಸನೋಕ್ತಿಗಳನ್ನು ಮುಂದಿಟ್ಟುಕೊಂಡೇ ಪರಾಂಬರಿಸಿರಿ:

'. . . .ಎಟ್ಟಿಪ್ಪಣಿಸೆಯ ನಾಲ್ವದಿಂಬರ್ ಮಹಾಜನಮುಂ ಮೋನಿಗೊರವರುಂ. . . .'[1]

'. . . .ನೀರ್ಗುಂಡದ ನೂಱಿರ್ಪದಿಂಬರುಂ ಮಹಾಜನದ ಕಾಲಂ ಕರ್ಚ್ಚಿ. . . .'[2]

'. . . .ಶ್ರೀವೂರದ ರವಿಕಯ್ಯಂ ಮೊದಲಾಗೆ ಇರ್ಛ್ನೂರ್ವ್ವರುಂ ಮಹಾಜನದ ಕಾಲಂ ಕರ್ಚ್ಚಿ. . . .'[3]

'. . . .ಬಲ್ಲವರಸರ್ ರೋಣದ ಮಹಾಜನಕೆ. . . . . ನ ಪು(ಪೂ)ಜ್ಯಮುಂ ಕೊಟ್ಟು . . . .'[4]

ಇವುಗಳೊಳಗೆ ಆದಿಯ ಮೂರು ಶಾಸನಗಳಲ್ಲಿಯೂ ಕ್ರಮವಾಗಿ ನಲುವತ್ತು, ನೂರಿಪ್ಪತ್ತು, ಇನ್ನೂರು ಮಂದಿ ಆಯಾ 'ಮಹಾಜನ'ದ ಸದಸ್ಯರಿದ್ದುದು ವ್ಯಕ್ತವಾಗಿದೆ. ಮೂರನೆಯದರಲ್ಲಿ 'ಶ್ರೀವೂರದ ರವಿಕಯ್ಯಂ ಮೊದಲಾಗೆ......' ಎಂದಿರುವುದರಿಂದ ಶ್ರೀಪುರದ (ಸಿರೂರು) ರವಿಕಯ್ಯನೇ ಪ್ರಥಮ ಸದಸ್ಯನಾಗಿ ಅಥವಾ ಅಧ್ಯಕ್ಷನಾಗಿ ಇದ್ದಿರಬೇಕೆಂಬಲ್ಲಿ ಸಂಶಯವಿಲ್ಲ. ಇದರಿಂದ 'ಮಹಾಜನ'ದ ಕಾರ್ಯಕಲಾಪಗಳೆಲ್ಲವೂ ಅದರ ಸದಸ್ಯರ ಒಪ್ಪಿಗೆಯಂತೆ ನಡೆಯುತ್ತಿದ್ದುವು ಎಂದು ಭಾಸವಾಗುತ್ತಿದೆ. ಬಹುಶಃ 'ಮಹಾಜನ' ಸದಸ್ಯರೊಳಗೆ ಬಹಳ ಮಂದಿಯ ಅನುಮತಿಯೇ ಸರ್ವಾನುಮತವಾಗಿ ನಿರ್ಣೀತವಾಗುತ್ತಿತ್ತು. ಆ ನಿರ್ಣಯವನ್ನು ರಾಜನ, ಅಥವಾ ರಾಜಪ್ರತಿನಿಧಿಯಾದ ಅಧಿಕಾರಿಯ, ಒಪ್ಪಿಗೆಯನ್ನು ಪಡೆದು ಅಧ್ಯಕ್ಷನು ಕಾರ್ಯರೂಪವಾಗಿ ನಡೆಯಿಸುತ್ತಿದ್ದಿರಬೇಕು.

ಮೇಲೆ ದೃಷ್ಟಾಂತಿಸಿದ ಆದಿಯ ಶಾಸನದಲ್ಲಿ ತೋರುವ 'ಮಹಾಜನ'ವೂ 'ಮೋನಿ (ಮೌನಿ) ಗೊರವ'ರೂ ಒಟ್ಟುಗೂಡಿ ಅಲ್ಲಿಯ 'ಆದಿತ್ಯ ಭಟಾರರ ಸ್ಥಾನ'ವನ್ನು—ಎಂದರೆ ಆದಿತ್ಯ ದೇವಾಲಯವನ್ನು—'ರಕ್ಷಿಸಲ್ ಪೆರ್ಚ್ಚಿ (ರ್ಚಿ)ಸಲ್ ಇವರೇ ಸಮರ್ಥರೆಂದು ಗೋಕರ್ಣ ಪಂಡಿತ ಭಟಾರರ್ಗೆ........ಕಾಲಂಕರ್ಚ್ಚಿ (ಕಾಲುದೊಳೆದು) ಕೊಟ್ಟರ್' ಎಂದು ತೋರುತ್ತಿದೆ.

'ಮಹಾಜನ' ಎಂದರೆ ನಾಡಿನ ನಾನಾ ಬಗೆಯ ಉದ್ಧಾರಕಾರ್ಯದಲ್ಲಿ ನೆರವಾಗುವ

---

[1] ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೭, ಪುಟ ೨೦೧, ಅಮೋಘವರ್ಷನ ಕಾಲದ ಮಂತ್ರವಾಡಿ ಶಾಸನ (ಕ್ರಿ.ಶ. ೮೬೫).

[2] ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೬, ಪುಟ ೯೮, ಅಮೋಘವರ್ಷನ ಕಾಲದ ನೀಲಗುಂದ ಶಾಸನ (ಕ್ರಿ.ಶ. ೮೬೬).

[3] ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೭, ಪುಟ ೨೦೭, ಅಮೋಘವರ್ಷನ ಕಾಲದ ಸಿರೂರು ಶಾಸನ (ಕ್ರಿ.ಶ. ೮೬೬).

[4] ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೩, ಪುಟ ೧೭೬, ಅಮೋಘವರ್ಷನ ಕಾಲದ ರೋಣ ಶಾಸನ (ಕ್ರಿ.ಶ. ೮೭೪ ?).

ಸಂಸ್ಥೆ. ಅದರೊಡನೆ ನೆರವಾಗಬೇಕಾದ ಈ 'ಮೋನಿಗೊರವ'ರು ಲೋಕಪೂಜ್ಯರಾಗಿರಬೇಕೆಂದೂ ಅವರದೂ ವಿಶಿಷ್ಟವಾದೊಂದು ಸಂಸ್ಥೆ ಇರಬೇಕೆಂದೂ ಭಾವಿಸಬಹುದು. ಮಂತ್ರವಾಡಿಯ ಶಾಸನದ ಕಡೆಯ ಭಾಗವನ್ನೀಕ್ಷಿಸಿರಿ :

> ಈ ಸ್ಥಾನಮನಾಳ್ವ ಗೊರವರ್ ಅಖಂಡಿತ ಬ್ರಹ್ಮಚಾರಿಯಪುದು ಬ್ರಹ್ಮಚರ್ಯ ಹೀನರನೀ ಸಮಯದ ಗೊರವರ್ಕಳ್ ಕಳೆವೊರ್ ಈ ಪದ್ಧತಿಯಂ ಶಿಲಾಲೇಖೆ ಮಾಡಿ ನಿಱಿಸಿದರ್ ಪಂಡಿತ ಭಟಾರರ್....

ಇದರಿಂದ ಆಗಿನ 'ಗೊರವ'ರೆಂಬವರ ಅಧಿಕಾರವೇನೆಂಬುದು ಸ್ಫುಟವಾಗುತ್ತಿದೆ. 'ಸ್ಥಾನ' ಎಂದರೆ ದೇವಾಲಯ ಎಂಬುದೇ ರೂಢವಾದ ಅರ್ಥ. ದೇವಸ್ಥಾನ ಎಂದು ಹೇಳುವುದು ಆವಶ್ಯಕವಿದ್ದಿಲ್ಲ. ಈ ಶಾಸನಭಾಗದ ತಾತ್ಪರ್ಯ ಹೀಗೆ:

> 'ಈ ಎಟ್ಟಿಪ್ಪಣಿಸೆಯ ದೇವಾಲಯವನ್ನಾಳುವ ಮೋನಿಗೊರವರು ಅಖಂಡಿತ ಬ್ರಹ್ಮಚಾರಿಗಳು. ತಮ್ಮಂತೆ ಬ್ರಹ್ಮಚರ್ಯವನ್ನಾಚರಿಸುವವರನ್ನೇ—ಎಂದರೆ ಅಂಥ ಗೊರವ ವರ್ಗದ ವಿಶಿಷ್ಟ ವ್ಯಕ್ತಿಗಳನ್ನೇ—ದೇವಾಲಯವನ್ನಾಳುವ ಅಧಿಕಾರಿಗಳನ್ನಾಗಿ ಆರಿಸುವುದು ಅವರ ಪದ್ಧತಿ. ಅದಕ್ಕೆ ವಿರುದ್ಧವಾಗಿ, ಅಖಂಡಿತಬ್ರಹ್ಮಚರ್ಯರಹಿತರಾಗಿದ್ದವರನ್ನು ಈ ಸಮಯದ ಗೊರವರು ಕಳೆದುಬಿಡುತ್ತಿದ್ದರು. ಅದನ್ನು ಈ ಗೋಕರ್ಣ ಪಂಡಿತ ಭಟಾರರು ತಮ್ಮ ವರ್ತನೆಯಿಂದ ನೆಲೆಗೊಳಿಸಿದರು.'

ಮಾತಿದು, ಗೊರವ ಸದಸ್ಯರ ಮತವೇ ದೇವಾಲಯಾಚಾರ ವಿಚಾರದಲ್ಲಿ ಪ್ರಧಾನವಾಗಿತ್ತು ಎಂಬುದನ್ನು ನಿಸ್ಸಂಶಯವಾಗಿ ಸ್ಥಾಪಿಸುತ್ತಿದೆ. ಮೇಲೆ ದೃಷ್ಟಾಂತಿಸಿದ ನಾಲ್ಕರೊಳಗೆ ಮೊದಲಿನ ಶಾಸನದಲ್ಲಿಯ 'ಮಹಾಜನ'ವು ದಾನಕರ್ತೃ; ಮತ್ತಿನ ಮೂರರಲ್ಲಿ ಆಯಾ 'ಮಹಾಜನ'ಗಳು ದಾನಗಳನ್ನು ಪಡೆದುಕೊಂಡವುಗಳು. ಇದರಿಂದ, ಭೂಮ್ಯಾದಿ ದಾನವನ್ನೆಸಗಿ ಆಯಾ ಉತ್ತಮ ಕಾರ್ಯಗಳನ್ನು ಅವರಿಂದ ಮಾಡಿಸುವ ಮತ್ತು ಹೊರಗಣ ಶ್ರೀಮಂತರಿಂದ ದಾನಗಳನ್ನು ಪಡೆದು ಆ ಸೊತ್ತನ್ನು ಆಯಾ ಕಾರ್ಯಗಳಲ್ಲಿ ವಿನಿಯೋಗಿಸುವ ಎರಡೂ ಅಧಿಕಾರವು ಆ 'ಮಹಾಜನ'ಕ್ಕೆ ಇದ್ದುದೆಂದು ಸಿದ್ಧವಾಗುತ್ತಿದೆ. ಆ 'ಮಹಾಜನ'ವೂ 'ಮೋನಿಗೊರವ'ರೂ ಗೋಕರ್ಣ ಭಟಾರರ 'ಕಾಲಂ ಕಟ್ಟಿ', ಎಂದರೆ ಕಾಲನ್ನು ತೊಳೆದು, ದಾನಕೊಟ್ಟವರಷ್ಟೆ. ಇಲ್ಲಿ ಗೋಕರ್ಣಪಂಡಿತನೆಂದರೆ ಬ್ರಾಹ್ಮಣ ವರ್ಣದವನು, ಮಹಾವಿದ್ವಾಂಸನು; ಅಂಥ ಪೂಜ್ಯವ್ಯಕ್ತಿಯನ್ನು ಹಾಗೆ ಮನ್ನಿಸಿದುದು ತಕ್ಕುದೇ ಎನ್ನುವ. ಆದರೆ, ಮತ್ತಿನ ಎರಡು ಶಾಸನಗಳಲ್ಲಿ, ಕ್ರಮವಾಗಿ ನೂರಿಪ್ಪತ್ತು ಮಂದಿ ಮತ್ತು ಇನ್ನೂರು ಮಂದಿ ವ್ಯಕ್ತಿಗಳು 'ಮಹಾಜನ'ದ 'ಕಾಲಂ ಕಚ್ಚಿ' ಮನ್ನಿಸಿ ಭೂಮಿಗಳನ್ನು ಧಾರೆಯೆರೆದುಕೊಟ್ಟಂತೆ ತೋರುತ್ತಿದೆ. ಹೀಗೆ ಎರಡೂ 'ಮಹಾಜನ'ದೊಳಗಿನ ಮುನ್ನೂರ ಇಪ್ಪತ್ತು ಮಂದಿ 'ಮಹಾಜನ' ಸದಸ್ಯರಲ್ಲಿ ಬ್ರಹ್ಮ ಕ್ಷತ್ರ ವೈಶ್ಯರೆಂಬ ತ್ರಿವರ್ಣದವರೂ ಸೇರಿದ್ದರೆಂದೇ ನನ್ನ ಭಾವನೆ. ನನ್ನ ಈ ಭಾವನೆಯೇ ಸರಿಯಾಗಿದ್ದರೆ, 'ಕಾಲಂ ಕಚ್ಚಿ'ಸಿಕೊಳ್ಳುವ, ಎಂದರೆ ಕಾಲನ್ನು ತೊಳೆಯಿಸಿಕೊಳ್ಳುವ, ಅಧಿಕಾರವು, ವರ್ಣ

ಭೇದದ ತೊಡಕಿಲ್ಲದೆ, ಆ 'ಮಹಾಜನ' ಸಂಸ್ಥೆಯವರಿಗೆಲ್ಲ ಮೀಸಲಾಗಿದ್ದಂತೆ ಭಾಸವಾಗುತ್ತಿದೆ. ಹಾಗೆ 'ಮಹಾಜನ'ದ ಕಾಲ್ಗೊಳೆದು ದಾನ ಮಾಡುವವರಲ್ಲಿ ಮೇಲಿನ ಬ್ರಾಹ್ಮಣಾದಿ ವರ್ಣತ್ರಯವೂ ಇದ್ದಂತೆ ತೋರುತ್ತಿದೆ. ಈಗ ಬೇರೂರಿಹೋದ ಜಾತಿಭೇದವನ್ನೇ ಮುಂದುಮಾಡಿ ಮತ್ಸರಾಗ್ನಿಗೆ ತುತ್ತಾಗುವವರು, ಮೊದಲು ಈ 'ಮಹಾಜನ ಸಂಸ್ಥೆ'ಯನ್ನು ಪೂರ್ವಚಾರಿತ್ರಿಕ ದೃಷ್ಟಿಯಿಂದ ಕೂಲಂಕಷವಾಗಿ ಪರಾಂಬರಿಸಬೇಕೆಂದು ಪ್ರಾರ್ಥಿಸುತ್ತೇವೆ. ಈ 'ಮಹಾಜನ'ದ ಹೆಚ್ಚಿನ ವಿವೇಚನೆ ನಮ್ಮ ಪ್ರಕೃತ ಸಂದರ್ಭಕ್ಕೆ ಮೀರಿದುದಾದ ಕಾರಣ ಮುಂದುವರಿಯುವ.

## ಗೊರವರು

ಈ 'ಗೊರವ'ರೆಂದರೆ ಯಾರು? ಈ 'ಸ್ಥಾನಮುನಾಳ್ವ ಗೊರವರ್' ಎಂಬ ಹಿಂದಿನ ಶಾಸನಸ್ಥವಾದ ಮಾತಿನಿಂದ ಇವರ ಪರಿಚಯ ಒಂದಿಷ್ಟು ಹೊಳೆಯುತ್ತಿದೆ. ಇವರು ದೇವಾಲಯಗಳನ್ನು ಮತಮಾರ್ಗಕ್ಕನುವಾಗಿ ನಡೆಯಿಸುವವರೆಂಬುದು ಇಲ್ಲಿ ವಿಶದವಾಗುವುದು. ದೇಶಕ್ಕೂ, ವಿಶೇಷವಾಗಿ, ಆಳುವ ಅರಸನಿಗೂ ಮತವಿಚಾರವನ್ನು ಬೋಧಿಸಿ ನಡೆಯಿಸುವ ಗುರುಗಳೇ ಇವರು. ಈ ಗುರುಪದವೇ ತದ್ಭವವಾಗಿ 'ಗೊರವ' ಎಂದಾಗಿರಬೇಕು. ಈ ಭಾವನೆ 'ಕವಿರಾಜಮಾರ್ಗ'ದ ಈ ಕೆಳಗಿನ ಪದ್ಯದಿಂದ ಮತ್ತಿಷ್ಟು ದೃಢವಾಗುತ್ತಿದೆ:

ನೃಪನುಮಂ ಪ್ರಜೆಯುಮಂ ಪರಿವಾರಮುಮಂ ಮಹಾ
ಕೃಪೆಯಿನಾ ಗೊರವರುಂ ಸುರರುಂ ಗುಣವೃದ್ಧರುಂ
ವಿಪುಳರಾಗಪರರಾಗಿಸುಗೆಂದು ಸಮುಚ್ಚಯ
ಕ್ಕುಪಚಿತೋರುಗುಣಮುಂ ಮಿಗೆ ಪೇೞ್ಗೆ ಕವೀಶ್ವರರ್— (i, 132)

ಇದು ಕ್ರಮವಾಗಿ ವಿಕಲ್ಪ ಸಮುಚ್ಚಯಯುಗಳ ಕ್ರಮದೋಷಗಳನ್ನು ತಿದ್ದಿ ಶುದ್ಧವಾಗಿ ಮಾರ್ಪಡಿಸಿದ ಪದ್ಯ. ಆ ದೋಷಯುಕ್ತವಾದ ಪದ್ಯಭಾಗ ಹೀಗಿದೆ:

ದೇವರುಂ ಗೊರವರುಂ ಗುಣವೃದ್ಧರನಾರತಂ
ಕಾವರಕ್ಕರಸನಂ ಪ್ರಜೆಯಂ ಪರಿವಾರಮಂ— (i, 131)

ಹೀಗೆ ಬರೆದಲ್ಲಿ 'ದೋಷಮಿದಗ್ಗಳಂ' ಎನ್ನುತ್ತಾನೆ. ಇಲ್ಲಿಯ ಕ್ರಮದೋಷಕ್ಕನುವಾಗಿ ದೇವ(ಸುರ)ರು ಅರಸನನ್ನೂ, ಗೊರವರು ಪ್ರಜೆಯನ್ನೂ, ಗುಣವೃದ್ಧರು ಪರಿವಾರವನ್ನೂ ನೀತಿಬೋಧೆಯಿಂದ ಕಾಯುವವರು ಎಂಬ ಅರ್ಥವಾಗಿಬಿಡುತ್ತಿದೆ. ಪದ್ಧತಿ ಹಾಗಲ್ಲವೆಂಬುದನ್ನು ತಿದ್ದಿ ಕಾಣಿಸಿದುದೇ ಹಿಂದಿನ ಪದ್ಯ. ಅದಕ್ಕನುವಾಗಿ, "ನೃಪನನ್ನು ಗೊರವರು, ಪ್ರಜಾವರ್ಗವನ್ನು ಸುರರು, ಪರಿವಾರವನ್ನು ಗುಣವೃದ್ಧರು 'ವಿಪುಳರಾಗಪರರಾಗಿಸುಗೆ', ಎಂದರೆ 'ಆನಂದಯುತರನ್ನಾಗಿಮಾಡಲಿ'", ಎಂದು ಅರ್ಥ. ಇದರಿಂದ, ಆಳುವ ರಾಜನಿಗೂ ಅವನ ಮನೆತನಕ್ಕೂ ಮತಾಚಾರಗಳನ್ನು ಬೋಧಿಸುವ ಕುಲಗುರುಗಳೇ ಈ 'ಗೊರವರು' ಎಂಬುದು ತಾತ್ಪರ್ಯವಾಗುತ್ತಿದೆ.

ಈ ಸಂದರ್ಭದಲ್ಲಿ ಚಾರಿತ್ರಿಕದೃಷ್ಟಿಗನುವಾಗಿ ಇದೊಂದು ಸಂಗತಿಯನ್ನು ಭಾವಿಸ ಬೇಕು. ಈಗ ತಿಳಿದುಬಂದಂತೆ ರಾಷ್ಟ್ರಕೂಟ ಮೂರನೆಯ ಗೋವಿಂದರಾಜನ ಅಥವಾ ಮಗನಾದ ನೃಪತುಂಗನ ಕಾಲದಲ್ಲಿ, ಎಂದರೆ ಕ್ರಿ.ಶ. ೮ ಅಥವಾ ೯ನೆಯ ಶತಮಾನಗಳ ಮಧ್ಯದಲ್ಲಿ, ಶ್ರೀ ಶಂಕರಾಚಾರ್ಯರು ಸಂನ್ಯಾಸವನ್ನು ಸ್ವೀಕರಿಸಿ ಶೃಂಗೇರಿಯೇ ಮೊದಲಾದೆಡೆ ಗಳಲ್ಲಿ ಮಠಗಳನ್ನು ಸ್ಥಾಪಿಸಿ, ಜಗದ್ಗುರುತ್ವವನ್ನು ಕೈಕೊಂಡರು. ಹಲವುಂದಿ ರಾಜಾಧಿ ರಾಜರೂ ಅವರ ಶಿಷ್ಯರಾಗಿದ್ದರು. ಆ ಪೂರ್ವದಲ್ಲಿ ಮತ್ತು ಸಂಧಿಕಾಲದಲ್ಲಿ ಸಂನ್ಯಾಸಿಗಳಿಗೆ ಅದೊಂದು 'ಪೀಠ'ವಿದ್ದಿಲ್ಲ. ಅರಸರಿಗೆ ಕುಲಗುರುಗಳಾಗಿ, ದೇವಾಲಯಾದಿಗಳಿಗೆ ಮಾರ್ಗದರ್ಶಕರಾಗಿ, ನಾಡು ನಾಡುಗಳಲ್ಲಿ ಹರಿದಾಡಿ ಮತಪ್ರಚಾರಕರಾಗಿದ್ದ ಹಿಂದಣ ಆ ಸಂನ್ಯಾಸಿಗಳಿಗೆ, ಅಥವಾ ಮತಪ್ರಚಾರಕ ಗುರುಗಳಿಗೆ, 'ಗೊರವ'ರು ಎಂಬ ಹೆಸರು ಪ್ರಸಿದ್ಧವಾಗಿದ್ದಂತೆ ತೋರುತ್ತಿದೆ. ಆ ಹಿಂದಿನ 'ಗೊರವರ'ಲ್ಲಿ ಸಾಂಸಾರಿಕರೂ ಇದ್ದ ರೆಂಬುದು ಹಿಂದೆ ದೃಷ್ಟಾಂತಿಸಿದ 'ಬ್ರಹ್ಮಚರ್ಯಹೀನರಂ ಈ ಸಮಯದ ಗೊರವರ್ಕಳ್ ಕಳೆವೊರ್' ಎಂಬ ಮಾತಿನಿಂದ ಸಿದ್ಧವಾಗುವುದು. ಪರಿವ್ರಾಜಕಾಚಾರ್ಯರಾಗಿ ಗುರುಪೀಠ ವನ್ನೇರುವವರು ಗೃಹಸ್ಥಾಶ್ರಮವನ್ನೊಂದಿರಬಾರದು ಎಂಬ ಪದ್ಧತಿಯನ್ನು ಮೊತ್ತ ಮೊದಲು ಶ್ರೀ ಶಂಕರಾಚಾರ್ಯರೇ ಸ್ಥಾಪಿಸಿದುದೆಂದು ಹೇಳುತ್ತಾರೆ. ಆ ಹೇಳಿಕೆ ಯಥಾ ರ್ಥವೇ ಆಗಿರಬೇಕು ಎಂಬುದನ್ನು ಪೂರ್ವೋಕ್ತ ಮಂತ್ರವಾಡಿ ಶಾಸನ ವಾಕ್ಯದೊಳಗಿನ ........**'ಈ ಸಮಯದ'** ಎಂಬ ಗೊರವ ವಿಶೇಷಣ ಪದವು ನೆಲೆಗೊಳಿಸುತ್ತಿದೆ. ಈ 'ಮೋನಿ(ಮೌನಿ) ಗೊರವ'ರೆಂದರೆ ಬಹುಶಃ ಶ್ರೀ ಶಂಕರಾಚಾರ್ಯರ ಮಾರ್ಗವನ್ನನುಸರಿಸಿ 'ಅಖಂಡಿತ' ಬ್ರಹ್ಮಚಾರಿತ್ವವನ್ನು ತಮ್ಮಲ್ಲಿ ನೆಲೆಗೊಳಿಸುತ್ತಿದ್ದ ಸಂನ್ಯಾಸಿಗಳ ವರ್ಗದವ ರೆಂದು ತೋರುತ್ತಿದೆ.

ಈ 'ಗೊರವ'ಪದವು ಕ್ರಿ.ಶ. ೮ನೆ ಶತಮಾನದ ಚಾಲುಕ್ಯ ಕೀರ್ತಿವರ್ಮನ ಹಾನಗಲ್ಲಿನ ಆಡೂರು ಶಾಸನ[1], ಮೊದಲಾದವುಗಳಲ್ಲಿ 'ಗುರುಃ', 'ಗುರಾವರ್', 'ಗೊರವಡಿ', 'ಗುರುವಿ',[2] ಮೊದಲಾದ ನಾನಾ ರೂಪಗಳಿಂದ ತೋರುತ್ತಿದೆ. ಇದರಿಂದ ಸಂಸ್ಕೃತ ಭಾಷೆಯ 'ಗುರು' ಪದವೇ ಹಾಗೆ ಕನ್ನಡದಲ್ಲಿ ರೂಪಾಂತರಗೊಂಡುದು ಎಂಬಲ್ಲಿ ಸಂದೇಹವಿಲ್ಲ. 'ಗೊರವ'ರ ವರ್ಗದೊಳಗೆ ಹಿಂದು, ಜೈನ, ಬೌದ್ಧಮತೀಯರೂ ಪುರುಷರಂತೆ ಸ್ತ್ರೀಯರೂ ಸೇರು ತ್ತಿದ್ದರು.[3] 'ಗೊರವರು' ರಾಜಬೋಧಕರಾಗಿದ್ದು ದೇವಾಲಯಾಧಿಕಾರಗಳನ್ನು ನಡೆಯಿಸು ತ್ತಿದ್ದರಲ್ಲದೆ, ಮತ್ತಿನ ಸಂನ್ಯಾಸಿಗಳಂತೆ ಅವರಿಗೆ ವಿಶಿಷ್ಟ 'ಮಠ' ಎಂಬುದು ಇದ್ದಂತೆ

---

1 *Karnataka Inscriptions*, vol. I, p. 8, L 13, 20.

2 ಎಪಿಗ್ರಾಫಿಯಾ ಕರ್ಣಾಟಿಕಾ, ಸಂಪುಟ ೨, ಶಾಸನ ಸಂಖ್ಯೆ ೫, ೭.

3 Dr. B. A. Saletore, *The Sthanikas and Their Historical Importance* (The Journal of the University of Bombay, Vol. VII, Part I, p. 6)

ತೋರುವುದಿಲ್ಲ. ಇವರು ಹಿಂದಿನ ಕಾಲದಲ್ಲಿ ರಾಜರಿಗೆ ಕುಲಗುರುಗಳೂ ಆಗಿದ್ದರೆಂಬುದು ಮೇಲಿನ ದೃಷ್ಟಾಂತಗಳಿಂದ ಸಿದ್ಧವಾಗುತ್ತಿದೆ.

## ನೃಪತುಂಗನ ಉದಾತ್ತ ಧರ್ಮ

ಇದರಿಂದ ನೃಪತುಂಗನ ಆಳಿಕೆ ಎಷ್ಟು ಪ್ರಜಾರಂಜಕವಾಗಿ ನೆಲೆಗೊಂಡಿತ್ತು ಎಂಬುದು ಗೊತ್ತಾಗುತ್ತಿದೆ. ಆಗ ಅವನ ರಾಜ್ಯದಲ್ಲಿ ಪ್ರಬಲವಾಗಿದ್ದ ಮತಗಳೆಂದರೆ, ಹಿಂದೂ-ಜೈನ ಸಂಪ್ರದಾಯಕ್ಕನುವಾಗಿ ನೆಲೆಗೊಂಡುವುಗಳು; ಅವುಗಳೊಡನೆ ಬೌದ್ಧಮತವೂ ಅಲ್ಲಲ್ಲಿ ತಲೆದೋರಿತ್ತು. ವೈಯಕ್ತಿಕವಾಗಿ ಅರಸನು ಯಾವ ವಿಶಿಷ್ಟ ಮತವನ್ನೇ ಅನುಸರಿಸುತ್ತಿರಲಿ, ಇಡೀ ದೇಶಕ್ಕೆ ವಿಶಿಷ್ಟವಾದ ಒಂದೇ ಮತವಿರಲಿಲ್ಲ. 'ಕವಿರಾಜಮಾರ್ಗ' ಕಾರನು ವಿಸ್ತರಿಸಿರುವಂತೆ 'ದೇಶಂ ವರರಾಷ್ಟ್ರಾದಿ ನಿವೇಶಾಂತಂ' (i, 109), ಎಂದರೆ ಅಖಂಡ ರಾಷ್ಟ್ರ ಮೊದಲಾಗಿ ಪ್ರತಿಯೊಂದು ವಿಶಿಷ್ಟವಾದ ಮನೆಯ ವರೆಗಿನ, ಭೂಭಾಗಕ್ಕೆ ದೇಶ ಎಂಬ ಹೆಸರು. ದೇಶದೊಳಗೆ ನಾನಾ ಮತಗಳು ಇರಬಹುದು ಎಂದಲ್ಲ, ಇರಬೇಕು ಎಂಬುದೇ ನಮ್ಮ ಹಿಂದೂ ಮತೀಯರ ಅಭಿಪ್ರಾಯ. ದೇಶದ ಅಂಥ ಸರ್ವಮತಪ್ರಜಾರಂಜಕನಾಗಿ ಆಳುವ ಆ ರಾಜವ್ಯಕ್ತಿ ದೇಶದ ಮತಗಳನ್ನೆಲ್ಲ ಮನ್ನಿಸಬೇಕು. ಆತನು ತನ್ನ ವೈಯಕ್ತಿಕ ಮತಕ್ಕೇ ಬಾಗಿ ಪ್ರಜಾಸಂಕುಲದ ಧಾರ್ಮಿಕವಾದ ಆಚಾರಕ್ಕೆ ಅಡ್ಡಿಯನ್ನೆಸಗಬಾರದು. ನೃಪತುಂಗನಿಗೆ ಅನೇಕ ಬಿರುದುಗಳಿದ್ದರೂ ಅವನ 'ಉದಾರ' ಎಂಬ ಬಿರುದಿನಲ್ಲಿ ಸರ್ವಮತಸಮಾನತೆಯನ್ನು ಆಚರಿಸುತ್ತಿದ್ದುದು ಸಾರ್ಥಕವಾಗಿ ಹೊಳೆಯುತ್ತಿದೆ ಎಂದು ನಮ್ಮ ಭಾವನೆ. ಅವನ ಈ ಉದಾತ್ತ ರಾಜಧರ್ಮ ಸ್ವರೂಪವು ಸಂಜಾನ ಶಾಸನದಲ್ಲಿಯೂ 'ಕವಿರಾಜಮಾರ್ಗ'ದಲ್ಲಿಯೂ ಹೊಳೆಯುವುದನ್ನೀಕ್ಷಿಸಿರಿ :

> ಭುಕ್ತಂ ಕೈಶ್ಚಿದ್ವಿಕ್ರಮೇಣಾಪರೇಭ್ಯೋ
> ದತ್ತಂ ಚಾನ್ಯೈಸ್ತ್ಯಕ್ತಮೇವಾಪರೈರ್ಯತ್
> ಕಾಸ್ಥಾऽನಿತ್ಯೇ ತತ್ರ ರಾಜ್ಯೇ ಮಹದ್ಭಿಃ
> ಕೀರ್ತ್ಯಾ ಧರ್ಮಃ ಕೇವಲಂ ಪಾಲನೀಯಃ[1]—

'ಕೆಲಮಂದಿ ರಾಜರು ಪರಾಕ್ರಮದಿಂದ ರಾಜ್ಯವನ್ನಾಳಿ ಐಶ್ವರ್ಯವನ್ನುಪಭೋಗಿಸಿದರು; ಕೆಲವರು ಇತರರಿಗೆ ದಾನಗೈದರು; ಇನ್ನೂ ಕೆಲವರು ಎಲ್ಲವನ್ನೂ ತ್ಯಾಗವೆಸಗಿದರು. ಏನಾದರೇನು ? ಅನಿತ್ಯವಾದೀ ರಾಜ್ಯದಲ್ಲಿ ಯಾವುದು ನಿತ್ಯವಾಗಿದೆ? ಈ ಸ್ವಾರ್ಥಾನುಭವ, ದಾನ, ತ್ಯಾಗಗಳೆಂಬ ಮೂರೂ ಅನಿತ್ಯಗಳು' ಎಂದು ತಾತ್ಪರ್ಯ. ಅದರಿಂದ, ಕೀರ್ತಿಯೊಡನೆ ಧರ್ಮವೊಂದೇ ರಕ್ಷಣೀಯವೆಂದೂ ಅದೊಂದೇ ಈ ಅನಿತ್ಯ ರಾಜ್ಯದಲ್ಲಿ ನಿತ್ಯವೆಂದೂ ನೃಪತುಂಗನ ಅಭಿಪ್ರಾಯ.

ನೃಪತುಂಗನ ಧಾರ್ಮಿಕವಾದ ಎದೆಯ ನೆಲೆಗಟ್ಟು ಎಷ್ಟು ಬಿಗಿಯಾಗಿ ಬಲಿದು

---

[1] ಸಂಜಾನ ಶಾಸನ, ಶ್ಲೋಕ ೫೨, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೮.

ಹೆಣೆದುಕೊಂಡಿತ್ತು ಎಂಬುದು ಇಲ್ಲಿ ಹೊಳೆಯುತ್ತಿದೆ. ಇಲ್ಲಿ ವಿಕ್ರಮವನ್ನು ಮುಂದು ಮಾಡಿ ರಾಜ್ಯವನ್ನು ಭೋಗಿಸುವುದು, ಪರರಿಗೆ ದಾನಮಾಡುವುದು, ಮತ್ತು ಎಲ್ಲವನ್ನೂ ತ್ಯಾಗವೆಸಗುವುದು ಎಂಬ ಅನಿತ್ಯವಾದ ಈ ಮೂರೂ ನೃಪತುಂಗನೆಣಿಕೆಯಲ್ಲಿ 'ಧರ್ಮ' ವಾಗಿರುವಂತೆ ತೋರುವುದಿಲ್ಲ. ಹಾಗಿದ್ದರೆ ಅವನೆಣಿಕೆಯ 'ಉದಾರ'ವಾದ ಧರ್ಮ ವಾವುದು ? ಮತ್ತಿನ ಶಾಸನಪದ್ಯವನ್ನೀಕ್ಷಿಸಿರಿ:

ತೇನೇದಮನಿಲವಿದ್ಯುಚ್ಚಂಚಲಮವಲೋಕ್ಯ ಜೀವಿತಮಸಾರಂ
ಕ್ಷಿತಿದಾನಪರಮಪುಣ್ಯಂ ಪ್ರವರ್ತಿತೋ ಬ್ರಹ್ಮದಾಯೋಽಯಂ

—ಸಂಜಾನ ಶಾಸನ, ಪ. ೫೪

'ಅದರಿಂದ, ಗಾಳಿ ಮಿಂಚುಗಳಂತೆ ಚಲವಾದ ಜೀವಿತವೆಂಬುದು ಅಸಾರವು. ಹೀಗೆ ನಿರ್ಧರಿಸಿ, ಪರಮಪುಣ್ಯಸ್ವರೂಪವಾದ ಈ ಬ್ರಹ್ಮದಾಯವು ಆಚರಿಸಲ್ಪಟ್ಟಿತು.'

'ಧಾರಣಾಯಾಃ ಧರ್ಮಃ' ಎಂಬ ವ್ಯುತ್ಪತ್ತಿಗನುವಾಗಿ, ಯಾವುದು ಸರ್ವ ಸಂಸಾರವು ಸುಖವಾಗಿ ನೆಲೆಗೊಳ್ಳುವಂತೆ ಧಾರಣೆ ಮಾಡುವುದೋ ಅಥವಾ ಪಾಲಿಸು ತ್ತದೆಯೋ ಅದೇ ಧರ್ಮ. ಅತಿಭೋಜನ ಅನುಚಿತಭೋಜನಾದಿಗಳನ್ನು ಅಲ್ಲಗಳೆದು ಆಹಾರವ್ಯವಹಾರಗಳನ್ನು ನಿಯಮಕ್ಕೊಳಗಾಗಿಸುವುದೆಂದರೆ ಆರೋಗ್ಯಜೀವನದ ಧರ್ಮ. ಅದರಂತೆ, ಇಡೀ ಸಂಸಾರವನ್ನು ಪೋಷಿಸುವ ಮನೋವಾಕ್ಕಾಯಗಳ ವಿವೇಚನಾತ್ಮಕ ವರ್ತನೆಯನ್ನೇ ಸಂಸಾರಧರ್ಮ ಅಥವಾ ಎಲ್ಲಾ ಮತಗಳಿಗೂ ಮೇಲಾದ ಮತ, ಎನ್ನ ಬೇಕು. ಉದಾರ ನೃಪತುಂಗನು ಅಂಥ ಧರ್ಮವನ್ನೇ ಆಚರಿಸುತ್ತಿದ್ದಂತೆ ಭಾಸವಾಗು ತ್ತಿದೆ. ಅವನ ಉದಾತ್ತಭಾವನೆ, ಹಿಂದುಮುಂದಿನ ಮತ್ತು ವರ್ತಮಾನಕಾಲದ ಸರ್ವ ಧರ್ಮಗಳನ್ನೂ ಎಷ್ಟು ಬಹುಮಾನಿಸುತ್ತಿತ್ತು ಎಂಬುದನ್ನು ಶಾಸನದ ಹೇಳಿಕೆಯಿಂದಲೇ ಪರಾಂಬರಿಸಿರಿ—

ರಾಜೇಂದ್ರಾಸ್ತೇ ವಂದನೀಯಾಸ್ತು ಪೂರ್ವೇ
ಯೇಷಾಂ ಧರ್ಮಃ ಪಾಲನೀಯೋಽಸ್ಮದಾದ್ಯಃ
ಧ್ವಸ್ತಾ ದುಷ್ಟಾ ವರ್ತಮಾನಾಃ ಸ್ವಧರ್ಮೇ
ಪ್ರಾರ್ಥ್ಯಾ ಯೇ ತೇ ಭಾವಿನಃ ಪಾರ್ಥಿವೇಂದ್ರಾಃ[1]

'ಪೂರ್ವಿಕರಾದ ರಾಜೇಂದ್ರರೆಂದರೆ ನಮಗೆ ವಂದನೀಯರು. ಅವರು ಸ್ಥಾಪಿಸಿದ ಧರ್ಮಪದ್ಧತಿ ನಾವೇ ಮೊದಲಾದವರಿಂದ ಪಾಲನೀಯವು. ಅದರಿಂದಲೇ ಅಧರ್ಮ ಮಾರ್ಗದ ವಿರೋಧಿಗಳೆಲ್ಲ ಧ್ವಸ್ತರಾದರು. ನಾವು ಸ್ಥಾಪಿಸಿದ ಈ ಸ್ವಧರ್ಮವನ್ನು ಪಾಲಿಸುವ ಅಧಿಕಾರಿಗಳು ಮುಂದೆ ನೀವಾಗಬೇಕು ಎಂದು ಭಾವಿ ಪಾರ್ಥಿವೇಂದ್ರ ರನ್ನು ಪ್ರಾರ್ಥಿಸುತ್ತೇವೆ.'

ಈ ಶ್ಲೋಕವು ರಾಷ್ಟ್ರಕೂಟ ವಂಶದ ಮುಂದಿನ ರಾಜರನ್ನು ಮಾತ್ರವೆ ಪ್ರಾರ್ಥಿಸು

[1] ಸಂಜಾನ ಶಾಸನ, ಶ್ಲೋಕ ೫೧, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೮.

ವುದಲ್ಲ; ಯಾವ ಕುಲವೇ ಆಗಲಿ, ಉತ್ತಮರಾದ ಭಾವಿ ಕಾಲದ ರಾಜರನ್ನು ಕುರಿತು ಪ್ರಾರ್ಥಿಸಿದ ಮಾತಿದು. ಇದರಿಂದ ನೃಪತುಂಗನು ಸ್ವವಂಶಕ್ಕಿಂತಲೂ ಹೆಚ್ಚಾಗಿ ಸ್ವಧರ್ಮವನ್ನೇ ಬಹುಮತಿಸಿದ ಉದಾತ್ತತೆ ಭಾಸವಾಗುವುದು. ಇಲ್ಲಿ ಭೂದಾನವೇ ಮೊದಲಾಗಿ ಸ್ಥಾಯಿಯಾಗಿ ನೆಲೆಗೊಳಿಸಿದ ಕಾರ್ಯರೂಪದ ಧಾರ್ಮಿಕ ವ್ಯವಸ್ಥೆಯನ್ನೇ ರಕ್ಷಿಸಬೇಕೆಂದು ಮುಂದಿನವರಲ್ಲಿ ಪ್ರಾರ್ಥಿಸಿದುದು ಬರಿಯ ತನ್ನ ವೈಯಕ್ತಿಕ ಧರ್ಮವನ್ನಾಗುತ್ತಿದ್ದರೆ, ಇದನ್ನು ನಡೆಸಬೇಕೆಂದು ಮುಂದಿನವರನ್ನು ಪ್ರಾರ್ಥಿಸುವ ಸಂದರ್ಭವೇ ಇರುತ್ತಿರಲಿಲ್ಲ. ವೈಯಕ್ತಿಕವಾದ ಅಥವಾ ವಾಂಶಿಕವಾದ ಭಿನ್ನಮತ ಭಾವನೆಯನ್ನು ಇಂಥ ಧಾರ್ಮಿಕ ಕಾರ್ಯಗಳಲ್ಲಿ ಮುಂದಿನ ಚಿರಂಜೀವಿ ರಾಜಕುಮಾರರು ಯಾರೂ ಬೆರಸಲಾಗದು ಎಂಬ ತಾತ್ಪರ್ಯವು, 'ಕವಿರಾಜಮಾರ್ಗ'ದೊಳಗಿನ ಈ ಮುಂದೆ ದೃಷ್ಟಾಂತಿಸುವ ಪದ್ಯದಲ್ಲಿ ವಿಶದವಾಗಿ, ನೃಪತುಂಗನ ಧಾರ್ಮಿಕ ಭಾವನೆ ಮತ್ತೂ ಹೆಚ್ಚು ವ್ಯಕ್ತವಾಗಿ ಹೊಳೆಯುತ್ತಿದೆ.

ಕಸವರಮೆಂಬುದು ಮಿಗೆ ಸೈ
ರಿಸಲಾರ್ಪೊಡೆ ಪರವಿಚಾರಮುಂ ಧರ್ಮಮುಮಂ
ಕಸವೇಂ ಕಸವರಮೇನು
ಬ್ಬಸಮುಂ ಬಸಮಿಲ್ಲದಿರ್ದು ಮಾಡುವರೆಲ್ಲಂ— (iii, 176)

ಇದು ಉದಾತ್ತಾಲಂಕಾರದ ಲಕ್ಷ್ಯಗಳೊಳಗೇ ಒಂದಾದ ಪದ್ಯವೆಂಬುದನ್ನು ಮರೆಯಲಾಗದು:

'ಪರಧರ್ಮೀಯರ ವಿಚಾರಮಾರ್ಗವನ್ನೂ ಅವರ ಧರ್ಮಾಚಾರವನ್ನೂ ಸೈರಿಸುವಷ್ಟು ಸೈರಿಸಿ, ಅವರಿಗೂ ನೆರವಾಗುವಷ್ಟು ಅಂತಶ್ಶಕ್ತಿ ಇದ್ದರೆ ಮಾತ್ರವೇ 'ಕಸವರ' (ಐಶ್ವರ್ಯ) ಸಫಲವಾಗುವುದು; ಹಾಗಿಲ್ಲವಾದರೆ ಕಸವರವೇನು, ಕಸವೇನು? ಎರಡೂ ಒಂದೇ—ಈ ಐಶ್ವರ್ಯದ ಮದದಿಂದಾಗಿ ಹಲವರು ಲೋಕಕ್ಕೆ ಉಬ್ಬಸವನ್ನೊದಗಿಸಿ ಬಿಡುತ್ತಾರೆ' ಎಂದು ತಾತ್ಪರ್ಯ.

ನೃಪತುಂಗನ ಸರ್ವಮತ ಸಮಾನತಾಬುದ್ಧಿ ಹೇಗೆ ಸಮರಸವಾಗಿ ಪಸರಿಸಿಕೊಂಡಿದ್ದುದೆಂಬುದು ಈ ಪದ್ಯದಿಂದ ಹೊಳೆದು ತೋರುತ್ತಿದೆ. ಇದನ್ನು ಪರಾಂಬರಿಸಿದ ಮೇಲೆ ನೃಪತುಂಗನ ಧರ್ಮವಾವುದು ಎಂದು ಪ್ರಶ್ನಿಸುವ ಸಂದರ್ಭವೂ ತಲೆದೋರಲಾರದೆಂದು ನಮ್ಮ ಭಾವನೆ. ಸರ್ವಮತಗಳನ್ನೂ ಸಹಿಷ್ಣುತೆಯಿಂದ ನೋಡಿದ, ಆ ಎಲ್ಲ ಮತಗಳೊಳಗಿನ ಸಾರವನ್ನಿಸಿ ಅವನೆದೆಗೆ ಹರಿದ, ಉದಾರವಾದ ಮತವೇ ಅವನ ಮತವೆಂಬುದು ಇಲ್ಲಿ ವ್ಯಕ್ತವಾಗುತ್ತಿದೆ.

ನೃಪತುಂಗನು ಬಲು ಚಿಕ್ಕ ವಯಸ್ಸಿನಲ್ಲಿ ಪಟ್ಟವನ್ನೇರಬೇಕಾಗಿ ಬಂತು. ಅದು ಅವನಿಗೆ ಮಾತ್ರವಲ್ಲ, ಆಗಿನ ಲೋಕಕ್ಕೆ ಅಪಾರ ದುಃಖದಾಯಕವಾಯಿತು. 'ಯೇನಾ

ತ್ಯಾಜಿ ತನುಃ ಸ್ವರಾಜ್ಯಮಸಕೃತ್' ಎಂದು ಸಂಜಾನ ಶಾಸನದಲ್ಲೇ ತೋರುತ್ತಿದೆ.[1] ನೃಪತುಂಗನು ತನ್ನ ಶರೀರವನ್ನೇ ತ್ಯಾಗವೆಸಗಿದನು; ಬಲು ಬಾರಿ ಸ್ವರಾಜ್ಯವನ್ನು ಕಳಕೊಂಡನು—ಎಂಬುದೇ ಆ ಮಾತಿನ ಸಾರ. ಅದು ಅಂಥ ರಾಜನ ಶೋಚನೀಯಾವಸ್ಥೆಯಾದರೂ ಧಾರ್ಮಿಕ ಹೃದಯಶಕ್ತಿಯುಳ್ಳ ಆತನಿಗೆ ಅದೊಂದು ಉತ್ತಮಪಾಠವಾಗಿಯೇ ಪರಿಣಮಿಸಿದಂತೆ ತೋರುತ್ತಿದೆ. ಧಾರ್ಮಿಕ ರಾಜಮಾರ್ಗದಲ್ಲಿ ಹೆಜ್ಜೆಯಿಟ್ಟ ಆತನು ಕಷ್ಟಪರಂಪರೆಗಳನ್ನೆಲ್ಲ ದಾಟಿ, ಆದರ್ಶ ಚಕ್ರವರ್ತಿ ಎಂದೆನಿಸಿದನು. ಆವನ ಆಸ್ಥಾನದಲ್ಲಿ ಅರೇಬಿಯಾ ಮೊದಲಾದ ಪಶ್ಚಿಮ ಪೂರ್ವ ದೇಶಗಳ ರಾಜಧಾನಿಗಳಿಂದ ರಾಯಭಾರಿಗಳು ಬರುತ್ತಿದ್ದರೆಂಬುದನ್ನು ಚಾರಿತ್ರಿಕರು ಅನುಮೋದಿಸಿದ್ದಾರೆ. ಆ ಹೇಳಿಕೆಯನ್ನು 'ಯಸ್ಯಾಜ್ಞಾಂ ಪರಚಕ್ರಿಣಃ ಸ್ರಜಮಿವಾಜಸ್ರಂ ಶಿರೋಭಿರ್ವಹಂತಿ' ಎಂದೂ 'ಯದ್ದ್ವಾರೇ ಪರಮಂಡಲಾಧಿಪತಯಃ. . .'[2] ಎಂದೂ ಸಂಜಾನ ಶಾಸನವು ಸೂಚಿಸುತ್ತಿದೆ. ಇಲ್ಲಿ ತೋರುವ 'ಪರಚಕ್ರಿಣಃ' ಮತ್ತು 'ಪರಮಂಡಲಾಧಿಪತಯಃ' ಎಂಬ ವಿಶಿಷ್ಟ ಪದಗಳನ್ನು ಅವಲೋಕಿಸಿರಿ. ಮೊದಲಿನದು ನೃಪತುಂಗನಂತೆ ಚಕ್ರವರ್ತಿಪದವಿಗೇರಿದ ಬಾಹ್ಯಖಂಡದ ಚೀನಾದಿ ಚಕ್ರವರ್ತಿಗಳ, ಮತ್ತಿನದು ಮಂಡಲಾಧೀಶ್ವರರಾಗಿ ತನ್ನೊಳಗಿನ ಮಿತ್ರರಾದ ರಾಜರನ್ನೇ ಹೊಳೆಯಿಸುತ್ತಿದೆ. ಇವಕ್ಕೆ ಸರಿಯಾದ ಹೇಳಿಕೆ ಕವಿರಾಜಮಾರ್ಗದ ದೃಷ್ಟಾಂತ ಪದ್ಯಗಳಲ್ಲೂ ಹೊಳೆಯುತ್ತಿದೆ:

ಪ್ರಣತಾರಿ ತ್ರುಟಿತಮುಕ್ತಾ
ಮಣಿಗಳ್ ಮಾರ್ತ್ರಾಂಕದಿಂ ಕಟಿಲ್ದುದಿರೆ ಸಭಾಂ
ಗಣಮೊಪ್ಪೆ ವೀರನಾರಾ
ಯಣನಾ ತಾರಕಿತನಭದವೋಲ್ ಸೊಗಯಿಸುಗುಂ
—iii, 181 (ಮದರಾಸು ಪ್ರತಿ)

ಪರಚಕ್ರಭೂಪರಟ್ಟಿದ
ಕರಿಗಳ್ ಬಿಡುತರ್ಪ ಮದದ ಪೊನಲಿಂದೆತ್ತಂ
ನರಲೋಕಚಂದ್ರನಾ ಮಂ
ದಿರದೊಳಗೊಳಗೆಲ್ಲ ಕಾಲಮುಂ ಕೆಸಜಿಕ್ಕುಂ —(iii, 181)

ರೇವಾ ನಗರಿಯ ಜಗತ್ತುಂಗನ ಪರಾಕ್ರಮವು ಮಗನಾದ ಅಮೋಘವರ್ಷನಲ್ಲಿ ಹಾಗೇ ಅಚ್ಚೊತ್ತಿರಲಿಲ್ಲ ಎಂಬುದನ್ನು ಹಿಂದೆಯೇ ನಿವೇದಿಸಿದ್ದೇವೆ. ಇರಲಿ; ಅವನು ದಯಾಪರಾಕ್ರಮಗಳಲ್ಲಿ ಬಲ್ಗೈಯಾದರೆ, ಈತನು ದಯಾಧರ್ಮಗಳಲ್ಲಿ ಮೇಲ್ಗೈ. ಪ್ರತಾಪ ಅಥವಾ ವಿಕ್ರಮಕ್ಕಿಂತಲೂ ಧರ್ಮವೇ ನೃಪತುಂಗನ ಎದೆಗೆ ಮೆಚ್ಚುಗೆಯಾದುದು ಎಂಬುದು ಹಿಂದೆ ದೃಷ್ಟಾಂತಿಸಿದ ಶಾಸನ ಭಾಗದಿಂದಲೇ ಗೊತ್ತಾಗುತ್ತಿದೆ. ಅಷ್ಟು ಪ್ರಬಲ

1 ಸಂಜಾನ ಶಾಸನ, ಶ್ಲೋಕ ೪೮, ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೮.

2 ಸಂಜಾನ ಶಾಸನ, ಶ್ಲೋಕಗಳು ೪೫, ೪೬.

ನಾಗಿದ್ದ ತಂದೆಗಿಂತಲೂ ಅಧಿಕವಾಗಿ ಮಗನ ಕೀರ್ತಿಯೇ ಕನ್ನಡ ನಾಡಿನಲ್ಲಿ ನೆಲೆಗೊಂಡುದರಿಂದ, ಆ ನೃಪತುಂಗನ ಧಾರ್ಮಿಕ ಭಾವನೆ ಎಷ್ಟು ಅಮೌಲ್ಯವಾದುದೆಂಬುದೂ ಹೊಳೆಯುತ್ತಿದೆ. ಆ ತಂದೆಮಕ್ಕಳ ನಾಡಿನಲ್ಲೇ ಪರಂಪರಾನುಗತವಾಗಿ ಬಳೆದು ಬಂದ ಕನ್ನಡ ಕುಲದವರು ನಾವು, ಎಂಬುದನ್ನು ಮರೆಯಬಾರದು.

೬

# ನೃಪತುಂಗನ ಮತವಾವುದು ?

## ನೃಪತುಂಗನು ಜೈನನಾಗಿರಬಹುದೆ ?

ಹೀಗಿದ್ದಿರೂ ಅಮೋಘವರ್ಷ ನೃಪತುಂಗನು ತನ್ನ ವೈಯಕ್ತಿಕ ಜೀವನದಲ್ಲಿ ಅನುಸರಿಸುತ್ತಿದ್ದ ವಿಶಿಷ್ಟವಾದ ಮತವಾವುದು ಎಂಬ ವಿಷಯವಾಗಿ ಅಂದಿನಿಂದ ಇಂದಿನ ವರೆಗೂ ವಾದವಿವಾದಗಳು ನಡೆಯುತ್ತಲೇ ಇವೆ. ಒಮ್ಮೆ ಆ ವಾದ ಪ್ರತಿವಾದಗಳ ಹುರಿ ಏರಿದ್ದರೂ ಈಗ ಒಂದಿಷ್ಟು ಸಡಿಲಾಗಿದೆ. ಆದರೂ ಅವನ ಮತವಾವುದು ಎಂಬ ವಿಚಾರವೆದ್ದಲ್ಲಿ, ಕೆಲವರು ಜೈನನೆಂದೂ ಕೆಲವರು ವೈಷ್ಣವನೆಂದೂ ಆಡಿಕೊಳ್ಳುತ್ತಾರಲ್ಲದೆ, 'ಇದಮಿತ್ಥಂ' ಎಂಬ ಸಿದ್ಧಾಂತವೇನೂ ಆಗಿಲ್ಲ. ಆದರೆ ಜೈನಮತಾನುಯಾಯಿಗಳು ಈತನು ಜೈನನಾಗಿದ್ದಿರಬೇಕೆಂದೇ ನೆರೆ ನಂಬಿದ್ದಾರೆ. ಹಾಗೆ ನಂಬಿದ ನಂಬುಗೆ ನಿರಾಧಾರವಾದುದಲ್ಲ.

ನೃಪತುಂಗನ ಆಸ್ಥಾನದಲ್ಲಿದ್ದ ಮಹಾವೀರಾಚಾರ್ಯನೆಂಬ ವಿದ್ವಾಂಸನು 'ಗಣಿತಸಾರ ಸಂಗ್ರಹ' ಎಂಬ ಶಾಸ್ತ್ರಗ್ರಂಥವನ್ನು ಬರೆದಿದ್ದಾನೆ. ಅದರೊಳಗಿನ ಈ ಶ್ಲೋಕವನ್ನೀಕ್ಷಿಸಿರಿ:

> ವಿಧ್ವಸ್ತೈಕಾಂತಪಕ್ಷಸ್ಯ ಸ್ಯಾದ್ವಾದ ನ್ಯಾಯವಾದಿನಃ
> ದೇವಸ್ಯ ನೃಪತುಂಗಸ್ಯ ವರ್ಧತಾಂ ತಸ್ಯ ಶಾಸನಂ[1]—

'ಏಕಾಂತಪಕ್ಷ'(ಅದ್ವೈತ ಪ್ರವಣವಾದ ವೈಷ್ಣವಮತ)ವನ್ನು ನಿರ್ಮೂಲನವೆಸಗಿದ, ಸ್ಯಾದ್ವಾದ ನ್ಯಾಯವಾದಿಯಾದ, ನೃಪತುಂಗನ ಶಾಸನವು ವೃದ್ಧಿವಡೆಯಲಿ'—ಎಂದು ಈ ಶ್ಲೋಕಾರ್ಥ. ಈ ಪಾಠವೇ ಶುದ್ಧವಾದರೆ, ನೃಪತುಂಗನು ಜೈನಮತವನ್ನೇ ವಾದಿಸುವವನೆಂದೂ ಜೈನನೆಂದೂ ನಿರ್ಧಾರವೆಸಗಲು ಹೆಚ್ಚಿನ ನೆರವಾಗಬಹುದು. ಆದರೆ ಈ ಶ್ಲೋಕದ ಮೊದಲನೆಯ ಪಾದಕ್ಕೆ 'ವಿದ್ವದ್ವೈಕಾಂತಪಕ್ಷಸ್ಯ ಸ್ಯಾದ್ವಾದ ನ್ಯಾಯವೇದಿನಃ' ಎಂಬ ಪಾಠಾಂತರವೂ ಇದೆ.

'ಪ್ರಶ್ನೋತ್ತರ ರತ್ನಮಾಲಾ' ಎಂಬ ಒಂದು ಚಿಕ್ಕದಾದರೂ ಸಾರವತ್ತಾದ ಜೈನಮತೀಯವಾದ ಗ್ರಂಥವಿದೆ. ಅದನ್ನು ನೃಪತುಂಗನೇ ಬರೆದುದಾಗಿ ಕೆ. ಬಿ. ಪಾಠಕರು ಹೇಳುತ್ತಾರೆ.[2]

---

[1] ಎಂ. ರಂಗಾಚಾರ್ಯ (ಸಂ), ಮಹಾವೀರನ 'ಗಣಿತಸಾರ ಸಂಗ್ರಹ', ಪುಟ ೧.

[2] ಡಾ. ಕೆ. ಬಿ. ಪಾಠಕ (ಸಂ), 'ಕವಿರಾಜಮಾರ್ಗ', ಪೀಠಿಕೆ, ಪುಟ ೯.

ಅದರ ಒಂದು ಶ್ಲೋಕ ಹೀಗಿದೆ:

ವಿವೇಕಾತ್ತ್ಯಕ್ತರಾಜ್ಯೇನ ರಾಜ್ಞೇಯಂ ರತ್ನಮಾಲಿಕಾ
ರಚಿತಾಮೋಘವರ್ಷೇಣ ಸುಧಿಯಾ ಸದಲಂಕೃತಿಃ—

ಇದರಿಂದ ಈ ಗ್ರಂಥನಿರ್ಮಾಣಕಾಲದಲ್ಲಿ ಅಮೋಘವರ್ಷನು ವಿವೇಕದಿಂದ ರಾಜ್ಯವನ್ನು ತ್ಯಜಿಸಿದ್ದನೆಂದೂ, ಜೈನಮತೀಯನಾಗಿದ್ದನೆಂದೂ ಗೊತ್ತಾಗುತ್ತಿದೆ. ಇರಲಿ, ನೃಪತುಂಗನು ಜೈನನಾಗಿದ್ದನೆಂದು ಭಾವಿಸುವಲ್ಲಿ ಇವಲ್ಲದೆ ಅಷ್ಟಿಷ್ಟು ಬೇರೆ ಆನುಮಾನಿಕ ಸಾಧನಗಳೂ ಇರಬಹುದು. ಆದರೆ, ಇವುಗಳೇ ಪ್ರಬಲಗಳಾದುವು.

## ಆಧಾರಗಳ ವಿವೇಚನೆ

ಯಾವುವೇ ಆಗಲಿ, ಇವು ಚಾರಿತ್ರಿಕಗಳು ಎಂದು ಸಿದ್ಧಾಂತಿಸಲು ಆಧಾರಗಳನ್ನೀವಲ್ಲಿ ಪ್ರಮುಖವಾದ ಲೇಖನಾಧಾರಗಳು ಎರಡು ಎನ್ನಬಹುದು. ಗ್ರಂಥಗತವಾದವುಗಳು ಒಂದಾದರೆ, ಶಾಸನಾತ್ಮಕವಾದುವು ಇನ್ನೊಂದು. ಗ್ರಂಥಗಳು, ಕಾಲಕಾಲದ ಮಾತೃಕಾ ವ್ಯತ್ಯಾಸದಿಂದ, ಆಯಾ ಲೇಖಕರ ಕೈಯ, ಮನಸ್ಸಿನ ಸ್ಖಾಲಿತ್ಯದಿಂದ ಈಗಾಗ ಅಷ್ಟಿಷ್ಟು ಬದಲಾವಣೆಯನ್ನು ಹೊಂದುತ್ತಾ ಹೋಗಬಹುದು. ಶಾಸನಗಳು ಹಾಗಲ್ಲ; ಏಕರೂಪವಾಗಿಯೇ ಇರುತ್ತಿವೆ. ಮಾತ್ರವಲ್ಲ; ಶಾಸನವೆಂದರೆ, ಚಾರಿತ್ರಿಕ ಸತ್ಯವು ಮಾಸಿಹೋಗದೆ ಶಾಶ್ವತವಾಗಿ ನೆಲೆಗೊಳ್ಳಬೇಕು ಎಂಬ ಗುರಿಯನ್ನು ಬಿಗಿವಿಡಿದೇ ನೆಲೆಗೊಂಡುದಾಗಿದೆ. ಇತರ ಗ್ರಂಥಲೇಖಗಳಲ್ಲಿ ಅಂಥ ಚಾರಿತ್ರಿಕ ಸತ್ಯಕ್ಕೇ ಪ್ರಮುಖ ಸ್ಥಾನವಿಲ್ಲ. ಅದರಿಂದ ವಿಶ್ವಾಸಾರ್ಹ ಶಾಸನಗಳೇ ಉಳಿದ ಗ್ರಂಥಗಳಿಗಿಂತಲೂ, ಇಂಥ ಚಾರಿತ್ರಿಕ ವಿಷಯಗಳಲ್ಲಿ ಪ್ರಬಲತರಾಧಾರಗಳೆಂಬುದನ್ನು ಮರೆಯಲಾಗದು. ಇದನ್ನು ಮರೆಯದೆ ಮೇಲೆ ಕಾಣಿಸಿದ ಎರಡು ಗ್ರಂಥಗತಗಳಾಗಿ ತೋರುವ ಆಧಾರಗಳನ್ನು ಒಂದಿಷ್ಟು ವಿಚಾರಿಸುವ.

'ರತ್ನಮಾಲೆ'ಯದು ಎಂದು ಕಾಣುವ ದೃಷ್ಟಾಂತಶ್ಲೋಕದಲ್ಲಿ ಅದನ್ನು ಬರೆದವನು ಅಮೋಘವರ್ಷನೆಂದೇನೋ ತೋರುವುದು ನಿಜ. ಆದರೆ ಅದಕ್ಕಿಂತಲೇ ಹಿಂದಿನ ಆರ್ಯಾವೃತ್ತ ಹೀಗಿದೆ:

ರಚಿತಾ ಸಿತಪಟಗುರುಣಾ ವಿಮಲಾ ವಿಮಲೇನ ರತ್ನಮಾಲೇವ
ಪ್ರಶ್ನೋತ್ತರಮಾಲೇಯಂ ಕಂಠಗತಾ ಕಂ ನ ಭೂಷಯತಿ— (ಶ್ಲೋಕ ೨೯೦)

'ಶ್ವೇತಾಂಬರ ಗುರುವಾದ ವಿಮಲನಿಂದ ವಿಮಲವಾದ ರತ್ನಮಾಲೆಯಂತಿರುವ ಈ ಪ್ರಶ್ನೋತ್ತರಮಾಲೆ ರಚಿತವಾಯಿತು. ಕಂಠಗತವಾದ ಇದು ಯಾವಾತನನ್ನು ಅಲಂಕರಿಸುವುದಿಲ್ಲ ?' ಶ್ರೀ ಮಂಜೇಶ್ವರ ಗೋವಿಂದ ಪೈಯವರು ಸೂಚಿಸಿರುವಂತೆ[1], ಆದಿ ಮೊದಲ್ಗೊಂಡು ಮೇಲಿನ ಇಪ್ಪತ್ತೊಂಬತ್ತನೆಯದರಲ್ಲಿ ಕಡೆಗೊಳ್ಳುವ ವೃತ್ತಗಳೆಲ್ಲವೂ

---

[1] ಎಂ. ಗೋವಿಂದ ಪೈ, 'ನೃಪತುಂಗನ ಮತವಿಚಾರ', ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೧೨, ಸಂಚಿಕೆ ೪, ಪುಟ ೨೬೦–೨೬೧.

ಆರ್ಯಾವೃತ್ತಗಳು. ಇದರಲ್ಲಿ ಈ ವಿಮಲನೆಂಬ ಶ್ವೇತಾಂಬರ ಯತಿಯೇ ಇದನ್ನು ಬರೆದಾತನೆಂಬುದೂ ಸೂಚಿತವಾಗಿದೆ. ಅದರಿಂದ ನೃಪತುಂಗನು ಇದನ್ನು ಬರೆದಾತನೆಂದು ತೋರುವ ಅನುಷ್ಟುಭ್ ಶ್ಲೋಕವೂ ಈ ಪುಸ್ತಕದೊಳಗಿನದೇ ಎಂದು ಹೇಳುವುದಾದರೂ ಹೇಗೆ? ಏನು, ಇಬ್ಬರೂ ಸೇರಿ ಈ ಚಿಕ್ಕ ಪುಸ್ತಕವನ್ನು ಬರೆದರೆನ್ನುವುದೆ? ಎರಡೂ ಭಿನ್ನ ಭಿನ್ನ ಕರ್ತೃಕಗಳೆಂದೇ ಸೂಚಿಸುವುದರಿಂದ ಒಂದು ನೀರಿಗೆ ಸೆಳೆದರೆ, ಇನ್ನೊಂದು ಗುಡ್ಡಕ್ಕೆಳೆ ವಂತಿದೆಯಲ್ಲದೆ ಉಭಯಕರ್ತೃಕತ್ವವನ್ನು ಹೊಳೆಯಿಸುವುದೇ ಇಲ್ಲ; ಮಾತ್ರವಲ್ಲ, ಅಮೋಘವರ್ಷಕರ್ತೃಕವೆನ್ನುವ, ಕಡೆಯದಾಗಿ ತೋರುವ ಆ ಶ್ಲೋಕವೊಂದೇ ಅನುಷ್ಟುಭ್ ಶ್ಲೋಕದಲ್ಲಿದೆಯಲ್ಲದೆ ಆದ್ಯಂತವಾದ ಇಪ್ಪತ್ತೊಂಬತ್ತೂ ಆರ್ಯಾವೃತ್ತದಲ್ಲಿ ಇವೆ ಎಂಬುದನ್ನು ಮರೆಯಬಾರದು. ಇದರೊಳಗಿನ ಎಲ್ಲ ಆರ್ಯಾವೃತ್ತಗಳೂ ಹೃದಯಂಗಮವಾಗಿದ್ದರೆ, ಮೂವತ್ತನೆಯದಾದ ನೃಪತುಂಗ ಕರ್ತೃಕತ್ವವನ್ನು ಸೂಚಿಸುವ ಆ ಭಿನ್ನ ವೃತ್ತದ ಶ್ಲೋಕವೊಂದೇ ನಿಷ್ಪ್ರಾಯವಾಗಿದೆ. ಅಷ್ಟೇ ಅಲ್ಲ; ಆದಿಯ ವೃತ್ತದಲ್ಲಿ 'ಪ್ರಶ್ನೋತ್ತರಮಾಲಿಕಾಂ ವಕ್ಷ್ಯೇ' ಎಂದು ಪ್ರಾರಂಭವಾಗಿ ಕಡೆಯ ವೃತ್ತದಲ್ಲಿ 'ರತ್ನ ಮಾಲೇವ ಪ್ರಶ್ನೋತ್ತರಮಾಲೇಯಂ. . . .' ಎಂದೇ ಇದರ ಹೆಸರು, 'ರತ್ನಮಾಲೆ' ಯೊಡನೆ ಹೋಲಿಕೆಗೊಂಡು ಸೂಚಿತವಾಗಿದೆ; ಕಡೆಯದರಲ್ಲಿ ಮಾತ್ರ 'ರತ್ನಮಾಲಿಕಾ' ಎಂಬುದೇ ಹೆಸರಾಗಿ ಕಾಣುತ್ತಿದೆ. ಅದರಿಂದಲೂ ಈ ಅನುಷ್ಟುಭ್ ಪ್ರಕ್ಷಿಪ್ತವಾಗಿಯೇ ಭಾಸವಾಗುವುದಲ್ಲವೆ?

ಮಾತ್ರವಲ್ಲ; ಚಾರಿತ್ರಿಕ ವಿದ್ವಾಂಸರು ಪರಾಂಬರಿಸಲೇಬೇಕಾದ ಇನ್ನೊಂದು ವಿಷಯವೂ ಈ ಸಂದರ್ಭದಲ್ಲಿದೆ. ಡಾ. ಕೆ. ಬಿ. ಪಾಠಕರು ಹೀಗೆನ್ನುತ್ತಾರೆ: "ಶ್ವೈಫ್ನರ್ (Schiefner) ಅವರು ಸಂಸ್ಕೃತದಿಂದ ಟಿಬೇಟ್ ಭಾಷೆಯಲ್ಲಿ ಭಾಷಾಂತರಿಸಿದ ಈ ಪುಸ್ತಕವು ನನಗೊದಗಿತು. ಕವಿತಾಕರ್ತೃವು ಅಮೋಘೋದಯ ಎಂಬ ರಾಜನು: ಅಮೋಘೋದಯನೆಂದರೆ ಅಮೋಘವರ್ಷನೇ ಸರಿ. ಈ ಕೃತಿಯ ಕಾಲವು ಶಾ.ಶ. ೭೯೭-೭೯೯ (ಕ್ರಿ.ಶ. ೮೭೫-೮೭೭)ರ ಮಧ್ಯಭಾಗ. ಶಾ.ಶ. ೭೯೭ರಲ್ಲಿ ನೃಪತುಂಗನು ತನ್ನ ಮಗನಾದ ಅಕಾಲವರ್ಷನನ್ನು ಪಟ್ಟಕ್ಕೇರಿಸಿದನು."[1]

ಅಮೋಘೋದಯನೂ ಅಮೋಘವರ್ಷನೂ ಅಭಿನ್ನರೆಂಬ ಸಿದ್ಧಾಂತಕ್ಕೆ ಡಾ. ಪಾಠಕರು ಯಾವ ಆಧಾರವನ್ನೂ ಒದಗಿಸಿಲ್ಲ.

ಮುಂದೆ ದೃಷ್ಟಾಂತಿಸುವ ಎರಡೂ ಶಾಸನಭಾಗಗಳು ನೃಪತುಂಗನು ಕ್ರಿ.ಶ. ೮೭೭ (ಶಾ.ಶ. ೭೯೯)ರಲ್ಲಿಯೂ ಸಿಂಹಾಸನಾರೂಢನಾಗಿದ್ದುದನ್ನು ಸೂಚಿಸುತ್ತಿವೆ.

> ಸ್ವಸ್ತ್ಯಮೋಘವರ್ಷವಲ್ಲಭ ಮಹಾರಾಜಾಧಿರಾಜ ಪರಮೇ[ಶ್ವ]ರ
> ಭಟಾರಕಾ ಪೃಥುವೀರಾಜ್ಯಂಗೆಯೆ ಬನವಾಸಿ ಪನ್ನಿರ್ಚ್ಛಾಸಿರ

[1] ಡಾ. ಕೆ. ಬಿ. ಪಾಠಕ (ಸಂ): 'ಕವಿರಾಜಮಾರ್ಗ', ಪೀಠಿಕೆ, ಪುಟ ೯.

ಮುಮೂನಿಸ್ದರಗೊಳೆ ಸಕವರ್ಷಮೇೞ್ನೂಱ ತೊಮ್ಬತೊಮ್ಬ
ತನೆಯ ಸಂವತ್ಸರಂ ಪ್ರವರ್ತಿಸೆ....

—ಸೊರಬ ಶಾಸನ ಭಾಗ[1]

ಓಂ ಸ್ವಸ್ತಿ ಶಕನೃಪಕಾಲಾತೀತ ಸಮ್ವತ್ಸರ ಶತೇಷು ಸಪ್ತಸು ನವ
ನವತ್ಯಧಿಕೇಷು ಅಂಕತಃ ೭೯೯ ಮಹಾರಾಜಾಧಿರಾಜ ಪರಮೇಶ್ವರ
ಶ್ರೀಮದಮೋಘವರ್ಷದೇವ ಪ್ರವರ್ಧಮಾನ ವಿಜಯರಾಜ್ಯೇ ತತ್ಪ್ರಸಾ
ದೀಕೃತ ಕೋಂಕಣವಲ್ಲಭ ಮಹಾಸಾಮಂತಶೇಖರ ಶ್ರೀಕಪರ್ದಿ
ಪ್ರವರ್ಧಮಾನಾಧಿಪತ್ಯೇ....

—ಕಾನ್ಹೇರಿ ಶಾಸನ ಭಾಗ[2]

ಈ ಎರೆಡೂ ಶಾಸನಗಳಿಂದಾಗಿ ಕ್ರಿ.ಶ. ೮೭೭ (ಶಾ.ಶ. ೭೯೯)ರಲ್ಲಿಯೂ ನೃಪತುಂಗನು 'ವಿವೇಕಾತ್ತ್ಯಕ್ತರಾಜ್ಯ'ನಾಗಿರಲಿಲ್ಲ, ರಾಜ್ಯಾಧಿರೂಢನಾಗಿಯೇ ಇದ್ದನು ಎಂಬುದು ಸಿದ್ಧ ವಾಗುತ್ತಿದೆ. ಇದರಿಂದ ಈ 'ಪ್ರಶ್ನೋತ್ತರಮಾಲಿಕೆ' ಎಂಬ ಮತಗ್ರಂಥದ ಕರ್ತೃತ್ವವು ನೃಪತುಂಗನಿಂದ ಕಳಚಿಹೋಗಿ, ತನ್ಮೂಲಕವಾಗಿ ಆತನು ಜೈನಮತೀಯನು ಎನ್ನುವ ಹೇಳಿಕೆಯೂ ಮಾಸಿಹೋಗುತ್ತಿದೆ.

'ಗಣಿತಸಾರಸಂಗ್ರಹ'ದೊಳಗಿನ ಆ ಹೇಳಿಕೆಯನ್ನಿನ್ನು ಪರಾಂಬರಿಸುವ. ಮಹಾವೀರಾ ಚಾರ್ಯನೇನೋ ನೃಪತುಂಗನ ಆಸ್ಥಾನದಲ್ಲೇ ಇದ್ದವನು; ಆದರೂ ಅವನದೆಂದು ತೋರುವ ಆ ಶ್ಲೋಕದ ಅಕ್ಷರರಚನೆಯನ್ನು ಯಥಾಸ್ಥಿತವನ್ನಾಗಿ ಹೇಗೆ ನಂಬುವುದು? ಅರಸನ ಮತಭಾವನೆ ಎಷ್ಟು ಉದಾತ್ತವಾಗಿದ್ದದು ಎಂಬುದು ಹಿಂದೆ ಸಂದರ್ಭಾನುಸಾರ ವಾಗಿ ಸೂಚಿತವಾಗಿದೆ. ಅವೆಲ್ಲವನ್ನೂ ಕ್ರೋಢೀಕರಿಸಿ ಮನಸ್ಸಂಪುಟದಲ್ಲಿರಿಸಿಕೊಳ್ಳಿರಿ. ಆಮೇಲೆ 'ವಿಧ್ವಸ್ತೈಕಾಂತ ಪಕ್ಷಸ್ಯ' ಅಥವಾ 'ಏಕಾಂತಮತವಾದಿಗಳಾದ ವೈಷ್ಣವ ಪಕ್ಷ ವನ್ನು ಧ್ವಂಸವೆಸಗಿದಾತನ' ಎಂಬ ಅರ್ಥದ ರಚನೆಯನ್ನೀಕ್ಷಿಸಿರಿ. ಹಿಂದೆ ದೃಷ್ಟಾಂತಿಸಿದ 'ಕಸವರಮೆಂಬುದು ಮಿಗೆ ಸೈರಿಸಲಾರ್ಪೊಡೆ ಪರವಿಚಾರಮುಂ ಧರ್ಮಮುಮಂ' ಎಂಬ ಉದಾತ್ತತೆಯ ಶಿಖರಕ್ಕೇರಿದ ಆ ಮಾತೆಲ್ಲಿ? ಸಂಕುಚಿತತೆ ಮೊನೆಯೂರಿ ಕರುಳನ್ನು ಕುಕ್ಕುವ ಈ 'ವಿಧ್ವಸ್ತೈಕಾಂತ ಪಕ್ಷಸ್ಯ' ಎಂಬ ಮಾತೆಲ್ಲಿ? ಅಜಗಜಾಂತರದ ಮಾತು ಗಳಿವು. ಅವನು 'ಸ್ಯಾದ್ವಾದ ನ್ಯಾಯವೇದಿ'ಯೂ ಆಗಿದ್ದಿರಬಹುದು: ಸರ್ವಮತಗಳಲ್ಲಿಯೂ ಸಮದೃಷ್ಟಿಯನ್ನಿಡಬೇಕಾದರೆ ಅಂಥವನೇ ಆಗಬೇಕು; ಆದರೆ 'ಸ್ಯಾದ್ವಾದ ನ್ಯಾಯವಾದಿ' ಎಂದಾಗಿರಲಿಕ್ಕಿಲ್ಲ. ಆದರಿಂದ, ಆ ಪದ್ಯಭಾಗವು ಪಾಠಾಂತರದಲ್ಲಿ ತೋರುವಂತೆ 'ವಿದ್ವ ದೈಕಾಂತ ಪಕ್ಷಸ್ಯ ಸ್ಯಾದ್ವಾದನ್ಯಾಯವೇದಿನಃ' ಎಂದೇ ಇದ್ದಿರಬೇಕು. ಮತ್ತಿನ ಲೇಖಕರ ಕರದೋಷದಿಂದಲೋ, ಅಥವಾ ಅಂಧೋತ್ಸಾಹದಿಂದಲೋ, ಹಾಗೆ ಮಾರ್ಪಟ್ಟಿರಬೇಕು. ನಾವು ಜೈನಮತದಲ್ಲಿ ವಿಶ್ವಾಸಭಕ್ತಿಗಳುಳ್ಳವರಷ್ಟೇ ಅಲ್ಲ; ಹಲವಂದಿ ಜೈನಮತೀಯರ,

[1] ಎಪಿಗ್ರಾಫಿಯಾ ಕರ್ಣಾಟಿಕ, ೮, ಸೊರಬ ನಂ. ೮೫.

[2] ಇಂಡಿಯನ್ ಅಂಟಿಕ್ವೆರಿ, ಸಂಪುಟ ೮, ಪುಟ ೧೩೩, ಅಮೋಘವರ್ಷನ ಕಾನ್ಹೇರಿ ಶಾಸನ.

ಜೈನಾಚಾರ್ಯರ ಪ್ರೇಮಾಶೀರ್ವಾದಗಳಿಗೂ ಪಾತ್ರರಾದವರು. ಆ ಧೈರ್ಯದಿಂದಲೇ ಇಂಥ ಹೇಳಿಕೆಗಳಿಂದ ದಾರಿದಪ್ಪಬಾರದು ಎಂದು ಪ್ರಾರ್ಥಿಸುತ್ತೇವೆ.

## ಇನ್ನೊಂದು ಆಕ್ಷೇಪ

ಈ ಸಂದರ್ಭದಲ್ಲಿ ಇನ್ನೊಂದು ಆಕ್ಷೇಪವು ತಲೆದೋರಬಹುದು. ಹಿಂದೆ ದೃಷ್ಟಾಂತಿಸಿದ ಕೊಣ್ಣೂರು ಶಾಸನದೊಳಗಿನ ೩೪ನೇ ಶ್ಲೋಕದಿಂದ ಮೇಲಿನ ಗದ್ಯಭಾಗ ಹೀಗಿದೆ:

> ತೇನ ಏವಂಭೂತೇನ ಬಂಕೆಯಾಭಿಧಾನೇನ ಮದಿಷ್ಟಭೃತ್ಯೇನ
> ಪ್ರಾರ್ಥಿತಸ್ಸನ್ ತತ್ಪ್ರಾರ್ಥನಯಾ ಮಾನ್ಯಖೇಟರಾಜಧಾನ್ಯಾಮವಸ್ಥಿತೇನ
> ಮಯಾ ಮಾತಾಪಿತ್ರೋರಾತ್ಮನಶ್ಚೈಹಿಕಾಮುತ್ರಿಕ ಪುಣ್ಯಯಶೋಭಿ
> ವೃದ್ಧಯೇ ಕೋಲನೂರೇ ತದ್ಬಂಕೆಯನಿರ್ಮಾಪಿತ ಜಿನಾಲಯ ಪರಿ
> ಪಾಲನ ನಿಯುಕ್ತಾಯ. . . .

'ಹೀಗಿರುವ ನನ್ನ ಆಪ್ತಭೃತ್ಯನಾದ ಬಂಕೆಯನಿಂದ ಪ್ರಾರ್ಥಿಸಲ್ಪಟ್ಟವನಾದೆನು. ಅದಕ್ಕನುವಾಗಿ ಮಾನ್ಯಖೇಟರಾಜಧಾನ್ಯವಸ್ಥಿತನಾದ ನನ್ನಿಂದ ಮಾತಾಪಿತೃಗಳಿಗೂ ನನಗೂ ಇಹಪರಗಳ ಪುಣ್ಯಕೀರ್ತ್ಯಭಿವೃದ್ಧಿಗಾಗಿ ಕೋಲನೂರಿನಲ್ಲಿ ಆ ಬಂಕೆಯನು ಕಟ್ಟಿಸಿದ ಜಿನಾಲಯದ ಪರಿಪಾಲನಕಾರ್ಯದಲ್ಲಿ ನಿಯುಕ್ತನಾದ ದೇವೇಂದ್ರ ಮುನೀಶ್ವರನಿಗೆ ಈ ದಾನಶಾಸನವನ್ನು ಬಂಕೆಯನೇ ನನ್ನಿಂದ ಮಾಡಿಸಿದನು'—ಇದು ಮೇಲಿನ ಶಾಸನಭಾಗದ ತಾತ್ಪರ್ಯಾರ್ಥ.

ನೃಪತುಂಗನು ಜೈನಮತಾನುಯಾಯಿ ಅಲ್ಲದಿರುತ್ತಿದ್ದರೆ, ಜೈನಬಸದಿಯ ಪಾಲಕನಾದ ದೇವೇಂದ್ರಮುನಿಗೆ ಕೊಡುವ ದಾನಶಾಸನದಲ್ಲಿ '. . . . ಐಹಿಕಾಮುತ್ರಿಕ ಪುಣ್ಯಯಶೋಭಿವೃದ್ಧಿ'ರೂಪವಾದ ಫಲಾಕಾಂಕ್ಷೆಯನ್ನು ಸೂಚಿಸುತ್ತಿದ್ದನೆ ?

ಪ್ರಶ್ನೆ ಇದು ಸಕಾರಣವಲ್ಲವೆಂದೇ ಹೇಳಿಬಿಡುವಂತಿಲ್ಲ. ಆದರೆ, ಈ ಪ್ರಶ್ನಕಾರರು, ಕೇಳಿದಷ್ಟೇ ಸಾವಧಾನತೆಯಿಂದ ಉತ್ತರವನ್ನೂ ಮಥಿಸಿ ಭಾವಿಸುವಷ್ಟು ಸ್ಥೈರಣೆಯುಳ್ಳವರಾಗಬೇಕು ಎಂದು ಪ್ರಾರ್ಥಿಸುತ್ತೇವೆ. ಈ ಕೊಳನೂರು (ಕೊಣ್ಣೂರು) ದಾನಶಾಸನದ ಕಾಲವು ಕ್ರಿ.ಶ. ೮೬೦ರಲ್ಲಾದರೆ ಸಂಜಾನ ಶಾಸನದ ಸಮಯವೆಂಬುದು ಕ್ರಿ.ಶ. ೮೭೧ರಲ್ಲಿ; ಎಂದರೆ ಮತ್ತಿನಮು ಹತ್ತು ವರ್ಷಾನಂತರ ನಡೆದುದು. 'ಬಂಕೆಯೋಽಯಮುದಾಪಯತ್'—ಬಂಕೆಯನು ಈ ದಾನಶಾಸನವನ್ನು ನನ್ನಿಂದ ಕೊಡಿಸಿದನು—ಎಂದು ಕಾಣುವುದರಿಂದ, ಕೊಳನೂರ ಶಾಸನವು ಪ್ರಸಿದ್ಧ ಜೈನವೀರನಾದ ಬಂಕೆಯನ ಇಷ್ಟಾರ್ಥ ತೃಪ್ತಿಗಾಗಿ ಮಾಡಿದುದಾದರೆ, ಸಂಜಾನ ಶಾಸನವು ಸ್ವೇಷ್ಟಪೂರ್ತಿಗಾಗಿಯೇ ಸಾಗಿತು ಎಂಬುದನ್ನು ಮರೆಯಲಾಗದು. ವೈದಿಕ ಬ್ರಾಹ್ಮಣರಿಗೆ ಸಮರ್ಪಿತವಾದ ಆ ಸಂಜಾನ ಶಾಸನದೊಳಗಿನ ೫೩ನೆಯ ಶ್ಲೋಕದಿಂದ ಮುಂದಿನ ಗದ್ಯಭಾಗವನ್ನು ವಿವೇಚಿಸಿರಿ :

> ...ಮಾನ್ಯಖೇಟರಾಜಧಾನ್ಯವಸ್ಥಿತೇನ ಮಯಾ ಮಾತಾಪಿತ್ರೋರಾತ್ಮನಶ್ಚ
> ಐಹಿಕಾಮುತ್ರಿಕ ಪುಣ್ಯಯಶೋಭಿವೃದ್ಧಯೇ ಕರಪಡ ವಿನಿರ್ಗತ ಭರ

ದ್ವ್ಯಾಜಾಗ್ನಿವೇಶ್ಯಾಂಗಿರಸ ಬಾರ್ಹಸ್ಪತ್ಯಾನಾಂ. . . . ಬ್ರಾಹ್ಮಣಾನಾಂ ಗ್ರಾಮೋ ದತ್ತಃ . . .[1]

ಕೊಳನೂರು ಶಾಸನದೊಳಗಿನ ಒಕ್ಕಣೆ ಅರ್ಥತಾತ್ಪರ್ಯಗಳು ಇಲ್ಲಿಯೂ ತೋರುತ್ತಿವೆ. ಏನು, ನೃಪತುಂಗನು ಹಿಂದೆ ಜೈನನಾಗಿದ್ದರೆ ಹತ್ತು ವರ್ಷ ಕಳೆದ ಮೇಲೆ ಸ್ಮಾರ್ತ ವೈದಿಕ ಮತವನ್ನು ಪುನಃ ಅಂಗೀಕರಿಸಿದನೆ? ಹಾಗಲ್ಲವಾದರೆ ಜೈನನಾಗಿದ್ದ ಆತನು ಈ ವೈದಿಕ ಬ್ರಾಹ್ಮಣರಿಗೆ ದಾನವಿತ್ತಲ್ಲಿ 'ಐಹಿಕಾಮುತ್ರಿಕ ಪುಣ್ಯ ಯಶೋಭಿವೃದ್ಧಿ'ಯನ್ನು ಪ್ರಾರ್ಥಿಸುವುದಾದರೂ ಹೇಗೆ? ಆ ಹಿಂದಣ ಪ್ರಶ್ನೆ ಇಲ್ಲಿಯೂ ಸಂಕಲೆಯಾಗಿ ಬಂಧಿಸುತ್ತಿದೆ. ನಿಜವಾಗಿ ಪರಾಂಬರಿಸಿದಲ್ಲಿ, ನೃಪತುಂಗನ ಮತವೆಂದರೆ ಅಂಥ ಸಂಕುಚಿತಮತವಲ್ಲ. 'ಉದಾರ' ವ್ಯಕ್ತಿಯ ಅತ್ಯುದಾತ್ತ ಮತವದು.

ನೃಪತುಂಗನು ನಾನಾ ಮತೀಯರಿಗೆ ಬಿಟ್ಟ ಶಾಸನಗಳು ಕೆಲವು ದೊರಕುತ್ತಿವೆ. ಬಂಕೆಯನಿಗಾಗಿ ದೇವೇಂದ್ರ ಮುನೀಂದ್ರನಿಗೆ ದಾನಮಾಡಿದ ಕೊಳನೂರ ಶಾಸನದಲ್ಲಿ ಮಾತ್ರ ಆದಿಯಲ್ಲಿ ಜಿನೇಂದ್ರಸ್ತುತಿ ಇದೆಯಲ್ಲದೆ, ಉಳಿದ ಎಲ್ಲ ಶಾಸನಗಳಲ್ಲಿಯೂ ವಿಶೇಷವಾಗಿ ಸಂಜಾನ ಶಾಸನದಲ್ಲಿಯೂ ಶಿವಸ್ತುತಿಯೇ ಇರುವುದು. ಅವನ ಆಸ್ಥಾನದಲ್ಲೇ ರಚಿತವಾದ 'ಕವಿರಾಜಮಾರ್ಗ'ದ ಮಂಗಳಾಚರಣೆಯು ಶ್ರೀವಿಷ್ಣು–ನೃಪತುಂಗರನ್ನು ಅಭಿನ್ನವಾಗಿ ಬಣ್ಣಿಸುವ ಕಂದರೂಪದಲ್ಲಿದೆ. ಈ ಎಲ್ಲ ಕಾರಣಗಳನ್ನು ಒಟ್ಟುಗೂಡಿ ನೋಡಿದಲ್ಲಿ, ನೃಪತುಂಗನು ಅತ್ಯುದಾತ್ತನಾಗಿದ್ದು ಸರ್ವಮತಸಹಿಷ್ಣುವಾಗಿದ್ದನೆಂಬಲ್ಲಿ ಸಂದೇಹವಿಲ್ಲ. ಆತನು ಲಕ್ಷ್ಮೀಭಕ್ತನೂ 'ವೀರನಾರಾಯಣ' ಎಂಬ ಬಿರುದುಳ್ಳವನೂ ಆದುದರಿಂದ ವೈಷ್ಣವನೆಂದು ಭಾವಿಸುವುದು ಉಚಿತವಾಗಿದೆ. ಅವನ ಈ ಮತೋದಾರತೆ ಸಂಜಾನ ಶಾಸನದಲ್ಲಿಯೂ 'ಕವಿರಾಜಮಾರ್ಗ'ದಲ್ಲಿಯೂ ವಿಶದವಾಗುತ್ತಿದೆ. ಆ ಮತೋದಾರತೆಯಿಂದಲೇ ಅವನಿಗೆ 'ಉದಾರ' ಎಂಬ ಬಿರುದು ಒದಗಿರಬೇಕೆಂದು ನಮ್ಮ ಭಾವನೆ. ಈ ಬಿರುದೇ 'ಕವಿರಾಜಮಾರ್ಗ'ದ ಆದಿಯ ಮಂಗಳ ಶ್ಲೋಕದಲ್ಲಿ 'ನೀತಿನಿರಂತರಂ ಉದಾರಂ ಆ ನೃಪತುಂಗಂ' ಎಂದು ಬಂದಿರುವುದನ್ನೂ ಪರಾಂಬರಿಸಿರಿ.

---

[1] ಸಂಜಾನ ಶಾಸನ ೫೩ನೆಯ ಶ್ಲೋಕದ ಅನಂತರದ ಗದ್ಯಭಾಗ–ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೮.

# ಕವಿರಾಜಮಾರ್ಗಕಾರನಾರು ?

## ನೃಪತುಂಗನೇ ಗ್ರಂಥಕಾರನು ಎಂಬ ಹೇಳಿಕೆಯೂ ತನ್ನಿರಾಸವೂ

ನೃಪತುಂಗನೇ 'ಕವಿರಾಜಮಾರ್ಗ'ವನ್ನು ಬರೆದುದು ಎನ್ನುವ ವಿದ್ವಾಂಸರ ವರ್ಗ ಒಂದಾದರೆ, ಅವನ ಸಭಾಸದನಾದೊಬ್ಬ ಕವೀಶ್ವರನು ಬರೆದುದು, ಎನ್ನುವ ವರ್ಗವಿನ್ನೊಂದು. ಈ ಎರಡು ಪಂಗಡಗಳ ವಾದವು ಅವನ ಮತವಿಷಯಕ ವಾದದಂತೆ, ಅಂದಿನಿಂದ ಇಂದಿನ ವರೆಗೂ ನಡೆಯುತ್ತಲೇ ಇವೆ. ಇಕ್ಕಡೆಗೂ ಆಧಾರಗಳಿವೆ; ಈ ಆಧಾರಗಳು ಹೆಚ್ಚಾಗಿ 'ಕವಿರಾಜಮಾರ್ಗ'ದಿಂದಲೆ ಎತ್ತಿಕೊಂಡವುಗಳು. 'ಕವಿರಾಜಮಾರ್ಗ'ದೊಳಗೆ ನೃಪತುಂಗನೇ ಈ ಗ್ರಂಥಕಾರನಾಗಿರಬಹುದೇ ಎಂಬ ಸಂದೇಹವನ್ನುಂಟುಮಾಡುವ ಕೆಲವೆಡೆಗಳಿವೆ. ಅದೇ ರೀತಿಯಲ್ಲಿ ಗ್ರಂಥಕಾರನು ತದ್ಭಿನ್ನನಾಗಿರಬೇಕು ಎಂದು ಸೂಚಿಸುವ ಹಲವು ದೃಷ್ಟಾಂತಗಳೂ ಇವೆ. ಅವುಗಳೊಳಗೆ ಮೂರೂ ಪರಿಚ್ಛೇದಗಳಲ್ಲಿ ತೋರುವಂತೆ, ನೃಪತುಂಗನು 'ಕವಿರಾಜಮಾರ್ಗ'ಕಾರನೋ ಎಂಬ ಸಂದೇಹವನ್ನುಂಟುಮಾಡುವ ಭಾಗಗಳು ಕೆಳಗಿನವುಗಳು :

ಪ್ರಥಮ ಪರಿಚ್ಛೇದ

| | | ಪದ್ಯಸಂಖ್ಯೆ |
|---|---|---|
| ೧. | ....ನರಲೋಕಚಂದ್ರ ಮತದಿಂ .... .... .... | ೨೩ |
| ೨. | ....ಅತಿಶಯಧವಳೋಕ್ತ ಕ್ರಮದೆ .... .... .... | ೨೪ |
| ೩. | ....ಉದಾರನೃಪತುಂಗದೇವ ವಿದಿತ ಕ್ರಮದಿಂ .... .... | ೪೪ |
| ೪. | ....ಕೃತಕೃತ್ಯ ಮಲ್ಲವಲ್ಲಭಮತದಿಂ .... .... .... | ೬೧ |
| ೫. | ....ನೃಪತುಂಗದೇವ ಮಾರ್ಗಕ್ರಮ .... .... .... | ೧೪೬ |
| ೬. | ....ಅತಿಶಯಧವಳೋರ್ವಿಪೋದಿತಾಳಂಕೃತಿ .... .... | ೧೪೭ |
| ೭. | ....ನೀತಿನಿರಂತರ ಕ್ರಮಂ .... .... .... | ೧೪೮ |

ದ್ವಿತೀಯ ಪರಿಚ್ಛೇದ

| | | |
|---|---|---|
| ೮. | ....ನೃಪತುಂಗವಿಚಾರಕ್ರಮಮಾರ್ಗಗಣನೆಯೊಳ್ .... .... | ೨ |
| ೯. | ....ಮಾರ್ಗಂ ನಿತ್ಯಮಲ್ಲವಲ್ಲಭ ಮತದಿಂ .... .... | ೧೧ |

## ತೃತೀಯ ಪರಿಚ್ಛೇದ



ಮೇಲೆ ತೋರುವ 'ನರಲೋಕಚಂದ್ರ', 'ಅತಿಶಯಧವಳ', 'ಉದಾರ', 'ಕೃತಕೃತ್ಯಮಲ್ಲ', 'ವಲ್ಲಭ', 'ನೀತಿನಿರಂತರ', 'ನಿತ್ಯಮಲ್ಲವಲ್ಲಭ', 'ಅಮೋಘವರ್ಷ', 'ಸರಸ್ವತೀತೀರ್ಥಾವತಾರ'—ಎಂಬವುಗಳು ನೃಪತುಂಗನ ಬಿರುದುಗಳು. ಅವನ ಹುಟ್ಟು ಹೆಸರು 'ಶರ್ವ'ನೆಂದೂ, 'ನೃಪತುಂಗ' ಎಂಬುದು ಬಿರುದುಗಳೊಳಗೆ ಒಂದೆಂದೂ ತಿಳಿದುಬರುತ್ತಿದೆ. ಇವಲ್ಲದೆ 'ಅಣ್ಣ', 'ದೇವ', 'ಗುಣೋದಯ' ಮೊದಲಾದುವೂ ಅವನ ನಾಮಧೇಯಗಳಾಗಿದ್ದುವು ಎಂಬುದಕ್ಕೆ ಬೇಕಾದಷ್ಟು ಆಧಾರಗಳಿವೆ. ಹಿಂದಿನ ಗ್ರಂಥಸ್ಥ ವಾಕ್ಯಗಳೊಳಗೆ 'ನರಲೋಕಚಂದ್ರಮತದಿಂ', '. . . ಉಕ್ತಕ್ರಮದೆ', '. . . ವಿದಿತಕ್ರಮದಿಂ', '. . . ಮಾರ್ಗಕ್ರಮ', '. . . ಉದಿತಾಳಂಕೃತಿ', '. . . ಕ್ರಮಮಾರ್ಗಗಣನೆ . . . . 'ಎಂದನತಿಶಯಧವಳಂ'. . .'ನೃಪತುಂಗ ದೇವನಾದರದೊಳೆ ಪೇೞ್ದ ಮಾರ್ಗಗತಿ' . . 'ಬೆಸಸಿದನಖಿಳಧರಾವಲ್ಲಭಂ', '. . . ಸರಸ್ವತೀತೀರ್ಥಾವತಾರಮಾರ್ಗನೆಸಕಂ',—ಇವೇ ಮೊದಲಾದ ಮಾತುಗಳು ನೃಪತುಂಗನೇ ಗ್ರಂಥಕಾರನೆಂಬ ಭಾವನೆಯನ್ನೊದಗಿಸುತ್ತಿವೆ. ಆದರೆ, ಈ ಸಂದರ್ಭದಲ್ಲಿ ಇನ್ನೊಂದು ವಿಷಯವನ್ನು ಮರೆಯಬಾರದು. ನೃಪತುಂಗನ ಆಸ್ಥಾನವನ್ನೊಂದಿ ಒಂದು ಮಹಾ ವಿದ್ವಾಂಸರ ಸಭೆ ಇತ್ತು. ಅದಕ್ಕೆ ಬಹುಶಃ 'ನೃಪತುಂಗ ಸಭೆ' ಎಂಬ ಹೆಸರಾಗಿತ್ತು. 'ಆಶ್ರಿತ ಮಹಾ ನೃಪತುಂಗ ಸಭಾಸದಂ' (iii, 219) ಎಂಬ 'ಕವಿರಾಜಮಾರ್ಗ'ದ ಪದ್ಯದಿಂದ ಈ ಸಂಗತಿ ತಿಳಿದುಬರುತ್ತಿದೆ. ಮಾತ್ರವಲ್ಲ; ಕನ್ನಡ ಸಾಹಿತ್ಯಕ್ಕೆ ಆ ವರೆಗೆ ಈ ಬಗೆಯ ಲಕ್ಷಣ ಗ್ರಂಥವು ಅಪೂರ್ವವಾಗಿದ್ದುದರಿಂದ, ಮುಂದಿನ ಸಾಹಿತ್ಯಕ್ಕಿದು ಆದರ್ಶವಾಗಿರಬೇಕು ಎಂಬ ಉದ್ದೇಶದಿಂದ, ಸ್ವತಃ ಸುಸಂಸ್ಕೃತ

ನಾದ ನೃಪತುಂಗನ ನಾಯಕತ್ವದಲ್ಲಿ ಸಭಾಸದರಾದ ವಿದ್ವಾಂಸರೆಲ್ಲರೂ ಈ ಗ್ರಂಥರಚನೆಯಲ್ಲಿ ನೆರವಾಗಿದ್ದರೆಂಬುದೂ 'ಕವಿರಾಜಮಾರ್ಗ'ದ ಆದ್ಯಂತ ಪದ್ಯಗಳಲ್ಲಿ ಹೊಳೆಯುತ್ತಿದೆ. ಮೂರೂ ಪರಿಚ್ಛೇದಗಳ ಕಡೆಯ ಗದ್ಯಗಳನ್ನು ಭಾವಿಸಿರಿ:

೧. ಇದು ಪರಮ ಶ್ರೀ ನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗದೊಳ್...

೨. ಇದು ಶ್ರೀ ನೃಪತುಂಗದೇವಾನುಮತಮಪ್ಪ. . . .

೩. ಇದು ಪರಮ ಸರಸ್ವತೀತೀರ್ಥಾವತಾರ ನೃಪತುಂಗದೇವಾನುಮತಮಪ್ಪ. . . .

ಇಲ್ಲಿಯ 'ಅನುಮತ' ಪದದಿಂದಲೇ ನೃಪತುಂಗನಿಗೂ ಗ್ರಂಥಕ್ಕೂ ಇರುವ ಸಂಬಂಧವು ಸ್ಫುಟವಾಗಿ ಸೂಚಿತವಾಗಿದೆ. 'ಅನುಮತ'—'ವಿರಚಿತ' ಪದಗಳು ಸಂಪೂರ್ಣ ಭಿನ್ನಾರ್ಥಕಗಳಲ್ಲವೆ? ನೃಪತುಂಗನೂ ಸಭಾವಿದ್ವಾಂಸರೂ ಕನ್ನಡ ಸಾಹಿತ್ಯ ಮಾರ್ಗವಿವೇಚನೆಯನ್ನು ಅಲ್ಲಲ್ಲಿ ಸೂಚಿಸಿರಬೇಕು. ವಿಶೇಷವಾಗಿ, ನೃಪತುಂಗನು, ಗ್ರಂಥಕ್ಕೆ ಆಶ್ರಯದಾತನೂ ಮಹಾಸಭೆಯ ವಿಶಿಷ್ಟ ನಾಯಕನೂ ಆದುದರಿಂದ, ಅವನನ್ನು ಪರಿಚ್ಛೇದಗಳ ಆದಿಪದ್ಯಗಳಲ್ಲೂ ಅಂತ್ಯಗದ್ಯಗಳಲ್ಲೂ ಗ್ರಂಥಕಾರನು ಹಾಗೆ ಸ್ತುತಿಸಿದ್ದಾನೆ. ಅಲ್ಲಲ್ಲಿ ತಲೆಮರಸಿ ನುಸುಳಿಹೋದ ತಪ್ಪುಗಳನ್ನು ತಿದ್ದಿ ಒಪ್ಪುಗಳನ್ನು ಬೆಳಗಿದ ಸಭಾಸದರಾದ ವಿದ್ವಾಂಸರನ್ನೂ ಆದ್ಯಂತ ಭಾಗಗಳೊಳಗಿನ ಅಂಥ ಎರಡು ಪದ್ಯಗಳಲ್ಲಿ ಸ್ಮರಿಸಿದುದನ್ನೀಕ್ಷಿಸಿರಿ:

ಶ್ರುತದೊಳ್ ಭಾವಿಸಿ ನೋಟ್ಪೊಡೆ
ಸತತಂ ಕವಿವೃಷಭರಾ ಪ್ರಯೋಗಂಗಳೊಳಂ
ಕೃತಪರಿಚಯಬಲನಪ್ಪನ
ಸತಿಶಯಧವಳನ ಸಭಾಸದರ್ ಮನ್ನಿಸುವರ್— (i, 5)

ಅಂತು ಬಿಟ್ಟಿ ತೆಱದಿಂ ವರಗೀತಗುಣೋದಯೈ
ಕಾಂತ [ಕಾಂತ][1] ವಿಷಯಾಶಯರಾಗಿ ನಿರಾಕುಳಂ
ಸಂತತಂ ನುಡಿಗಳೊಳ್ ಬಗೆ ಪೆರ್ಚೆರೆ ಪೇೞ್ವವರ್
ಸಂತಸಂಬಡಿಸುವರ್ ನೃಪತುಂಗಸಭಾಸದರ್— (iii, 224)

ಕಡೆಯ ಈ ಪದ್ಯದ ತಾತ್ಪರ್ಯಾರ್ಥವನ್ನೂ ಒಂದಿಷ್ಟು ಭಾವಿಸಿರಿ:

"ಗುಣೋದಯನಾದ ನೃಪತುಂಗನ ಏಕಾಂತವಾಗಿ ಹೊಳೆಯುವ ವಿಷಯನೆಂದರೆ ಸಾಹಿತ್ಯಧರ್ಮವಾದ ಗುಣದೋಷವರ್ಗವನ್ನು ವಿವೇಚಿಸಿ ನಿರ್ಧರಿಸುವುದೇ. ಆದರಿಂದ, ಅದರೊಳಗೇ ಮಗ್ನವಾಗಿ ಲಕ್ಷ್ಯ ಲಕ್ಷಣಗಳನ್ನು ನಿರೂಪಿಸುವ ಮಾತುಗಳಲ್ಲಿ, ಮನಸ್ಸು ಅಷ್ಟಿಷ್ಟು ಗುರಿದಪ್ಪಿಹೋದಾಗ ನೃಪತುಂಗ ಸಭಾಸದರು—'ಪರಾಂಬರಿಸಯ್ಯಾ, ಇಲ್ಲಿ ಈ ರೀತಿಯಾದರೆ ಹೆಚ್ಚಿನ ಅರ್ಥಭಾವಗಳ ಪುಷ್ಟಿಯಾಗಬಹುದು. ಅಲ್ಲಿ ಆ ರೀತಿಯಾದರೆ ವಿಶೇಷವಾದ ತಾತ್ಪರ್ಯ ಪೋಷಣೆಯಾಗಬಹುದು' ಎಂದು ಮೊದಲಾಗಿ ಬೋಧಿಸಿ ಸಮಾಧಾನಪಡಿಸಿ ಗುರಿಗೊಳಿಸುತ್ತಿದ್ದರು."

[1] ಅಚ್ಚಾದ ಎರಡು ಪ್ರತಿಗಳಲ್ಲಿಯೂ ಕಂಸದೊಳಗಿನ ಭಾಗವು ಲುಪ್ತವಾಗಿದೆ. ['ಕಾಂತ'] ಎಂಬುದನ್ನು ಸೇರಿಸಿ ಗ್ರಂಥಪಾತವನ್ನು ಸರಿಗೊಳಿಸಿದುದು ನಾವು.

ಹೀಗೆ ತನ್ನ ಗ್ರಂಥವನ್ನು ಅಲ್ಲಲ್ಲಿ ತಿದ್ದಿದ ನೃಪತುಂಗ ಸಭಾಸದರಲ್ಲಿರುವ ಕೃತಜ್ಞತೆಯನ್ನು ಗ್ರಂಥಕಾರನು ಸ್ಮರಿಸಿದ ಪದ್ಯವಿದು. ಇದೇ ಪದ್ಯದಿಂದ 'ಗುಣೋದಯ'ನಾದ ನೃಪತುಂಗನ ಹೃದಯದಲ್ಲಿ ಕನ್ನಡ ಸಾಹಿತ್ಯಾಭಿವೃದ್ಧಿವಿಷಯಕವಾದ ಉದ್ದೇಶವು ನೆಲೆಗೊಂಡಿತ್ತೆಂಬುದೂ ಖಚಿತವಾಗುತ್ತಿದೆ. ವಿಶೇಷವಾಗಿ ಅಂತ್ಯಗದ್ಯಗಳಲ್ಲಿ 'ನೃಪತುಂಗದೇವಾನುಮತ' ಎಂದೇ ಇರುವುದರಿಂದ, ಮೇಲೆ ದೃಷ್ಟಾಂತಿಸಿದ ಪದ್ಯಭಾಗಗಳಲ್ಲಿ ತೋರುವ 'ಉಕ್ತಕ್ರಮ', 'ಎಂದನತಿಶಯಧವಳಂ', 'ಬೆಸಸಿದಂ'—ಎಂಬ ಮಾತುಗಳೂ ನೃಪತುಂಗನು ತನ್ನ ಸಮ್ಮತಿಯನ್ನಿತ್ತುದನ್ನೇ ಸೂಚಿಸುತ್ತಿವೆ. ಈ ಎಲ್ಲ ಭಾಗಗಳಲ್ಲಿಯೂ ಪ್ರಥಮಪುರುಷಕ್ರಿಯಾಪದ-ನಾಮಪದಗಳಿಂದಲೆ ನೃಪತುಂಗನನ್ನು ಸೂಚಿಸುವುದೂ ಆತನು ಗ್ರಂಥಕಾರನಲ್ಲವೆಂಬುದನ್ನೆ ಪೋಷಿಸುತ್ತಿದೆ.

ಈ ಸಂದರ್ಭದಲ್ಲಿ ನೃಪತುಂಗನೇ ಈ ಗ್ರಂಥಕಾರನೆಂಬುದನ್ನು ವಾದಿಸುವವರು ಇನ್ನೊಂದು ಆಧಾರವನ್ನು ಕೊಡುತ್ತಾರೆ: ಭಟ್ಟಾಕಳಂಕನ (ಕ್ರಿ.ಶ. ೧೬೦೪) 'ಶಬ್ದಾನುಶಾಸನ'ದೊಳಗೆ 'ಆದೇನಃ' ಎಂದು ೨೮೮ನೆಯ ಸೂತ್ರವಿದೆ.[1] ಅದನ್ನು ವಿಸ್ತರಿಸುವಲ್ಲಿ 'ಮಂಜರೀಮಕರಂದ' ಎಂಬ ಆ ಗ್ರಂಥದ ವ್ಯಾಖ್ಯಾನದೊಳಗೆ 'ದಕ್ಷಿಣೋತ್ತರಮಾರ್ಗಭೇದಭಿನ್ನಪ್ರಯೋಗಚಾತುರೀಪ್ರಪಂಚೋ ನೃಪತುಂಗಗ್ರಂಥೇ ದ್ರಷ್ಟವ್ಯಃ' ಎಂದು ತೋರುತ್ತಿದೆ.[2] ಈ ಗ್ರಂಥಕಾರನು ಮಹಾವಿದ್ವಾಂಸನೇನೋ ಸರಿ. ಆದರೂ ಬಹಳ ಮಟ್ಟಿಗೆ ಆಧುನಿಕನಾದುದರಿಂದ ನಿಷ್ಕೃಷ್ಟವಾದ ಆ ಹಿಂದಿನ ಚಾರಿತ್ರಿಕ ವಿಚಾರ ನಿರ್ಧಾರವನ್ನು ಈತನ ಈ ಒಂದು ಹೇಳಿಕೆಯಿಂದಲೇ 'ಇದಮಿತ್ಥಂ' ಎನ್ನುವುದು ಸರಿಯಲ್ಲ. ಮಾತ್ರವಲ್ಲ; ಇವನ ಹೇಳಿಕೆಯಾದರೂ ಏನು ?—'ನೃಪತುಂಗಗ್ರಂಥ' ಎಂದು. ನೃಪತುಂಗದೇವಾನುಮತ ಗ್ರಂಥವನ್ನು ಹಾಗೆ ಕರೆದಲ್ಲಿ ದೋಷವೇನೂ ಭಾವನಾದೃಷ್ಟಿಗೆ ತೋರಲಾರದು. ಚಿಕ್ಕದೇವರಾಜನ ಆಶ್ರಯದಲ್ಲಿಯೂ ಮುಮ್ಮಡಿ ಕೃಷ್ಣರಾಜನ ಆಶ್ರಯದಲ್ಲಿಯೂ ಆಯಾ ರಾಜಕರ್ತೃಕಗಳೆಂದು ತೋರುವ ಹಲವು ಗ್ರಂಥಗಳನ್ನು ಆಯಾ ಆಸ್ಥಾನದ ವಿದ್ವಾಂಸರು ಬರೆದುದೆಂದು ನಿರ್ಧಾರವಾಗಿದೆ. ಅದರಿಂದ ಇಲ್ಲಿ 'ನೃಪತುಂಗದೇವಾನುಮತ' ಗ್ರಂಥವನ್ನೇ ಈ ವ್ಯಾಖ್ಯಾಕಾರನು 'ನೃಪತುಂಗಗ್ರಂಥ' ಎಂದುದರಲ್ಲಿ ಆಶ್ಚರ್ಯವೇನೂ ಇಲ್ಲ.

ಈ 'ಕವಿರಾಜಮಾರ್ಗ'ದೊಳಗಿನದೇ ಆದ ಇನ್ನೊಂದು ಪದ್ಯವನ್ನು ಈ ಸಂದರ್ಭದಲ್ಲಿ ಪರಿಶೀಲಿಸುವ :

ಅವಜಿ ವಿಪರ್ಯಯವೃತ್ತಿ
ಪ್ರವಿಭಕ್ತವಿಕಲ್ಪಮುಕ್ಕುಮುತ್ತರಮಾರ್ಗಂ
ಸವಿಶೇಷಗುಣಮನತಿಶಯ
ಧವಳೋಕ್ತಿಕ್ರಮದಿನಱಿಪುವೆಂ ತದ್ಭವದೊಳ್ —(ii, 53)

---

[1] ಆರ್. ನರಸಿಂಹಾಚಾರ್ಯ (ಸಂ), ಭಟ್ಟಾಕಳಂಕನ 'ಶಬ್ದಾನುಶಾಸನ', ಸೂತ್ರ ೨೮೮, ಪುಟ ೨೬೨.

[2] ಅದೇ ಗ್ರಂಥ, ಪುಟ ೨೬೩.

ವೈದರ್ಭಮಾರ್ಗಭಿನ್ನವಾದ ಗೌಡಮಾರ್ಗದೊಳಗಿನ, ಅಥವಾ ಉತ್ತರ ಮಾರ್ಗದೊಳಗಿನ, ಗುಣಗಳನ್ನು ಮೇಲಿಂಪ ಮೇಲೆ ನಿರೂಪಿಸುವ ಪದ್ಯವಿದು. ಅವುಗಳನ್ನು 'ಅತಿಶಯಧವಳೋಕ್ತ ಕ್ರಮದಿಂ ತದ್ಭವದೊಳ್ ಅಱಿಪುವೆಂ' ಎನ್ನುತ್ತಾನೆ. ಇಲ್ಲಿ ತೋರುವ 'ತದ್ಭವದೊಳ್' ಎಂಬ ಪದಕ್ಕೆ ಅವನ ಆಶ್ರಯದಿಂದ ಸಂಭವಿಸಿದ ಗ್ರಂಥವೆಂದೇ ಅರ್ಥ. ಹಾಗಲ್ಲದೆ 'ಅವನಿಂದ ರಚಿತವಾದ ಗ್ರಂಥದಲ್ಲಿ' ಎಂದು ಅರ್ಥವಾಗುತ್ತಿದ್ದರೆ, ಮುಂದೆಯೇ 'ಅಱಿಪುವೆಂ' ಎಂದು ಗ್ರಂಥಕಾರನು ತನ್ನನ್ನೇ ಸೂಚಿಸುವುದು ಹೇಗೆ? ಗ್ರಂಥಕ್ಕಾಶ್ರಯವಿತ್ತುದಲ್ಲದೆ ಅಲ್ಲಲ್ಲಿ ತನ್ನ ಸುಸಂಸ್ಕೃತ ಸಾಹಿತ್ಯವಿಚಾರಗಳನ್ನು ಸೂಚಿಸಿದ ನೃಪತುಂಗನನ್ನು ಪ್ರಥಮಪುರುಷ ನಾಮಪದದಿಂದಲೂ, ತನ್ನನ್ನು ಉತ್ತಮಪುರುಷ ಕ್ರಿಯಾಪದದಿಂದಲೂ ಕವಿ ಈ ಒಂದೇ ಪದ್ಯದಲ್ಲಿ ಕಾಣಿಸಿದುದರಿಂದ, ನೃಪತುಂಗನು ಗ್ರಂಥಕಾರನಲ್ಲ ಎಂಬಲ್ಲಿ ಸಂದೇಹವೇ ಇಲ್ಲವಾಗುತ್ತಿದೆ.

## 'ಕವಿರಾಜಮಾರ್ಗ'ಕಾರನು ನೃಪತುಂಗ ಸಭಾಸದ

ಉತ್ತಮ ಪುರುಷ ಸರ್ವನಾಮ ಕ್ರಿಯಾಪದಗಳಿಂದ ಕವಿ ತನ್ನನ್ನು ಸೂಚಿಸಿಕೊಳ್ಳುವ ಸಂದರ್ಭ ಇದೊಂದೇ ಅಲ್ಲ; ಇನ್ನೂ ಹಲವಿವೆ. ಆಯಾ ದೃಷ್ಟಾಂತಭಾಗಗಳನ್ನೀಕ್ಷಿಸಿರಿ:

### ಪ್ರಥಮ ಪರಿಚ್ಛೇದ

| | ಪದ್ಯಸಂಖ್ಯೆ |
|---|---|
| ೧. . . . ಅತಿಶಯಧವಳಂ ನಮಗೀಗೆ .... .... .... | ೨ |
| ೨. . . . ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್ .... .... | ೩ |
| ೩. . . . ಅಂತಿಸಿ ಮತ್ತೆನ್ನಱಿವುದುಮಂ ತಱಸಲ್ ಬುಧಜನಕ್ಕೆ ಕೆಲವಂ ಪೇೞ್ವೆಂ .... .... .... | ೪೭ |
| ೪. . . . ಪೇೞ್ವೆನುದಾಹರಣಂಗಳಂ .... .... .... | ೧೨೫ |
| ೫. . . . ತೋರುವೆಂ ಕ್ರಮವಿಕಲ್ಪನೆಯಿಂ .... .... | ೧೩೦ |
| ೬. . . . ಕಿಱಿದಱೊಳಱಿಯೆ ಪೇೞ್ವೆಂ .... .... | ೧೩೬ |

### ದ್ವಿತೀಯ ಪರಿಚ್ಛೇದ

| | |
|---|---|
| ೭. . . . ನಿಶ್ಚಿತಮಕ್ಕೆ ಪೇೞ್ವ ಮಾೞ್ಕೆಯೊಳೆನ್ನಾ .... .... | ೩ |
| ೮. . . . ಪೇೞ್ವೆನಿನಿಸಂ ಕನ್ನಡದೊಳ್ .... .... .... | ೪೪ |
| ೯. . . . ಪೇೞ್ವೆನಱಿವ ಮಾೞ್ಕೆಯೊಳೆನ್ನಾ .... .... | ೪೯ |
| ೧೦. . . . ಕ್ರಮದಿನಱಿಪುವೆಂ ತದ್ಭವದೊಳ್ .... .... | ೫೩ |
| ೧೧. . . . ಸುವಿಚಾರಿತಮಿಾ ತೋರ್ಪೆಂ .... .... | ೧೧೧ |
| ೧೨. . . . ಪೇೞ್ವೆಂ ದುಷ್ಕರೋಕ್ತಿಯಂ .... .... .... | ೧೪೧ |

## ತೃತೀಯ ಪರಿಚ್ಛೇದ



ಹಿಂದೆ ಕಾಣಿಸಿದ ದೃಷ್ಟಾಂತಗಳ ಸಾಲಿನಲ್ಲಿ ನೃಪತುಂಗನನ್ನು ಪ್ರಥಮ ಪುರುಷ ನಾಮಪದದಲ್ಲಿಯೂ, ಈ ಸಾಲಿನಲ್ಲಿ ಗ್ರಂಥಕಾರನು ತನ್ನನ್ನು ಉತ್ತಮಪುರುಷ ಸರ್ವನಾಮ ಕ್ರಿಯಾಪದಗಳಿಂದಲೂ ಸೂಚಿಸಿದುದೇ, ನೃಪತುಂಗನೂ ಗ್ರಂಥಕಾರನೂ ಭಿನ್ನವ್ಯಕ್ತಿಗಳು ಎಂಬುದನ್ನು ನಿರ್ಧರಿಸಲು ಸಾಕಾಗಿದೆ. ಮಾತ್ರವಲ್ಲ; ಹಿಂದೆ ಕಾಣಿಸಿದಂತೆ, ಕೆಲವು ದೃಷ್ಟಾಂತ ಭಾಗಗಳು ಏಕೈಕ ಪದ್ಯಗಳಲ್ಲೇ ಅವರಿಬ್ಬರೂ ಭಿನ್ನವ್ಯಕ್ತಿಗಳೆಂಬುದನ್ನು ಅಲ್ಲಲ್ಲಿಯೇ ಸ್ಫುಟವಾಗಿ ಹೊಳೆಯಿಸುತ್ತಿವೆ. ಬೇಕಾದರೆ ಆ ಭಾಗಗಳನ್ನೆಲ್ಲ ಪರಾಂಬರಿಸಿರಿ :

೧. . . . ಅತಿಶಯಧವಳಂ ನಮಗೀಗೆ (i, 2)
೨. . . . ಸವಿಶೇಷ ಗುಣಮನತಿಶಯ ಧವಳೋಕ್ತಿಕ್ರಮದಿನಱಪುವೆಂ (ii, 53)
೩. . . . ಅತಿಶಯಧವಳೋರ್ವೀಪೋದಿತಾಳಂಕೃತಿಮತಿ ನೀತಿನಿರಂತರ ಪ್ರತೀತಂ (i, 147)

ಇದರಿಂದ ಈ ಗ್ರಂಥರಚನೆಯಲ್ಲಿ, ಅಥವಾ ಈ ಮೂಲಕವಾಗಿ ಕನ್ನಡ ಸಾಹಿತ್ಯ ಮಾರ್ಗವನ್ನು ವಿಸ್ತರಿಸುವಲ್ಲಿ, ನೃಪತುಂಗನ ಸಾಹಿತ್ಯ ಪರಿಭಾವನಾ ಪರಿಪಕ್ವಬುದ್ಧಿ ಬಹಳವಾಗಿ ನೆರವಾಗಿತ್ತೆಂದು ವ್ಯಕ್ತವಾಗುತ್ತಿದೆ; ಅದೇ ಸಮಯದಲ್ಲಿ ಪ್ರಕೃತ ಗ್ರಂಥವನ್ನು ಈ ರೂಪಕ್ಕೆ ತಂದ ಕವಿ ಇನ್ನೊಬ್ಬನೆಂಬುದೂ ವಿಶದವಾಗುತ್ತಿದೆ. ಮೇಲಿನ ಮೂರನೆಯ ದೃಷ್ಟಾಂತದಲ್ಲಿ 'ಅತಿಶಯಧವಳ'ನು ಸೂಚಿಸಿದ ಈ ಮಾರ್ಗಭೇದದ ಗತಿಯನ್ನು 'ನೀತಿ ನಿರಂತರ'ನೆಂಬ ಬಿರುದುಳ್ಳ ವಿದ್ವಾಂಸನು ಈ ಗ್ರಂಥರೂಪದಲ್ಲಿ ಪ್ರತೀತಿಗೊಳಿಸಿದುದು, ಎಂಬುದೂ ಸ್ಫುಟವಾಗುತ್ತಿದೆ. 'ನೀತಿನಿರಂತರ' ಎಂದು ನೃಪತುಂಗನಿಗೆ ಮಾತ್ರ ಇದ್ದ ಬಿರುದೆಂದು ಕೆಲವರ ಭಾವನೆಯಾಗಿತ್ತು. ಆದರೆ, ಈ ಪದ್ಯದಲ್ಲಿ ಎರಡು ಬಿರುದುಗಳೂ ತೋರಿ 'ಅತಿಶಯಧವಳ'ನು ಈ ಮಾರ್ಗವನ್ನು ಮೊದಲು ಸೂಚಿಸಿದವನೆಂದೂ 'ನೀತಿ ನಿರಂತರ'ನು ಇದನ್ನು ವಿಸ್ತರಿಸಿದನೆಂದೂ ಕಾಣುವುದರಿಂದ, ಇಲ್ಲಿ ತೋರುವ 'ನೀತಿನಿರಂತರ' ನೆಂಬ ಮತ್ತಿನ ಬಿರುದು ಗ್ರಂಥಕಾರನಿಗೇ ಸಂಬಂಧಿಸಿದುದಾಗಿರಬೇಕು. 'ಕವಿರಾಜ ಮಾರ್ಗ'ದ ಮೊದಲನೆಯ ಪದ್ಯದಲ್ಲೇ 'ನೀತಿನಿರಂತರನುದಾರನಾ ನೃಪತುಂಗಂ' ಎಂದಿರು ವುದರಿಂದ ಆ 'ನೀತಿನಿರಂತರ' ಬಿರುದು ನೃಪತುಂಗನಿಗೂ ಇದ್ದುದೇನೋ ಸರಿ. ಆದರೂ, ಮೇಲಿನ ಮೂರನೇ ದೃಷ್ಟಾಂತದ ಹೇಳಿಕೆಯಲ್ಲಿ ತೋರುವ ಆ ಬಿರುದು ಈ ಗ್ರಂಥರಚಕ ವ್ಯಕ್ತಿಗೇ ಸಂಬಂಧಿಸಿದುದು ಎಂದು ಭಾವಿಸಬೇಕು. ಈ ಭಾವನೆ, ದ್ವಿತೀಯ ಪರಿಚ್ಛೇದ

ದೊಳಗೆ ಮಾರ್ಗಸಂದರ್ಭಾನುಸಾರವಾಗಿ ರಸಯೋಜನೆಗೆಯ್ಯಬೇಕು ಎಂಬುದನ್ನು ವಿಸ್ತರಿಸುವಲ್ಲಿಯೂ ತೋರುವುದನ್ನೀಕ್ಷಿಸಿರಿ:

. . . . ನೃಪತುಂಗದೇವಮಾ
ರ್ಗೋತ್ಸವಮೂರ್ಜಿತೋಕ್ತಿಗಳಿನಕ್ಕತಿರೌದ್ರರಸಂ ರಸಾವಹಂ —(ii, 98)

. . . . . . .
. . . . . . .
ನೀತಿನಿರಂತರಾನುಗತವೃತ್ತಿವಿಕಲ್ಪಿತಮಂ ತದೀಯ ನಿ
ರ್ಣೀತಿಯನೀತೆಱತ್ತು ತಱಿಸಲ್ಗೆ ಬುಧೋತ್ತಮರುಕ್ತಿ ಪೂರ್ವಕಂ —(ii, 99)

ಈ ಹೇಳಿಕೆಯಿಂದ ನೃಪತುಂಗದೇವನ ಆಶ್ರಯದ ಕನ್ನಡ ಸಾಹಿತ್ಯ ಮಾರ್ಗವು ಸೂತ್ರರೂಪವಾಗಿ—ಎಂದರೆ ಅತಿ ಸಂಕ್ಷಿಪ್ತವಾಗಿ—ಇದ್ದುದೆಂದೂ, ಅದನ್ನು ಅನುಗಮಿಸಿ ಬರೆದ ಈ 'ನೀತಿನಿರಂತರ'ನ 'ವೃತ್ತಿವಿಕಲ್ಪಿತ'ವು—ಅಲ್ಲವೆ ವ್ಯಾಖ್ಯಾನ ವಿವರಣೆ—ವಿಸ್ತರವಾಗಿರುವುದೆಂದೂ, ಈ ವೃತ್ತಿವಿಕಲ್ಪಿತರೂಪಗ್ರಂಥವೇ ಈ 'ಕವಿರಾಜಮಾರ್ಗ'ವೆಂದೂ 'ಈ ತೆಱತ್ತು ತಱಿಸಲ್ಗೆ' (ಈ ರೀತಿಯಲ್ಲಿ ನಿರ್ಣಯಿಸಲಿ) ಎಂಬೀ ಹೇಳಿಕೆಯಿಂದ ನಿಶ್ಚಿತವಾಗುತ್ತಿದೆ. 'ವೃತ್ತಿ' ಎಂದರೆ ಹಿಂದಣ 'ಸೂತ್ರ'ದ ವ್ಯಾಖ್ಯಾನವೆಂಬುದು ವಿದ್ವಾಂಸರಿಗೆ ಗೊತ್ತಿರುವ ಸಂಗತಿ. ಇದರಿಂದ, ಈ ವೃತ್ತಿರೂಪದ ಗ್ರಂಥಕ್ಕಾಧಾರವಾಗಿ ಹಿಂದೆ ನೃಪತುಂಗನು ಬರೆದ ಅಥವಾ ಸ್ವಾಭಿಪ್ರಾಯಸೂಚಕ ಸೂತ್ರಾತ್ಮಕ ಗ್ರಂಥವಿತ್ತು ಎಂದು ಭಾವಿಸಬೇಕಾಗಿಲ್ಲ. ಈ ಗ್ರಂಥನಿರ್ಮಾಣಕ್ಕೆ ನೆರವಾಗಿ ನೃಪತುಂಗಸಭಾಸದರಾದ ಹಲಮಂದಿ ವಿದ್ವಾಂಸರು ಹಿತಸೂಚನೆಗೆಯ್ಯುತ್ತಿದ್ದರೆಂಬುದು ಗೊತ್ತಾಗಿದೆಯಷ್ಟೆ. ಅದರಂತೆ, ಅಲ್ಲಲ್ಲಿ ನೃಪತುಂಗನೂ ಮಾರ್ಗಭೇದಸೂಚನೆಯನ್ನೆಸಗುತ್ತಿದ್ದನೆಂದೂ ವಿಶದವೇ ಆಗಿದೆ. ಅಂಥ ನೃಪತುಂಗನ ಸೂಚನೆಯನ್ನೇ ಈ ವೃತ್ತಿರೂಪ ಗ್ರಂಥಕ್ಕೆ ಸೂತ್ರವೆಂದು ಗ್ರಂಥಕಾರನು ಆಡಿದುದಾಗಿರಬಹುದು. ಈ ಹೇಳಿಕೆಯನ್ನು ಇನ್ನಷ್ಟು ಬೇರೂರಿಸಲು ಹಿಂದೆ ದೃಷ್ಟಾಂತಿಸಿದ ಪದ್ಯಭಾಗವೆ ಸಾಕಾಗಿದೆ. ಅದನ್ನು ಇನ್ನೊಮ್ಮೆ ಪರಾಂಬರಿಸಿರಿ:

ವಿಪುಳವೃತ್ತಿಯೊಳೊಂದಿರೆ ಪೇೞ್ವೆನ
ಭ್ಯುಪಮಿತೋಕ್ತಿ ಗುಣಾವಗುಣಂಗಳಂ —(i, 142)

ಇಲ್ಲಿಯೂ ತನ್ನ ಈ ಗ್ರಂಥವೆಂದರೆ ಯಾವುದೋ ಸೂತ್ರಕ್ಕೆ 'ವಿಪುಳವೃತ್ತಿ' ಎಂಬುದನ್ನು ಪರಾಂಬರಿಸಿರಿ. ಇದರಿಂದ, ಈ ವೃತ್ತಿರೂಪದ 'ಕವಿರಾಜಮಾರ್ಗ'ವನ್ನು ಬರೆದಾತನು ನೃಪತುಂಗಸಭಾಸದನಾದ ಬೇರೊಬ್ಬ ವಿದ್ವಾಂಸನೆಂಬಲ್ಲಿ ಸಂಶಯವೇ ಇಲ್ಲವೆಂತಾಗುತ್ತದೆ.

## ಶ್ರೀವಿಜಯನೇ ಗ್ರಂಥಕಾರ

ಹಾಗಿದ್ದರೆ, ಈ ಗ್ರಂಥಕಾರನ ಹೆಸರೇ ಮೊದಲಾದ ಹೊಲಬುಗಳಾವುವು? ಎಂಬ ಪ್ರಶ್ನೆ ತಲೆದೋರುತ್ತಿದೆ. ಮೂರೂ ಪರಿಚ್ಛೇದಗಳ ಕಡೆಯ ಪದ್ಯಗಳಲ್ಲಿ ಕ್ರಮವಾಗಿ ಗ್ರಂಥಕಾರನ ಹೆಸರೇ ತೋರುವುದನ್ನೆಣಿಸಿರಿ:

೧. . . . . ಕವಿಪ್ರಕರಂ ಶ್ರೀವಿಜಯಪ್ರಭೂತಮನಿದಂ ಕೈಕೊಳ್ವುದೀ
ಮಾಣ್ಕೆಯಿಂ (i, 149)
೨. . . . . ಶ್ರೀವಿಜಯ ಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ (ii, 153)
೩. . . . . ಪರಮ ಶ್ರೀವಿಜಯ ಪ್ರಭೂತಿಜಯಶಂ ಸ್ತ್ರೀಬಾಲವೃದ್ಧಾಹಿತಂ
ಪರಮಾನಂದಿತಲೋಕಮೊಪ್ಪೆ ನೆಲೆಗೊಳ್ಗೆ . . . . (iii, 236)

ಈ ಹೇಳಿಕೆಗಳೊಳಗೆ ಮೊದಲಿನದು ಕವಿಸಮೂಹವನ್ನು ಕುರಿತು ಗ್ರಂಥಕಾರನೇ 'ಇದಂ'—ಎಂದರೆ ಈ 'ಕವಿರಾಜಮಾರ್ಗ'ನಾಮಕ ಗ್ರಂಥವನ್ನು—'ಕೈಕೊಳ್ವುದು' ಎಂದು ಪ್ರಾರ್ಥಿಸುವ ಮಾತು. 'ಶ್ರೀ ವಿಜಯಪ್ರಭೂತಮನಿದಂ' ಎಂದರೆ 'ಶ್ರೀವಿಜಯನೆಂಬಾತನಿಂದ ಉತ್ಪನ್ನವಾದ ಈ ಗ್ರಂಥವನ್ನು' ಎಂದು ಅರ್ಥ. ಇದರಿಂದ ಗ್ರಂಥಕಾರನ ಹೆಸರು ಇಲ್ಲಿ ಅತಿ ಸ್ಫುಟವಾಗಿದೆ. ಹೀಗಿರುವಲ್ಲಿ, 'ಕವಿರಾಜಮಾರ್ಗ'ವನ್ನು ರಚಿಸಿದಾತನು ಯಾರು? ಎಂಬ ವಿಷಯದಲ್ಲಿ ವಿದ್ವಾಂಸರೊಳಗೆ ಯಾಕೆ ವಿವಾದವೆದ್ದುದೋ ತಿಳಿಯದಾಗಿದೆ. ಆದರೆ, ಮತ್ತಿನ ಎರಡೂ ಪರಿಚ್ಛೇದಗಳ ಕಡೆಯ ತಾತ್ಪರ್ಯಗಳು ಅಷ್ಟು ವಿಶದವಾಗದುದರಿಂದಲೇ ವಿದ್ವಾಂಸರೊಳಗೆ ವಾದವೆದ್ದಿರಬೇಕೆಂದು ಭಾವಿಸಬಹುದೆ?

ಈ ಗ್ರಂಥವನ್ನು ನಿರ್ಮಿಸಿದುದು ಮಾರ್ಗೀಯ ವಿದ್ವತ್ಕವಿಗಳ ವಿಾಸಲಾದ ಪ್ರಯೋಜನಕ್ಕಾಗಿ. ಆ ಮಟ್ಟಕ್ಕೇರದ ಕೆಳಗಿನ ತರಗತಿಯ ದೇಸಿಗಬ್ಬಿಗರನ್ನು ಗುರಿಯಿಟ್ಟು ಇದು ರಚಿತವಾದುದಲ್ಲ. ಈ ಭಾವನೆ ಗ್ರಂಥದೊಳಗೆ ಅಲ್ಲಲ್ಲಿ ಶಬ್ದತಃ ತೋರುತ್ತಿದೆ. ಹಿಂದೆ ದೃಷ್ಟಾಂತಿಸಿದ 'ಬುಧಜನಕ್ಕೆ ಕೆಲವಂ ಪೇೞ್ವೆಂ', 'ಅತಿ ನಿಪುಣರೞ್ಗೆ ತೋರ್ಪೆಂ'—ಇತ್ಯಾದಿ ಪದ್ಯಭಾಗಗಳಿಂದಲೂ ಆ ಭಾವನೆ ನಿಶ್ಚಿತವಾಗುತ್ತಿದೆ. ಅದಕ್ಕನುವಾಗಿಯೇ ಗ್ರಂಥಕಾರನು ಪ್ರಥಮ ಪರಿಚ್ಛೇದಾಂತ್ಯದಲ್ಲಿ ಈ 'ಕವಿರಾಜಮಾರ್ಗ'ವನ್ನು 'ಕವಿಪ್ರಕರ' ಸಾಮಾನ್ಯಕ್ಕೆ ಕಾಣಿಕೆಯಾಗಿ ಒಪ್ಪಿಸಿದ್ದಾನೆ. ದ್ವಿತೀಯ ಪರಿಚ್ಛೇದಾಂತ್ಯದಲ್ಲಿ, ಆ 'ಕವಿ ಪ್ರಕರ'ದೊಳಗೆ ವಿಶಿಷ್ಟವಾದ ಆಗಿನ ಕಾಲದ ಯಾರೋ ಒಬ್ಬ ಕವೀಶ್ವರನು ಈ ಶ್ರೀವಿಜಯ ಗ್ರಂಥದಿಂದೊದಗಿದ ಆನಂದವನ್ನು ಸ್ವೀಕರಿಸಿದನು ಎಂಬ ಅಂಶವನ್ನು 'ಶ್ರೀವಿಜಯ ಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ' ಎಂದು ಸಾರಿದ್ದಾನೆ. ಬಹುಶಃ ನೃಪತುಂಗನ ಮಹಾಸಭೆಯೊಳಗಿನ ಕವೀಶ್ವರನೊಬ್ಬನು ಈ ಲಕ್ಷಣಗ್ರಂಥದಿಂದ ವಿಶೇಷವಾಗಿ ಆನಂದಗೊಂಡು ತದನುಸಾರವಾಗಿ ಒಂದು ಕಾವ್ಯವನ್ನು ಬರೆದಿರಬೇಕು. ಪ್ರಥಮ ಪರಿಚ್ಛೇದಾಂತ್ಯದಲ್ಲಿ ಗ್ರಂಥಕಾರನು ತಾನೆಸಗಿದ ಪ್ರಾರ್ಥನೆ ಸಫಲವಾಗಲಾರಂಭಿಸಿತು, ಎಂಬುದನ್ನೇ ದ್ವಿತೀಯ ಪರಿಚ್ಛೇದಾಂತ್ಯದಲ್ಲಿ ಈ ರೀತಿಯಲ್ಲಿ ಸೂಚಿಸಿರಲೂ ಬಹುದು. ಹೀಗೆ ಕವಿಸಾಮಾನ್ಯಕ್ಕೆ ಸಮರ್ಪಿತವಾಗಿ, ಕವಿವಿಶೇಷದಿಂದ ಅಂಗೀಕೃತವಾದ ಈ ಗ್ರಂಥದ ಕೀರ್ತಿ ಅಥವಾ 'ಶ್ರೀವಿಜಯ ಪ್ರಭೂತಿಜಯಶಸ್ಸು'[1] 'ಸ್ತ್ರೀಬಾಲ

[1] ಶ್ರೀ ವಿಜಯನಿಂದ ನಿರ್ಮಿತವಾದ 'ಕವಿರಾಜಮಾರ್ಗ'ವೇ ಶ್ರೀವಿಜಯಪ್ರಭೂತಿ; ಅದರಿಂದ ಉತ್ಪನ್ನವಾದ ಕೀರ್ತಿಯೇ ಶ್ರೀ ವಿಜಯ ಪ್ರಭೂತಿಜಯಶಂ. ಇಲ್ಲಿ ಬಹುಶಃ '. . . . 'ಪ್ರಭೂತಿ'

ವೃದ್ಧಾಹಿತ'[1]ವಾಗಿ 'ಆಚಂದ್ರತಾರ'ಪರ್ಯಂತವಾಗಿ ನೆಲೆಗೊಳ್ಳಲಿ ಎಂದು ತೃತೀಯ ಪರಿಚ್ಛೇದಾಂತ್ಯದಲ್ಲಿ ಪ್ರಾರ್ಥಿಸುತ್ತಾನೆ. ಹೀಗೆ ತಾತ್ಪರ್ಯಾರ್ಥವನ್ನು ಮನನಮಾಡಿ ಕೊಂಡಲ್ಲಿ ಗ್ರಂಥಕಾರನ ಉದ್ದೇಶವೂ ಗುರಿಗೊಂಡಂತಾಗುವುದು; ವಿದ್ವಾಂಸರೊಳಗೆ ಒದಗಿದ ವಾದವು ನಿವೃತ್ತವಾಗುವುದು—ಎಂದು ಸೂಚಿಸುತ್ತೇವೆ. ಇದೇ ಗ್ರಂಥದ ಪ್ರಥಮ ಪರಿಚ್ಛೇದದೊಳಗೆ 'ಪರಮ ಶ್ರೀವಿಜಯ ಕವೀಶ್ವರ ಪಂಡಿತ ಚಂದ್ರ ಲೋಕ ಪಾಲಾದಿಗಳಾ' (1, 33) ಎಂದು ಮುಂತಾಗಿ ಸ್ತುತಿಸುವ ಕನ್ನಡ ಕವಿಗಳ ಸಾಲಿನಲ್ಲಿ ಮೊದಲಿನವನಾಗಿ ಒಬ್ಬ 'ಶ್ರೀವಿಜಯ'ನ ಹೆಸರು ತೋರುತ್ತಿದೆ. ಅದು ಪ್ರಕೃತ ಗ್ರಂಥ ಕಾರನಾದ ಶ್ರೀವಿಜಯನ ಹೆಸರಲ್ಲ ಎಂದು ತಾನಾಗಿ ಗೊತ್ತಾಗುವ ಸಂಗತಿ. ತಾನೇ ತನ್ನನ್ನು ಸ್ತುತಿಸುತ್ತಾನೇನು ? ಮಾತ್ರವಲ್ಲ; ಆ ಪದ್ಯದ ಮುಂದಿನ ಭಾಗದಲ್ಲಿ ಆ ಕವಿಗಳ 'ನಿರತಿಶಯ ವಸ್ತುವಿಸ್ತರವಿರಚನೆ'—ಎಂದರೆ ವಸ್ತುಕ ಕಾವ್ಯಗಳು, ಅಥವಾ ಅರ್ಥವೇ ಪ್ರಧಾನವಾಗಿರುವ ಅರ್ಥಕೃತಿಗಳು—'ಆದ್ಯ ಕಾವ್ಯಕ್ಕೆ ಎಂದುಂ ಲಕ್ಷ್ಯಂ' ಎನ್ನುತ್ತಾನೆ. ಅದರಿಂದ, ಆ ಶ್ರೀವಿಜಯನೆಂದರೆ ಕನ್ನಡದ ಪುರಾತನ ಕವಿಗಳೊಳಗೆ ಪ್ರಮುಖನಾದ ಕವಿ ಯೊಬ್ಬನು ಎಂಬುದು ಅವನ ಹೇಳಿಕೆಯಿಂದಲೇ ವಿದಿತವಾಗುತ್ತಿದೆ.

## ಶ್ರೀವಿಜಯನು ಹಲವುಂದಿ ಪ್ರಸಿದ್ಧ ಕವಿಗಳಿಂದ ಸ್ತುತನಾದವನು

ಮತ್ತಿನ ಕನ್ನಡ ಸಾಹಿತ್ಯದಲ್ಲಿ ಪಂಪರನ್ನಾದಿಗಳನ್ನು ಹಲಮುಂದಿ ಕನ್ನಡ ಕವಿಗಳು ಕೊಂಡಾಡಿದ್ದಾರೆ. ಹಾಗೆಯೇ ಕನ್ನಡ ಸಾಹಿತ್ಯ ಲಕ್ಷಣಶಾಸ್ತ್ರಕ್ಕೆ ಮೊತ್ತಮೊದಲು ತಳ ಹದಿಯನ್ನೆ ಕಟ್ಟಿದಂತೆ ತೋರುವ ಈ ಶ್ರೀವಿಜಯನನ್ನು ಹೆಸರೆತ್ತಿ ಹೊಗಳಿದವರೂ ಇದ್ದಾರೆ. ಅವರೊಳಗೆ ದುರ್ಗಸಿಂಹನು (ಕ್ರಿ.ಶ. ಸುಮಾರು ೧೧೪೫) ತನ್ನ 'ಪಂಚತಂತ್ರ' ದಲ್ಲಿ ಹೀಗೆನ್ನುತ್ತಾನೆ :

ಶ್ರೀವಿಜಯರ ಕವಿಮಾರ್ಗಂ
ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೆಯ್
ದೀವಿಗೆಯುಮಾದುದದಱಿಂ
ಶ್ರೀವಿಜಯರ್ ದೇವರನೇವಣ್ಣಿಪುದೋ[2] —(i, 5)

ಇಲ್ಲಿಯ 'ಕವಿಮಾರ್ಗಂ' ಎಂದರೆ ಈ ಪ್ರಕೃತದ 'ಕವಿರಾಜಮಾರ್ಗ'ವಲ್ಲ, ಎಂದು ಕೆಲವರು

---

ಎಂಬಲ್ಲ; ಹಿಂದಿನವುಗಳಂತೆ 'ಪ್ರಭೂತಜಯಶಾ' ಎಂದೇ ಮೂಲದಲ್ಲಿದ್ದಿರಬೇಕು ಎಂದು ಸೂಚಿಸುತ್ತೇವೆ.

[1] ಸ್ತ್ರೀ ಬಾಲ ವೃದ್ಧರಲ್ಲಿ ಆಹಿತವಾಗಿ, ಎಂದರೆ ಆರೋಪಿಸಲ್ಪಟ್ಟುದಾಗಿ ಎಂದು ತಾತ್ಪರ್ಯ. ಅಷ್ಟೊಂದು ಸಂಸ್ಕೃತಿಯನ್ನೊಂದದ, ದೇಸಿಯಲ್ಲೇ ಬಳಕೆವಡೆದ ಸ್ತ್ರೀಬಾಲವೃದ್ಧರಲ್ಲಿಯೂ ಈ ಗ್ರಂಥದ ಕೀರ್ತಿ ನೆಲೆಗೊಳ್ಳಲಿ, ಎಂಬುದೇ ಈ ಪ್ರಾರ್ಥನಾಭಾಗದ ಅರ್ಥ. ಇಲ್ಲಿ 'ವೃದ್ಧ ಆಹಿತ' ಎಂದು ಪರಿಚ್ಛೇದವೆಂಬುದನ್ನು ಮರೆಯಬಾರದು.

[2] ದುರ್ಗಸಿಂಹನ 'ಪಂಚತಂತ್ರ' (ಕರ್ಣಾಟಕ ಕಾವ್ಯಮಂಜರಿ ಗ್ರಂಥಮಾಲೆ), ೧೯೬೮, ಪುಟ ೫.

ಸಂದೇಹಿಸಿದಂತೆ ತೋರುತ್ತಿದೆ.[1] ಪದ್ಯದ ಪಾದರಚನೆಗನುವಾಗಿ 'ರಾಜ' ಪದವನ್ನು ಲೋಪಿಸಿದರೂ ಅರ್ಥದಲ್ಲಿ ಲೋಪವಾದಂತಿಲ್ಲ. ಈ ಗ್ರಂಥವನ್ನು ಆತನು ಕವಿಜನರ ಹಿತಾರ್ಥವಾಗಿ ಬರೆದುದೆಂದು ಅಲ್ಲಲ್ಲಿ ತೋರುತ್ತಿದೆ. ದುರ್ಗಸಿಂಹನು ಅದನ್ನೆ 'ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೈದೀವಿಗೆಯುಮಾದುದು'—ಎಂದರೆ 'ಕವಿತಾ ಸಂಸ್ಕಾರ ಪ್ರದವಾಗಿ ಕವಿಹೃದಯಕ್ಕೂ ಕಾವ್ಯಲೇಖನಕ್ಕೂ ನೆರವಾಗುತ್ತಿದೆ', ಎನ್ನುತ್ತಾನೆ. ಇಂಥ ಗ್ರಂಥವೆಂದರೆ 'ಕವಿರಾಜಮಾರ್ಗ'ವೇ ಸರಿ. ಮಾತ್ರವಲ್ಲ ; 'ಶ್ರೀವಿಜಯರ' ಎಂದು ದುರ್ಗ ಸಿಂಹನಿಂದ ಬಹುವಚನವನ್ನೊಂದಬೇಕಾದರೆ ಗ್ರಂಥಕಾರನು ಲೋಕಮಾನ್ಯನೇ ಆಗಿರ ಬೇಕು. '. . . . ಚಂದ್ರಭಟ್ಟ ಗುಣವರ್ಮ ಶ್ರೀವಿಜಯರ. . . . ಸುಮಾರ್ಗಮಿದ ಆಚೂಳೆ ಲಕ್ಷ್ಯಂ[2] ಎಂದು ಶಬ್ದಶಾಸ್ತ್ರಜ್ಞನಾದ ಕೇಶಿರಾಜನು ಸ್ತುತಿಸುವ ಶ್ರೀವಿಜಯನೂ ಈತನೇ ಆಗಿರಬೇಕು. ಇವರಂತೆ ಮಂಗರಸನೂ ತನ್ನ 'ನೇಮಿಜಿನೇಶ ಸಂಗತಿ'ಯಲ್ಲಿ 'ದೇವ ಚಂದ್ರಪ್ರಭರನು ಕೊಂಡಾಡಿದ ಶ್ರೀವಿಜಯರ. . . . ವಂದಿಪೆನು'[3] ಎಂದು ಬಹುವಚನ ದಿಂದಲೇ ಸೂಚಿಸುವುದರಿಂದ, ಈತನು ಲೋಕಪೂಜ್ಯನಾಗಿರಬೇಕು. ಅಂತೂ ಈತನ ಹೆಸರು ಶ್ರೀವಿಜಯನೆಂದಾಗಿತ್ತೆಂಬಲ್ಲಿ ಸಂಶಯವೇನೂ ತೋರುವುದಿಲ್ಲ. ಮಾತ್ರವೇ ಅಲ್ಲ; ವೈದಿಕಮತಾನುಯಾಯಿ ದುರ್ಗಸಿಂಹ ಕವೀಶ್ವರನಿಂದಲೂ 'ಶ್ರೀವಿಜಯರ. . .' ಎಂದು ಬಹುವಚನವನ್ನೊಂದಬೇಕಾದರೆ ಈತನಲ್ಲಿ ಅಂಥದೊಂದು ಮಹಿಮೆಯೂ ಇದ್ದಿರಲೇಬೇಕು. ಆದರೆ ಈತನು ಕನ್ನಡನಾಡಿನೊಳಗೆ ಯಾವ ಪ್ರಾಂತದವನು, ಯಾವ ಮತದವನು—ಮೊದಲಾದುವನ್ನು ಸರಿಯಾಗಿ ಗುರಿಗೊಳಿಸುವ ಹೊಲಬುಗಳು ಇದುವರೆಗೆ ತಿಳಿದಿಲ್ಲ. ಅಂಥವುಗಳೇನಾದರೂ ಗೊತ್ತಾಗುವಂತಿವೆಯೋ ನೋಡುವ.

## ಜಯೊಟ್ಟಿ ಅಥವಾ ಜಯು—ಎಂಬುದು ಗ್ರಂಥಕಾರನ ಮೂಲನಾಮ

'ಕವಿರಾಜಮಾರ್ಗ'ದ ದ್ವಿತೀಯ ಪರಿಚ್ಛೇದದೊಳಗೆ ಅನೇಕ ಚಿತ್ರಬಂಧಗಳನ್ನು ನಿರೂಪಿ ಸುವ ಸಂದರ್ಭದಲ್ಲಿ ಒಂದು ಚಕ್ರಬಂಧ ಶ್ಲೋಕವೂ ತೋರುತ್ತಿದೆ. ಚಕ್ರಬಂಧದೊಳಗೆ ಬಲು ಬಗೆಯ ಭೇದಗಳಿವೆ. ಇದು ಅವುಗಳೊಳಗೆ ಒಂದಾದ ಷಡರ ಚಕ್ರಬಂಧ. ಗಾಡಿಯ ಚಕ್ರವನ್ನು ನಿರ್ಮಿಸುವುದಕ್ಕೆ ಸಾಧಕಗಳಾಗುವ ಅಡ್ಡಕೋಲುಗಳಿಗೆ 'ಅರ' ಎಂದು ಹೆಸರು. ಇದರೊಳಗೆ ಅಂಥ ಆರು 'ಅರ'ಗಳಿರುವುದರಿಂದ ಇದು ಷಡರ ಚಕ್ರಬಂಧ ಎನ್ನಿಸುವುದು.

ಈ ಚಕ್ರಬಂಧ ಶ್ಲೋಕವು ಈವರೆಗೆ ಅಚ್ಚಾದ 'ಕವಿರಾಜಮಾರ್ಗ'ದ ಎರಡು ಪ್ರತಿ ಗಳಲ್ಲೂ ಇದೆ. ಪ್ರಥಮ ಪ್ರತಿಯಲ್ಲಿ ಸಂಪಾದಕರಾಗಿದ್ದ ಕೈ.ವಾ. ಡಾಕ್ಟರ್ ಕೆ. ಬಿ.

---

[1] ನಾ. ಶ್ರೀ. ರಾಜಪುರೋಹಿತ, 'ಕವಿರಾಜಮಾರ್ಗ ಗ್ರಂಥದ' ಕರ್ತೃವು ಯಾರು ?' ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೬, ಸಂಚಿಕೆ ೨, ಪುಟ ೧೧೨.

[2] 'ಶಬ್ದ ಮಣಿದರ್ಪಣ' (ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪ್ರಕಟನೆ), ಪುಟ ೩.

[3] ಎ. ಶಾಂತಿರಾಜ ಶಾಸ್ತ್ರಿ (ಸಂ.), ಮಂಗರಸನ 'ನೇಮಿಜಿನೇಶ ಸಂಗತಿ', i, ೨೪.

ಪಾಠಕರು ಈ ಚಕ್ರಬಂಧದ ವಿಷಯವಾಗಿ ಏನೂ ಹೇಳಿಲ್ಲ. ಮದರಾಸಿನ ಪ್ರತಿಯನ್ನು ಪ್ರಕಟಿಸಿದ ವಿದ್ವಾಂಸರು 'ಈ ಬಂಧದಲ್ಲಿ ಅಂತಹ ವಿಷಯವು ತಿಳಿಯುವಂತಿಲ್ಲ' ಎಂದು ಹೇಳಿಬಿಟ್ಟಿದ್ದಾರೆ.[1] ಆದರೆ, ಅಂಥ ವಿಶಿಷ್ಟ ಲಕ್ಷಣವು ಇಲ್ಲವಾದರೆ ಇದು ಚಕ್ರಬಂಧವೆನ್ನಿಸುವುದಾದರೂ ಹೇಗೆ? ಆ ವಿಷಯವಂತಿರಲಿ; ಈ ಪದ್ಯವನ್ನು ಕೆಳಗೆ ಸಾಮಾನ್ಯವಾಗಿ ದೃಷ್ಟಾಂತಿಸಿ, ಆಮೇಲೆ ವಿಶೇಷವಾಗಿ ಚಕ್ರಾಕಾರದ ಬಂಧದಲ್ಲಿರಿಸಿ, ಪರಾಂಬರಿಸುವ:

> ಸಂತಂ ಬಾೞ್ವುದು ಮಿೞಿದಾ ನರಪನೊಳ್ ಸೌಜನ್ಯ ಲಕ್ಷ್ಮೀಮದಾಂ
> ಧಂ ತನ್ನಿಶ್ಚಯಮಚ್ಚಿನಿಂ ಪರಗುಣೌದಾರ್ಯಾಭಿಮಾನಂಗಳಿಂ
> ಪಿಂತಂ ನೋೞದೆ ಪಾೞಿಗೆಟ್ಟುೞಿಪಿನಿಂ ಬಾೞ್ವಂತೆ ಬಾೞ್ವಯ್ಯನಾ
> ಸಂತಂ ತಾಂ ಪಸತಂದನಟ್ತು ಪೆಱುಗುಂ ದಾನಂಗಳಂ ಭೂಪನಾ (ii, 142)

(ಮದರಾಸು ಪ್ರತಿ)



[1] 'ಕವಿರಾಜಮಾರ್ಗ' (ಮದರಾಸು ಪ್ರತಿ), ಪರಿಶಿಷ್ಟ ೭, ಪುಟ ೧೭೬.

ಈ ಬಂಧನನ್ನೀಕ್ಷಿಸಿದಲ್ಲಿ 'ಷಡರ' ಎಂದರೇನೆಂಬುದು ಗೊತ್ತಾಗುವುದು. ಚಕ್ರರೇಖಾನುಸಾರವಾದ ಈ ಬಂಧದಲ್ಲಿ ಸಂಖ್ಯಾ ಸಂಜ್ಞೆಗಳಿಂದ ಅಂಕಿತಗಳಾದ ಆರು ಅರ(ಕೋಲು)ಗಳನ್ನು ಕಾಣಬಹುದು. ವಿವೇಚಿಸಿದಲ್ಲಿ, ಮೂರು ಅರಗಳೇ, ಎಲ್ಲವಕ್ಕೂ ಸಾಮಾನ್ಯವಾದ ನಡುವಣ ಅಕ್ಷ(ಅಚ್ಚು)ದಲ್ಲಿ ಹಾಯ್ದು ಮುಂದೈದಿ ಕೊನೆಗೊಂಡುದರಿಂದ, ಹಿಂದಣ ಆ ಮೂರು ಅರಗಳೇ ಮತ್ತಿನ ಮೂರು ಅರಗಳಾಗಿ ಕೂಡಿ ಷಡರಗಳಾದವು, ಎಂಬುದೂ ಸ್ಫುಟವಾಗುತ್ತಿದೆ. ಅದರಿಂದ, ನಿಜವಾಗಿ ಪರಾಂಬರಿಸಿದರೆ ಇಲ್ಲಿರುವುದು ಮೂರೇ ಅರಗಳು. ಈ ಅರಗಳೊಳಗೆ ಪ್ರತಿಯೊಂದರಲ್ಲಿಯೂ ಹತ್ತೊಂಬತ್ತು ಅಕ್ಷರಗಳು ನೆಲಸುವಂತೆ ಹತ್ತೊಂಬತ್ತು ಸಂಪುಟಗಳಿವೆ. ಅಕ್ಷ ಸಂಪುಟವು ಒಂದೇ ಆದರೂ ಅದರೊಳಗಿನ ಅಭಿನ್ನಾಕ್ಷರವು ಮೂರೂ ಅರಗಳಲ್ಲಿರುವ ಪಾದಗಳಿಗೆ ಬೇರೆಬೇರಾಗಿ ಸೇರುತ್ತಿವೆ. ಮೂರನೆಯ ಪಾದದ ಕಡೆಯ ಅಕ್ಷರವೇ ನಾಲ್ಕನೆಯ ಪಾದದ ಆದ್ಯಂತ್ಯಾಕ್ಷರಗಳಾಗಿದ್ದು, ಆ ಕರೆಯ—ಎಂದರೆ, ಸುತ್ತುಗೊಳ್ಳುವ—ರೇಖೆಯಲ್ಲಿಯೇ ಕ್ರಮಬದ್ಧವಾಗಿ ಸುತ್ತುವರಿದು, ಎತ್ತಿದ ಅಕ್ಷರದಲ್ಲೇ ಅಂತ್ಯವಾಗುತ್ತಿದೆ. ಈ ಬಂಧಕ್ರಮಕ್ಕನುವಾಗಿ ಶ್ಲೋಕಾಕ್ಷರಗಳು ಅಲ್ಲಲ್ಲಿ ನಿಬದ್ಧಗಳಾಗಿರಬೇಕು. ಈ ನಿಯಮಕ್ಕೆ ಶ್ಲೋಕಾಕ್ಷರಗಳು ಸರಿಗೂಡದಿದ್ದಲ್ಲಿ ಚಕ್ರಬಂಧವೇ ಸರಿಯಾಗಿಲ್ಲವೆಂದು, ಅಥವಾ ಮಾತೃಕೆಯಲ್ಲಿ ತಪ್ಪುಬಿದ್ದಿದೆ ಎಂದು, ಭಾವಿಸಬೇಕು. ಪ್ರಕೃತ ಶ್ಲೋಕದ ಎರಡೂ ಪಾದಗಳ ಹತ್ತನೆಯ ಅಕ್ಷರಗಳು 'ರ' ಆಗಿರುವುದರಿಂದ ಅಕ್ಷಸ್ಥಾನವು ಸರಿಗೊಂಡರೂ ಮೂರನೆಯ ಪಾದದ ಆ ಸ್ಥಾನಾಕ್ಷರವು 'ಱ' ಎಂದು ತೋರಿ ಸಂಗಮಿಸುವುದಿಲ್ಲ. ಇಂಥ ಉದ್ಗ್ರಂಥಕಾರನು ತಪ್ಪಿಹೋಗಿದ್ದಾನೆ ಎನ್ನುವುದಕ್ಕಿಂತಲೂ, ಇದು ಮತ್ತಿನ ಮಾತೃಕಾಕಾರರ ಹಸ್ತದೋಷವೆಂದೇ ಹೇಳಬೇಕು. ಮೂರನೆಯ ಪಾದದ ಆ ಅಕ್ಷರವು 'ಱ'ಕಾರವಾಗಿ ಇದ್ದಿರಬೇಕು. ಇಂಥ ದುಷ್ಕರ ಕಾವ್ಯಬಂಧಗಳಲ್ಲಿ ರ—ಱಕಾರ ಭೇದಗಳನ್ನಷ್ಟೇ ಅಲ್ಲ; ಕ, ಖ, ದ, ಧ, ಮೊದಲಾದ ಏಕಜಾತೀಯಗಳಾದ ಅಲ್ಪಾಕ್ಷರ ಮಹಾಪ್ರಾಣಾಕ್ಷರಗಳೊಳಗಿನ ಭೇದವೂ ಪರಿಗಣಿಸಲ್ಪಡುವುದಿಲ್ಲ. ಮಾತ್ರವಲ್ಲ, ಬಿಂದು, ಒತ್ತು, ವ್ಯಂಜನ ಮೊದಲಾದುವುಗಳು ಮಾತೃಕೆಯಲ್ಲಿ ಹೆಚ್ಚಾಗಿದ್ದರೆ ಬಿಡಲೂಬಹುದು, ಇಲ್ಲವೆ ಸಂದರ್ಭಕ್ಕೆ ನ್ಯೂನವಾದಲ್ಲಿ ಸೇರಿಸಿಕೊಳ್ಳಲೂಬಹುದು, ಎಂದು ಮುಂತಾಗಿ ಲಕ್ಷಣವೇ ಸೂಚಿಸುತ್ತಿದೆ. ನಾಲ್ಕನೆಯ ಮತ್ತು ಆರನೆಯ ಸುತ್ತಣ ಅರಸಂಪುಟಾಕ್ಷರಗಳ ಕೂಟದ ವಾಕ್ಯಗಳಿಂದ ಕವಿಕಾವ್ಯಗಳ ವಿಚಾರವು ಗೊತ್ತಾಗುವಂತಿರಬೇಕೆಂಬುದಿದು ೧೪ನೇ ಶತಮಾನದಲ್ಲಿ ಹುಟ್ಟಿದ 'ಪ್ರತಾಪರುದ್ರೀಯ' ಎಂಬ ಲಕ್ಷಣಗ್ರಂಥದ ಸೂಚನೆ. ಆ ಹೇಳಿಕೆ, ಎಷ್ಟೋ ಹಿಂದಿನದಾದ ೯ನೆಯ ಶತಮಾನದ ಈ 'ಕವಿರಾಜಮಾರ್ಗ'ಕ್ಕೆ ಅಕ್ಷರಶಃ ಅನ್ವಯಿಸಬೇಕೆಂದು ಭಾವಿಸಿದರೆ ಅಪರಾಧವೇ ಆದೀತು. ಹಿಂದಿನವನಾದ 'ಕವಿರಾಜಮಾರ್ಗ'ಕಾರನು ಬಹುಶಃ ದಂಡಿ, ರುದ್ರಟಾದಿಗಳನ್ನೋ ಅಲ್ಲವೆ ಇತರ ಲಾಕ್ಷಣಿಕರನ್ನೋ ಈ ವಿಷಯದಲ್ಲಿ ಅನುಸರಿಸಿರಬಹುದು. ಪ್ರಕೃತ ಈ ಚಕ್ರಶ್ಲೋಕದೊಳಗಿನ ತಪ್ಪೊಪ್ಪುಗಳನ್ನು ಬದಿಯಲ್ಲಿರಿಸುವ. ಪರಾಂಬರಿಸಿ ನೋಡಿದಲ್ಲಿ ಬಂಧದ ಆರನೆಯ ಅಕ್ಷರಗಳ ಅರಸಂಪುಟಾಕ್ಷರಗಳನ್ನು ಪೂರ್ವೋಕ್ತ ಲಕ್ಷಣದಂತೆ ಕ್ರಮವಾಗಿ ಕೂಡಿ

ಸಿದಲ್ಲಿ 'ಮಾಮಪಾ ಜಯಾಬ್ವಿಂ' ಎಂದಾಗುತ್ತಿದೆ. ಆದಿಯ ಮೂರು ಅಕ್ಷರಗಳ ಕೂಟದ —ಎಂದರೆ ಮಾಮಪಾ ಎಂಬುದರ—ಹೊಲಬಾದರೂ ಆಗುವಂತಿಲ್ಲ. ಆದರೆ ಮತ್ತಿನ 'ಜಯಾಬ್ವಿಂ' ಎಂಬುದು ವ್ಯಕ್ತಿಯೊಬ್ಬನ ಹೆಸರಾಗಿ ತೋರುವಲ್ಲಿಯೂ ಸಂಶಯವಿದೆಯೆ ? ಬಹುಶಃ 'ಮಾಮಪಾ' ಎಂಬ ಅಕ್ಷರಕೂಟವನ್ನೀಕ್ಷಿಸಿದ ಮಾತ್ರದಿಂದಲೇ ಮದರಾಸು ಪ್ರತಿಯ ಸಂಪಾದಕರು ನಿರಾಶರಾಗಿ ಹಾಗೆ ಬರೆದರೆಂದು ಭಾವಿಸಬೇಕಾಗಿದೆ.

ಈ ಗ್ರಂಥಕಾರನೇ ಈ ಚಿತ್ರಶ್ಲೋಕವನ್ನು ಬರೆದಿರಬೇಕೆಂದು ಹೇಗೆ ನಿರ್ಧರಿಸುವುದು ? ಇತರರ ಗ್ರಂಥಗಳಿಂದ ದೃಷ್ಟಾಂತ ಪದ್ಯಗಳನ್ನು ಆರಿಸಿಕೊಳ್ಳುವುದೂ ಪದ್ಧತಿಯಲ್ಲವೆ ? ಎಂದು ಕೇಳಬಹುದು. ಆದರೆ, ಈ 'ಕವಿರಾಜಮಾರ್ಗ'ಕಾರನಿಗಿಂತಲೂ ಹಿಂದಿನ ರುದ್ರಟನು ಹಲವು ದೃಷ್ಟಾಂತಗಳನ್ನು ಇತರ ಗ್ರಂಥಗಳಿಂದ ಆರಿಸಿಕೊಂಡಿದ್ದರೂ ಕವಿ ವಿಚಾರವನ್ನು ಹೊಳೆಯಿಸುವ ಚಕ್ರಬಂಧ ಶ್ಲೋಕವನ್ನು ತಾನೇ ಬರೆದಿದ್ದಾನೆ. ಮತ್ತಿನ 'ಪ್ರತಾಪರುದ್ರೀಯ'ಕಾರನಾದರೂ ಹಾಗೆಯೇ ಮಾಡಿರುತ್ತಾನೆ. ಯಾವ ಕವಿಗಳೂ ಇಂಥ ಸಂದರ್ಭದಲ್ಲಿ ಅನ್ಯ ಕವಿಗಳ ಹೊಲಬನ್ನು ತಿಳಿಸುವ ದೃಷ್ಟಾಂತವನ್ನು ಸೂಚಿಸುವುದು ಅಸಂಭವವಾಗಿ ತೋರುತ್ತಿದೆ. ಹಾಗಿದ್ದರೆ, ಗ್ರಂಥಕಾರನ ಹೆಸರು 'ಶ್ರೀ ವಿಜಯ' ಎಂದು ಹಿಂದೆ ಸಾಧಾರವಾಗಿ ತೋರಿಸಿದುದಕ್ಕೆ ಈ 'ಜಯಾಬ್ವಿ' ಎಂಬುದು ವಿರುದ್ಧವಾಯಿ ತಲ್ಲವೆ, ಎನ್ನಬಾರದು. 'ಜಯ' ಅಥವಾ 'ಜಯಾಬ್ವಿ' ಎಂಬುದು ಹುಟ್ಟುಹೆಸರಾದರೆ, ನೃಪತುಂಗನ ಪ್ರೀತಿ ವಿಶ್ವಾಸಪಾತ್ರನಾಗಿ ಅವನ ವಿದ್ವತ್ಸಭೆಯ ಸದಸ್ಯನಾದ ಮೇಲೆ ಪೂಜ್ಯಾರ್ಥಕಗಳಾದ 'ಶ್ರೀ', 'ವಿ' ಎಂಬ ಎರಡು ಅಕ್ಷರಗಳಿಂದೊಡವೆರೆದು 'ಶ್ರೀ ವಿಜಯ' ಎಂಬ ಅಭಿಧಾನವೊದಗಿದುದಾಗಿರಬಹುದು.

ಮೂರನೆಯ ಪರಿಚ್ಛೇದಾಂತ್ಯದಲ್ಲಿ ಗ್ರಂಥಕಾರನು ತನ್ನ ಹೊಲಬನ್ನರಿಯಿಸುವ ಕೆಲವು ಪದ್ಯಗಳಿವೆ. ಅವುಗಳೊಳಗಿನ ಈ ಒಂದು ಪದ್ಯವನ್ನೀಕ್ಷಿಸಿರಿ:

ಮದಮಾನಮಾಯಭಯಲೋಭವಿಷಾದಹರ್ಷಾ
ಭ್ಯುದಿತಾಂತರಂಗರಿಪುವರ್ಗಜಯಾವತಾರಂ
ವಿದಿತ [ಸ್ವಧೀ][1] ವಿಭವಭಾವಿತವಿಶ್ವಲೋಕಂ
ಬುಧಗೋಚರಂ ಕಾವನನುನೀತಗೃಹೀತವಾಕ್ಯಂ —(iii, 227)

ಈ ಸಂದರ್ಭದಲ್ಲಿ ಕವಿ ಹಲವು ಪದ್ಯಗಳಿಂದ ತನ್ನನ್ನು ವರ್ಣಿಸುತ್ತಾನೆ. ಅವನ್ನು ನೋಡಿ ದರೆ, ಈತನ ಮಹಿಮೆ ಬಲು ಮೇಲಿನ ಮಟ್ಟವನ್ನೇರಿದುದು ಭಾಸವಾಗುತ್ತಿದೆ. ಅವನ್ನೆಲ್ಲ ಕ್ರಮವಾಗಿ ಮುಂದೆ ವಿಸ್ತರಿಸಲಿರುತ್ತೇವೆ. ಈಗ ಈ ಪದ್ಯದೊಳಗಿನ ಸಾರ ಮಾತ್ರವನ್ನೆ ಭಾವಿಸಿರಿ:

"ಮದ ಮಾನ ಮಾಯಾದಿಗಳಾದ ಅಂತರಂಗ ರಿಪುವರ್ಗಗಳ 'ಜಯ'ವೇ ಅವ ತರಿಸಿದಂತೆ ತೋರುವವನು ; ತನ್ನ ಬುದ್ಧಿವೈಭವದಿಂದ ವಿಶ್ವಪ್ರಪಂಚದ ತತ್ತ್ವಸ್ವರೂಪ

[1] 'ಸ್ವಧೀ' ಎಂದು ಕಂಸದೊಳಗೆ ಸೇರಿಸಿ ಗ್ರಂಥಪಾತವನ್ನು ಸರಿಗೊಳಿಸಿದುದು ನಾವು.

ವನ್ನು ಭಾವಿಸಿದಾತನು ; ಅನುನೀತರಾದ ವಿದ್ವಾಂಸರಿಂದ ಗೃಹೀತವಾಕ್ಯನಾಗಿ ಅಂಥ ಬುಧರನ್ನು ಕಾಯುವಾತನು."

ಇಲ್ಲಿ ತೋರುವ '. . . . ಜಯಾವತಾರಂ' ಎಂಬುದರಿಂದ ಅಂತರಂಗರಿಪುವರ್ಗಗಳ ಜಯವೇ 'ಜಯ' ಎಂಬ ಹೆಸರ್ಗೊಂಡು ಅವತರಿಸಿದವನು ಎಂದು ಅರ್ಥವಾಗಬಹುದು. ಅದರಿಂದ 'ಜಯ' ಎಂಬುದು ಈತನ ಹುಟ್ಟುಹೆಸರೆಂದೂ, ಚಕ್ರಶ್ಲೋಕದ 'ಜಯಾಳ್ವಿ' ಎಂಬಲ್ಲಿ ತೋರುವ 'ಆಳ್ವಿ' ಪದಯುಕ್ತರೂಪವು ಮನೆತನವನ್ನು ಹಿಡಿದು ಬಂದ, ಅಥವಾ ಸಂಸ್ಕೃತಿಯನ್ನೊಂದಿ ನೆಲೆಗೊಂಡ, ನಾಮವೆಂದೂ ಭಾವಿಸಬೇಕು. ಮನೆತನವನ್ನೊಂದಿದ ಅಲ್ಲವೆ ಕುಲನಾಮವಾದರೆ 'ಆಳ್ವ' ಎಂಬಲ್ಲಿ 'ಳ'ಕಾರವು 'ಕುಳ'ವಾಗಿರಬೇಕು. 'ಟಿ'ಕಾರ ಯುತವಾದ 'ಆಳ್ವಿ' ಪದಕ್ಕೆ ತಾತ್ತ್ವಿಕ ವಿವೇಕಮಗ್ನನಾದವನು ಅಥವಾ ಯೋಗಿಸನ್ನಿಭನು ಎಂಬ ಅರ್ಥವೇ ಆಗುವುದು. ಮಾತ್ರವಲ್ಲ; 'ಮದಮಾನಮಾಯ. . . ರಿಪುವರ್ಗ ಜಯಾವತಾರಂ ವಿದಿತ. . . . ಭಾವಿತ ವಿಶ್ವಲೋಕಂ' ಎಂಬ ಶ್ಲೋಕದಲ್ಲಿಯೂ, ಮುಂದೆ ವಿಸ್ತರಿಸಲಿರುವ ಅದೇ ಸಂದರ್ಭದ ಕವಿಮಹಿಮಾವರ್ಣನಾತ್ಮಕವಾದ ಬೇರೆ ಶ್ಲೋಕಗಳಲ್ಲಿಯೂ ಗ್ರಂಥಕಾರನು ಅಂಥ ಅರಿವಿನ ಮೇಲ್ಮೆಯ ತುತ್ತತುದಿಯನ್ನಡರಿದವ ನೆಂಬುದು ಸಿದ್ಧವಾಗುತ್ತಿದೆ. ಗ್ರಂಥಕಾರನ ಸ್ವವಚನವನ್ನು ಬೇಕಾದರೆ ಬಿಟ್ಟುಬಿಡುವ ; ಕೇಶಿರಾಜ, ಮಂಗರಸರ ಮಾತುಗಳೂ ಹಾಗಿರಲಿ ; ಶುದ್ಧ ವೈದಿಕ ಘುತೀಯನಾದ ದುರ್ಗ ಸಿಂಹನೂ 'ಶ್ರೀವಿಜಯರ ಕವಿಮಾರ್ಗಂ, . . . .' ಎಂದು ಪೂಜ್ಯತಾ ಬಹುವಚನವನ್ನು ಉಪಯೋಗಿಸಿದುದರಿಂದ 'ಆಳ್ವಿ' ಪದವದು ಕವಿಯ ತಾತ್ತ್ವಿಕ ಸಂಸ್ಕೃತಿಯನ್ನೇ ಸೂಚಿಸುತ್ತಿದೆ ಎಂದು ನನ್ನ ಭಾವನೆ.

ಆರನೆಯ ಅರಸಂಪುಟಗಳ ಅಕ್ಷರಗಳು ಕೂಡಿದಲ್ಲಿ 'ಮಾನುಪಾ ಜಯಾಳ್ವಿಂ' ಎಂದಾಗುತ್ತಿದೆ. ಈ ಸಂದರ್ಭದಲ್ಲಿ 'ಜಯಾಳ್ವಿಂ' ಎಂಬುದು, ಬಂಧಸ್ಥಾನದಲ್ಲಿ ತೋರು ವುದರಿಂದ, ಕವಿಯ ಹೆಸರೆಂಬುದನ್ನು ವಿಚಾರಿಗಳಾರೂ ಒಪ್ಪದಿರಲಿಕ್ಕಿಲ್ಲ. ಹಿಂದಿನ ಭಾಗದ ಆ ಅಕ್ಷರಗಳು ಹೇಗಿದ್ದಿರಬಹುದು ಎಂಬುದನ್ನು ಇಲ್ಲಿ ಪರಿಶೀಲಿಸುವುದು ಕರ್ತವ್ಯ ವಾಗಿ ತೋರುತ್ತಿದೆ. ಹಾಗೆ ಪರಿಶೀಲನೆಗೂ ಆಧಾರವಾಗಿ ಆ ಶ್ಲೋಕದ ತಾತ್ಪರ್ಯ ವೇನು ಎಂಬುದನ್ನು ಮೊದಲು ವಿವೇಚಿಸುವ.

ಕುಮಾರನೂ ಹೊಸದಾಗಿ ಅಧಿಕಾರವನ್ನೇರಿದವನೂ ಆದ ಯಾರೋ ಒಬ್ಬ ವಿರೋಧಿ ರಾಜಪುತ್ರನಿಗೆ, ಬಲ್ಲವನಾದ ಹಿರಿಯನೊಬ್ಬನು, ಚಕ್ರಾಧಿಪತಿಯಾದ ಭೂಪನಲ್ಲಿ— ಬಹುಶಃ ಅಮೋಘವರ್ಷನಲ್ಲಿ—ಹೇಗೆ ವರ್ತಿಸತಕ್ಕುದು, ಎಂಬುದನ್ನು ಬೋಧಿಸಿದ ಹಿತಸೂಚನೆ ಈ ಪದ್ಯದೊಳಗೆ ಅಡಕವಾಗಿರುವಂತೆ ತೋರುತ್ತಿದೆ. ಬೇಕಾದರೆ ಪದ್ಯದ ತಾತ್ಪರ್ಯಾರ್ಥವನ್ನೇ ಭಾವಿಸುವ :

"ಸೌಜನ್ಯವನ್ನೊಂದಿದವನಾದ (ನೀನು), ಪರಗುಣದ ಉದಾರತೆಯಲ್ಲಿ (ಬಹುಶಃ 'ಉದಾರ'ನೆಂಬ ಸಾರ್ಥಕ ಬಿರುದಾಂಕಿತ ನೃಪತುಂಗನ ಔದಾರ್ಯದಲ್ಲಿ) ಅಭಿಮಾನ

ವನ್ನಿರಿಸಿ ಆ ನರಪಾಲಕನಲ್ಲಿ ಸಾಮದಿಂದ ಬಾಳುವುದೇ ಉತ್ತಮ. ಹಿಂದಿನ ಹಗೆತನವನ್ನು ನೋಡದೆ, ಹಗೆತನದಿಂದ ಬಾಳುತ್ತಿದ್ದ ನಿನ್ನ ಅಯ್ಯನ (ತಂದೆಯ) ಆ ಹಿಂಪಣ ವಿಚಾರವನ್ನು ಭಾವಿಸದೆ, ಶಾಂತತೆಯಿಂದ ವರ್ತಿಸು. ಹಾಗಿದ್ದರೆ ಉದಾರನಾದ ಭೂಪನ ಪ್ರೇಮವು ನಿನ್ನಲ್ಲಿ ಸುರಿವುದು"—

ಎಂಬುದು ಈ ಬಂಧದ ತಾತ್ಪರ್ಯಾರ್ಥ. ಈ ಬಂಧದೊಳಗೆ ಮಾತೃಕಾಕಾರರ ಭಾವನಾನ್ಯೂನತೆಯಿಂದ ಅಲ್ಲಲ್ಲಿ ಕೆಲವು ಅಕ್ಷರಗಳು ಅಸ್ತವ್ಯಸ್ತಗಳಾಗಿವೆ ಎಂಬುದು ನಿಜ. ಆದರೂ ಶ್ಲೋಕದ ಅರ್ಥವು ಇದೇ ತಾತ್ಪರ್ಯವನ್ನೊಂದಿದೆ ಎಂಬುದನ್ನು ವಿದ್ವಾಂಸರಾರೂ ಅಲ್ಲಗಳೆಯಲೊಲ್ಲರು ಎಂದು ನಂಬುತ್ತೇವೆ.

## ಈ ಜಯೊಾಟ್ಬ್ನೆಂದರೆ ನೃಪತುಂಗನ 'ಸಂದ ಪಿಂದಾಳ್'

ಮೇಲಿನ ಬಂಧವು ಲಕ್ಷಣಬದ್ಧವಾಗಬೇಕಾದರೆ ಮೂರು ನಾಲ್ಕು ಎಡೆಗಳಲ್ಲಿ ಅಲ್ಪಸ್ವಲ್ಪ ಬದಲಾವಣೆ ಆಗಲೇಬೇಕು. ಅಲ್ಲವಾದರೆ ಗ್ರಂಥಕಾರನ ವಿಚಾರವಂತಿರಲಿ; ಈ ಶ್ಲೋಕವು ಚಿತ್ರದೊಳಗೆ ನೆಲಸುವುದೇ ಅಸಾಧ್ಯವಾಗುವುದು. ಎಷ್ಟು ಭಾವಿಸಿದರೂ, ಕೆಲವು ಭಾಗಗಳಿಗೆ ಅರ್ಥವೇ ಹೊಳೆಯದಿರುವುದು ಈ ಬಂಧದೊಳಗೆ ತಪ್ಪು ಸೇರಿರುವುದರಿಂದಲೇ. 'ಸೌಜನ್ಯಲಕ್ಷ್ಮೀಮದಾಂಧಂ' ಎಂಬ ಸಮಸ್ತಪದವೇ ಪೂರ್ವಾಪರ ವಿರುದ್ಧಾರ್ಥಕವಲ್ಲವೆ? 'ಮಾಮುಪಾ' ಎಂಬಲ್ಲಿ ಆದಿಯ ಅಕ್ಷರವು ನಿರರ್ಥಕವಾಗಿ ತೋರುವುದಿನ್ನೊಂದು; ಮೂರನೆಯ ಪಾದದ ಹತ್ತನೆಯ ಅಕ್ಷರವು ಭಿನ್ನವಾಗಿದ್ದು ಹಿಂದಿನವುಗಳಂತೆ ಅಕ್ಷಸಂಪುಟದಲ್ಲಿ ಸೇರದಿರುವುದು ಬದಲೊಂದು; ಆ ಪಾದದ ಕಡೆಯ 'ನಾ' ಎಂಬ ಅಕ್ಷರವೇ ನಾಲ್ಕನೆಯ ಪಾದದ ಆದ್ಯಕ್ಷರವಾಗಬೇಕಾದುದು ಬೇರೊಂದು; ಅದರಂತೆ ಸುತ್ತಣ ಅರಸಂಪುಟದ ಕೆಲವು ಅಕ್ಷರಗಳು ಕೂಟವಡೆಯದಿರುವುದು ಮತ್ತೊಂದು. ಮತ್ತಿನವೆಲ್ಲ ಸರಿಯಾಗಿಯೇ ಇರುವುದರಿಂದ ಈ ಶ್ಲೋಕವು ತಪ್ಪಾಗಿ ಮಾರ್ಪಟ್ಟಿದೆ ಎಂಬುದು ಸ್ಫುಟವಾಗಿ ಕಾಣಿಸುತ್ತಿದೆ. ಅದರಿಂದ ಇದನ್ನು ಅಲ್ಲಲ್ಲಿಗೆ ತಿದ್ದಿ ತೋರಿಸುತ್ತೇವೆ:

ಸಂತಂ ಬಾೞ್ವುದು ಸಾಮದಾ ನರಪನೊೞ್ ಸೌಜನ್ಯಲಕ್ಷ್ಮೀಪದಾ
ನ್ವಾಂತಂ ನಿಶ್ಚಯಮುಚ್ಚಿನಿಂ ಪರಗುಣೌದಾರ್ಯಾಭಿಮಾನಂಗಳಾನ್
ಪಿಂತಂ ನೋಡಡೆ ಪಾೞುಗೆಟ್ಟ್ಯಜಿವಿನಿಂ ಬಾೞ್ವಂತೆ ಬಾೞ್ವಯ್ಯನಾ
ನಾಂತಂತಾನ್ ಸಮುಸಂದನತ್ತೆ ಪಿರಿದು ದಾನಂಗಳಂ ಭೂಪನಾ—

ಇದನ್ನು ಮುಂದಿನ ಚಕ್ರಬಂಧದಲ್ಲಿ ನೆಲೆಗೊಳಿಸಿ ಪರಾಂಬರಿಸಿರಿ:



ಹೀಗೆ ಬಂಧಗತವನ್ನಾಗಿ ಮಾಡಿ ಓದಿದ ಶ್ಲೋಕದ ಆರನೆಯ ಅರಸಂಪುಟಗಳ ಅಕ್ಷರ ಕೂಟವು 'ಸಾಮುಪಾ ಜಯೊಟ್ಟಿಂ' ಎಂದಾಗುತ್ತಿದೆ. ನಾಲ್ಕನೆಯ ಸಂಪುಟಗಳಿಂದ ಕವಿ ವಿಚಾರ ಏನೇನೂ ಗೊತ್ತಾಗುವುದಿಲ್ಲ. ಆದರೆ ಒಂದನೆಯ ಆರು ಅರಸಂಪುಟಾಕ್ಷರ ಗಳು 'ಸಂದ ಪಿಂದಾಳಾನಾ' ಎಂದು ರೂಪಿತಗಳಾಗುತ್ತಿವೆ. ಎರಡನ್ನೂ ಒಟ್ಟುಗೂಡಿ ಓದಿದಲ್ಲಿ 'ಸಂದ ಪಿಂದಾಳಾ ನಾ ಸಾಮುಪಾ ಜಯೊಟ್ಟಿಂ' ಎಂದಾಗುವುದು. 'ಪ್ರಸಿದ್ಧಿ ವಡೆದ ನೃಪತುಂಗ ಚಕ್ರವರ್ತಿಯ ಹಿಂದಾಳಾದ ನಾನು ಸಾಮುಪನಾದ (ಸಂಧಾನಮಂತ್ರಿ) ಜಯೊಟ್ಟಿನು' ಎಂಬುದು ಆ ವಾಕ್ಯಾರ್ಥ.

ಈ ವಿಷಯವನ್ನು ಪರಾಂಬರಿಸಿದಲ್ಲಿ, ಗ್ರಂಥಕಾರನೆಂದರೆ ಬರಿಯ ವಿದ್ವತ್ಕವಿ ಮಾತ್ರ ವಲ್ಲ—ರಾಜಕಾರ್ಯಧುರಂಧರರೊಳಗೆ ಗಣನೀಯನಾಗಿ ನೃಪತುಂಗನ ಮಂತ್ರಿಗಳೊಳಗೆ ಒಬ್ಬನಾಗಿದ್ದವನೆಂದೂ ಬಲುಮಟ್ಟಿಗೆ ವಿದಿತವಾಗುತ್ತಿದೆ. ಆರನೆಯ ಅರಸಂಪುಟದೊಳಗೆ 'ಮಿಾ' ಎಂದಿದ್ದುದನ್ನು ನಾವು 'ಸಾ' ಎಂದು ಬದಲಿಸಿದುದೇನೋ ಸರಿ. ಆದರೆ, ಒಂದ ನೆಯ ಅರಸಂಪುಟಗಳೊಳಗಿನ ಅಕ್ಷರಕೂಟವನ್ನು ನಾವು ವಿಶೇಷವಾಗಿ ತಿದ್ದಿಲ್ಲ. ಮಾತ್ರ

ವಲ್ಲ; ಗ್ರಂಥಕಾರನಿಗೂ ನೃಪತುಂಗನಿಗೂ ಸಲುವಳಿಯಾಗಿ 'ನೀತಿನಿರಂತರ' ಎಂಬ ಒಂದೇ ಬಿರುದಿದ್ದುದು ಗ್ರಂಥದಿಂದ ಹಿಂದೆ ದೃಷ್ಟಾಂತಿಸಿದ ಪದ್ಯಗಳಿಂದಲೇ ವ್ಯಕ್ತವಾಗಿದೆಯಲ್ಲವೆ? ಹಾಗೆ 'ನೀತಿನಿರಂತರ'ನಾಗಿ ಅಥವಾ 'ರಾಜನೀತಿನಿಪುಣ'ನಾಗಿ ಇದ್ದುದರಿಂದಲೇ ಆತನನ್ನು ಅರಸನು 'ಸಾಮುಪಾ'ಧಿಕಾರಕ್ಕೇರಿಸಿದುದಿರಬೇಕೆಂದು ಭಾವಿಸಿಯೇ ನಾವು ಅಕ್ಷರಪರಿವರ್ತನವನ್ನೆಸಗಿದುದು.

ಮಾತ್ರವೇ ಅಲ್ಲ; ಹಿಂದೆ ಒಮ್ಮೆ ಭಿನ್ನ ಸಂದರ್ಭವಲ್ಲಿ ದೃಷ್ಟಾಂತಿಸಿದ ಸಂಜಾನ ಶಾಸನದ—

> 'ಗುರುಬುಧಮನುಯಾತಸ್ಸಾ ? (ಶ್ಚಾ)ರ್ಯಪಾತಾಳ ? [ದಾಳ್ವ] ಮಲ್ಲಾ
> ದುದಯಗಿರಿಮಹಿಮ್ನೋ ರಟ್ಟಮಾರ್ತಂಡದೇವಃ—

ಎಂಬ ಳಗನೆಯ ಶ್ಲೋಕವನ್ನು ಇನ್ನೊಮ್ಮೆ ಪರಾಂಬರಿಸಿರಿ. ಇದನ್ನು ವಿಸ್ತರಿಸುತ್ತಾ ಡಾ. ಅಳ್ತೇಕರರು 'ಉದಯಾದ್ರಿಸನ್ನಿಭ'ನಾಗಿ, ರಟ್ಟಮಾರ್ತಾಂಡ ನೃಪತುಂಗನ ಪುನರುದಯಕ್ಕೆ ಆಧಾರಭೂತನಾದ ಪಾತಾಳಮಲ್ಲನೆಂಬ ಬಿರುದಿನ ಪೂಜ್ಯ ರಾಜನೀತಿ ನಿಪುಣನಾದ ವ್ಯಕ್ತಿಯೊಬ್ಬನಿದ್ದನೆಂದೂ, 'ಪಾತಾಳಮಲ್ಲ ಎಂಬುದು ನೃಪತುಂಗನ ಚಿಕ್ಕಪ್ಪನೂ ಗುಜರಾತಶಾಖೆಯ ರಾಷ್ಟ್ರಕೂಟರಾಜನೂ ಆಗಿದ್ದ ಸುವರ್ಣವರ್ಷನ ಬಿರುದಾಗಿರಬೇಕೆಂದೂ ಸಂದೇಹಪಡುತ್ತಾರೆ, ಎಂದು ಹಿಂದೆಯೇ ಸೂಚಿಸಿದ್ದೇವಷ್ಟೆ. ಆದರೆ ಅಶ್ರುತಪೂರ್ವವಾದ 'ಪಾತಾಳಮಲ್ಲ' ಎಂಬ ಬಿರುದಿನ ವಿಷಯದಲ್ಲಿ ಅವರಿಗೂ ಒಂದು ರೀತಿಯ ಸಂಶಯವೇ ಉಂಟಾದಂತಿದೆ. ಮಾತ್ರವಲ್ಲ, ಆ ಶ್ಲೋಕಪಾದದ ರಚನೆಯಲ್ಲಿಯೂ ಒಂದಿಷ್ಟು ತಪ್ಪು ಸೇರಿಕೆಯಾದಂತೆ ತೋರುತ್ತಿದೆ. ಅದರಿಂದ ನಮಗೆ ಆ ಪಾದವೇ 'ಗುರುಬುಧಮನುಯಾತಸ್ಸಾಮುಪಾದಾಳ್ವಮಲ್ಲಾತ್' ಎಂದಿದ್ದಿರಬೇಕೆಂದು ತೋರುತ್ತಿದೆ. 'ಮ—ಯ'ಕಾರಗಳು ಕ್ರಮವಾಗಿ ಸಂಸ್ಕೃತಾಕ್ಷರದಲ್ಲಿ ಸಾಮಾನ್ಯವಾಗಿ ಏಕರೂಪದಿಂದಿರುವುದರಿಂದ ಪಲ್ಲಟವಾಗಿ ಪರಿಗಣಿಸಲ್ಪಟ್ಟಲ್ಲಿ ಆಶ್ಚರ್ಯವಿಲ್ಲ. ಅದೇ ರೀತಿಯಲ್ಲಿ **'ಪಾದಾಳ್ವ'** ಎಂಬ ಭಾಗವು **'ಪಾದಾ(ತಾ)ಳ'** ಎಂದು ವ್ಯತ್ಯಸ್ತವಾಗಲಿಕ್ಕೂ ಎಡೆ ಇದೆ. ಈ ಗ್ರಂಥಕಾರನಾದ ಜಯಾಳ್ವ (ಶ್ರೀ ವಿಜಯ)ನೇ ಹಾಗೆ ನೃಪತುಂಗನಿಗೆ ಹಿಂದೆ ನೆರವಾದ, ಮತ್ತು ಅವನ ಪುನರುದಯಕ್ಕೆ ಕಾರಣಪುರುಷನಾದ, 'ಆಳ್ವಮಲ್ಲ' ನಾಗಿರಬೇಕೆಂದು ನಮ್ಮ ವೈಯಕ್ತಿಕಾಭಿಪ್ರಾಯ. ಹೇಗೆ 'ನೀತಿನಿರಂತರ' ಎಂಬ ಬಿರುದು ನೃಪತುಂಗನಂತೆ ಗ್ರಂಥಕಾರನಿಗೂ ಸಲುವಳಿಯಾಗಿದ್ದುದೆಂದು ಸಾಧಾರವಾಗಿ ಭಾವಿಸಿದೆವೋ ಅದರಂತೆ 'ಕೃತಕೃತ್ಯಮಲ್ಲ', 'ನಿತ್ಯಮಲ್ಲ' ಎಂಬವುಗಳು ಈ 'ಜಯಾಳ್ವ' ಅಥವಾ 'ಶ್ರೀ ವಿಜಯ'ನಿಗೂ ಹೊಂದಿಕೊಂಡಿದ್ದಿರಲೂಬಹುದು. ಮೂರನೆಯ ಪರಿಚ್ಛೇದದ ಕಡೆಯ ಪದ್ಯಗಳೊಳಗೊಂದರಲ್ಲಿ 'ಆತ್ಮಗುಣೋದಯಾಂತರ ಸರೂಪಂ' (iii, 221) ಎಂದರೆ 'ತನ್ನ ಮತ್ತು ಗುಣೋದಯ ನೃಪತುಂಗನ ಗುಣಪರಂಪರೆಗಳಿಂದಾಗಿ ಅವನೊಡನೆ ಸಮಾನರೂಪನಾದವನು' ಎಂಬ ಮಾತೂ ಈ ಹೇಳಿಕೆಯನ್ನು ಪೋಷಿಸು

ತ್ತದೆ. ಹೀಗೆ ಸರ್ವ ವಿಷಯಗಳಲ್ಲಿಯೂ ಗ್ರಂಥಕಾರನು ಮೇಲಿನ ಮಟ್ಟವನ್ನೊಂದಿದವನಾದುದರಿಂದಲೇ ದುರ್ಗಸಿಂಹಾದಿಗಳು ಆತನನ್ನು ಪೂಜ್ಯತಾಸೂಚಕ ಬಹುವಚನದಿಂದ ಕರೆದುದು ಎಂಬುದನ್ನು ಮರೆಯಬಾರದು.

## ನೃಪತುಂಗ-ಜಯೂಬ್ಬ ಸಭಾಸದರ ಸಂಬಂಧ

ಈ ಗ್ರಂಥಕಾರನಿಗೂ ನೃಪತುಂಗಸಭೆಗೂ ಇದ್ದ ಪರಸ್ಪರ ಸಂಬಂಧವೆಂದರೆ ಬರಿಯ ಆಶ್ರಯಾಶ್ರಯಿಭಾವ ಸಂಬಂಧವಲ್ಲ; ಅವರೊಳಗೆ ಅದಕ್ಕಿಂತಲೂ ಮೇಲಾದ ರಾಜಕೀಯ ಧಾರ್ಮಿಕಾದಿ ಸಂಬಂಧಗಳೂ ಇದ್ದಿರಬೇಕು ಎಂಬುದನ್ನು ಮೇಲಿನ ಚರ್ಚೆಯಿಂದ ಕಾಣಿಸಿದೆವು. ಅದಕ್ಕಿಂತಲೂ ಸ್ಫುಟವಾಗಿ ಆತನ ಯೋಗ್ಯತಾಚಿತ್ರವನ್ನೂ ಹೊಲಬನ್ನೂ ಭಾವಿಸಬೇಕಾದರೆ ಈ ಗ್ರಂಥಾಂತ್ಯದ ಶ್ಲೋಕಾರ್ಥಗಳನ್ನು ಸರಿಯಾಗಿ ಮನಗಾಣಬೇಕು. ಆ ಪದ್ಯಗಳೆಲ್ಲವೂ ನೃಪತುಂಗಸಭಾಸದನಾದ ಗ್ರಂಥಕಾರನನ್ನು ಏಕವಚನದಿಂದಲೇ ಸೂಚಿಸುತ್ತಿವೆ. ಗ್ರಂಥಾಂತ್ಯದ ಆ ಸೂಚನೆಗನುವಾಗಿ ಗ್ರಂಥಾದಿಯಲ್ಲಿಯೂ ಎರಡು ಕಂದಪದ್ಯಗಳು ಏಕವಚನದಿಂದಲೇ ಕೃತಿಕಾರನನ್ನು ನಿರೂಪಿಸುತ್ತಿವೆ. ಅದರಿಂದ, ಮೊದಲು ಆದಿಯ ಪದ್ಯಾರ್ಥಗಳನ್ನೂ ಮತ್ತೆ ಕಡೆಯವನ್ನೂ ವಿಸ್ತರಿಸುತ್ತೇವೆ. ಮೇಲಿಂದ ಮೇಲೆ ಓದಿಕೊಂಡು ಹೋದರೆ, ಆ ಪದ್ಯಗಳಲ್ಲಿ ಬೇರುಬಿಟ್ಟು ಹರಿದು ಹಸರಿಸಿದ ಒಳನೇಣುಗಳ ಹೆಣೆತದ ರೀತಿ ಸ್ಫುರಿಸಲಾರದು. ಅದರಿಂದ, ಆಯಾ ಪದ್ಯಗಳನ್ನು ಕೊಡುತ್ತಾ, ಪದ್ಯಾರ್ಥಗಳನ್ನು ಗದ್ಯರೂಪದಲ್ಲಿ ವಿಸ್ತರಿಸುತ್ತಾ ಹೋಗುತ್ತೇವೆ.

ಶ್ರುತದೊಳ್ ಭಾವಿಸಿ ನೋಟ್ಪೊಡೆ
ಸತತಂ ಕವಿವೃಷಭರಾ ಪ್ರಯೋಗಂಗಳೊಳಂ
ಕೃತಪರಿಚಯಬಲನಪ್ಪನ
ನತಿಶಯಧವಳನ ಸಭಾಸದರ್ ಮನ್ನಿಸುವರ್ . —(i, 5)

—'ಶಾಸ್ತ್ರೀಯ ವಿಚಾರವಿಡಿದು ಭಾವಿಸಿದಲ್ಲಿ ಪುರಾತನ ಕವಿವೃಷಭರ ಪ್ರಯೋಗಮಾರ್ಗದಲ್ಲಿ ಪಳಗಿದ ಪ್ರತಿಭೆಯುಳ್ಳಾತ(ಈ ಗ್ರಂಥಕಾರ)ನನ್ನು ಅತಿಶಯಧವಳನ ಸಭಾಸದರು ಮನ್ನಿಸುವರು.'

ವ್ಯಾಕರಣ ಕಾವ್ಯ ನಾಟಕ
ಲೋಕಕಳಾಸಮಯಮೂದಲಂಕೃತಿಗಳೊಳಂ
ವ್ಯಾಕುಳನಲ್ಲದನೇಕೆ ವಿ
ವೇಕಬೃಹಸ್ಪತಿಯ ನಗರಮಂ ಪುಗುತರ್ಪಂ —(i, 6)

—'ವ್ಯಾಕರಣ ಕಾವ್ಯ ನಾಟಕಗಳಲ್ಲಿ, ಲೌಕಿಕ ವ್ಯವಹಾರ ಕಲಾಚಾತುರ್ಯಗಳಲ್ಲಿ, ಕವಿಸಮಯದಲ್ಲಿ ಮತ್ತು ಅಲಂಕಾರಪ್ರಪಂಚದಲ್ಲಿಯೂ ಕೃತಪರಿಶ್ರಮನಲ್ಲದವನು, ಈ 'ವಿವೇಕ ಬೃಹಸ್ಪತಿ' ಎಂದೆನಿಸಿದ ನೃಪತುಂಗನ ನಗರವನ್ನು ಯಾಕೆ ಪ್ರವೇಶಿಸುವನು ?'

ತಾನು ವ್ಯಾಕರಣ ಕಾವ್ಯ ನಾಟಕಾದಿಗಳಲ್ಲಿ ಪಳಗಿದ ವಿದ್ವಾಂಸನಾಗಿದ್ದುದೂ,

ಅವರಿಂದಲೇ 'ವಿವೇಕಬೃಹಸ್ಪತಿ' ಎಂಬ ಬಿರುದನ್ನೊಂದಿದ ನೃಪತುಂಗನ ನಗರವನ್ನು ಪ್ರವೇಶಿಸಿದುದೂ ಇಲ್ಲಿ ಭಾಸವಾಗುತ್ತಿದೆ. ಇಲ್ಲಿ 'ನಗರಮಂ' ಎಂದಿದೆಯಲ್ಲದೆ 'ಮಹಾ ಸಭೆಯಂ' ಎಂದಿಲ್ಲ. ಇದರಿಂದ, ಆತನು ಬರಿಯ ವಿದ್ವತ್ತಿಯ ಮಹತ್ತಿನಿಂದಾಗಿ ಮಾತ್ರವೇ ಕರೆಯಿಸಲ್ಪಟ್ಟವನಲ್ಲ, ಎಂಬ ಭಾವನೆಯೂ ಮಿರುಗುವಂತಿದೆ.

ಹಿಂದಿನ ಪದ್ಯದಲ್ಲಿ ತೋರುವಂತೆ 'ಅತಿಶಯಧವಳನ ಸಭಾಸದ'ರಿಂದ ಮನ್ನಣೆ ಪಡೆದ ಈ ಗ್ರಂಥಕಾರನು ಕಡೆಯ ಪರಿಚ್ಛೇದಾಂತ್ಯದಲ್ಲಿ ತನ್ನ ವಿಚಾರವಾಗಿ ವಿಸ್ತರಿಸುವುದನ್ನು ಭಾವಿಸಿರಿ.

ಸಕಲಲೌಕಿಕಸಾಮಯಿಕೋರುವೈ
ದಿಕವಿಶೇಷವಿವೇಕಪರಾಯಣಂ
ಪ್ರಕಟಿತೋಕ್ತಿವಿವಿಕ್ತಕಳಾಕಳಾ
ಪಕ [ನು][1]ಪಾಹಿತಸಾಹಿತವಿದ್ಯೆಯೊಳ್ —(iii, 218)

—'ಈ ಮಹಾ ನೃಪತುಂಗ ಸಭಾಸದನೆಂದರೆ ಸಕಲವಾದ ಲೌಕಿಕ ಸಾಮಯಿಕ ವೈದಿಕ ವಿವೇಕಗಳಲ್ಲಿ ಪಾರಂಗತನು ಮತ್ತು ಸಾಹಿತ್ಯ ವಿದ್ಯಾಚಾತುರಿಯನ್ನು ತನ್ನ ಉಕ್ತಿವಿವೇಕ ದಿಂದ ಕಂದೆರೆಯಿಸಿದಾತನು.'

ಅತಿಶಯಪ್ರತಿಭಾವಿಭವಂ ಮಹಾ
ಚತುರವೃತ್ತಿ ನಿತಾಂತಮನಾಕುಳಂ
ಪ್ರತಿವಿತರ್ಕಿತಲಕ್ಷಣಲಕ್ಷ್ಯ [ನಾ][2]
ಶ್ರಿತ ಮಹಾ ನೃಪತುಂಗಸಭಾಸದಂ —(iii, 219)

'ಅತಿಶಯವಾದ ಪ್ರತಿಭಾವೈಭವನು; ಬಲು ಚತುರವಾದ ವೃತ್ತಿಯುಕ್ತನು (ಪ್ರಕೃತ ಗ್ರಂಥವು ವೃತ್ತಿರೂಪವಾದುದು); ಲಕ್ಷಣಕ್ಕನುವಾಗಿ ಲಕ್ಷ್ಯವನ್ನು ರೂಪಿಸಿದವನು.'

ಭಾವಿಸಲ್ ಬಗೆದವಂ ಮಿಗೆ ಜಾಣನಶೇಷಭಾ
ಷಾ ವಿಶೇಷ ವಿಷಯಾತಿಶಯಾಮಳಕೌಶಳಂ
ದೇವತಾಗುರುಗುಣೋದಯವೃದ್ಧಜನೋಪಸಂ
ಸೇವನಾಪರನಪಾಕೃತವೈಕೃತ ಚಾಪಳಂ —(iii, 220)

—'ಆಯಾ ವಿಷಯಗಳನ್ನು ಭಾವಿಸಬಲ್ಲವನು; ಹಲವು ಭಾಷಾ ಸಾಹಿತ್ಯಗಳಲ್ಲಿ ಕುಶಲ ನಾದವನು; ದೇವತಾ, ಗುರು (ಗೊರವ), ಗುಣೋದಯ (ನೃಪತುಂಗ) ವೃದ್ಧಜನರನ್ನು

---

1 ಕಂಸದೊಳಗಿನ ಅಕ್ಷರವು ಎರಡು ಪ್ರತಿಗಳಲ್ಲೂ 'ಮು' ಎಂದಿದೆ. ಹಾಗಿದ್ದರೆ, ಪದವು '...ಕಳಾಕಳಾಪಕಮುಪಾಹಿತಸಾಹಿತವಿದ್ಯೆಯೊಳ್' ಎಂದು ನಪುಂಸಕಲಿಂಗವಾಗುವುದರಿಂದ, ಮುಂದಿನ ಪದ್ಯದಲ್ಲಿರುವ 'ಆಶ್ರಿತ ನೃಪತುಂಗ ಸಭಾಸದಂ' ಎಂಬ ಪುಲ್ಲಿಂಗ ವಿಶೇಷ್ಯಪದಕ್ಕೆ ವಿಶೇಷಣವಾಗಲಾರದೆ, ಗ್ರಂಥಕಾರನ ಗುರಿಗೆ ಭಂಗವಾಗುತ್ತಿದೆ. ಅದರಿಂದ ಮೂಲದ 'ಮು' ಎಂಬ ಅಕ್ಷರವನ್ನು ತೆಗೆದು 'ನು' ಎಂಬುದನ್ನು ಆವರಣದೊಳಗೆ ಸೇರಿಸಿರುತ್ತೇನೆ.

2 ಇಲ್ಲಿಯೂ ಮೇಲಿನದರಂತೆ 'ಮಾ' ಎಂಬ ಅಕ್ಷರದ ಸ್ಥಾನದಲ್ಲಿ 'ನಾ'ವನ್ನು ಸೇರಿಸಿರುತ್ತೇನೆ.

ತಕ್ಕಂತೆ ಸೇವಿಸಬಲ್ಲವನು; ವಿಕಾರ ಚಾಪಲ್ಯರಹಿತನು.'

ಪರಮಕಾರುಣಿಕನಪ್ಪನಪಾಕೃತದೋಷನಾ
ದರಮನಾಗಿಸುವನಪ್ಪನಶೇಷಜನಂಗಳೊಳ್
ಪರಗುಣಾ[ಸ][1]ಹನನಲ್ಲದನಾತ್ಮಗುಣೋದಯಾಂ
ತರಸರೂಪ [ನಖಿಲಾಗಮ] ಪಾರಪರಾಯಣಂ —(iii, 221)

—'ಅತಿ ದಯಾಳು; ದೋಷದೂರನು; ಅಶೇಷ ಜನಸಮಾಜದಲ್ಲಿ ಆದರವುಳ್ಳವನು ; ಪರಗುಣದಲ್ಲಿ ಅಸಹನೆ ಇಲ್ಲದಾತನು ; ತನ್ನ ಮತ್ತು 'ಗುಣೋದಯ' (ನೃಪತುಂಗ)ನ ಮಧ್ಯದಲ್ಲಿ ಭೇದರಹಿತನು (ಸರೂಪನು) ; ಅಖಿಲಾಗಮ ಪಾರಪರಾಯಣನು.'

ಬಗೆದು ಮೇಣ್ ಪರಮಧರ್ಮಮನೞ್ತಿಯಿನನ್ವಯ
ಪ್ರಗಣಿತಾಭ್ಯುದಯಮೋಕ್ಷಸುಖಾಶ್ರಯಹೇತುವಂ
ನೆಗೞ್ತೆ ಮೇಣುದಿತನಿರ್ಮಳಕೀರ್ತಿವಿತಾನಮಂ
ಜಗದಗಾಧವಿವರೋದರದೀಪವಿಕಲ್ಪಮಂ —(iii, 222)

ಕೂಡೆ ಪೇೞ್ದನುತಕಾವ್ಯಮನಿಂತಭಿಮಾನಿ ತಾ (ಂ) ನಿರ
ಗೀಡಿತ ಮಹಾಪುರುಷವ್ರತನಿಶ್ಚಿತಂ
ಕೂಡದಂತೆ ಪೆಱರೊಳ್ ಮೆಚ್ಚಿನೊಳೇತೆಱನಪ್ಪೊಡಂ
ನೋಡದಂ ಕುಱುತಾವನನೇನುಮಂ —(iii, 223)

—'ಭಕ್ತಿಯಿಂದ ಪರಮ ಧರ್ಮವನ್ನೂ ಕುಲದ ಅಭ್ಯುದಯ ಮೋಕ್ಷಹೇತುವನ್ನೂ ಭಾವಿಸಿ, ಕೀರ್ತಿವಿತಾನವನ್ನು ಹಬ್ಬಿಸಲಿಕ್ಕಾಗಿ ಪ್ರಪಂಚದೊಳಗಿನ ಪೂಜ್ಯಗಳಾದ ನಾನಾ ಧರ್ಮಗಳನ್ನರಸುವ ದೀಪವಾದ ಮಹಾಜ್ಞಾನವನ್ನು ಬಗೆಗೊಂಡು ಮಹಾಪುರುಷವ್ರತನಾದ, ಅಭಿಮಾನಿಯಾದ, ಈತನು ಯಾವ ಬಗೆಯ ನಿಂದಾಸ್ತುತಿಗಳಿಗೂ ಒಳಗಾಗದೆ 'ನುತಕಾವ್ಯ' ನಿಬಂಧರೂಪವಾದ ಈ ಲಕ್ಷಣ ಗ್ರಂಥವನ್ನು ರಚಿಸಿದನು.'

ಅಂತು ಬಿೞ್ದ ತೆಱದಿಂ ವರಗೀತಗುಣೋದಯೈ
ಕಾಂತ [ಕಾಂತ] ವಿಷಯಾಶಯರಾಗಿ ನಿರಾಕುಳಂ
ಸಂತತಂ ನುಡಿಗಳೊಳ್ ಬಗೆ ಪೆರ್ಚ್ಚಿರೆ ಪೇೞ್ದವರ್
ಸಂತಸಂಬಡಿಸುವರ್ ನೃಪತುಂಗ ಸಭಾಸದರ್ —(iii, 224)

—'ಗುಣೋದಯ ನೃಪತುಂಗನ ಉದ್ದೇಶಕ್ಕನುವಾಗಿ ಬರೆದ ಈ ಗ್ರಂಥದ ನುಡಿಗಳಲ್ಲಿ ಒದಗಬಹುದಾದ ನ್ಯೂನತೆಗಳನ್ನು ನೃಪತುಂಗಸಭಾಸದರು ಸೂಚಿಸಿ ಸಂತಸಗೊಳಿಸುತ್ತಿದ್ದರು.'

ಈ ಮಾತುಗಳಿಂದ ಗ್ರಂಥಕಾರನ ಕೀರ್ತಿ ಇಡೀ ನಾಡಿನಲ್ಲಿ ಹೇಗೆ ಹಬ್ಬಿಕೊಂಡಿತ್ತು, ನೃಪತುಂಗನು ಈತನಲ್ಲಿ ಹೇಗೆ ಅಭಿನ್ನಭಾವದಿಂದಿದ್ದನು (ಆತ್ಮಗುಣೋದಯಾಂತರ

[1] ಕಂಸದೊಳಗಿನ ಈ ಭಾಗವು ಎರಡು ಪ್ರತಿಗಳಲ್ಲೂ ಲುಪ್ತವಾಗಿದೆ. ಅದನ್ನು ಅರ್ಥ ಸಂದರ್ಭಾನುಸಾರವಾಗಿ ಊಹಿಸಿಕೊಂಡು ಗ್ರಂಥಪಾತವನ್ನು ಸರಿಗೊಳಿಸಿದುದು ನಾವು.

ಸಮೂಹಂ), ಎಂಬುದು ವಿಶದವಾಗುತ್ತಿದೆ. ಈತನು ನೃಪತುಂಗನಂತೆ ಸ್ವಧರ್ಮವನ್ನು ಬಿಗಿವಿಡಿದು ಹೇಗೆ ಪರಧರ್ಮಗಳಲ್ಲೆಲ್ಲ ಉದಾರನಾಗಿದ್ದನೆಂಬುದೂ ಗೊತ್ತಾಗುತ್ತಿದೆ. ಮಾತ್ರವಲ್ಲ; ಈ ಸಾಹಿತ್ಯ ಲಕ್ಷಣಗ್ರಂಥಕ್ಕೆ ನೃಪತುಂಗನ ಭಾವನೆಯೇ ಸೂತ್ರ ; ಗ್ರಂಥ ಕಾರನ ಈ ಗ್ರಂಥವೇ ವೃತ್ತಿ ; ಇದರೊಳಗಿನ ಗುಣದೋಷಗಳನ್ನು ಅವಲೋಕಿಸಿ ಮಹಾ ಸಭಾಸದರು ಅಲ್ಲಲ್ಲಿಯ ನ್ಯೂನತೆಗಳನ್ನು ತಿದ್ದುತ್ತಿದ್ದರು—ಎಂಬುದೇ ಮೊದಲಾದ ಹಲ ಸಂಗತಿಗಳು ಮೇಲಿನ ಪದ್ಯಗಳಿಂದ ವಿಶದವಾಗುತ್ತಿವೆ.

## ಇನ್ನೂ ಹೆಚ್ಚಿನ ಹೊಳಬುಗಳು

ಗ್ರಂಥಕಾರನ ಮತ, ಜಾತಿ, ದೇಶ ಮೊದಲಾದುವುಗಳೊಳಗೆ ಒಂದೂ ಹಿಂದಿನ ವಿವೇಚನೆ ಯಲ್ಲಿ ತಲೆದೋರಲಿಲ್ಲ. ಆದರೂ ಅವನು ಸಾಮಾನ್ಯನಾದೊಬ್ಬ ವ್ಯಕ್ತಿಯಲ್ಲ, ಚಕ್ರವರ್ತಿ ನೃಪತುಂಗನಿಗೂ ನೃಪತುಂಗಮಹಾಸಭೆಗೂ ಅತಿ ಪ್ರೇಮಪಾತ್ರನಾದವನು ಎಂಬುದು ಗೊತ್ತಾದಂತಾಯಿತು. ಚಕ್ರಬಂಧದಲ್ಲಿ ತೋರುವ 'ಜಯಾಳ್ವಂ' ಎಂಬ ಸಮಸ್ತಪದದ ಮುಂದಿನ 'ಆಳ್ವ' ಪದದಿಂದ ಆತನು ತಾತ್ತ್ವಿಕ ಮಹಾಪುರುಷನೆಂದು ತೋರುತ್ತಿದೆ. ದೇಶ ವನ್ನು ಆಳುತ್ತಿದ್ದ ರಾಜವಂಶೀಯನು ಅಥವಾ ರಾಜಕುಲಕ್ಕೆ ಸೇರಿದವನು ಎಂದು ಊಹಿಸ ಬೇಕಾಗಿದ್ದರೆ 'ಆಳ್ವ' ಎಂದಿರಬೇಕಾಗಿತ್ತು. ಆದರಿಂದ ಗ್ರಂಥಕಾರನು ಯಾವ ವರ್ಣಕ್ಕೆ ಅಲ್ಲವೆ ಜಾತಿಗೆ ಸೇರಿದವನೆಂಬುದು ವಿದಿತವಾಗಲಿಲ್ಲ. ಆದರೆ, ಹಿಂದೆ ದೃಷ್ಟಾಂತಿಸಿದ ೨೧೮ ನೆಯ ಪದ್ಯದಲ್ಲಿ 'ಸಕಲ ಲೌಕಿಕ ಸಾಮಯಿಕೋರು ವೈದಿಕ ವಿಶೇಷ ವಿವೇಕಪರಾಯಣಂ' ಎಂದಿರುವುದರಿಂದ, ಅವನು ವೇದಾಧಿಕಾರವುಳ್ಳ ಉತ್ತಮ ವರ್ಣದವನೆಂದು ಸೂಚಿತವಾಗು ತ್ತಿದೆ. ಇದರಿಂದ ಆತನು ಜೈನನಲ್ಲ ಬ್ರಾಹ್ಮಣನೆಂದಾಗಲಿ, ಅಥವಾ ಬ್ರಾಹ್ಮಣನಲ್ಲ ಜೈನ ನೆಂದಾಗಲಿ, ಸಿದ್ಧಾಂತಿಸಲಾಗುವುದಿಲ್ಲ. ಜೈನಮತೀಯವಾದ ಆಗಮಗ್ರಂಥ ಸಮೂಹಕ್ಕೂ 'ವೇದ' ಎಂಬ ಹೆಸರಿದೆ.

ಹಿಂದೆ ದೃಷ್ಟಾಂತಿಸಿದ ಪದ್ಯಾವಳಿಯ ಕಡೆಯ ಪದ್ಯಕ್ಕಿಂತ ಮತ್ತಿನದಾದ 'ಗೀತಿಕೆ' ಎಂಬ ವೃತ್ತದ ಅಪೂರ್ಣವಾದ ಒಂದು ಪದ್ಯ ಹೀಗಿದೆ. ಅದನ್ನೀಕ್ಷಿಸುವ :

> ಪಾರ್ಥಿವಲೋಕನಪ್ಪನೆಂದುಂ ಕವಿ ವರ್ಣಿಕುಂ
> ಸ್ವಾ [ಸಾ ?] ರ್ಥಚಯಂ ನುತಸರಸ್ವತೀ
> ತೀರ್ಥಾವತಾರಮಾರ್ಗನೆಸಕಂ
> ................................ —(iii, 225)

ಈ ಪದ್ಯದ ನಾಲ್ಕನೆಯ ಇಡೀ ಪಾದವೇ ಲುಪ್ತವಾಗಿದೆ. ಆದರೂ ಹಿಂದಿನ ಮತ್ತು ಮುಂದಿನ ಪದ್ಯಗಳು ಗ್ರಂಥಕಾರನ ಮಹಿಮೆಯನ್ನೇ ವಿಸ್ತರಿಸುವವುಗಳಾದುದರಿಂದ, ಇದೂ ಅಂಥವೇ ಎಂದು ಸಿದ್ಧವಾಗುತ್ತಿದೆ. ಎರಡನೆಯ ಪಾದದ 'ಸ್ವಾರ್ಥಚಯಂ' ಎಂಬುದು ಬಹುಶಃ 'ಸಾರ್ಥಚಯಂ' ಎಂದು ಇದ್ದಿರಬೇಕು. ಈ ಪದ್ಯದ ನಿಷ್ಕೃಷ್ಟಾರ್ಥವು ಗುರಿ

ಗೊಳ್ಳುವಂತಿಲ್ಲವಾದರೂ, ನಮಗೆ ಆವಶ್ಯಕವಾದ ಒಂದು ಸಂಗತಿ ಮುಂದಟ್ಟಾಗುವಂತೆ ತೋರುತ್ತಿದೆ. 'ಲೋಕಂ' ಎಂಬುದು ವ್ಯಸ್ತಪದವಾಗಿದ್ದರೆ, 'ದೇಶ' ಅಥವಾ 'ಜನ' ಎಂಬ ಅರ್ಥವನ್ನೊದಗಿಸುತ್ತಿದೆ. ಆದರೆ, ಇಲ್ಲಿ ಅದು 'ಪಾರ್ಥಿವ' ಎಂಬ ಹಿಂದಿನ ಪದದೊಡನೆ ಸಮಾಸವಡೆದು ಮುಂದಿನ 'ಕವಿ' ಪದಕ್ಕೆ ವಿಶೇಷಣವಾಗಿರುವುದು ವ್ಯಕ್ತವಾಗಿದೆ. ಅದರಿಂದ 'ಪಾರ್ಥಿವಲೋಕನಾದ ಕವಿ' ಎಂದರೆ ಈ 'ಕವಿ' ಕ್ಷತ್ರಿಯರ ಸಮಾಜಕ್ಕೆ ಸೇರಿದವನು, ಎಂದು ನಿರ್ಧಾರವಾಗುವುದಲ್ಲವೆ ? ಈ ಪದ್ಯವು ಅಪೂರ್ಣವಾಗಿರುವುದರಿಂದ ವಿದ್ವಾಂಸರ ಪರಾಂಬರಿಕೆಯು ಇದರೊಳಗೆ ನುಸುಳಿ ಗುರಿಗೊಳ್ಳಲಿಲ್ಲವಾಗಿ ತೋರುತ್ತಿದೆ. ಹೇಗೂ ಇರಲಿ, ಕ್ಷತ್ರಿಯ ಸಮಾಜಕ್ಕೆ ಸೇರಿದವನಾದ ಈ ಕವಿ 'ಸರಸ್ವತೀತೀರ್ಥಾವತಾರ'ನೆಂಬ ಬಿರುದನ್ನೊಂದಿದ ನೃಪತುಂಗನ ಕಾರ್ಯವೆಲ್ಲ—'ಎಸಕಂ'—ಪುರುಷಾರ್ಥ ಸಹಿತವಾದುದು ಅಥವಾ 'ಸಾರ್ಥಚಯಂ' ಎಂದು ಬಣ್ಣಿಸುತ್ತಾನೆ. ಈ ಹೇಳಿಕೆಯಿಂದ ಕವಿ ಕ್ಷತ್ರಿಯವಂಶೀಯನೆಂಬುದು ನೆಲೆಗೊಂಡಂತಾಗುತ್ತಿದೆ. ಇದಕ್ಕಿಂತ ಮುಂದಿನ ಶ್ಲೋಕಗಳು ಈ ನಿರ್ಧಾರಕ್ಕೆ ಇನ್ನಷ್ಟು ಪೋಷಕಗಳಾಗಿವೆ:

ಕುಲಜಾತಿದೇಶವಿಶದಂ ವಿನಯೋಪಚಾರಂ
ನಿಲಯೈಕವೃತ್ತಿ [ಕೃತಿಬಿಂಬಿತಸತ್ತ್ವಸಾರಂ][1]
ವಿಲಸದ್ಗುಣಾಗುಣವಿವರ್ತಿ ಗುರೂಪದೇಶಾ
ಮಲಿನಾವಬೋಧವಿದಿತಾಖಿಳಚೋದ್ಯ [ವೃಂದಂ][2] —(iii, 226)

ಹಿಂದಿನ ಅಪೂರ್ಣ ಪದ್ಯದಿಂದ ಈತನ 'ಕುಲಜಾತಿ'ಗಳ ಹೊಳಪು ಹೊಳೆದಿದೆಯಷ್ಟೆ ; ಈತನು ವಿನಯಶಾಲಿಯಾಗಿ, ನಿಲಯೈಕ ವೃತ್ತಿಯಾಗಿ—ಎಂದರೆ ಹೆಚ್ಚಾಗಿ ಏಕಾಂತವಾಸಿಯಾಗಿ—ಇರುವವನೆಂಬುದು ಇಲ್ಲಿ ವ್ಯಕ್ತವಾಗಿದೆ. 'ಸಾಮಪನೂ ಸಂದಪಿಂದಾಳೂ' ಆದವನು ಹಾಗೆ ಏಕಾಂತ ವಾಸದಲ್ಲೇ ಹೆಚ್ಚಾಗಿ ಪ್ರವಣವಾಗುವುದೆಂದರೆ ಪ್ರಕೃತಿಗೊಪ್ಪುವುದೇ ಸರಿ. 'ವಿಲಸದ್ಗುಣನಾಗಿ ಮತ್ತು ದೋಷಕ್ಕೆ ವಿಮುಖನಾಗಿ—'ಅಗುಣವಿವರ್ತಿ'ಯಾಗಿ—ಗುರೂಪದೇಶದ ನಿರ್ಮಲಜ್ಞಾನದಿಂದಾಗಿ ಪ್ರಪಂಚದ ಸಮಸ್ತ ಚೋದ್ಯವೃಂದಗಳನ್ನೂ ತಿಳಿದಾತನು'—ಎಂಬ ಹೇಳಿಕೆಯು ಗ್ರಂಥಕಾರನನ್ನು ತಾತ್ತ್ವಿಕ ರಾಜಕೀಯಾದಿ ವಿಚಾರದಲ್ಲಿ ಎಷ್ಟರ ಮೇಲ್ಮೈಗೇರಿಸುವುದು ಎಂಬುದನ್ನು ಭಾವಿಸಿರಿ. ಮತ್ತಿನದಾದ 'ಮದಮಾನಮಾಯ....'ಎಂಬ ಪದ್ಯವನ್ನು ಹಿಂದೆ ದೃಷ್ಟಾಂತಿಸಿದೆ: ಆ ಪದ್ಯವನ್ನೆ ಬೇಕಾದರೆ ಇಲ್ಲಿಯೂ ಹಂತಿಗೊಳಿಸಿ ನೋಡಿಕೊಳ್ಳಿರಿ. ಅದರೊಳಗೆ '...ಜಯಾವತಾರ'ನಾದ ಈ ಗ್ರಂಥಕಾರನು 'ವಿದಿತ [ಸ್ವಧೀ] ವಿಭವಭಾವಿತ ವಿಶ್ವಲೋಕ'ನೂ 'ಬುಧರ್ಗೆ ಓತು ಕಾವ'ನೂ ಆದ ಮಹಾವ್ಯಕ್ತಿ ಎಂದಿರುವುದರಿಂದ, ಈತನು ಬರಿಯ ಕನ್ನಡ

---

[1] ಕಂಸದೊಳಗಣ ಭಾಗವು ಎರಡೂ ಪ್ರತಿಗಳಲ್ಲಿ ಲುಪ್ತವಾಗಿದೆ. ಅದನ್ನು ಹೀಗೆ ತುಂಬಿ ಗ್ರಂಥಪಾತವನ್ನು ಸರಿಪಡಿಸಿರುತ್ತೇವೆ.

[2] ಎರಡು ಪ್ರತಿಗಳಲ್ಲೂ 'ವಿಂದೇಂ' ಎಂದಿದೆ. ಆದರಿಂದ ಅರ್ಥವ್ಯಕ್ತಿ ಗುರಿಗೊಳ್ಳುವಂತಿಲ್ಲವಾಗಿ'ವೃಂದಂ' ಎಂದು ಸೂಚಿಸಿರುತ್ತೇವೆ.

ನಾಡಿನೊಳಗಿನ ಮಹಾಪುರುಷನಷ್ಟೇ ಅಲ್ಲ, ವಿಶ್ವಲೋಕಪ್ರಸಿದ್ಧನೂ ಆಗಿದ್ದನೆಂದು ಸೂಚಿತವಾಗುತ್ತಿದೆ. ಆಗಿನ ಪ್ರಪಂಚದೊಳಗೆ ಕೀರ್ತಿವಡೆದ, ಅರೇಬಿಯಾ ಚೀನಾ ಮೊದಲಾದ ದೇಶಗಳಿಂದ ಬಂದ ರಾಯಭಾರಿಗಳಿಂದ ಬಲು ಸುಸಂಸ್ಕೃತ ಚಕ್ರವರ್ತಿ ಎಂಬ ಪ್ರಖ್ಯಾತಿಯನ್ನೊಂದಿದ ನೃಪತುಂಗನು ತನ್ನ ಮಹಾಸಭೆಯ ಕನ್ನಡ ಲಕ್ಷಣ ಸಾಹಿತ್ಯಕ್ಕೆ ಪ್ರಮುಖನಾಗಿ ಆರಿಸಬೇಕಾದ ಮಹಾವ್ಯಕ್ತಿ ಎಂದರೆ ಸಾಮಾನ್ಯನಾಗಿರಲು ಸಾಧ್ಯವಿದೆಯೆ ?

ಮತ್ತಿನ ಪದ್ಯವನ್ನು ಪರಿಭಾವಿಸಿರಿ :

ಪರಮಾನುಭಾವನಭಿಮಾನಿ ವಿನೋದಶೀಲಂ
ಪರನತ್ಯುದಾರಚರಿತೋದಯನೇಕರೂ[ಪ]ಂ
ಸರಸಾಶ್ರಯಪ್ರವರಮೂರ್ತಿ ಪರೋ[ಪಕಾರ]ಂ
ನಿರತಂ ಗುಣೋದಯನಕಾರಣಮಿತ್ರಧುರ್ಯಂ[1] —(iii, 228)

ಈ ಪದ್ಯಸಾರವನ್ನು ಇನ್ನಷ್ಟು ಜಾಗರೂಕತೆಯಿಂದ ಹೀರಬೇಕು. ಗ್ರಂಥಕಾರನ 'ಪರಮಾನುಭಾವ'ತೆಯೇ ಮೊದಲಾದ ಒಂದನೆಯ ಪಾದದ ವಿಶೇಷಣಗಳು ಅತಿಧೀರತಾದಿ ಗುಣಗಳನ್ನು ಸೂಚಿಸುತ್ತಿವೆ. ಎರಡನೆಯ ಪಾದದ 'ಉದಾರಚರಿತೋದಯಂ ಏಕರೂಪಂ' ಎಂಬುದನ್ನೀಕ್ಷಿಸಿರಿ. 'ಉದಾರ ಚರಿತ' ಎಂಬುದು ನೃಪತುಂಗನ ಬಿರುದೆಂದು ಗೊತ್ತಿರುವ ಸಂಗತಿಯಷ್ಟೆ. ಉದಾರಚರಿತನಾದ ನೃಪತುಂಗನ 'ಉದಯ'ದಲ್ಲಿ 'ಏಕರೂಪನು' ಎಂಬ ಈ ಹೇಳಿಕೆಯ ಪಾದದೊಡನೆ, ನಾವು ತಿದ್ದಿದ ಸಂಜಾನ ಶಾಸನದ 'ಸಾಮಪಾದಾಳ್ವ ಮಲ್ಲಾದುದಯಗಿರಿ ಮಹಿಮ್ನಃ' ಎಂಬ ಭಾಗವನ್ನೂ, ಮತ್ತಿನ 'ರಟ್ಟಮಾರ್ತಂಡ ದೇವಃ ಪುನರುದಯಮುಪೇತ್ಯ' ಎಂಬ ಅಂಶವನ್ನೂ ಸಾಲಾಗಿ ಇರಿಸಿಕೊಂಡು ನೋಡಿರಿ. ಹೀಗೆ ಪರಾಂಬರಿಸಿದಲ್ಲಿ 'ಉದಯಗಿರಿ' ಸನ್ನಿಭನಾಗಿ, ರಟ್ಟಮಾರ್ತಾಂಡದೇವನ ಪುನರುದಯಕ್ಕೆ ಆಸ್ಪದನಾದ ಆ ಆಳ್ವನುಲ್ಲನೇ ಈ 'ಉದಾರಚರಿತೋದಯಂ' ಎನ್ನಿಸಿದ ಗ್ರಂಥಕಾರ ಶ್ರೀ ವಿಜಯನು ಅಥವಾ ಜಯಾಳ್ವನು ಎಂಬುದು ಮತ್ತಷ್ಟು ದೃಢಮೂಲವಾಗುತ್ತಿದೆ. ಮಾತ್ರವಲ್ಲ ; ನಾಲ್ಕನೆಯ ಪಾದದಲ್ಲಿಯ 'ಗುಣೋದಯನ ಅಕಾರಣ ಮಿತ್ರಧುರ್ಯಂ' ಎಂಬುದನ್ನು ಭಾವಿಸಿರಿ. ಮಿತ್ರರೊಳಗೆ 'ಸಹಜ ಮಿತ್ರ', 'ಕೃತ್ರಿಮ ಮಿತ್ರ' ಎಂಬ ಭೇದದ್ವಯವನ್ನು ರಾಜನೀತಿ ಗ್ರಂಥಗಳು ನಿರೂಪಿಸುತ್ತಿವೆ. 'ಸಹಜ ಮಿತ್ರ'ರೆಂದರೆ ಮಾತೃಪಕ್ಷದವರಾದ ಸೋದರಮಾವ ಅವನ ಮಕ್ಕಳು ಮೊದಲಾದವರಾದರೆ, ಚಿಕ್ಕಪ್ಪ ಅವನ ಮಕ್ಕಳೇ ಮುಂತಾದ ದಾಯಾದ ವರ್ಗದವರು 'ಸಹಜ ಶತ್ರು'ಗಳೆನ್ನಿಸುತ್ತಾರೆ. ಅದರಂತೆ, ಪೂರ್ವಕೃತೋಪಕಾರವೇ ಮೊದಲಾದ ಕಾರಣಗಳಿಂದ ಕೆಳೆತನಕ್ಕಾಸರೆ ಯಾದವರು ಕೃತ್ರಿಮಮಿತ್ರರಾದರೆ, ಪೂರ್ವಾಪಕಾರವನ್ನೆಸಗಿದವರು ಕೃತ್ರಿಮಶತ್ರು ಗಳೆನ್ನಿಸುತ್ತಾರೆ. ಇಲ್ಲಿ ತೋರುವ 'ಅಕಾರಣಮಿತ್ರ' ಎಂಬ ಪದವು 'ಸಹಜಮಿತ್ರ' ಎಂಬ

[1] ಪ್ರತಿಗಳೆರಡರಲ್ಲಿಯೂ 'ಧುರ್ಯಮಿತ್ರಂ' ಎಂದಿದೆ. ಇಲ್ಲಿ 'ಮಿತ್ರಧುರ್ಯಂ' ಎಂದೇ ಮೂಲದಲ್ಲಿದ್ದಿರಬೇಕೆಂದು ನಮ್ಮೆಣಿಕೆ. ಹೇಗಿದ್ದರೂ ತಾತ್ಪರ್ಯಕ್ಕೆ ಭಂಗವಿಲ್ಲ.

ಅರ್ಥವನ್ನೇ ಹೊಳೆಯಿಸುವಂತಿದೆಯಲ್ಲವೆ ? ಗ್ರಂಥಕಾರನು 'ಪಾರ್ಥಿವಲೋಕಂ' ಅಥವಾ ಕ್ಷತ್ರಿಯ ಕುಲೋತ್ಪನ್ನನು ಎಂದುದೇನೋ ವ್ಯಕ್ತವಾಗಿಯೇ ಇದೆ. ಹಿಂದೆ ಶಾಸನದಿಂದ ದೃಷ್ಟಾಂತಿಸಿದ ನೃಪತುಂಗನ ತಾಯಿಯ 'ಗಾವುಂಡಬ್ಬೆ' ಎಂಬ ಹೆಸರಾದರೂ ಆಕೆ ಕ್ಷತ್ರಿಯ ವಂಶೀಯಳೆಂಬುದನ್ನೇ ಬಿಗಿಹಿಡಿಯುತ್ತಿದೆ. ಅದರಿಂದ, ಈತನು ಒಂದು ವೇಳೆಗೆ ನೃಪತುಂಗನ ಸೋದರಮಾವನ ಅಥವಾ ಸೋದರಭಾವನ ಸಾಲಿನ ಬಂಧುವರ್ಗದಲ್ಲಿ ಸೇರಿದವನಾಗಿದ್ದಿರಲೂಬಹುದು. ಆ ಅರ್ಥವನ್ನೇ 'ಗುಣೋದಯನ ಅಕಾರಣ ಮಿತ್ರಧುರ್ಯಂ' ಎಂಬ ಮಾತು ಸೂಚಿಸುತ್ತಿದೆ. ಅಸಮಾನವಾದ ವಿದ್ವತ್ತಾಸಂಸ್ಕೃತಿಗಳಿಂದೊಡವೆರೆದ ಈ ರಾಜಕೀಯ ಮಹಾವ್ಯಕ್ತಿಯು ನೃಪತುಂಗನ ವಿದ್ವತ್ಸಭೆಯಲ್ಲಿ ಬರಿಯ ಒಬ್ಬ ಸದಸ್ಯನಷ್ಟೇ ಆಗಿದ್ದಿರಲಿಕ್ಕಿಲ್ಲ. ಹಿಂದಿನ ೨೧೯ನೆಯ ಪದ್ಯದಲ್ಲಿ 'ಆಶ್ರಿತ ಮಹಾ ನೃಪತುಂಗ ಸಭಾಸದಂ' ಎಂದು ತೋರುವುದಲ್ಲವೆ ? ಅಲ್ಲಿ ಛಂದಸ್ಸಿಗನುವಾಗಿ 'ಮಹಾ' ಪದವು ಹಿಂದೆ ಸೇರಿದುದಾಗಿರಬೇಕು. ಆ ಸಮಾಸಪದವು, 'ನೃಪತುಂಗ ಸಭೆಯ ಮಹಾಸಭಾಸದನು' ಎಂಬುದೇ ತಾತ್ಪರ್ಯದಿಂದ ರೂಪಿತವಾದುದಿರಬೇಕು. ಇದೇ ಪದ್ಯದ ಮೂರನೆಯ ಪಾದದ 'ಸರಸಾಶ್ರಯ ಪ್ರವರ ಮೂರ್ತಿ ಪರೋಪಕಾರಂ' ಎಂಬ ವಿಶೇಷಣ ಪದಗಳನ್ನೀಕ್ಷಿಸಿರಿ. ಸರಸರಾದ ಬಲುಮಂದಿ ವಿದ್ವಾಂಸರಿಗೆ 'ಪ್ರವರ ಮೂರ್ತಿ' ಎಂಬ ಈ ಹೇಳಿಕೆಯಿಂದ, ಗ್ರಂಥಕಾರನಿವನು ಆ ನೃಪತುಂಗ ಸಭೆಯಲ್ಲಿ ಮಹಾಸಭಾಸದನಾಗಿ ಅಥವಾ ಅಧ್ಯಕ್ಷನಾಗಿ ಇದ್ದವನೆಂದು ಭಾವಿಸಿದಲ್ಲಿ ಏನೇನೂ ತಪ್ಪಾಗದು.

ಮುಂದಿನ ಇನ್ನೊಂದು ಪದ್ಯವನ್ನೂ ಇಲ್ಲಿ ಭಾವಿಸಿರಿ :

> ಅಸಹಾಯಸಾಹಸವಿನೋದಿ ವಿವಿಕ್ತ ಚಿತ್ರ
> ಪ್ರಸವಪ್ರಕಾಶಿತಮಹೋದಯತತ್ತ್ವಸತ್ತ್ವ [ಂ]
> ವ್ಯಸನವ್ಯಪೇತನುಪನೀತಕಲಾಕಲಾಪಂ
> ಶಶಿಖಂಡನಿರ್ಮಲಯಶೋವಿವಿಧಾವತಂಸಂ —(iii, 229)

ಇಲ್ಲಿ ಮುಂದಿನ ಮೂರು ಪಾದಗಳ ವಿಶೇಷಣ ಪದಗಳು ಗ್ರಂಥಕಾರನ ಸಂಸ್ಕೃತಿಯ ಮತ್ತು ನಡವಳಿಯ ಮಹಿಮೆಯನ್ನು ನಿರೂಪಿಸುತ್ತಿವೆ. ಅವುಗಳು ಹಾಗಿರಲಿ ; ಆದಿಪಾದದ 'ಅಸಹಾಯಸಾಹಸವಿನೋದಿ' ಎಂಬ ಒಂದೇ ಒಂದು ಪದವನ್ನೆ ನಾವಿಲ್ಲಿ ಪರಾಂಬರಿಸಬೇಕಾದುದು. 'ಅಸಹಾಯ ಸಾಹಸಿ' ಎಂದರೆ ಏಕಾಂಗ ವೀರ ಎಂಬರ್ಥ. 'ಸಾಹಸ' (ಸಹಸಾ ಕ್ರಿಯಮಾಣಂ ಕರ್ಮ) ಎಂದರೆ ರಾಜಕೀಯವಾದ ಗುರಿಯನ್ನೊಂದಲಿಕ್ಕೆ ಕೂಡಲೇ ಮಾಡಬೇಕಾದ ಉದ್ಯೋಗ ; ಉದ್ಯೋಗವೆಂದರೆ, ರಾಜನೀತಿ ಪ್ರಪಂಚದ ಜೀವಾಳಗಳೆನ್ನಿಸಿದ ಪ್ರಭುಶಕ್ತಿ ಮಂತ್ರಶಕ್ತಿಗಳಿಂದ ಹೆಣೆದ ಉತ್ಸಾಹಶಕ್ತಿಯ ಕಾರ್ಯಸ್ವರೂಪ. ಪ್ರಭುಶಕ್ತಿಗೆ ಸರ್ವತಂತ್ರಸ್ವತಂತ್ರನಾಗಿದ್ದ ಅರಸನೇ ಆಧಾರ; ಮಂತ್ರಶಕ್ತಿರೂಪವಾದ ರಾಜನೀತಿವಿಚಾರಕ್ಕೆ ಮುಖ್ಯಾಮಾತ್ಯನೇ ಮೊದಲಾದ ಮಂತ್ರಿಮಂಡಲವೇ ಆಶ್ರಯ ; ಉತ್ಸಾಹ ಶಕ್ತಿರೂಪವಾದ ಹುರುಪಿಗೆ ಪ್ರಜಾಮಂಡಲ, ಅಧಿಕಾರಿ ವರ್ಗಗಳೇ ಷಂಚಾಂಗ. ಈ ಮೂರು ಶಕ್ತಿಗಳಿಂದೊಡವೆರೆದ ರಾಜಕೀಯೋದ್ಯೋಗವನ್ನು ಅಸಹಾಯ

ನಾಗಿ ಸಾಗಿಸುತ್ತಿರಬೇಕಾದರೆ ಆ ಶಕ್ತಿತ್ರಯವು ಈತನಲ್ಲಿ ಕೇಂದ್ರೀಕೃತವಾಗಿದ್ದುದು, ಎಂದಲ್ಲವೇ ಸೂಚಿತವಾಗುವುದು ? ಈತನು 'ಅಸಹಾಯಸಾಹಸ'ವುಳ್ಳಾತನಷ್ಟೇ ಅಲ್ಲ ; ಅಂಥ 'ಸಾಹಸದಲ್ಲಿ ವಿನೋದಿ'ಸುವಾತನೂ ಆಗಿದ್ದನಂತೆ. ಇದು ಬರಿಯ ಅತಿಶಯೋಕ್ತಿಯಲ್ಲ ಎಂಬುದು ಈ ಸಂದರ್ಭದ ಆದಿಯಿಂದ ಈ ವರೆಗಿನ ಎಲ್ಲ ಪದ್ಯಗಳನ್ನು ವಿವೇಚಿಸಿದಲ್ಲಿ ಮುಂದಟ್ಟಾಗುವುದು. ಈ ಪದ್ಯದಲ್ಲೇ ತೋರುವಂತೆ 'ಮಹೋದಯತತ್ತ್ವಸತ್ತ್ವ'ನಾದುದರಿಂದಲೇ ಈತನಲ್ಲಿ ಅಷ್ಟೊಂದು ಧೈರ್ಯವೂ ಸ್ಥೈರ್ಯವೂ ನೆಲೆವಡೆದುದಾಗಿರಬೇಕು. ಈ ಎಲ್ಲವನ್ನೂ ವಿವೇಚಿಸಿದಲ್ಲಿ, ಈತನು ನೃಪತುಂಗನ ವಿದ್ವತ್ಸಭೆಯೊಳಗಿನ ಮಹಾಸಭಾಸದನು ಮಾತ್ರವೇ ಅಲ್ಲ—ರಾಜವಂಶೀಯನೂ ರಾಜನ ಮಾತೃಪಕ್ಷವನ್ನೊಂದಿದ ಬಂಧುವೂ ಅಸಮಾನ ವಿದ್ವಾಂಸನೂ ಆಗಿದ್ದವನು ಎಂಬುದು, ಧ್ವನಿತವಾಗುತ್ತಿದೆ. ಹಿಂದೆ ಗೋವಿಂದರಾಜನ ಮರಣಾನಂತರ ರಾಜ್ಯಭ್ರಂಶವನ್ನೊಂದಿದ್ದ ನೃಪತುಂಗನ ಪುನರುದಯಕ್ಕೆ ಕಾರಣಪುರುಷನೂ ಈತನೇ ಆಗಿದ್ದನೆಂದು ಭಾಸವಾಗುತ್ತಿದೆ. ಆ ಭಾವನೆಯೇ ಹಿಂದಣ ದೃಷ್ಟಾಂತಗಳಲ್ಲಿಯ 'ಉದಾರಚರಿತೋದಯನೇಕರೂಪಂ', 'ಗುಣೋದಯನ ಅಕಾರಣಮಿತ್ರಧುರ್ಯಂ' ಮೊದಲಾದ ಮಾತುಗಳಲ್ಲಿಯೂ ಹೊಳೆಯುತ್ತಿದೆ.

## ಭ್ರಮ ನಿವೃತ್ತಿ

ಗ್ರಂಥಕಾರನು ಹೀಗೆ ತನ್ನ ಹೊಲಬನ್ನೇ ವಿಸ್ತರಿಸುವ ಪದ್ಯಗಳೊಳಗೆ ಹಿಂದಿನ ಪದ್ಯವೆ ಕಡೆಯದು. ಮುಂದಿನದೂ ಆ ಸಾಲಿನಲ್ಲೆ ಸೇರಿದುದೆಂದು ಕೆಲವರು ಭ್ರಮೆಗೊಳ್ಳಬಹುದು. ಅದರಿಂದ, ಮುಂದಿನ ಪದ್ಯವನ್ನೂ ಭಾವಿಸಿರಿ :

ಪರಿವೃತನೃಪತುಂಗದೇವಮಾರ್ಗಂ
ತರಗತಬೋಧವಿಶೇಷಯಾನಪಾತ್ರಂ
ಪರಮಗುಣಪರೀತಕಾವ್ಯರತ್ನಾ
ಕರದುರುಪಾರಮನೆಯ್ದುಗುಂ ಮಹಾತ್ಮಂ —(iii. 230)

ಈ 'ಕವಿರಾಜಮಾರ್ಗ'ಕ್ಕೆ 'ನೃಪತುಂಗದೇವ ಮಾರ್ಗ' ಎಂಬ ಹೆಸರೂ ಇದೆ. ನಾನಾ ಬಗೆಯ ಲಕ್ಷಣಭೇದಗಳಿಂದ, ವಿಕಲ್ಪಾದಿಗಳಿಂದ ಸುತ್ತಿಕೊಂಡಿರುವ (ಪರಿವೃತವಾದ) ಕನ್ನಡ ಸಾಹಿತ್ಯ ಲಕ್ಷಣಸ್ವರೂಪದ 'ಬೋಧವಿಶೇಷ'ವು 'ನೃಪತುಂಗದೇವ ಮಾರ್ಗ'ದ ಅಲ್ಲವೆ ಈ 'ಕವಿರಾಜಮಾರ್ಗ'ದ ಒಳಗೆ ಅಡಕವಾಗಿದೆ. ಈ 'ಬೋಧವಿಶೇಷ'ವೆಂಬುದೇ 'ಯಾನಪಾತ್ರ' ಅಥವಾ ಹಡಗು. ಈ ಯಾನಪಾತ್ರವನ್ನೇರಿ ಇದನ್ನು ನಡೆಯಿಸುವ ಮಹಾತ್ಮನು ಪರಮಗುಣಸ್ವರೂಪ ಕಾವ್ಯಧರ್ಮಗಳಿಂದ ಕೂಡಿದ 'ಕಾವ್ಯರತ್ನಾಕರ'ದ ಅಲ್ಲವೆ ಕಾವ್ಯವೆಂಬ ಸಾಗರದ ಪಾರವನ್ನೊಂದುವನು. ಗ್ರಂಥಕಾರನಾದ ತನ್ನ ಪರವಾದ ವೈಶಿಷ್ಟ್ಯಗಳನ್ನು ಸೂಚಿಸುವವುಗಳಲ್ಲಿ ಇದು ಕಡೆಯ ಪದ್ಯ. ಅದರಿಂದ, ಇಲ್ಲಿ ತೋರುವ 'ಮಹಾತ್ಮಂ' ಎಂಬ ಪದವು ಗ್ರಂಥಕಾರನನ್ನೇ ಸೂಚಿಸುವುದಲ್ಲವೆ ? ಹಾಗಿದ್ದರೆ ಅವನು

ತನ್ನನ್ನೆ 'ಮಹಾತ್ಮ' ಎಂಬ ಪದದಿಂದ ಕರೆದುಕೊಳ್ಳುವಷ್ಟು ಉದ್ಧತನೆ ? ಎಂದು ಕೇಳಬಹುದು.

ನಮ್ಮೆಣಿಕೆ ಹಾಗಿಲ್ಲ. ಗ್ರಂಥಕಾರನು ಉದ್ಧತವೃತ್ತಿಯುವನೆಂಬುದಕ್ಕೆ ಗ್ರಂಥದೊಳಗೆ ಯಾವ ಆಧಾರವೂ ಇಲ್ಲ. ನಿಜವಾಗಿ ಆತನು ಮೇಲ್ಮೆಗೇರಿದವನಾಗಿ ಸ್ವಾಭಿಮಾನಿಯೆಂದೆನಿಸಿದ್ದರೂ ವಿನಯಶಾಲಿ, ಎಂಬುದಕ್ಕೆ ಗ್ರಂಥದುದ್ದಕ್ಕೂ ನಿದರ್ಶನಗಳೊದಗುತ್ತಿವೆ. ಅದರಿಂದ, ಹಿಂದಿನ ಪದ್ಯದವರೆಗಿನವೇ ಗ್ರಂಥಕಾರನ ಪರಿಚಯವೆಸಗುವುವುಗಳೆಂದು ನಿರ್ಧರಿಸತಕ್ಕುದು. ಈ ಪದ್ಯವು ಈ ಗ್ರಂಥವನ್ನೋದಿ ಲಕ್ಷಣ ಲಕ್ಷ್ಯಗಳನ್ನು ಉಂಡರಗಿಸಿ ಮನಗೂಡಿಸುವ ಭಾವಿ ರಸವತ್ಕವಿಯನ್ನೇ 'ಮಹಾತ್ಮಂ' ಎಂಬ ಪದದಿಂದ ಸೂಚಿಸುತ್ತಿದೆ. ಯಾಕೆಂದರೆ, ಕನ್ನಡ ವಾಙ್ಮಯದೊಳಗೆ ಆ ವರೆಗೆ ಸಾಗಿ ಬಂದ ಮಾರ್ಗೀಯ ಪದ್ಯಕಾವ್ಯದಲ್ಲಿ 'ಕಾವ್ಯರತ್ನಾಕರದುರುಪಾರಮ'ನೈದಿದ 'ಮಹಾತ್ಮ'ನೆನ್ನಿಸಿದಾತನು ಆಗಿಲ್ಲವೆಂದೇ ಆತನ ಅಭಿಪ್ರಾಯ. ಈ ವಿಷಯವನ್ನು ಮುಂದೆ ಸಾಧಾರವಾಗಿ ಸೂಚಿಸುತ್ತೇವೆ.

## ಗ್ರಂಥಕಾರನ ಬಿರುದುಗಳು

ಜಯ, ಜಯಾಪ್ಪಿ, ಶ್ರೀವಿಜಯ—ಎಂಬವುಗಳು ಗ್ರಂಥಕಾರನ ಒಂದೇ ಹೆಸರಿನ ರೂಪಭೇದಗಳಾದರೆ, ಆತನ ಪ್ರಮುಖ ಬಿರುದುಗಳು ಅಥವಾ ಉದ್ಯೋಗಸೂಚಕ ನಾಮಗಳು ಕೆಲವಿದ್ದಂತೆ ತಿಳಿದುಬರುತ್ತಿವೆ. 'ಸಾಮಪ' ಎಂಬುದು ಅವುಗಳೊಳಗೊಂದು. ಇದಲ್ಲದೆ, 'ವಾಗಧಿಪ' ಎಂಬ ಇನ್ನೊಂದು ವಿಶಿಷ್ಟವಾದ ಬಿರುದೂ ಆತನಿಗಿದ್ದಂತೆ ಎರಡನೆಯ ಪರಿಚ್ಛೇದದ ಕಡೆಯ ಪದ್ಯಗಳೊಳಗೊಂದರಲ್ಲಿ ವ್ಯಕ್ತವಾಗುವುದು :

ಬುಧಗುಣಗಣನಾತೀತಾಂತರಂ ಶಬ್ದತತ್ತ್ವಂ
ಬುಧಿವಿವಿಧವಿತಾನಾಲಂಕ್ರಿಯಾವೀ[ಚಿ] ಮಾಲಂ
ವಿಧುರಗತಿವಿಲೋಪ್ಯಂ ತಳ್ತು ನಿಲ್ತಪ್ಪುದಾ ವಾ
ಗಧಿಪವಚನಮಾಲಾಪಾವನೀಯಂ ಗಭೀ(ರಂ)    —(ii, 152)

'ಇದು ನೀತಿನಿರಂತರ ಕ್ರಮಂ' ಎಂದು ಹಿಂದಿನ ಪರಿಚ್ಛೇದಾಂತ್ಯದಲ್ಲಿ ಗ್ರಂಥಕಾರನು ತನ್ನ ಶೈಲಿಯ ಬಾಹ್ಯಸ್ವರೂಪವನ್ನು ವಿಸ್ತರಿಸಿದ್ದಾನಷ್ಟೆ. ಅದರಂತೆ ಇಲ್ಲಿ ಶೈಲಿಯ ಅಂತರಂಗಿಕ ಸ್ವರೂಪವನ್ನು ಚಿತ್ರಿಸಿದ್ದಾನೆ ಎಂಬಲ್ಲಿ ಸಂಶಯವಿಲ್ಲ. ಇಲ್ಲಿ ತೋರುವ 'ವಾಗಧಿಪವಚನಮಾಲಾ......' ಎನ್ನುವುದನ್ನು ವಿಶೇಷವಾಗಿ ಪರಾಂಬರಿಸಿರಿ. ಈ 'ವಾಗಧಿಪ' ಎಂಬುದು ಗ್ರಂಥಕಾರನ ಬಿರುದು. ನೃಪತುಂಗನ ವಿದ್ವನ್ಮಹಾಸಭೆಯಲ್ಲಿ ಈತನು ನಾಯಕನಾಗಿದ್ದುದರಿಂದಲೇ ಈ ಬಿರುದು ಒದಗಿರಬೇಕು. 'ವಾಕ್ಪತಿ'ಯೇ ಮೊದಲಾದ ಇದೇ ಅರ್ಥದ ಬಿರುದುಗಳುಳ್ಳ ಹಿಂದಿನ ಹಲವುಂದಿ ಮಹಾ ವಿದ್ವಾಂಸರು ಆಯಾ ರಾಜಸಭೆಗಳಲ್ಲಿ ವಾಙ್ಮಾರ್ಗದರ್ಶಕರಾಗಿದ್ದಂತೆ ತಿಳಿದುಬರುತ್ತಿದೆ. ಈತನು ನೃಪತುಂಗ ಮಹಾಸಭೆಯಲ್ಲಿ ಅಂಥ ನಾಯಕನಾಗಿದ್ದುದರಿಂದಲೇ ಈ ಬಿರುದು ಚಕ್ರವರ್ತಿಯಿಂದ ಒದಗಿದು

ದಾಗಿರಬೇಕು. ಈ ಶ್ಲೋಕದ ತಾತ್ಪರ್ಯವನ್ನು ಸರಿಯಾಗಿ ಭಾವಿಸಿ, ಹಿಂದೆ ದೃಷ್ಟಾಂತಿಸಿದ ಹಲವು ಪದ್ಯಾರ್ಥಗಳನ್ನು ಇದರೊಡನೆ ಸಾಲುಗೊಳಿಸಿ ನೋಡಿದಲ್ಲಿ ಈತನ ಸಾರ್ಥಕವಾದ 'ವಾಗಧಿಪ'ತ್ವವು ಹೊಳೆಯುತ್ತಿದೆ. ಇದರಿಂದ ಗ್ರಂಥಕಾರನಿಗೆ 'ಸಾಮಪ', 'ನೀತಿ ನಿರಂತರ', 'ವಾಗಧಿಪ'—ಎಂಬ ಬಿರುದುಗಳು ಇದ್ದುವೆಂಬುದು ನಿಶ್ಚಿತವಾಗುತ್ತಿದೆ.

## ಗ್ರಂಥಕಾರನ ಹುಟ್ಟೂರು ಒಂಕುಂದವಿರಬಹುದೆ?

ಗ್ರಂಥಕಾರನು 'ಪಾರ್ಥಿವಲೋಕಂ' ಅಥವಾ ಕ್ಷತ್ರಿಯ ಸಮಾಜಕ್ಕೆ ಸೇರಿದವನು ಎಂಬುದು ಹಿಂದಿನದೊಂದು ಹೇಳಿಕೆಯಲ್ಲಿ ಗೊತ್ತಾಗಿದೆ—'ಪಾರ್ಥಿವಲೋಕನಪ್ಪನೆಂದುಂ ಕವಿವರ್ಣಿಕುಂ' (iii, 225). ಅವನು ಕ್ಷತ್ರಿಯನು ಮಾತ್ರವೇ ಅಲ್ಲ, ನೃಪತುಂಗನ ರಾಜ್ಯಭಾರವನ್ನು ನೆಲೆಗೊಳಿಸುವುದರಲ್ಲಿ ಪ್ರಯತ್ನಿಸಿ ಕೃತಾರ್ಥನಾದ ಮಹಾವ್ಯಕ್ತಿ ಎಂಬುದನ್ನೂ ಆಧಾರಪೂರ್ವಕವಾಗಿ ಬಲುಮಟ್ಟಿಗೆ ನಿರ್ಧರಿಸಿದ್ದೇವೆ. ಆತನ ಹುಟ್ಟೂರು ಯಾವುದಾಗಿರಬಹುದು ಎಂಬುದನ್ನು ನಿರ್ಧರಿಸುವಷ್ಟು ಪೂರ್ಣಾಧಾರ ದೊರಕದಿದ್ದರೂ, ಅದರ ಹೊಲಬಾದರೂ ಆಗಬಹುದೋ ನೋಡುವ:

ಪ್ರಥಮ ಪರಿಚ್ಛೇದದ ಆರನೆಯ ಪದ್ಯದಲ್ಲಿ 'ಏಕೆ ವಿವೇಕಬೃಹಸ್ಪತಿಯ ನಗರಮಂ ಪುಗುತರ್ಪಂ' ಎಂದು ಈತನಾಡುವುದು, ಸಾಮಾನ್ಯವಾಗಿ ವಿದ್ವದ್ವರ್ಗಕ್ಕೇ ಸಂಬಂಧಿಸಿದಂತೆ ಭಾಸವಾಗುತ್ತಿದೆ. ಆದರೂ ಇದು ಏಕವಚನವಲ್ಲಿದ್ದು, ಮುಂದೆ ಅಲ್ಲಲ್ಲಿ ತೋರುವ 'ಪೇಳ್ವೆನಜಾನ ಮಾಟ್ಕೆಯೊಳೆನ್ನಾ', 'ಪೇಳ್ವೆನುದಾಹರಣಂಗಳಂ' ಮೊದಲಾಗಿ ತನ್ನನ್ನೇ ಸೂಚಿಸುವ ಉತ್ತಮ ಪುರುಷನಾಮಪದದೊಡನೆಯೇ ಸಂದುಗೂಡಿ ಕಾಣುತ್ತಿದೆ. ಮಾತ್ರವಲ್ಲ, ಇದೇ ಮುಂದೆ ಮೂರನೆಯ ಪರಿಚ್ಛೇದಾಂತದಲ್ಲಿ ತನ್ನನ್ನು ಚಿತ್ರಿಸುವ 'ಮಹಾನೃಪತುಂಗಸಭಾಸದಂ' ಮೊದಲಾದ ಏಕವಚನದ ಆಯಾ ಪದಗಳಲ್ಲಿಯೂ ಬೆಸುಗೆವಡೆಯುತ್ತಿದೆ. ಈತನು ಕನ್ನಡ ನಾಡಿನವನು ಮಾತ್ರವೇ ಅಲ್ಲ, ಜನ್ಮತಃ ಕನ್ನಡಿಗನೇ ಇದ್ದಿರಬೇಕೆಂಬಲ್ಲಿ ಸಂಶಯವಿಲ್ಲ. ಇರಲಿ, ಈತನು 'ವಿವೇಕಬೃಹಸ್ಪತಿ'ಯ ನಗರವಾದ ಮಾನ್ಯಖೇಟ ರಾಜಧಾನಿಯನ್ನು ಬಹುಶಃ ವಿಶಿಷ್ಟಾಧಿಕಾರಿಯಾಗಿ ಮಾತ್ರ ಮೊದಲು ಪ್ರವೇಶಿಸಿದ ಸಂಗತಿಯೇ ಹಿಂದಿನ ಪದ್ಯಭಾಗದಲ್ಲಿ ಕಾಣುವುದೆಂದು ನಮ್ಮ ಭಾವನೆ. ಅದಕ್ಕಿಂತಲೂ ಹಿಂದಿನ ಪದ್ಯವು 'ಅತಿಶಯಧವಳನ ಸಭಾಸದರ್' ತನ್ನನ್ನು 'ಮನ್ನಿಸುವರ್' (i, 5) ಎಂದು ಕಾಣುವುದರಿಂದ, ತಾನು ಆ 'ವಿವೇಕಬೃಹಸ್ಪತಿ'ಯ ನಗರದ ಮಹಾಸಭೆಯಲ್ಲಿ 'ವಾಗಧಿಪ'ನಾಗಿ ಸಭಾಸದರಿಂದ ಮನ್ನಣೆಗೊಂಡುದನ್ನೇ ಅಲ್ಲಿ ಸೂಚಿಸುವುದಾಗಿರಬೇಕು.

'ಕಾವೇರಿಯಿಂದಮಾ ಗೋದಾವರಿವರಂ ಇರ್ದ ನಾಡು', 'ಕನ್ನಡದೊಳ್ ಭಾವಿಸಿದ ಜನಪದಂ' ಎಂದು ಪ್ರಥಮ ಪರಿಚ್ಛೇದದ ಮೂವತ್ತಾರನೆಯ ಪದ್ಯದಲ್ಲಿ ಸೂಚಿಸಿ, ತನ್ಮಧ್ಯಗತವಾದ ತಿರುಳುಗನ್ನಡ ಪ್ರದೇಶವನ್ನು ಮತ್ತಿನ ಈ ಪದ್ಯದಿಂದ ವಿಸ್ತರಿಸುತ್ತಾನೆ:

ಅದಱೊಳಗಂ ಕಿಸುವೊೞಲಾ
ವಿದಿತಮಹಾಕೊಪಣ ನಗರದಾ ಪುಲಿಗೆಱೆಯಾ
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್   —(i, 37)

—'ಆ ಕನ್ನಡ ಜನಪದದೊಳಗಿನದಾದ, ಕಿಸುವೊೞಲು', 'ಕೊಪಣನಗರ', 'ಪುರಿ(ಲಿ)ಗೆರೆ', 'ಒಂಕುಂದ' (ಒಕ್ಕುಂದ) ಎಂಬವುಗಳ ನಡುವಣ ನಾಡೇ ಕನ್ನಡದ ತಿರುಳ್ನಾಡು; ಎಂದರೆ ಸ್ಥಾನದಿಂದ ಮಧ್ಯಗತವಾದುದಷ್ಟೇ ಅಲ್ಲ, ಅಚ್ಚಗನ್ನಡದ ಸಂಸ್ಕೃತಿ ಭಾಷಾ ಶೈಲಿಗಳಲ್ಲಿ ಕನ್ನಡದ ತಿರುಳಾಗಿರುವ ನಾಡದು', ಎಂದು ತಾತ್ಪರ್ಯ. ಈ ಭಾವನೆ ಮತ್ತಿನ ಪದ್ಯದಲ್ಲಿಯೂ ಸೂಚಿತವಾಗಿದೆ:

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್   —(i, 38)

'ಆ ನಾಡವರ್ಗಳ್' ಎಂದುದು ಆ '...ನಡುವಣ' ನಾಡವರನ್ನೇ ಅಲ್ಲದೆ ಅಖಂಡವಾದ ಕನ್ನಡ ನಾಡವರನ್ನಲ್ಲ.' ಆ ತಿರುಳುಗನ್ನಡಕ್ಕಿಂತ ತೆಂಕಣ ಕಾವೇರಿಯ ವರೆಗಿನ ಕನ್ನಡ ಸಾಹಿತ್ಯ ಶೈಲಿಯನ್ನೇ 'ದಕ್ಷಿಣಮಾರ್ಗ' ಎಂದೂ, ಅದಕ್ಕಿಂತ ಬಡಗಣ ಗೋದಾವರಿ ವರೆಗಿನದನ್ನೇ 'ಉತ್ತರಮಾರ್ಗ' ಎಂದೂ ಮುಂದೆ ನಿರ್ದೇಶಿಸಿ ಅವುಗಳ ವಿಶಿಷ್ಟ ಲಕ್ಷಣ ಲಕ್ಷ್ಯಗಳನ್ನೂ ವಿಸ್ತರಿಸುತ್ತಾನೆ. ಮಾತ್ರವಲ್ಲ; ಆ ಭಿನ್ನ ಭಿನ್ನ ಪ್ರಾಂತಗಳ ಕನ್ನಡ ಸಾಹಿತ್ಯ ಭಾಷೆ ದೋಷಯುತವಾಗಿರುವುದರಿಂದ 'ಕನ್ನಡ'ವಾಗಿ ಅಲ್ಲ, ಕನ್ನಡಗಳಾಗಿ ತೋರುತ್ತಿವೆ ಎಂಬುದನ್ನು—

..........................................
......................ಕನ್ನಡಂಗಳೊಳೆಂದುಂ
ವಾಸುಗಿಯುಮಱಿಯಲಾಱದೆ
ಬೇಸಱುಗುಂ ದೇಸಿ ಬೇಱೆವೇಱಪ್ಪುದಱಿಂ   —(i, 46)

ಎನ್ನುತ್ತಾನೆ. ಇದರಿಂದ ಆ ತಿರುಳುಗನ್ನಡನಾಡಿನ ಭಾಷಾರೂಪವು ಸುಸಂಸ್ಕೃತವಾಗಿ ಅಭಿನ್ನವಾಗಿತ್ತು ಎಂದು ಭಾಸವಾಗುವುದು.

ಇಷ್ಟೆಲ್ಲ ಹೇಳಿದುದೇಕೆಂದರೆ, ಬಹುಶಃ ಗ್ರಂಥಕಾರನು ಆ ತಿರುಳ್ಗನ್ನಡ ಪ್ರಾಂತದೊಳಗಿನವನೇ ಆಗಿರಬೇಕು, ಎಂಬುದನ್ನು ಹೊಳೆಯಿಸಲಿಕ್ಕಾಗಿ. ತನ್ನದಾದ ಈ 'ಕವಿರಾಜಮಾರ್ಗ'ದ ಶೈಲಿಯನ್ನು ಆತನೇ ವಿಸ್ತರಿಸುವುದನ್ನೀಕ್ಷಿಸಿರಿ:

ನುಡಿಗಳೊಡಂಬಡಲ್‌ಬಗೆದವೊಲ್ ಬಗೆಯಂ ಮಿಗಲೀಯದೊಂದೆ ನಾ
ಣ್ನುಡಿಯ ಬೆಡಂಗೆ ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೊಳ್
ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂ
ಗುಡಿವಿಡುವಂತೆ ನೀಳ್ದು ನಿಲೆ ಪೇೞ್ವುದು ನೀತಿನಿರಂತರಕ್ರಮಂ   —(i, 148)

ಈ ಪದ್ಯಾರ್ಥವೇನೋ ಲಲಿತವಾಗಿದೆ. ಆದರೂ ಇತರ ತಾತ್ಪರ್ಯವನ್ನು ಇಂದಿನ ಹೊಸ ಗನ್ನಡದ ಬಿಡುನುಡಿಗಳಲ್ಲಿ ಸೂಚಿಸಿದರೆ, ಸಾಮಾನ್ಯರಾದ ವಾಚಕರಿಗೂ ಮುಂದಟ್ಟಾಗಲು ಅನುಕೂಲವಾದೀತೆಂದು ನೆರೆ ನಂಬಿ ಚಿತ್ರಿಸುತ್ತೇವೆ:

'ಹಲಮಂದಿ ಕವಿಗಳೆಂಬವರು, ತಾವು ಮುಂದೆ ಬಣ್ಣಿಸಲಿಕ್ಕಿರುವ ವಿಷಯಗಳನ್ನು ಭಾವಿಸಿ ಮುಂದಟ್ಟಾಗಿಸಿಕೊಂಡ ಮೇಲೆ, ಅವುಗಳ ಮೆಯ್ಯಾಗಿರಬೇಕಾದ ನುಡಿಯನ್ನೂ ನುಡಿಗಟ್ಟುಗಳನ್ನೂ ಹುಡುಕುತ್ತಾರೆ. ಹುಡುಕಿ ಸರಿಯಾಗಿ ದೊರಕದಲ್ಲಿ, ಪದಗಳನ್ನು ಸೆಳೆದೊಯ್ದು, ಅವುಗಳಲ್ಲಿ ವಿಷಯಗಳನ್ನು ತುರುಕಿ ನುಲಿದು ಹೊಲಿದು ಹೇಗಾದರೂ ಕಾವ್ಯವನ್ನು ರೂಪಿಸುತ್ತಾರೆ. ಈ 'ನೀತಿನಿರಂತರ'ನೆನ್ನಿಸಿದ ಗ್ರಂಥಕಾರನ ಶೈಲಿ ಅಂಥದಲ್ಲ: ವಿಷಯವನ್ನು ಭಾವಿಸಿದಾಗಲೆ ಅದರೊಡನೆ ಪಡುವ—ಎಂದರೆ ಆ ವಿಷಯವನ್ನು ತುಂಬಿಕೊಂಡು ಮಿರುಗಬೇಕಾದ—ನುಡಿಗಳು ಸ್ವಾಭಾವಿಕವಾಗಿ ಮೂಡುತ್ತಿವೆ; ಭಾವನೆಯನ್ನು ಮಿಾರಲಿಕ್ಕೆಡೆಗೊಡದೆ ಬೆಡಗನ್ನೊಂದಿದ ನಾಣ್ಣುಡಿಗಳು ಅಲ್ಲಲ್ಲಿ ತಾವಾಗಿ ಹೆಣೆಯುತ್ತಿವೆ. ಇವನ ಕನ್ನಡದ ಮೆದುನುಡಿಗಳಲ್ಲಿ ಅನ್ನವನ್ನೊಂದಿದ ಕಲ್ಲ ಹರಳಿನಂತಿರುವ ವಿಕಟಾಕ್ಷರಗಳು ತೊಡಕುವುದೇ ಇಲ್ಲ; ಸಂಸ್ಕೃತ ಪದಗಳಾದರೂ ಹದಮೀರಿ ನುಸುಳುವುದಿಲ್ಲ. ಹೀಗೆ 'ಮೆಲ್ಪುವೆತ್ತು' ಅಥವಾ 'ಮೃದುಬಂಧ'ವನ್ನೊಂದಿ, ಹೂವಿನ ಬಳ್ಳಿ ಹಬ್ಬಿ ಗೊಂಚಲಿಡುವಂತೆ ಬಣ್ಣಿಸುವ ಈ ಶೈಲಿಯೇ 'ನೀತಿನಿರಂತರ'ನ ಶೈಲಿ.'

ಇದರಿಂದ ಇದು 'ಮೃದುಬಂಧ' ಎಂಬುದು ಸಿದ್ಧವಾಗುತ್ತಿದೆ. ಈ ಮೃದುಬಂಧವೇ ಮೊದಲಾದ ನಾನಾ ಬಂಧಗಳ ಸ್ವರೂಪಗಳನ್ನೆಲ್ಲ ಮುಂದಿನ ಭಾಗದಲ್ಲಿ ವಿಸ್ತರಿಸಲಿದ್ದೇವೆ. ಈ ಪದ್ಯದ ಮತ್ತು ಈ ವರೆಗೆ ದೃಷ್ಟಾಂತಿಸಿದ ಈ ಗ್ರಂಥಗತಗಳಾದ ಬೇರೆ ಪದ್ಯಗಳ ಸ್ವರೂಪಗಳನ್ನು ಪರಾಂಬರಿಸಿದಲ್ಲಿ, ಗ್ರಂಥಕಾರನ ಶೈಲಿ ಈ ಲಕ್ಷಣವನ್ನನುಸರಿಸಿರುವುದು ಸ್ಫುಟವಾಗುತ್ತಿದೆ. ಅಂತ್ಯದ ಕೆಲಕೆಲವು ಪದ್ಯಗಳಲ್ಲಿ ಸಂಸ್ಕೃತ ಪದಗಳೇ ಹೆಚ್ಚಾಗಿರುವುದಾಗಿ ಕೆಲವರು ಆಕ್ಷೇಪಿಸಬಹುದು. ಅವನಾಡಿರುದು, ತನ್ನ ಶೈಲಿಯಲ್ಲಿ ಸಂಸ್ಕೃತ ಪದಗಳು ಕಡಿಮೆಯಾಗಿ ಅಥವಾ ಹೆಚ್ಚಾಗಿ ಇದ್ದಾವೆ ಎಂದಲ್ಲ—'ಪವಣಾಗಿರೆ' ಎಂದು. ಆಕ್ಷೇಪಿಸುವ ಆ ಪದ್ಯಗಳ ಸಂಸ್ಕೃತ ಪದಗಳೊಳಗಿನ ಒಂದೇ ಒಂದು ಪದವನ್ನು ಕನ್ನಡವಾಗಿ ಮಾರ್ಪಡಿಸಿದಲ್ಲಿ ಆ ರಚನೆಯೇ ಗುರಿಗೆಟ್ಟುಹೋದೀತು ಎಂಬುದನ್ನು ಮರೆಯಲಾಗದು. ಆ ಸಂದರ್ಭಗಳನ್ನೊಂದಿದ ಆ 'ಸಕ್ಕದಂಗಳ ಪದಂ ಪವಣಾಗಿ'ಯೇ ಇದ್ದಾವೆ ಎಂದು ನಮಗಂತೂ ಮನಃಪೂರ್ತಿಯಾಗಿ ತೋರುತ್ತಿದೆ. ಈ ಮೃದುಬಂಧವೆಂಬುದು ತಿರುಳ್ಗನ್ನಡ ಶೈಲಿಗೇ ಮಿಾಸಲಾದುದು. ಆ ಸಂಗತಿಯನ್ನು ಸುಮಾರು ನೂರು ವರ್ಷಕ್ಕೆ ಮತ್ತಿನವನಾದ ಮಹಾಕವಿ ಪಂಪನೂ 'ಪುಲಿಗೆರೆಯ ತಿರುಳ ಕನ್ನಡದೊಳ್' ತನ್ನ ಗ್ರಂಥವನ್ನು ಬರೆವಲ್ಲಿ, ಈ ಗ್ರಂಥಕಾರನು ಲಕ್ಷಿಸಿದ ರೀತಿಯಲ್ಲೇ, ರೂಪಾಂತರದಿಂದ ಒಪ್ಪಿಕೊಂಡಿದ್ದಾನೆ. ಆದರೆ, ಈ ಗ್ರಂಥಕಾರನು, ಪಂಪನಂತೆ, ತಾನು ನಡುವಣ ನಾಡಿನ

ಯಾವ ತಿರುಳ್ಗನ್ನಡದ ಭಾಗಕ್ಕೆ ಸೇರಿದವನೆಂಬುದನ್ನು ಸೂಚಿಸಿಲ್ಲ.

ಮೇಲಿನ ಪದ್ಯದಲ್ಲಿ ತೋರುವ 'ಕೊಪಣ ನಗರ' ಎಂದರೆ ಅಂದಿನ ಮಾನ್ಯಖೇಟ ರಾಜಧಾನಿಗೆ ಹತ್ತಿರದಲ್ಲಿದ್ದ, ಅಥವಾ ಈಗಿನ ಹೈದರಾಬಾದಿನ ಒಳಗಿನ, ಕೊಪ್ಪಳ ಎಂಬುದು ಗೊತ್ತಾಗಿದೆ. 'ಒಂಕುಂದ' ಎಂಬುದು ಈಗಿನ ಬೆಳಗಾಂವಿಯ ಪ್ರಾಂತದೊಳಗೆ ಇಂದಿಗೂ 'ಒಕ್ಕುಂದ' ಎನ್ನುವ ಹೆಸರಿನಿಂದಲೆ ಇರುವ ನಾಡು. ಮೇಲಿನ ಪದ್ಯದೊಳಗಿನ ನಾಲ್ಕು ತಿರುಳ್ಗನ್ನಡ ನಾಡುಗಳೊಳಗಿನ 'ಕಿಸುವೊಟಲು', 'ಪುಲಿಗೆಱೆ'ಗಳನ್ನು ಗ್ರಂಥ ಕಾರನು ಯಾವ ವಿಶಿಷ್ಟ ವಿಶೇಷಣಗಳೂ ಇಲ್ಲದೆ ಸೂಚಿಸಿದುದನ್ನೀಕ್ಷಿಸಿರಿ. 'ವಿದಿತ ಮಹಾ' ಎಂದೂ 'ಸದಭಿಸ್ತುತ' ಎಂದೂ ವಿಶಿಷ್ಟ ವಿಶೇಷಣಯುತವಾಗಿ ನಿರ್ದೇಶಿಸಿದುದು ಕ್ರಮ ವಾಗಿ ಕೊಪಣನಗರ, ಒಂಕುಂದಗಳನ್ನೇ. ರಾಜಧಾನಿಗೆ ಹತ್ತಿರವಾದುದರಿಂದ ಕೊಪಣ ನಗರವು ಬಾಹ್ಯರಚನೆಯ ಮಹಿಮೆಯಿಂದೊಡಗೂಡಿ ಇದ್ದಿರಬಹುದು. ಆದರೆ 'ಒಂಕುಂದ'ದ ವಿಶೇಷಣವನ್ನೀಕ್ಷಿಸಿರಿ. 'ಸದಭಿಸ್ತುತಮಪ್ಪ' ಎಂದರೆ ಸಜ್ಜನರಾದ ವಿದ್ವಾಂಸರಿಂದ ಹೊಗಳಲ್ಪಟ್ಟ, ಎಂದರ್ಥ. ಇದೇ ಪದವು ಈ ಗ್ರಂಥದೊಳಗೆ ಭಿನ್ನ ಸಂದರ್ಭದಲ್ಲಿಯೂ ಕೆಲವೆಡೆ ಬಂದಿರುವುದನ್ನು ನೋಡಿರಿ:

(೧) ಸದಭಿಮತ ಕಾವ್ಯ ಪದವಿಧಿ........(i, 82) ;
(೨) ಸದಭಿಮತಮಾಗಿ ನಿಲೆ ಪೇೞ್ದುದು ಮಾರ್ಗಂ........(ii, 11) ;
(೩) ಸದಭಿಕಮನೀಯ ಗುಣಮಪ್ಪುದು ನಿಯತಂ ಕಾಂತಂ (ii, 64) ;
(೪) ಸಮಹಿತ ಪ್ರಯೋಗಾನುಗತಂ........(ii, 84) ;
(೫) ಸದುದಿತಗುಣನದಱಿಂ ನಯವಿದನಪ್ಪಂ........(iii, 146)

ಇವೆಲ್ಲವೂ 'ಸಜ್ಜನರೂ ಸಹೃದಯರೂ ಆದ ವಿದ್ವಾಂಸರಿಗೆ ಅಭಿಮತವಾದ' ಎಂಬ ಅರ್ಥ ವುಳ್ಳವು. ಅದಕ್ಕೆ ಬದಲಾಗಿ 'ಸತ್' ಎಂಬ ಪದಕ್ಕೆ ಬರಿಯ 'ಸಾಧು' ಎಂಬ ಅರ್ಥವನ್ನಷ್ಟನ್ನೇ ಕಲ್ಪಿಸಬಾರದು. ಸಜ್ಜನತೆಯೊಡನೆ ರಸಿಕತೆಯೂ ಬೆರಸದಿದ್ದಾತನು ಕಾವ್ಯಲಕ್ಷಣಾದಿ ಗಳನ್ನು ಹೇಗೆ ಸೇವಿಸುವನು, ವ್ಯೆಗೂಡಿಸುವನು ? ಇವುಗಳಂತೆ 'ಸದಭಿಸ್ತುತಮಪ್ಪ ಒಂಕುಂದ' ಎಂದರೆ 'ಸಜ್ಜನರಾದ ಸಹೃದಯ ವಿದ್ವಾಂಸರಿಂದ ಅಲಂಕೃತವಾದ ಒಂಕುಂದ' ಎಂದೇ ತಾತ್ಪರ್ಯ. ಈ ವಿಶಿಷ್ಟ ವಿಶೇಷಣವು ಬೇರೆ ಮೂರು ಭಾಗಗಳಿಗೂ ತೋರದೆ ಒಂಕುಂದ ಮಾತ್ರಕ್ಕೇ ಮೀಸಲಾಗಿ ತೋರುವುದರಿಂದ, ಗ್ರಂಥಕಾರನು ತನ್ನ ಹುಟ್ಟೂರಿನ ಮಹಿಮೆಯನ್ನೇ ಆ ಪದ್ಯದಿಂದ ಬೆರಳೆತ್ತಿ ಸೂಚಿಸಿದಂತೆ ಭಾವಿಸುತ್ತೇವೆ.

ಛಂದೋರಚನೆಗಾಗಿ ಕೆಲವೆಡೆಯಲ್ಲಿ ಹೆಚ್ಚಿನ ವಿಶೇಷಣಗಳನ್ನು ಸೇರಿಸಬೇಕಾಗುತ್ತಿದೆ. ಕೆಲವೆಡೆಯಲ್ಲಿ ಬೇಕಾಗಿದ್ದರೂ ಕಳೆಯಬೇಕಾಗುತ್ತಿದೆ. ಹೀಗಿರುವಲ್ಲಿ 'ಒಂಕುಂದ'ದ ಆ 'ಸದಭಿಸ್ತುತಮಪ್ಪ' ಎಂಬ ವಿಶೇಷಣಕ್ಕೆ ಇಷ್ಟೊಂದು ಅರ್ಥವನ್ನು ಕಟ್ಟಿಕೊಂಡು ಎಳೆಯಬಹುದೆ ? ಎಂದು ಆಕ್ಷೇಪಿಸುವವರೂ ಇರಬಹುದು. ಇದಕ್ಕೆ ನನ್ನುದು ಇಷ್ಟೇ ಉತ್ತರ. ಈಗ ಬಹುಶಃ ಪ್ರಪಂಚಾವಸ್ಥೆಗನುವಾಗಿ ನಮ್ಮ ಕನ್ನಡಿಗರಲ್ಲಿಯೂ ಅಭಿಮಾನ ವೆಂಬುದು ಸಂಕುಚಿತವಾಗಿ ಹರಿವುದು ಅಲ್ಲಲ್ಲಿ ಹೊಳೆಯುತ್ತಿದೆ. ಮೇಲಿಂದ ಮೇಲೆ

"ನಮ್ಮ ಕನ್ನಡ ನಾಡು" ಎಂಬ ವಿಶಾಲವಾದ ಪರಪೆಯನ್ನು ಹೊದೆಯಿಸಿದರೂ ಒಳ ಗಿಂದೊಳಗೆ ಚಿಕ್ಕ ಚಿಕ್ಕ ಹರಕು ಹೊಲಸು ಬಟ್ಟೆಗಳನ್ನೇ ಮುಸುಕಿಕೊಳ್ಳುವಂತೆ, ತಮ್ಮ ಸೀಮೆ, ತಮ್ಮ ಹಳ್ಳಿ, ತಮ್ಮ ಮನೆ, ಎಂಬ ಅಹಂಮಮತೆಗೇ ಗುರಿಯಾಗುತ್ತಿರುವುದು, ಹಲಮಂದಿ ಮುಂದಾಳುಗಳೆಂಬವರಲ್ಲಿಯೂ ಹೊಳೆಯುತ್ತಿದೆ. ಈ ಬಳಕೆಯಿಂದಲೇ ಪ್ರಕೃತ ಅಪ್ರಸಿದ್ಧವಾಗಿಬಿಟ್ಟ ತಮ್ಮೂರಿಗೆ ಬಲು ದೂರವಾದ ಯಾವುದಾದರೊಂದು ಚಿಕ್ಕೂರು, ಹಿಂದಣ ಮಹಾ ಪ್ರಸಿದ್ಧಿಗೊಂಡ ವ್ಯಕ್ತಿಯೊಂದಕ್ಕೆ ಹುಟ್ಟೂರಾಗಿತ್ತು ಎಂದು ಸೂಚಿಸಿದ ಕೂಡಲೆ ಕೆಲವರಿಗೆ ತಲೆನೋವಾಗುವುದಿದೆ. ನಮಗೂ ಈ ಒಂಕುಂದಕ್ಕೂ ಬರಿಯ ಕನ್ನಡದ ಸಂಬಂಧವಲ್ಲದೆ ಬೇರೇನೂ ಇಲ್ಲ. ಅದೊಂದು ಭಾವನಾತ್ಮಕವಾದ ಆಧಾರ ಹೊಳೆದುದನ್ನಷ್ಟೇ ಹಾಗೆ ಚಿತ್ರಿಸಿದ್ದೇವೆ. ಈ ಗ್ರಂಥಕಾರನೆಂದರೆ ಛಂದಸ್ಸಿನ ಕೂಟಕ್ಕಾಗಿ ಹಾಗೆಲ್ಲ ಅನಾವಶ್ಯಕ ಪದಗಳನ್ನು ಎತ್ತಿ ಕಟ್ಟುವವನಲ್ಲ ಎಂಬುದು ಆತನ ಶೈಲಿಯನ್ನು ವಿಸ್ತರಿಸಿದ ಹಿಂದಿನ ಪದ್ಯದಿಂದಲೇ ವಿದಿತವಾಗುತ್ತಿದೆ. ಬೇಕಾದರೆ ಹಿಂದಿನ 'ನುಡಿಗಳೊಡಂಬಡಲ್ ಬಗೆದವೊಲ್' ಎಂಬ ಪದ್ಯವನ್ನಿನ್ನೊಮ್ಮೆ ಭಾವಿಸಿರಿ. ನುಡಿಗಳು ಆತನ ಬಗೆಯ ಕೈಯಾಗಿ ಮೈಯಾಗಿ ಬೇಕಾದಂತೆ ಚಿಗುರುತ್ತಿದ್ದವು. ಇದಕ್ಕಾಗಿ ಆತನು ಬಗೆಯನ್ನು ಬಾಗಿಸುವ, ಕೈಯನ್ನು ಬಳುಕಿಸುವ, ಕವಿನಾಮಧೇಯನಾಗಿದ್ದಿಲ್ಲ. ಈ ಮಾತು ಸಾಲದಿದ್ದರೆ ಸುಸ್ಪಷ್ಟವಾದ ಇನ್ನೊಂದು ಪದ್ಯವನ್ನು ಅವಗಾಹಿಸಿರಿ :

ಇಲ್ಲಿಗಿದು ತಕ್ಕುದಿಲ್ಲಿಗೆ
ಪೊಲ್ಲದಿದೆಂದಱಿದು ಸಮಱಿ ಬಲ್ಲಂತೆಲ್ಲಂ
ನೆಲ್ಲುಂ ಮೊಸರುಂಗುಡಿದಂ
ತಲ್ಲದೆ ತಲ್ಲಣಿಸದಲಸದಿಡು ಮೃದುಪದಮಂ —(ii, 4)

ಇತರರಿಗೆ ಹೀಗೆ ಬೋಧಿಸಿದಾತನು ತನ್ನ ಕಾವ್ಯದಲ್ಲಿ ಅನಾವಶ್ಯಕ ಪದಗಳನ್ನು ಪ್ರಯೋಗಿಸುವನೆ? ಕಣ್ಣು ಮುಚ್ಚಿ 'ನೆಲ್ಲುಂ ಮೊಸರುಂಗುಡಿದಾನೆ?' ಇದರಿಂದ ಬಹುಶಃ ಆತನ ಹುಟ್ಟೂರು ಒಂಕುಂದವೇ ಆಗಿ ಇದ್ದಿರಬೇಕೆಂದು ನಮ್ಮ ಭಾವನೆ. ಹಾಗೆ ಒಂಕುಂದವೇ ಹುಟ್ಟೂರಾದ, ರಾಜನಿಗೆ ಗುರುಬುಧನಾದ, ಈ ಜಯಾಳ್ವನು ಅಥವಾ ಆಳ್ವನುಲ್ಲನು ಅಲ್ಲಿಂದ ಬಂದು ವಿವೇಕಬೃಹಸ್ಪತಿಯಾದ ಈ ನೃಪತುಂಗನ ಆಸ್ಥಾನದಲ್ಲಿ ಸಾಮಂತನಾಗಿ, ವಿದ್ವತ್ಸಭೆಯಲ್ಲಿ ವಾಗಧಿಪನಾಗಿ, ನೆಲಸಿ ಈ ಗ್ರಂಥವನ್ನು ಬರೆದಿರಬೇಕು. ಈ ಭಾವನೆ ಕಡೆಯ 'ಪ್ರಿಯತರ', 'ಆಶೀಃ' ಎಂಬ ಎರಡು ಅಲಂಕಾರಗಳ ದೃಷ್ಟಾಂತಗಳಿಂದಲೂ ಧ್ವನಿತವಾಗುತ್ತಿದೆ. ಮೊದಲಿನದರಲ್ಲಿ ಆ ವಿದ್ವತ್ತ್ವವೀಶ್ವರನು ರಾಜ ಧಾನಿಗೆ ದಯಮಾಡಿಸಿ, ತನ್ನ ರಾಜಧಾನಿಗೆ ಒದಗಿಸಿದ ಅಗಣಿತ ಪ್ರಿಯಕಾರ್ಯಗಳನ್ನು ಮಾತ್ರವಲ್ಲ, ಅವುಗಳಿಗಿಂತಲೂ ಪ್ರಿಯತರವಾದ ಈ ಗ್ರಂಥರಚನೆಯನ್ನೂ ಎಸಗಿದುದ ಕ್ಕಾಗಿ ನೃಪತುಂಗನು ಆ ಗುರುಸನ್ನಿಭನಿಗೆಸಗಿದ ಹೃತ್ಪೂರ್ವಕ ವಂದನೆ ಹೊಳೆಯುತ್ತಿದೆ. ಮತ್ತಿನದರಲ್ಲಿ ಆ 'ವಾಗಧಿಪ'ನು ಅರಸನನ್ನು ಆಶೀರ್ವದಿಸಿದುದು ವ್ಯಕ್ತವಾಗುತ್ತಿದೆ. ಅವುಗಳನ್ನು ಪರಾಂಬರಿಸಿರಿ :

### ನೃಪತುಂಗನ ಕೃತಜ್ಞತಾ ಸಮರ್ಪಣೆ

ಗುರುಜನದ ಪರಕೆಯುಂ ಬಂ
ಧುರಪುಣ್ಯಫಳಾನುಬಂಧಮುಂ ನೆರೆದೆನ್ನೊಳ್
ಪರಮಾನುಭಾವಭರಮುಂ
ದೊರೆಕೊಂಡುದಿಂದು ಬರವಿನೊಳ್ನಿಮ್ಮಡಿಯಾ —(iii, 204)

### ನೃಪತುಂಗನಿಗೆ ಗ್ರಂಥಕಾರನ ಆಶೀರ್ವಾದ

ಆಯುಂ ಶ್ರೀಯುಂ ವಿಜಯಮು
ಮಾಯತಿಯುಂ ನೃಪತಿ ನಿನಗೆ ನಿಜಸಂತತಿಯುಂ
ನ್ಯಾಯದೆ ಪೆರ್ಚ್ಕೆವುದಕ್ಕೀ
ತೋಯಧಿ ಧರಣೀಧರಾಧರಸ್ಥಿತಿವರೆಗಂ —(iii, 206)

ಇದು ಅರಸನನ್ನು ಪ್ರೇಮಪೂರ್ವಕವಾಗಿ ಗ್ರಂಥಾಂತದಲ್ಲಿ ವಾಗಧಿಪ—ಶ್ರೀ ವಿಜಯನು ಆಶೀರ್ವದಿಸಿದ ಮಾತು. ಇಲ್ಲಿ ತೋರುವ 'ಶ್ರೀಯುಂ ವಿಜಯಮುಂ' ಅಂದಿನಿಂದ ನಿರ್ಬಾಧವಾಗಿ ನೃಪತುಂಗನಲ್ಲಿ ನೆಲಸಿದಂತೆ ಭಾವಿಸಬೇಕು. ಮಾತ್ರವಲ್ಲ 'ಶ್ರೀಯುಂ ವಿಜಯಮುಂ' ಎಂಬ ಪದಗಳಲ್ಲಿ ಅಡಕವಾಗಿ ಹೊಳೆಯುವ 'ಶ್ರೀ ವಿಜಯ ನಾಮಕನಾದ ಈ ಕವಿವ್ಯಕ್ತಿಯೂ ನಿನಗೇ ಸಂಬಂಧಿಸಿದುದು' ಎಂಬುದೂ ಪದಶಕ್ತಿಯಿಂದ ಧ್ವನಿತವಾಗುತ್ತಿದೆಯಲ್ಲವೆ ?

## ಗ್ರಂಥಕಾರನ ಮತ ಕಾಲಗಳು

ಇನ್ನು ಈತನ ಮತವಿಚಾರವಾಗಿ ಪ್ರಕೃತ ಯಾವ ಸಿದ್ಧಾಂತವನ್ನೂ ಸೂಚಿಸುವಂತಿಲ್ಲ. ಈ ಗ್ರಂಥದ ಆದ್ಯಂತ ಭಾಗಗಳ ಮಂಗಲಾದಿ ಪದ್ಯಗಳಿಂದ ಇವನು ಜೈನನಾಗಿರಬಹುದೇ ಎಂದು ಭಾವಿಸಲಿಕ್ಕೆ ಸ್ವಲ್ಪವಾದರೂ ಆಸ್ಪದವಿಲ್ಲ. ಆದರೆ, ಕೆಲವು ದೃಷ್ಟಾಂತ ಪದ್ಯಗಳಲ್ಲಿ ಜೈನ ಗುರುಗಳ ವರ್ಣನೆಯೂ ಯಾವುದೋ ಒಂದು ರಾಮಾಯಣದಿಂದ ಎತ್ತಿಕೊಂಡ ಹಲವು ದೃಷ್ಟಾಂತಗಳಲ್ಲಿ ಜೈನ ರಾಮಾಯಣದ ಕಥಾಪದ್ಧತಿಯೂ ಹೊಳೆಯುತ್ತಿವೆ. ಅವು ಇತರ ಗ್ರಂಥಗಳಿಂದ ಎತ್ತಿಕೊಂಡುವುಗಳಿರಲಿಕ್ಕಿಲ್ಲವೆ ? ಎನ್ನಬಹುದು. ಆದರೆ, ಹಿಂದೆ ದೃಷ್ಟಾಂತಿಸಿದ ತನ್ನ ಸ್ವಭಾವವನ್ನು ಸೂಚಿಸುವ 'ಮದ ಮಾನ ಮಾಯ ಭಯ ಲೋಭ ವಿಷಾದ ಹರ್ಷಾಭ್ಯುದಿತಾಂತರಂಗ ರಿಪುವರ್ಗ....' ಎಂಬ ಪದ್ಯದಲ್ಲಿ ಅಂತಶ್ಶತ್ರುಗಳೆಂದರೆ 'ಮದ ಮಾನ ಮಾಯ ಭಯ ಲೋಭ ವಿಷಾದ ಹರ್ಷ' ಎಂಬ ಏಳು ಭೇದಗಳಿಂದ ಕೂಡಿದುವು ಎನ್ನುತ್ತಾನೆ. ವೈಷ್ಣವಾದಿ ಮತಪ್ರಕ್ರಿಯೆಗಳಲ್ಲಿ ಈ ಅಂತಶ್ಶತ್ರುಗಳು ಆರು. ಅವುಗಳು ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಹೆಸರುಗಳಿಂದಲೇ ಕರೆಯಲ್ಪಡುವುವು. ಮೇಲೆ ಕಾಣುವ 'ಅಂತರಂಗ ರಿಪುವರ್ಗ'ದ ನಾಮಗಳು ಜೈನಮಾರ್ಗೀಯಗಳೇ ಎಂಬಲ್ಲಿ ಸಂಶಯವಿಲ್ಲ. ಅದು ಹೇಗೂ ಇರಲಿ. ನೃಪತುಂಗ

ಸಭೆಯ 'ವಾಗಧಿಪ'ನಾಗಿದ್ದ ಈ ಶ್ರೀ ವಿಜಯನು ಮತದಲ್ಲಿ ಜೈನನಾಗಿದ್ದರೂ, ಸಾಮಾನ್ಯವಾಗಿ ನೃಪತುಂಗನಂತೆ 'ಉದಾರ ಮತ'ನೇ ಆಗಿದ್ದನೆಂದು ಭಾವಿಸಿದಲ್ಲಿ ತಪ್ಪಾಗದು.

ಈ ಗ್ರಂಥದಲ್ಲಿ ಸಂಜಾನ ಶಾಸನ ಶ್ಲೋಕಗಳೊಡನೆ ಹೋಲಿಕೆಗೊಳ್ಳುವ ಅನೇಕ ಪದ್ಯಗಳೂ ವಿಷಯಗಳೂ ತೋರುತ್ತಿವೆ. ಈ ಶಾಸನವು ಕ್ರಿ.ಶ. ೮೭೧ರಲ್ಲಿ ತಲೆದೋರಿತೆಂಬುದು ಸಿದ್ಧಪಷ್ಟ. ಸುಮಾರು ಅದೇ ಕಾಲದಲ್ಲಿ, ಎಂದರೆ ಸುಮಾರು ಕ್ರಿ.ಶ. ೮೭೫ ರೊಳಗೆ, ಈ ಗ್ರಂಥದ ನಿರ್ಮಾಣವಾಗಿರಬೇಕೆಂದು ನಮ್ಮ ಭಾವನೆ.

# ಆಗಿನ ಕನ್ನಡ ಸ್ವರೂಪವೂ ಗ್ರಂಥಕಾರನ ಗುರಿಯೂ

ತಿರುಳ್ಗನ್ನಡದ ಸಂಸ್ಕೃತಿಯೂ ಕನ್ನಡ ನಾಡಿನ ಬಾಹ್ಯ—ಆಂತರಂಗಿಕ ಸ್ವರೂಪಗಳೂ ಆ ಕಾಲದಲ್ಲಿ ಹೇಗಿದ್ದುವು ಎಂಬುದನ್ನು ಒಂದಿಷ್ಟು ವಿವೇಚಿಸುವ.

ಕಿಸುವೊಳಲೇ ಮೊದಲಾದ ನಾಲ್ಕೂರುಗಳಿಂದ ಕಾವೇರಿ ನದಿಯ ವರೆಗಿನ ನಾಡಿಗೆ ತೆಂಕನಾಡು ಎಂಬ ಹೆಸರು. ಗೋದಾವರಿ ಪರ್ಯಂತದ ಊರಿಗೆ ಬಡಗನಾಡೆಂದೂ, ಅದಕ್ಕಿಂತ ಉತ್ತರಕ್ಕೆ ವಿಂಧ್ಯಾಚಲದ ತಪ್ಪಲಿನ ರೇವಾನದಿಯ ವರೆಗಿನ ದೇಶಕ್ಕೆ ಬಡ—ಬಡಗನಾಡು, ಅಲ್ಲವೆ ಉತ್ತರೋತ್ತರ ಕನ್ನಡನಾಡು ಎಂದೂ ಹೆಸರು. ಈ ಉತ್ತರೋತ್ತರ ಕನ್ನಡನಾಡಿನ ಭಾಷಾ ಸಾಹಿತ್ಯವು ಮೆಲ್ಲಮೆಲ್ಲಗೆ ಮೈಸವೆಯುತ್ತ ಬರುತ್ತಿದ್ದ ಕಾಲವದು ಎಂದು ತೋರುತ್ತಿದೆ. ಅಂತೂ ಅಖಂಡ ಕನ್ನಡದೊಳಗೆ ತಿರುಳ್ಗನ್ನಡ ನಾಡು, ತೆಂಕನಾಡು, ಬಡಗನಾಡು, ಬಡ—ಬಡಗನಾಡು ಎಂದು ಅಂದು ಕನ್ನಡದಲ್ಲಿ ನಾಲ್ಕು ಕವಲುಗಳಿದ್ದಂತೆ ವಿಶದವಾಗುತ್ತಿದೆ. ಅವುಗಳಲ್ಲಿ ಒಳವ್ಕೆ ಎಂದರೆ ತಿರುಳ್ಗನ್ನಡನಾಡು. ತೆಂಕ ಬಡಗ ಪ್ರಾಂತಗಳ ಕನ್ನಡ ನುಡಿ, ನೆರೆಹೊರೆಯ ದೇಸಿಗವಲುಗಳ ಮತ್ತು ಹೊರನಾಡು ನುಡಿಗಳ ಸಂಪರ್ಕದಿಂದಲೂ ಅಲ್ಲಲ್ಲಿಯ ಉಚ್ಚಾರಣಾದಿಗಳ ವೈವಿಧ್ಯದಿಂದಲೂ ಮಾರ್ಪುಗೊಂಡು ಕನ್ನಡದ ಹೊಲಬೇ ಆಗದಷ್ಟು ರೂಪಾಂತರವಡೆದಿದ್ದುವಂತೆ. ಆ ಬಗೆಯ ನುಡಿಗಳಿಂದಲೇ ಅಲ್ಲಲ್ಲಿಯ ಕವಿತೆಗಳೂ ತಡೆಯಿಲ್ಲದೆ ಸಾಗುತ್ತಿದ್ದುವು. ಕವಿಗಳ ಕಾವ್ಯಗಳಲ್ಲಿ 'ದೋಷಂ ಇನಿತೆಂದು ಬಗೆ'ಯುವುದು ವಿದ್ವಾಂಸರಿಗೂ ಅಸಾಧ್ಯವಾಯಿತು. ವಿಶೇಷವಾಗಿ ಆ ಶಬ್ದಸ್ವರೂಪಗಳು ನಾನಾ ಮುಖವಾಗಿ ಹರಡಿದ ಕಾರಣ, ಒಂದು ಪ್ರಾಂತದವರಿಗೆ ಇನ್ನೊಂದು ಪ್ರಾಂತದಲ್ಲಿ ತಲೆದೋರಿದ ಕಾವ್ಯವೆಂದರೆ ಬೇರೊಂದು ಕನ್ನಡ ನುಡಿಯದಾಗಿ ಹೋಯಿತು. ಇದರ ಪರಿಣತಿ ಏನು ?—ಅಖಂಡವಾಗಿರಬೇಕಾಗಿದ್ದ ಕನ್ನಡ ನುಡಿ 'ಕನ್ನಡಂಗಳ್' ಎಂಬ ಬಹುತ್ವಕ್ಕೀಡಾಯಿತೆಂದು ಗ್ರಂಥಕಾರನೇ ಸಾರುತ್ತಾನೆ. 'ದೇಸಿ ಬೇಱೆವೇಱಪ್ಪುದಱಿಂ' ಅಂಥ ಕಾವ್ಯಗಳೊಳಗಿನ ಗುಣಾದಿಗಳು ಹಾಗಿರಲಿ, 'ಎಲ್ಲ ಬಣ್ಣವನ್ನೂ ಮಸಿ ನುಂಗಿತು' ಎಂಬ ಮಾತಿಗನುವಾಗಿ, ಈ ಕನ್ನಡ ಕಾವ್ಯಗಳನ್ನೋದಿ ಮನನ ಮಾಡುವ ಮಂದಿಯೇ ಕುಗ್ಗುತ್ತಾ ಹೋಯಿತು.

ತಿರುಳ್ಗನ್ನಡ ನಾಡಿನ ಕನ್ನಡ ಭಾಷಾ ಸಂಸ್ಕೃತಿಯ ಮಟ್ಟವೇನೋ ಹಾಗಿದ್ದಿಲ್ಲ. ಗ್ರಂಥಕಾರನು ಅದನ್ನು ಪ್ರಥಮ ಪರಿಚ್ಛೇದದ ಆದಿಭಾಗದಲ್ಲೇ ಬಣ್ಣಿಸುವ ಕೆಲವಂಶವನ್ನು

ಹಿಂದೆ ಕಾಣಿಸಿದ್ದೇವೆ. ಮತ್ತಿನದನ್ನು ಪರಾಂಬರಿಸಿರಿ :

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ —(i, 38)

‘ಆ ತಿರುಳುಗನ್ನಡನಾಡಿನವರು ಹದವನ್ನರಿತು ಎಡೆಗೊಂಡ ಪದಗಳನ್ನಾಡುತ್ತಿದ್ದರು. ಅನ್ಯರು ಆಡಿದ ನುಡಿಗಳನ್ನು ಭಾವಿಸುತ್ತಿದ್ದರು. ಕುರಿತು ಓದದವರಾಗಿದ್ದರೂ ಹುಟ್ಟು ಗುಣದಿಂದಲೇ ಚದುರರಾಗಿ ಮಾತುಬಲ್ಲವರಾಗಿ ಸಮಾಜದೊಳಗೆ ಹೆಸರುಗೊಂಡಿದ್ದರು. ತಾವು ಕುರಿತೋದದಿದ್ದರೂ ಉತ್ತಮ ಕಾವ್ಯಪ್ರಯೋಗದಲ್ಲೆಡೆಗೊಂಡ ಪದಗಳ ಸವಿ ಏನು, ಅಂಥವಲ್ಲದ ಪವಗಳ ಸಪ್ಪೆ ಏನು ? ಎಂಬುದನ್ನು ಸ್ವಾಭಾವಿಕವಾಗಿ ತಿಳಿಯಬಲ್ಲವರಿದ್ದರು’.

ಹಿಂದೆ ವಿಸ್ತರಿಸಿದುದು, ವಿಶೇಷವಾಗಿ ಕುರಿತೋದಿದವರ ಸಂಗತಿಯನ್ನಲ್ಲವಾದರೂ ಸಾಹಿತ್ಯ ವಿಚಾರದಲ್ಲಿ ಒಂದಿಷ್ಟು ನುರಿತವರ ಅಥವಾ ಆದರವುಳ್ಳವರ ವಿಷಯವನ್ನು. ಮುಂದೆ ಸೂಚಿಸುವುದು ಹಾಗೆ ಒಂದಿಷ್ಟು ನುರಿತವರನ್ನು ಅಲ್ಲವಾದರೂ ಏನು ?—

ಕುಱಿತವರಲ್ಲದೆ ಮತ್ತಂ
ಪೆಱರುಂ ತಂತಮ್ಮ ನುಡಿಯೊಳೆಲ್ಲಂ ಜಾಣರ್
ಕಿಱುವಕ್ಕಳುಮಾ ಮೂಗರು
ಮಱಿಪಲ್ಕಱಿವರ್ ವಿವೇಕಮಂ ಮಾತುಗಳಂ —(i, 39)

‘ಬಲ್ಲವರ ಭಾವನೆಯನ್ನು ಬಗೆಗೊಳ್ಳುವಷ್ಟು ಹದವಾದೆಡೆ ಅವರಿಗಿಲ್ಲದಿದ್ದರೂ ತಂತಮ್ಮ ನುಡಿಗಳನ್ನು ಪೋಣಿಸುವುದರಲ್ಲಿ ಎಲ್ಲರೂ ಜಾಣರು. ಕಿರುಮಕ್ಕಳಾದರೂ ಸರಿ, ಮೂಕರಾದರೂ ಸರಿ, ತಮ್ಮೆದೆಯ ವಿವೇಕ ಭಾವನೆಗಳನ್ನು ಅರುಹಲು ಬಲ್ಲವರಿದ್ದರು.’

ಜಾಣರ್ಕಳಲ್ಲದವರುಂ
ಪೂಣಿಗರಱಿಯದೆಯುಮಱಿವವೋಲವಗುಣದಾ
ತಾಣಮನಿನಿಸೆಡೆವೆತ್ತೊಡೆ
ಮಾಣದೆ ಪಿಡಿದದನೆ ಕೃತಿಗಳಂ ಕೆಡೆನುಡಿವರ್ —(i, 40)

‘ಅಂಥ ಜಾಣರಲ್ಲದವರಾದರೂ ಕೆಲವರು ವಿಷಯದ ಗುರಿಯನ್ನೇ ಬಿಗಿಹಿಡಿದು ತಾತ್ಪರ್ಯವನ್ನು ಹೀರುತ್ತಿದ್ದರು. ಪದ್ಯದೊಳಗೆ ಅವಗುಣದ ಹೊಲಬಾದರೂ ತಲೆದೋರಿದಲ್ಲಿ ಅವನ್ನೇ ಹಿಡಿದೆತ್ತಿ ಕವಿಗಳ ದೋಷವನ್ನು ಬಯಲಾಗಿಸುವರು.’

ಸಕ್ಕದಮುಂ ಪಾಗದಮುಮ
ದಕ್ಕುಂ ಬಗೆದಂತೆ ಸಮಱ ಪೇೞಲ್ಮುನ್ನಂ
ನಿಕ್ಕುವಮೊಳವಪ್ಪುದಱಿಂ
ತಕ್ಕಂತವಱವಱ ಲಕ್ಷ್ಯಮುಂ ಲಕ್ಷಣಮುಂ —(i, 41)

'ಸಂಸ್ಕೃತ ಪ್ರಾಕೃತಗಳಲ್ಲಾದರೆ, ಆ ಬಗೆಯೇ ಬೇರೆ. ಅವುಗಳಲ್ಲಿ ಲಕ್ಷ್ಯಗ್ರಂಥಗಳಂತೆ ಲಕ್ಷಣ ಗ್ರಂಥಗಳೂ ಬೇಕಾದಷ್ಟಿವೆ. ಪರಮಾಚಾರ್ಯರಿಂದ ರಚಿತವಾದ ಆ ಲಕ್ಷ್ಯ ಲಕ್ಷಣ ಪ್ರಬಂಧಗಳಿಂದಾಗಿ ಸಂಸ್ಕೃತ ಪ್ರಾಕೃತ ಸಾಹಿತ್ಯ ಸ್ವರೂಪವು ಸುಗಮ ವಾಗಿದ್ದುದು.

ಅರಿದಾದಂ ಕನ್ನಡದೊಳ್
ತಿರಿಕೊಱೆಗೊಂಡಱಯೆ ಪೇೞ್ವೆನೆಂಬುದಿದಾರ್ಗಂ
ಪರಮಾಚಾರ್ಯರ ಪೋಲ್ ಸೈ
ತಿರಲಱಯರ್ ಕನ್ನಡಕ್ಕೆ ನಾಡವರೊವಜರ್ —(i, 42)

'ಕನ್ನಡದಲ್ಲಾದರೆ ಹಾಗಲ್ಲ. ಲಕ್ಷಣರೂಪವಾದ ಕಾವ್ಯರಚನಾಪದ್ಧತಿಯನ್ನು, ಇಷ್ಟಷ್ಟಾಗಿ ಬಲ್ಲವರೆಂಬವರಲ್ಲಿ ಕೇಳಿಯೇ ತಿಳಿದುಕೊಳ್ಳಬೇಕಾಗಿತ್ತು—ಎಂದರೆ 'ತಿರಿಕೊಱೆ'ಗೊಳ್ಳಬೇಕಾಗಿತ್ತು. ಹಾಗೆ 'ತಿರಿಕೊಱೆ'ಗೊಂಡುದರೊಳಗೆ ಒಪ್ಪುತಪ್ಪು ಗಳೆಷ್ಟೆಂಬ ಒಳಗಿನ ಗುಟ್ಟು ಶಿವನಿಗೂ ಗೊತ್ತಿಲ್ಲ. ಆದರಿಂದ ಲಕ್ಷಣ ಗ್ರಂಥಗಳು ಮುಖೋದ್ಗೀತಗಳಾಗಿರುವ ಸಂಸ್ಕೃತ ಪ್ರಾಕೃತಗಳ ಪರಮಾಚಾರ್ಯರಂತೆ 'ಇದಮಿತ್ಥಂ' ಎಂಬ ನಿರೂಪವನ್ನು ಈ ಕನ್ನಡ ಕವಿಗಳಿಗೆ ಯಾರೀಯಬೇಕು ? ಕನ್ನಡಕ್ಕೆ ಓಜರೆನಿಸಿದ ನಾಡವರು ಅಂಥ ಪರಮಾಚಾರ್ಯಸನ್ನಿಭರಲ್ಲ'.

ಕನ್ನಡದಲ್ಲಿ ಆ ವರೆಗೆ ಲಕ್ಷಣ ಗ್ರಂಥಗಳೇ ಇದ್ದಿಲ್ಲ ಎಂಬುದನ್ನಾತನು ಆ ಮೇಲೆ ಶಬ್ದತಃ ನಿರೂಪಿಸುತ್ತಾನೆ—

ನೆಲಸಿದ ಕಾವ್ಯಂ ಕಾವ್ಯ
ಕ್ಕೆ ಲಕ್ಷಣಂ ಸತತಮೆಂದೆ ಪೞಗನ್ನಡಮುಂ
ಪೊಲಗೆಡಿಸಿ ನುಡಿವರಾಗಮ
ಬಲಹೀನರ್ ದೇಸಿಯಲ್ಲದೆಂದಱದಿದ್ದುಂ —(i, 48)

'ಹಿಂದಿನ ಕನ್ನಡ ಕಾವ್ಯವೇ ಮುಂದಿನದಕ್ಕೆ ಲಕ್ಷಣವೆಂದು ಭಾವಿಸಿಕೊಂಡು ಕೆಲವರು ಕಾವ್ಯವನ್ನು ರಚಿಸುತ್ತಾರೆ. ಕೆಲಸಂದರ್ಭಕ್ಕೆ, ಕೆಲಸಮಯಕ್ಕೆ ಅದು ಒಪ್ಪಲೂಬಹುದು. ಆದರೆ ಯಾವಾಗಲೂ ಅದು ಸಲುವಳಿಯಾಗುವುದೆ? ವಿಶೇಷವಾಗಿ ಆ ಪದ್ಧತಿ ಹಿಂದಿನ ದೇಸಿಯಾಗಿದ್ದ ಹಳಗನ್ನಡದಲ್ಲೇ ಕಾವ್ಯರಚನೆಗೈವುದಾದರೆ ಒಪ್ಪಬಹುದು; ಇಂದಿನ ದೇಸಿಗೆ, ಅಥವಾ ಹೊಸಗನ್ನಡ ಕಾವ್ಯರಚನೆಗೆ, ಆ ಪದ್ಧತಿ ವಿರಸವೇ ಸರಿ'.

ಆಗಿನ ತಿರುಳ್ಗನ್ನಡ ನಾಡಿನಲ್ಲಿ ಇಂಥವರಲ್ಲದೆ ಮೇಲ್ಮೆಯ ಸಂಸ್ಕೃತಿಯುಸ್ಳೊಂದಿದ ಕೆಲ ವ್ಯಕ್ತಿಗಳಿದ್ದಿರಲೂಬಹುದು. ಆದರೂ ಸಾಮಾನ್ಯವಾಗಿರುವ ನಾಡವರೆಪೆಯ ಮಟ್ಟವನ್ನು ಗ್ರಂಥಕಾರನು ಚಿತ್ರಿಸಿದ್ದಾನೆ. ಇದರಿಂದ, ಆಗ ಕನ್ನಡ ಸಾಹಿತ್ಯದಲ್ಲಿ ಲಕ್ಷಣಗ್ರಂಥದ ಅಭಾವವೇ ಹೊಳೆಯುತ್ತಿದ್ದುದು ವಿಶದವಾಗುತ್ತಿದೆ. ಧಾನ್ಯಾದಿಗಳ ಕೊಳುಕೊಡೆಯ ವ್ಯವಹಾರವು, ಮಾನಪಾತ್ರವಿಲ್ಲದೆ, ಕೈಸೆರೆಯಿಂದಲೆ ಎಷ್ಟು ಕಾಲ ನಡೆದೀತು ?

## ಆಗಿನ ಕಾಲದ ಗದ್ಯ ಸಾಹಿತ್ಯ

ಆಗಿನ ಕವಿಗಳು 'ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ' ಎಂದು ಬಗೆದು ಬಳಸುತ್ತಿದ್ದವರೆಂದು ಗೊತ್ತಾಯಿತಷ್ಟೆ. ಹಾಗಿದ್ದರೆ, ಆಗ ಯಾವ ಬಗೆಯ ಕಾವ್ಯಗಳು ರೂಢಿಗೊಂಡಿದ್ದುವು? ಎಂಥ ಕವಿಗಳಿದ್ದರು ? ಎಂಬುದನ್ನು ಒಂದಿಷ್ಟು ಭಾವಿಸುವ:

ಕನ್ನಡದಲ್ಲಿ ಗದ್ಯ ಪದ್ಯಗಳೆಂಬ ಎರಡು ಬಗೆಯ ಕಾವ್ಯಗಳೇ ಪ್ರಸಿದ್ಧಗಳೆಂದಾಡಿದ ಗ್ರಂಥಕಾರನು ತನ್ಮಿಶ್ರವಾದೊಂದು ಬಗೆಯ ಕಾವ್ಯವೂ ಇದ್ದಂತೆ ಸೂಚಿಸುತ್ತಾನೆ. ಆದರೆ, ಮತ್ತೆ ಹೆಸರುಗೊಂಡಿರುವ ಚಂಪೂಕಾವ್ಯವೇ ಅದು, ಎಂದು ಹೇಳಿಲ್ಲ. ಆ ಮಿಶ್ರಕಾವ್ಯವೆಂದರೆ, ಗದ್ಯರೂಪವಾದ ಕಥೆ, ಮತ್ತು 'ಪ್ರಗೀತಿ' ಎನ್ನುವ ಹಾಡು—ಇವುಗಳಿಂದ ಬೆರಸಿಕೊಂಡಿತ್ತು, ಎನ್ನುತ್ತಾನೆ. ಮತ್ತಿನ ಚಂಪೂಕಾವ್ಯಗಳಲ್ಲಿ ಗದ್ಯವಿದ್ದರೂ ವಿಶೇಷವಾಗಿ ವೃತ್ತ ಕಂದಾದಿಗಳೇ ಅಧಿಕವಾಗಿರುವುದು. ಅಲ್ಲಲ್ಲಿ ತೋರುವ 'ರಗಳೆ'ಗಳು ಹಾಡಿನಲ್ಲಿಯೇ ಅಡಕವಾದವುಗಳು. ಆದರೂ ಕಂದ ವೃತ್ತಗಳನ್ನೇನೂ ಸೂಚಿಸದ ಕಾರಣ ಇಲ್ಲಿ ತೋರುವ 'ಸನ್ಮಿಶ್ರಿತ' ಕಾವ್ಯವೆಂದರೆ, ಆ ಮೇಲೆ ಪ್ರಸಿದ್ಧವಾದ ಚಂಪೂ ಕಾವ್ಯವಾಗಿದ್ದಂತೆ ತೋರುವುದಿಲ್ಲ. ಇರಲಿ, ಆಗಿನ ಕಾಲದಲ್ಲಿ ಗದ್ಯಕಾವ್ಯವು ಮೇಲ್ಮೆಗಡರಿಕೊಂಡಿತ್ತು ಎಂದು ಸೂಚಿಸುವುದನ್ನೀಕ್ಷಿಸಿರಿ:

ವಿಮಳೋದಯ ನಾಗಾರ್ಜುನ
ಸಮೇತ ಜಯಬಂಧು ದುರ್ವಿನೀತಾದಿಗಳೀ
ಕ್ರಮದೊಳ್ನೆಗೞ್ಗಗದ್ಯಾ
ಶ್ರಮಗುರುಪದತಾ ಪ್ರತೀತಿಯಂ ಕೆಯ್ಕೊಂಡರ್ —(i, 29)

ವಿಮಳ ಉದಯ (ಅಥವಾ ವಿಮಳೋದಯ), ನಾಗಾರ್ಜುನ, ಜಯಬಂಧು, ದುರ್ವಿನೀತ ಮೊದಲಾದವರು ಈ ರೀತಿಯಲ್ಲಿ ರಚಿಸಿ 'ಗದ್ಯಾಶ್ರಮಗುರು'ಗಳು ಎಂಬ ಪ್ರಸಿದ್ಧಿಯನ್ನೊಂದಿದರು, ಎನ್ನುತ್ತಾನೆ. ಈ ಕನ್ನಡ ಗದ್ಯ ಪ್ರಬಂಧಗಳು ಇನ್ನೂ ಪ್ರಕಾಶವಡೆಯಲಿಲ್ಲ. ಆದರೆ ಆಯಾ ಗದ್ಯ ಮಹಾಕವಿನಾಯಕರೊಳಗೆ ಕೆಲಮಂದಿಯ ಹೆಸರು ಗೊತ್ತಾಗುತ್ತಿದೆ. ಆ ಸಾಲಿನಲ್ಲಿ ಕಡೆಯವನಾದ 'ದುರ್ವಿನೀತ' ಎಂದರೆ ಬಹುಶಃ ಕ್ರಿ.ಶ. ೬ನೆಯ ಶತಕದವನೂ ಗಂಗವಂಶೀಯನೂ ಆದ ಅವಿನೀತರಾಜನ ಕುಮಾರಕನಾದ ದುರ್ವಿನೀತನೆಂದೇ ತೋರುತ್ತಿದೆ. ಆ ದುರ್ವಿನೀತನ ೬ನೆಯ ಶತಕದ ಕನ್ನಡ ಗದ್ಯಶಾಸನವೊಂದು ಪ್ರಕಟವಾಗಿದೆಯಲ್ಲದೆ, ಭಾರವಿಯ 'ಕಿರಾತಾರ್ಜುನೀಯ' ಕಾವ್ಯದ ೧೫ನೆಯ ಸರ್ಗಕ್ಕೆ ಆತನು ಕನ್ನಡ ವ್ಯಾಖ್ಯಾನವನ್ನು ಬರೆದುದಾಗಿಯೂ ಹೇಳಿಕೆಯುಂಟು. ಅಷ್ಟು ಹಿಂದಿನ ಕಾಲದಲ್ಲಿಯೇ ಕನ್ನಡದಲ್ಲಿ ಕಾವ್ಯಪ್ರಬಂಧಗಳು ನೆಲೆಗೊಂಡುದಷ್ಟೇ ಅಲ್ಲ, ಮೇಲೆ ಸೂಚಿತರಾದವರು ಗದ್ಯಶೈಲಿಯ ಶಿಖರಕ್ಕೇರಿದವರೂ ಆಗಿದ್ದರೆಂದು ತಿಳಿದಂತಾಗುತ್ತಿದೆ. 'ಗದ್ಯಾಶ್ರಮಗುರು' ಎಂಬ ಬಿರುದು ಅಸಾಮಾನ್ಯವಾದುದೇ ಸರಿ. ಇಂಥ ಬಿರುದು, ಆಗಿನ ಪದ್ಯಕವಿಗಳಿಗೆ ಒದಗಿದ್ದಂತೆ ತೋರುವುದಿಲ್ಲ. ಮಾತ್ರವಲ್ಲ; ಹಾಗೆ ಪದ್ಯಾಚಾರ್ಯರೆನ್ನಿಸಬೇಕಾದರೆ ಈ

ಲಕ್ಷಣ ಗ್ರಂಥವನ್ನು ಸರಿಯಾಗಿ ಮನನ ಮಾಡಬೇಕು ಎಂದು ಗ್ರಂಥಕಾರನು ಕವಿಗಳಿಗೆ ಬೋಧಿಸುವುದನ್ನು ಭಾವಿಸಿರಿ :

ಸಮುಚಿತ ನೃಪತುಂಗದೇವಮಾರ್ಗ
ಕ್ರಮನಮನಾಭಿಮುಖರ್ಕಳಪ್ಪ [ರೆತ್ತಂ]
ಕ್ರಮಸಹಿತಮಗಮ್ಯರೂಪ ಕಾವ್ಯಾ
ಶ್ರಮಪದನುಂ ನಿರಪಾಯಮೆಯ್ದಲಾರ್ಪರ್ —(i, 146)

ಈ 'ಕವಿರಾಜಮಾರ್ಗ'ವನ್ನೋದಿ ಮನನಪೂರ್ವಕವಾಗಿ ಅರಿತ ನುರಿತ ಪ್ರತಿಭಾಶಾಲಿಗಳು ಮುಂದೆ ಇತರರಾರಿಗೂ ಅಗಮ್ಯವಾದ 'ಕಾವ್ಯಾಶ್ರಮಪದವನ್ನು' ಹೊಂದಲಾಪರು, ಎಂಬ ಈ ಮಾತನ್ನವಧರಿಸಿರಿ. ಇಲ್ಲಿ ಸೂಚಿತವಾದ 'ಕಾವ್ಯಾಶ್ರಮಪದವನ್ನು' ಎಂಬುದರೊಳ ಗಣ 'ಕಾವ್ಯ' ಪದಕ್ಕೆ 'ಪದ್ಯಕಾವ್ಯ' ಎಂದೇ ಅರ್ಥವೆಂಬುದು ಸಂದರ್ಭದಿಂದಲೆ ವಿಶದ ವಾಗುವುದು. ಈ 'ನೃಪತುಂಗದೇವಮಾರ್ಗ'ವು ಪದ್ಯಕಾವ್ಯ ಲಕ್ಷಣಗ್ರಂಥವೇ ಹೊರತು ಗದ್ಯ ಕಾವ್ಯ ಲಕ್ಷಣವಲ್ಲವಷ್ಟೆ.

ಈ ವಿವೇಚನೆಯಿಂದ, ಕನ್ನಡ ಸಾಹಿತ್ಯದೊಳಗೆ ಆ ಮೊದಲೇ 'ಗದ್ಯಾಶ್ರಮಗುರು'ಗಳಾದವರು, ಎಂದರೆ ಗದ್ಯಾಚಾರ್ಯರು, ಆಗಿ ಹೋಗಿದ್ದರು; ಈ ಗ್ರಂಥವನ್ನು ಮನನವೆಸಗಿದರೂ 'ಕಾವ್ಯಾಶ್ರಮಗುರುಪದ'ವನ್ನೊಂದುವುದು ಸಾಧ್ಯವಲ್ಲ; ಆದರೆ ಕಾವ್ಯಾಶ್ರಮವನ್ನೊಂದಿ ವಿದ್ಯಾರ್ಥಿಗಳಾಗಬಹುದು ಎಂದು ಈ ಪದ್ಯತಾತ್ಪರ್ಯವಾಗುವುದು. ಇದರಿಂದ, ಆಗಿನ ಗದ್ಯಸಂಸ್ಕೃತಿಯ ಮಹತ್ತ್ವವೂ ಪದ್ಯ ಸಂಸ್ಕೃತಿಯ ನ್ಯೂನತೆಯೂ ಭಾಸವಾಗುತ್ತಿವೆ.

ಇಂಥ ಮಾರ್ಗೀಯವೆನ್ನಿಸಿದ ಗದ್ಯ ಸಾಹಿತ್ಯವು ಆಗ ಶಿಖರವನ್ನೇರಿದ್ದರೂ, ಅದರೊಳಗೆ ಯಾವ ವಿಶಿಷ್ಟ ಗ್ರಂಥವೂ ಈ ವರೆಗೆ ದೊರಕದಿರುವುದು ವ್ಯಸನಾಸ್ಪದವೆನ್ನಬೇಕು. ಈಚೆಗೆ ಪ್ರಕಾಶವಾದ 'ವಡ್ಡಾರಾಧನೆ' ಎಂಬ ಗದ್ಯ ಪ್ರಬಂಧವು, 'ಕವಿರಾಜಮಾರ್ಗ'ಕಾರನಾಡುವ ಗದ್ಯಾಶ್ರಮಗುರುಗಳೊಳಗೆ ಯಾರದೂ ಅಲ್ಲವಾದರೂ, ಆ ಸಾಲಿನಲ್ಲಿಯೇ ಸೇರಿದುದಾಗಿರ ಬೇಕೆಂದು ನಮ್ಮ ಭಾವನೆ.

## ಕನ್ನಡದ ಪುರಾತನ ಪದ್ಯಕಾವ್ಯ ಸ್ವರೂಪ

ಭಾಷೆಯಲ್ಲಿ ಪಾಕವಡೆದ ಸಂಸ್ಕೃತಿಯೊದಗಬೇಕಾದಲ್ಲಿ ಬರಿಯ ಗದ್ಯ ಪ್ರಬಂಧ ಚಾತುರ್ಯವೇ ಸಾಲದು. 'ಸಮಸ್ತ ಜನತಾ ಹೃದ್ಯ'ವಾದ ಪದ್ಯದಲ್ಲಿ ಹದವಡೆದ ಚಮರು ಬಗೆಗೊದಗಬೇಕು. ಪದ್ಯರಚನಾಚಾತುರ್ಯವೆಂದರೆ, ಸಾಹಿತ್ಯ ಸಂಸ್ಕೃತಿ ಸಾಧನೆಯಲ್ಲಿ ಪಳಗಿ ನುರಿತ ತಪೋಬಲ ಎನ್ನಬಹುದು. ಬರಿಯ ಗದ್ಯ ಸಾಹಿತ್ಯದ ಜಾಣ್ಮೆ ಜನತೆಯ ಹೃದಯದಲ್ಲಿ ಬೇರೂರಿ ಚಿಗುರಲಾರದು. ಈಗ ಬುಟ್ಟಿಗಳಲ್ಲಿ ನೀರೆರೆದು ಹೂಗಿಡಗಳನ್ನು ಬೆಳೆಯಿಸುತ್ತಾರಷ್ಟೆ; ಅಂಥ ಆರಾಮವದು. ಕೆಲಸಮಯದ ವರೆಗೆ ಚಿಗುರೆಲೆ ಹೂಗಳಿಂದ ಅಲಂಕೃತವಾದ ಗಿಡಬಳ್ಳಿಗಳು ನಲಿದಾಡಬಹುದು; ಪರಿಮಳಿಸಬಹುದು. ಆದರೆ, ಹಣ್ಣುಹಂಪಲುಗಳನ್ನು ಧಾರಾಳವಾಗಿ ಒದಗಿಸಿ ಜನತೆಯ ಆರೋಗ್ಯಕ್ಕೆ, ಸಂಸ್ಕೃತಿಗೆ ಅದು ಸಾಧಕವಾಗ

ಲಾರದು. ಅದಕ್ಕೆ 'ವಿದ್ಯಾಪಾರಪರಾಯಣ'ನಾದ ಪದ್ಯಸಂಸ್ಕೃತಿಯೇ ಬೇಕು. ಅಂಥ ಪದ್ಯಪ್ರಬಂಧಗಳು ಆ ಹಿಂದಿನ ಕನ್ನಡ ಸಾಹಿತ್ಯದೊಳಗೆ ಬೇಕಾದಷ್ಟಿಲ್ಲವಾದರೆ ಕೆಲವಾದರೂ ಇದ್ದವೆಂಬುದನ್ನು ಹಿಂದೆಯೇ ಸದೃಷ್ಟಾಂತವಾಗಿ ಕಾಣಿಸಿದ್ದೇವೆ. ಕನ್ನಡದ ಆ ಆದ್ಯಕವಿಗಳೊಳಗಿನ ಶ್ರೀವಿಜಯನೆಂದರೆ, ಪ್ರಕೃತ ಗ್ರಂಥಕಾರನಾದ ಶ್ರೀವಿಜಯನಿಗಿಂತ ಎಷ್ಟೋ ಹಿಂದಿನವನು ಎಂಬುದನ್ನೂ ಅಲ್ಲೇ ಸೂಚಿಸಿದ್ದೇವೆ. ಆ ಆದ್ಯಕಾವ್ಯದ ಸ್ವರೂಪ ಹೇಗೆ ಎಂಬುದು ಮುಂದಿನ ಪದ್ಯಾರ್ಥದಿಂದ ವ್ಯಕ್ತವಾಗುವುದು:

ಕಂದಮುಮಮಳಿನ ವೃತ್ತಮು
ಮೊಂದೊಂದೆಡೆಗೊಂದು ಜಾತಿ ಜಾಣೆಸೆಯೆ ಬೆಡಂ
ಗೊಂದಿವಱೊಳಮರೆ ಪೇೞ
ಲ್ಸುಂದರ ರೂಪಿಂ ಬೆದಂಡೆಗಬ್ಬಮದಕ್ಕುಂ —(i, 34)

'ಕಂದವೂ ನಿರ್ದುಷ್ಟವಾದ ವೃತ್ತವೂ ಒಂದೊಂದೆಡೆಗೆ ಒಂದೊಂದಾಗಿ ಕೂಡಬೇಕು. ಆ ಮೇಲೆ ಜಾಣ್ಮೆಯಿಂದೊಡಮೆರೆದ 'ಜಾತಿ' ಬೆಡಗಿನಿಂದ ಇವುಗಳಲ್ಲಿರಬೇಕು. ಹಾಗಿದ್ದ ವಸ್ತು ವಿಸ್ತರ ವಿರಚನೆಗೆ 'ಬೆದಂಡೆ' ಎಂದು ಹೆಸರು.

ಕಂದಂಗಳ್ ಪಲವಾಗಿರೆ
ಸುಂದರವೃತ್ತಂಗಳಕ್ಕರಂ ಚವುಪದಿ ಮು
ತ್ತಂ ದಲ್ ಗೀತಿಕೆ ತಿವದಿಗ
ಳಂದಂಬೆತ್ತೆಸೆಯೆ ಪೇೞ್ದೊಡದು ಚತ್ತಾಣಂ —(i, 35)

'ಕಂದಗಳು ಹಲವು, ಸುಂದರಗಳಾದ ವೃತ್ತ–ಅಕ್ಕರ-ಚೌಪದಿ–ಗೀತಿಕೆ–ತ್ರಿಪದಿಗಳು ಕೆಲವು, ಹೀಗೆ ಬೆರೆದ 'ವಸ್ತು ವಿಸ್ತರ ವಿರಚನೆ'ಯೇ ಚತ್ತಾಣವೆಂಬುದು.'

ಮೇಲೆ ತೋರುವ 'ಬೆದಂಡೆ, ಚತ್ತಾಣ' ಎಂಬವು ಆ ಹಿಂದಿನ ದೇಸಿಗಬ್ಬದ ವಿಶಿಷ್ಟ ನಾಮಗಳಾಗಿ ತೋರುತ್ತಿವೆ. ಅವುಗಳ ಒಳಮೈಯನ್ನು ಪರಾಂಬರಿಸಲಿಕ್ಕೆ, ಅಂಥ ಒಂದು ಕಾವ್ಯವಾದರೂ ಈ ವರೆಗೆ ಪ್ರಕಟವಾಗದುದರಿಂದಲೂ ಅವುಗಳ ಲಕ್ಷಣಗ್ರಂಥಗಳು ತಲೆದೋರಲೇ ಇಲ್ಲವೆಂಬುದು ಹಿಂದೆ ಸೂಚಿಸಲ್ಪಟ್ಟುದರಿಂದಲೂ, ಅಸಾಧ್ಯವಾಗಿದೆ. ಆದರೆ, ಈ ದೇಸಿಗಬ್ಬಗಳ ಸ್ವರೂಪವು, 'ಕವಿರಾಜಮಾರ್ಗ'ದಿಂದ ಇತ್ತಣದಾದ, ಎರಡನೆಯ ನಾಗವರ್ಮನ (ಸು. ಕ್ರಿ.ಶ. ೧೧೪೫) 'ಕಾವ್ಯಾವಲೋಕನ'ದ ಕಡೆಯ ಭಾಗದಲ್ಲಿ ಒಂದಷ್ಟು ಹೆಚ್ಚಾಗಿ ವಿವೃತವಾಗಿದೆ. ಅದರೊಳಗೆ 'ಚತ್ತಾಣ'ದ ಹೆಸರಿಲ್ಲವಾದರೂ 'ಬಾಜನೆಗಬ್ಬ' ಎಂಬುದು ತೋರುತ್ತಿದೆ. ಅದು 'ಚತ್ತಾಣ'ವೆಂಬುದರ ನಾಮಾಂತರವಾಗಿರಲೂಬಹುದು. ಆದರೆ ಈ ಭೇದವಿಶಿಷ್ಟವಾದ ಕನ್ನಡದ ಆ ಪುರಾತನ ಕಾವ್ಯವನ್ನು ಅವನು 'ಪಾಡುಗಬ್ಬ' ಎಂಬ ಒಂದೇ ಹೆಸರಿನಿಂದ ಕರೆದಂತೆ ಭಾಸವಾಗುತ್ತಿದೆ. ಅಲ್ಲಿ ವಿವೃತವಾದ ಪಾಡುಗಬ್ಬದ ಸ್ವರೂಪವನ್ನು, ಸಂಗ್ರಹವಾಗಿಯಾದರೂ ಸ್ಫುಟವಾಗಿ, ಮುಂದೆ ಚಿತ್ರಿಸಿದರೆ ವಾಚಕರ ಅವಗಾಹನೆಗೆ ಹೆಚ್ಚಿನ ನೆರವಾದೀತೆಂದು ಭಾವಿಸುತ್ತೇವೆ.

ನಾಗವರ್ಮನು ತನ್ನ 'ಕಾವ್ಯಾವಲೋಕನ'ದ ೨೪೧ನೆ ಸೂತ್ರ ಮೊದಲ್ಗೊಂಡು

೨೪೫ರ ವರೆಗಿನ, ಗ್ರಂಥಾಂತ್ಯಭಾಗದಲ್ಲಿ ನಿರೂಪಿಸಿದ 'ಪಾಡುಗಬ್ಬ'ದ, ಅಥವಾ ಕನ್ನಡ ಪುರಾತನ ಕಾವ್ಯದ, ಸ್ವರೂಪ ಹೀಗಿದೆ—

## ಪದ ಮತ್ತು ಮೆಲ್ವಾಡು

ಸಂದಿಸಿರೆ ಕಂದಮುಂ ಪೆಱ
ತೊಂದಱುಕೆಯ ವೃತ್ತಜಾತಿಯುಂ ಪದಮವು ತ
ಳ್ತೊಂದಿರೆ ಪನ್ನೆರಡುವರಂ
ಸಂದುದು ಮೆಲ್ವಾಡೆನಿಕ್ಕುಮದು ಕನ್ನಡದೊಳ್

—ಕಾವ್ಯಾವಲೋಕನ, ಸೂ. ೨೪೧

"ಕಂದವೂ ಬೇರೊಂದು ಪ್ರಸಿದ್ಧವಾದ ವೃತ್ತಜಾತಿಯೂ ಸೇರಿದ ಕೂಟಕ್ಕೆ 'ಪದ' ಎಂಬ ಹೆಸರು.[1] ಅಂಥ ಪದಗಳು ಹನ್ನೆರಡರ ವರೆಗೆ ಸಂಧಿಸಿದುದು 'ಮೆಲ್ವಾಡು.'"

ಈ ಹೇಳಿಕೆಯಿಂದ, ಎರಡು 'ಪದ'ಗಳು ಮೊದಲಾಗಿ ಹನ್ನೆರಡು ಪದಗಳ ವರೆಗಿನವುಗಳಿಗೆ, ಅಥವಾ ಹಾಗೆ ಎರಡೆರಡಾಗಿ ಹೆಚ್ಚಾಗಿ ಇಪ್ಪತ್ತನಾಲ್ಕರ ವರೆಗೆ ಬೆರಸಿ ರೂಪಿಸಿದ ಪದ್ಯಗಳ ಕೂಟಕ್ಕೆ 'ಮೆಲ್ವಾಡು' ಎಂಬ ಹೆಸರೆಂದು ಸೂಚಿತವಾಗುತ್ತಿದೆ.

## ಪಾಡು

ಪದಿನಯ್ದು ಮಿರ್ಪತಯ್ದುಂ
ಪದಂ ಯಥಾಸಂಭವಂ ಪ್ರಬಂಧದ ಮೆಯ್ಯೊಳ್
ಪುದಿದೊದವಿ ನೆಗಱ್ದ್ವಡಂತದು
ಸದಲಂಕಾರಂ ರಸಾಸ್ಪದಂ ಪಾಡಕ್ಕುಂ

—ಕಾವ್ಯಾವಲೋಕನ, ಸೂ. ೨೪೨

"ಹದಿನಯ್ದಾಗಲಿ ಇಪ್ಪತ್ತಯ್ದಾಗಲಿ ಪದಗಳು ಬೆರಸಿ ರೂಪಿಸಿ ಸದಲಂಕಾರವಾಗಿ ರಸಾಸ್ಪದವೆನಿಸಿದ ಪ್ರಬಂಧಕ್ಕೆ 'ಪಾಡು' ಎಂಬ ಹೆಸರು."

## ಪಾಡುಗಬ್ಬದಿಂದಲೇ ಮೇಲ್ವಾಡು ಮತ್ತು ಬೆದಂಡೆಗಬ್ಬ

ಪಾಡುಗಳಿಂದಂ ತಱಿಸಲೆ
ಮಾಡಿದುದಂ ಪಾಡುಗಬ್ಬಮೆಂದು ಬುಧರ್ ಕೊಂ

[1] ಇಲ್ಲಿ ತೋರುವ 'ವೃತ್ತ ಜಾತಿ' ಎಂಬುದಕ್ಕೆ ವೃತ್ತಸ್ವರೂಪವು ಮಾತ್ರಾಗಣಬದ್ಧವೂ ಆದ 'ಜಾತಿ' ಎಂಬ ಛಂದಸ್ಸಿಗೆ ಸೇರಿದ ಮದನವತಿ–ಅಕ್ಕರಂ–ಚೌಪದಿ–ಗೀತಿಕೆ–ಏಳೆ–ತಿವದಿ–ಉತ್ಸಾಹಂ–ಅಕ್ಕರಿಕೆ–ಛಂದೋವತಂಸ ಎಂಬ ಜಾತಿನಾಮಕ ಪದ್ಯಗಳಲ್ಲಿ ಸೇರಿದುದು ಎಂಬುದೇ ಅರ್ಥವಾಗಿರಬೇಕು—ಅಕ್ಷರಗಣಬದ್ಧವಾದ ವೃತ್ತ ಮತ್ತು ಮಾತ್ರಾಗಣಾತ್ಮಕವಾದ ಜಾತಿ, ಇವುಗಳ ಕೂಟ ಎಂಬ ಅರ್ಥವಾಗಿರಲಾರದು. ಹಾಗೆಯೇ ಆಗಿದ್ದರೆ, ಆ ವೃತ್ತಜಾತಿಗಳು ಭಿನ್ನ ಸ್ವರೂಪದವುಗಳಾಗುವುದರಿಂದ, 'ಪೆಱತೊಂದು ಅಱುಕೆಯ ವೃತ್ತಜಾತಿಯುಂ' ಎಂದು ಏಕಸಂಖ್ಯಾವಾಚಕವಾಗಿ ಹೇಳಿದ ರೀತಿಗೆ ಭಂಗವಾಗುತ್ತಿದೆಯಲ್ಲವೆ? ಅಂತೂ ಒಂದು ಕಂದ, ಇನ್ನೊಂದು ವೃತ್ತಜಾತಿ—ಈ ಎರಡರ ಕೂಟಕ್ಕೆ 'ಪದ' ಎಂಬ ಹೆಸರು ಎಂದು ತೋರುತ್ತಿದೆ. ಈಗ 'ಪದ' ಎಂಬುದಕ್ಕೆ ಸಾಮಾನ್ಯವಾಗಿ 'ಹಾಡು' ಎಂಬರ್ಥವು ರೂಢವಾಗಲು ಇದೇ ಕಾರಣವಾಗಿರಬಹುದೊ ಏನೊ?

ಪಾಡುವರದಱಿಂದಂ ಮೇ
ಲ್ವಾಡುಂ ರೂಢಿಯ ಬೆದಂಡೆಗಬ್ಬಮುಮಕ್ಕುಂ

—ಕಾವ್ಯಾವಲೋಕನ, ಸೂತ್ರ ೨೪೩

"ಹಾಡು (ರಾಗ ತಾಳಬದ್ಧವಾದ ಪದ್ಯ)ಗಳಿಂದ ಅಥವಾ ಹಿಂದೆ ಸೂಚಿಸಿದ 'ಪಾಡು'ಗಳಿಂದ ರಚಿತವಾದುದನ್ನು 'ಪಾಡುಗಬ್ಬ' ಎಂದು ವಿದ್ವಾಂಸರು ಕೊಂಡಾಡುವರು. ಅದರೊಳಗಿನ ಭೇದಗಳನ್ನು 'ಮೇಲ್ವಾಡು' ಎಂದೂ 'ಬೆದಂಡೆಗಬ್ಬ' ಎಂದೂ ಆಡುವರು." ಈ ಹೇಳಿಕೆಯಿಂದ ಪಾಡುಗಬ್ಬದೊಳಗೆ 'ಮೇಲ್ವಾಡು', 'ಬೆದಂಡೆಗಬ್ಬ' ಎಂಬ ಭೇದಗಳಿದ್ದಂತೆ ತೋರುತ್ತಿದೆ.

ಪಲತೆಱದ ಪದ್ಯದಿಂದಂ
ಲಲಿತವಚೋರಚನನಿಚಯಪದ್ಧತಿಕೆಗಳಿಂ
ಸಲೆ ನಿಲೆ ಸಮೆದುದು ಸರಸಾ
ಖಿಲವರ್ಣನಮಾದೊಡದುವೆ ಬಾಜನೆಗಬ್ಬಂ

—ಕಾವ್ಯಾವಲೋಕನ, ಸೂ. ೨೪೪

ಹಲತೆರದ ಪದ್ಯಗಳಿಂದಲೂ, ಸವಿನುಡಿಗಳಿಂದ ರಚಿತವಾದ ಪದ್ಧತಿಕೆ [ಪದ್ಧಳಿ ಅಥವಾ ಪ್ರೋಜ್ಝಟಿಕೆ (?)] ಎಂಬ ಹಾಡುಗಳಿಂದಲೂ ವಿರಚಿತವಾದುದು. ಬಾಜನೆಗಬ್ಬ (ವಾದನಕಾವ್ಯ)—ಎಂದರೆ ಹಿಮ್ಮೇಳದೊಡನೆ ಹಾಡುವ ಕಾವ್ಯ. ಇದರಲ್ಲಿ ನಗರ–ಸಾಗರ–ಹೊಳೆ-ಕಾಡು–ಗುಡ್ಡ–ಚಂದ್ರಾರ್ಕರ ಉದಯ-ಋತು–ಜಲಕ್ರೀಡಾದಿಗಳನ್ನು ಹಾಡು (ವರ್ಣಕ)ಗಳಿಂದ ಕವಿ ಬಣ್ಣಿಸುತ್ತಾನೆ.

ನಾಗವರ್ಮನ ಈ ಹೇಳಿಕೆಯಲ್ಲಿ ಚತ್ತಾಣದ ಹೆಸರು ತೋರದಿದ್ದರೂ ಬೆದಂಡೆಯದು ವ್ಯಕ್ತವಾಗಿದೆ. ಇದರಿಂದ, 'ಬಾಜನೆಗಬ್ಬ' ಎಂಬುದಕ್ಕೇ ಆಗಿನ ಕಾಲದಲ್ಲಿ 'ಚತ್ತಾಣ' ಎಂಬ ಹೆಸರೂ ಇದ್ದುದೆಂದು ಸಂದೇಹಪಟ್ಟರೂ ತಪ್ಪಲ್ಲವಾಗಿ ಭಾವಿಸಬಹುದು.[1] 'ಕವಿರಾಜಮಾರ್ಗ', 'ಕಾವ್ಯಾವಲೋಕನ'ಗಳಲ್ಲಿ ತೋರುವ ಈ ದೇಸಿಗಬ್ಬಗಳ ಲಕ್ಷಣಗಳನ್ನು ಹೋಲಿಸಿದರೆ ಇಷ್ಟಿಷ್ಟು ವ್ಯತ್ಯಾಸವೇನೋ ತೋರಬಹುದು. ಆದರೂ, ಇಬ್ಬರೂ ನಿರೂಪಿಸಿದ ಗುರಿ ಒಂದೇ ಎಂಬಲ್ಲಿ ಸಂಶಯವಿಲ್ಲ.

ನಾಗವರ್ಮನು ತನ್ನ 'ಕಾವ್ಯಾವಲೋಕನ'ದಲ್ಲಿ ಸಂಸ್ಕೃತಸಾಹಿತ್ಯದ ಮಾರ್ಗಾನುಸಾರವಾಗಿ ಬಂದ ಸರ್ಗಬಂಧ ಕಾವ್ಯವನ್ನೂ ಪದ್ಯ ಗದ್ಯ ಚಂಪುಗಳನ್ನೂ ಸೂಚಿಸುತ್ತಾನೆ. ಆ ನಾಗವರ್ಮನಿಗಿಂತ ಪೂರ್ವದಲ್ಲೇ, ಎಂದರೆ 'ಕವಿರಾಜಮಾರ್ಗ'ಕಾರನಿಗೆ ಸುಮಾರು ನೂರು ವರ್ಷಗಳ ಅನಂತರದಲ್ಲಿ, ಮಹಾಕವಿ ಪಂಪಾದಿಗಳಿಂದ ಅಂಥ ಮಾರ್ಗೀಯ ಕಾವ್ಯವರ್ಗವು ತಲೆದೋರಿದುದು ಗೊತ್ತಿರುವ ಸಂಗತಿಯಷ್ಟೆ. ಆದರೆ, 'ಕವಿರಾಜಮಾರ್ಗ'ಕಾರನ ಕಾಲದಲ್ಲಿ ಮಾರ್ಗಕಾವ್ಯಗಳು ನೆಲಸಿದ್ದಂತೆ ತೋರುವುದೇ ಇಲ್ಲ. ಅವನಾಡುವ ಕನ್ನಡ ಕಾವ್ಯಗಳೆಂದರೆ, ಹಿಂದಿನ ಶ್ರೀ ವಿಜಯಾದಿಗಳಿಂದ ರಚಿತವಾದ

[1] R. Narasimhachar, *History of Kannada Literature*, p. 13.

'ಬೆದಂಡೆ', 'ಚತ್ತಾಣ' ಎಂಬ ಭೇದದ ದೇಸಿಗಬ್ಬಗಳು ಮಾತ್ರವೇ. ನಾಗವರ್ಮನು ಸೂಚಿಸುವ 'ಬಾಜನೆಗಬ್ಬ' ಮೊದಲಾದುವೂ ಆ ಜಾತೀಯವಾದ ದೇಶೀಯ ಸಾಹಿತ್ಯ ವರ್ಗದವುಗಳಲ್ಲದೆ, ಸರ್ಗಬಂಧದಲ್ಲಿ ರಚಿತವಾದ ಪದ್ಯ, ಗದ್ಯ, ತನ್ಮಿಶ್ರವಾದ ಚಂಪು, ಎಂಬ ಭೇದದ ಮಾರ್ಗೀಯ ಕಾವ್ಯಗಳಲ್ಲ. ಆ 'ಬಾಜನೆಗಬ್ಬ'ವೇ ಮೊದಲಾದ ಪುರಾತನ ದೇಶೀ ಕಾವ್ಯವರ್ಗದ ಸಂತತಿಯಲ್ಲಿಯೇ ಇಂದಿನ 'ಯಕ್ಷಗಾನ ಪ್ರಬಂಧ' ಅಲ್ಲವೆ ಬಯಲಾಟದ ಪ್ರಬಂಧವು ತಲೆದೋರಿದುದಾಗಿ ನಮ್ಮ ನಂಬುಗೆ. 'ಬಾಜನೆ' ಅಥವಾ ಹಿಮ್ಮೇಳ ರೂಪದ ವಾದನ ಸಹಿತವಾಗಿ ಯಕ್ಷಗಾನ ಪ್ರಬಂಧವನ್ನು ಹಾಡಬೇಕಾದುದರಿಂದ ಅದಕ್ಕೆ ಆ ಹೆಸರು ಸಾರ್ಥಕವಾಗಿ ನೆಲಸಿದ್ದಿರಲೂಬಹುದು. ಯಕ್ಷಗಾನ ಪ್ರಬಂಧ ಅಥವಾ ದಶಾವತಾರ ಪ್ರಬಂಧ ಎಂದರೆ ದೇಸಿಯಾದ ನಾಟಕವೇ, ಎಂಬುದನ್ನು ಮರೆಯಬಾರದು. ಅದರಿಂದಲೆ ನಾಗವರ್ಮನು ಮತ್ತಿನ—ಎಂದರೆ ತನ್ನ ಗ್ರಂಥಾಂತ್ಯದ ೨೪೬, ೨೪೭ನೆಯ ಎರಡು—ಸೂತ್ರಗಳಲ್ಲಿ ನಾಟಕ ರಚನೆಗೆ ಜೀವಾಳವಾದ 'ಮುಖ', 'ಪ್ರತಿಮುಖ', 'ಅವಮರ್ಶ', 'ಗರ್ಭ', 'ನಿರ್ವಹಣ' ಎಂಬ ಐದು ಸಂಧಿಗಳನ್ನೂ 'ಬೀಜ', 'ಬಿಂದು', 'ಪತಾಕೆ' 'ಪ್ರಕರಿ', 'ಕಾರ್ಯ' ಎಂಬ ಐದು ಸಂಧ್ಯಂಗಗಳನ್ನೂ ನಿರೂಪಿಸಿದ್ದಾನೆ.[1] ಈ ಬಾಜನೆಗಬ್ಬವನ್ನೇ ವಿಸ್ತರಿಸಿದ ಮೇಲೆ ಗ್ರಂಥಾಂತ್ಯದ ಎರಡು ಪದ್ಯಗಳಲ್ಲಿ ನಾಟಕದ ಈ ವಿಶಿಷ್ಟ ಲಕ್ಷಣಗಳನ್ನು ಸೂಚಿಸಿ ಕೊನೆಗೊಳಿಸಬೇಕಾದರೆ, ಆ ಹಿಂದಿನ ದೇಸಿಗಬ್ಬವು ದೇಶೀಯ ನಾಟಕಸ್ವರೂಪವಾಗಿ ಇರಬೇಕೆಂದಲ್ಲವೆ ಸೂಚಿತವಾಗುವುದು ? ಅಂತೂ 'ಕವಿರಾಜಮಾರ್ಗ'ಕಾರನು ಸೂಚಿಸುವ ಆ ದೇಸಿಗಬ್ಬದಲ್ಲಿ ನಿರೂಪಿತವಾದ 'ಬೆದಂಡೆ', 'ಚತ್ತಾಣ'ಗಳೆಂದರೆ, ಹಿಂದಣ ದೇಸಿಯಾದ ದೃಶ್ಯ ಶ್ರವ್ಯಗಳೆಂಬ ಎರಡೂ ಬಗೆಯ ಕಾವ್ಯಭೇದಗಳಾಗಿ ಇರಬೇಕು.

## ಪ್ರಕೃತ ಗ್ರಂಥದ ಉದ್ದೇಶ

ಈ ವಿವೇಚನೆಯಿಂದ ಕನ್ನಡದ ಮಾರ್ಗಸಾಹಿತ್ಯ ಸಂಸ್ಕೃತಿಗೆ ಆಧಾರವಾದ ಮೇಲ್ತರಗತಿಯ ಲಕ್ಷಣ ಗ್ರಂಥಗಳು ಆಗ ಇದ್ದಿಲ್ಲವೆಂಬುದು ವಿದಿತವಾಗುತ್ತಿದೆಯಷ್ಟೆ. ಲಕ್ಷ್ಯಗ್ರಂಥಗಳಾದರೂ ಇದ್ದವುಗಳೆಂದರೆ ದೇಸಿಗಬ್ಬಕ್ಕೆ ಸೇರಿದವುಗಳು. ಈ ಸಂದರ್ಭದಲ್ಲಿ 'ದೇಸಿ', 'ಮಾರ್ಗ' ಎಂಬ ಕಾವ್ಯಭೇದಗಳ ಸ್ವರೂಪವನ್ನು ಒಂದಿಷ್ಟಾದರೂ ಸೂಚಿಸಿಯೇ ಮುಂಬರಿಯಬೇಕಾಗಿದೆ.

ದೇಶ್ಯ ಅಥವಾ ದೇಶಿ ಎಂಬ ಪದವೇ 'ದೇಸಿ' ಎಂದಾಗಿದೆ. ಯಾವ ಲಕ್ಷಣಕ್ಕೂ ಒಳಗಾಗದೆ, ದೇಸಿಗಬ್ಬಿಗರ ಪ್ರತಿಭಾಬಲಮಾತ್ರದಿಂದ ಪದ, ಹಾಡುಗಳ ರೂಪದಲ್ಲಿ ಉದಯಿಸಿದುದು ಎಂದು ಇದರ ತಾತ್ಪರ್ಯವಿರಬೇಕು. ಛಂದಸ್ಸು, ಗುಣಾಲಂಕಾರಾದಿ

---

[1] ಸವಸಂದ ಮುಖಂ ಪ್ರತಿಮುಖ
    ಮವಮರ್ಶಂ ಗರ್ಭಮಂತೆ ನಿರ್ವಹಣಮೆನಿ
ಪ್ಪವವೆಯ್ದೆ ಸಂಧಿಯಕ್ಕುಂ
    ಸುವಿಹಿತಕವಿಮುಹಿತವಿತತ ಕೃತಿಪದ್ಧತಿಯೊಳ್—ಕಾವ್ಯಾವಲೋಕನ—ಸೂ. ೨೪೬.

ಲಕ್ಷಣಸಂಸ್ಕಾರವನ್ನೊಳಕೊಂಡ ಕವಿಗಳ ಪ್ರತಿಭೆಯಿಂದುಕ್ಕಿದುದು ಮಾರ್ಗಸಾಹಿತ್ಯ. ಈ ಮಾರ್ಗ ಸಾಹಿತ್ಯಕ್ಕಾದರೂ, ಮೊತ್ತಮೊದಲು, ಇತರ ಲಾಕ್ಷಣಿಕರು ಬರೆದ ಲಕ್ಷಣ ಗ್ರಂಥಗಳ ಆಧಾರವಿರಲಿಲ್ಲ. ಆ ಆದಿಮಹಾಕವಿಗಳ ಹೃದಯಗತಾಧಾರವನ್ನೇ ಮತ್ತಿನವರು 'ಕವಿಸಮಯ' ಎನ್ನುವುದು. ದೇಸಿಯಲ್ಲಿ ಹಾಗಲ್ಲ: ಪ್ರತಿ ಕವಿಯಲ್ಲಿಯೂ ಭಿನ್ನವಾದ ಎಂದೆಂದೂ ಒಗ್ಗುರಿಗೆ ಬಾರದ, ಕ್ಷಣಭಿನ್ನವಾದ ಭಾವನೆಗಳನ್ನೇ ಆ ದೇಸಿಗಬ್ಬಗಳನ್ನಾಗಿ ಚದರಿಸಿ ನಾನಾರೂಪನ್ನಾಗಿ ಮಾಡಿದುದು. ಮತ್ತಿನ ಲಾಕ್ಷಣಿಕರು ಎಷ್ಟೊಂದು ಯತ್ನಿಸಿದರೂ ಅವುಗಳು ನಿಯಮಕ್ಕೊಳಗಾಗಲಿಲ್ಲ. ಹಿಂದೆ ವಿಸ್ತರಿಸಿದ, 'ಕವಿರಾಜಮಾರ್ಗ'ಕಾರ 'ಕಾವ್ಯಾವಲೋಕನ' ಕರ್ತೃಗಳು ಲಕ್ಷಿಸಿದ, 'ಬೆದಂಡೆ'ಯ ಸ್ವರೂಪ ನಿರೂಪಣದಲ್ಲೇ ಅನ್ಯೋನ್ಯವಾಗಿ ಅಲ್ಪಸ್ವಲ್ಪ ವ್ಯತ್ಯಾಸ ತೋರುವುದನ್ನು ಭಾವಿಸಿರಿ. ಶುದ್ಧೀಕೃತವಾದ ಪಾದರಸವೆಂದರೆ ಅಮೃತ; ಶುದ್ಧವಾಗದುದೆಂದರೆ ವಿಷವೆಂಬುದನ್ನು ವಿವೇಕಿಗಳು ಮನಗಂಡರು. ಅದರಿಂದಲೇ ನಿಯಮಕ್ಕೊಳಗಾಗುವ ಮಾರ್ಗಸಾಹಿತ್ಯವೇ ಆವಶ್ಯಕವೆಂದು ನಮ್ಮ ನೃಪತುಂಗ ಮಹಾಸಭಾನುಮತವಾದ 'ಕವಿರಾಜಮಾರ್ಗ'ವೂ ನಿರ್ಧರಿಸಿತು.

ಗ್ರಂಥವಿದು ಬರಿಯ ವಿದ್ಯಾರ್ಥಿ ವರ್ಗಕ್ಕೆ ಬೋಧಿಸುವುದಲ್ಲ; ಕವಿಗಳೆನ್ನಿಸಿದವರ ಹಂತಿಯನ್ನೊಂದಿ ಲೆಕ್ಕಣಿಯನ್ನೆತ್ತಿದವರನ್ನೇ ಕುರಿತಾಡುವುದು. ಅವರೆಲ್ಲ ನಿಜವಾಗಿ ಸಂಸ್ಕೃತ ಪ್ರಾಕೃತಾದಿ ಸಾಹಿತ್ಯಗಳಲ್ಲಿ ಪಳಗಿದ ಕನ್ನಡಿಗರೂ ಅಲ್ಲ; ಏನನ್ನೂ ತಿಳಿಯದ ಮೂಢರೂ ಅಲ್ಲ. ಒಂದೆಂದರೆ ಕಡಿಮೆ, ಎರಡೆಂದರೆ ಹೆಚ್ಚು, ಎಂಬಂತಾಗಿ ಆಗಿನ ಕನ್ನಡಕ್ಕೋಜರೆನ್ನಿಸಿದ ನಾಡವರು ಥಕ್ಕನೆ ಕ್ಷುಬ್ಧರಾಗುತ್ತಿದ್ದರು. ಅವರ ಕೈಯಲ್ಲೇ ಆಗಿನ ಕಾಲದ ಕನ್ನಡ ಸಾಹಿತ್ಯವು ವಿಶೇಷವಾಗಿ ನೆಲೆಗೊಂಡಿದ್ದುದು. ಅದರಿಂದ, ಬಲು ಎಚ್ಚರಿಕೆಯೊಡನೆ ಗ್ರಂಥಕಾರನು ಅವರನ್ನು ದಾರಿಗೆಳೆದು ಪಳಗಿಸುವ ಮಾತುಗಳನ್ನು ಗ್ರಂಥದುದ್ದಕ್ಕೂ ಕಾಣಬಹುದು.

## ಪರಿಚ್ಛೇದ ೧

೧. ........ ....................
........ಪೂರ್ವಕಾವ್ಯರಚನೆಗಳಂ ತಾಂ
ಮೊದಲೊಳ್ ಕಲ್ತಂಗಲ್ಲದೆ
ಪದದೊಳ್ಜಾಣುಂ ಬೆಡಂಗುಮುಪ್ಪದೆ ಕೃತಿಯೊಳ್ ೬
೨. ನುಡಿವಲ್ಮೆಯಲ್ತದೇಂ ಕ
ಲ್ತೊಡನೋದುವುವಲ್ತೆ ಗಿಳಿಗಳುಂ ಪುರುಳಿಗಳುಂ ೧೦

---

ಉಪಯೋಗದೆ ಬೀಜಂ ಬಿಂ
ದು ಪತಾಕೆ ಪ್ರಕರಿ ಕಾರ್ಯಮೆನೆ ಪಂಚವಿಧಂ
ನಿಪುಣಕವಿರಚನೆಯೊಳ್ ಸ
ಪ್ರಪಂಚದಿಂದೊಂದಿ ತೋಱುಗುಂ ಸಂಧ್ಯಂಗಂ—ಅದೇ ಗ್ರಂಥ, ಸೂ. ೨೪೭

೩. ........ತನಗಿನಿತರ ಚೇ
ವಸಮೇಂ ಕವರ್ದಪರುಮೊಳರೆ ಕವಿಯಲ್ಲದರೆಂ ೧೨

೪. ........ಪೆಱರ ಮಾತುಗ
ಳನೆ........ಕೃತಿಯೊಳಿಡುವವಂ ನಗಪ ಗುಹಾ
ಧ್ವನಿಯವೊಲನರ್ಥವಚನಂ ೧೪

೫. ........ವಸ್ತುವಿಸ್ತರ ವಿಕಲ್ಪವಿದನಲ್ಲದಾಗದಾಗದು ಪೇೞಲ್ ೨೮

೬. ........ಪೆಱರಿಂ ಜಾಣರಿನೋದಿಸಿ ಪೇೞ್ವುದು ಕಬ್ಬಮಂ ೪೫

೭. ........ಭಾಷಾವಿದರದಱ ದೆಸೆಯನುೞಿಗೀ ತೆಱದಿಂ ೯೯

೮. ........ದೋಷಕ್ಕಾಲಯಮದನಱಿದು ಕೃತಿಯೊ
ಳಿಡದಿರ್ಕೆ ಬುಧರ್ ೧೦೭

೯. ........ವಿವೇಕಿ ಲೋಕಗರ್ಹಿತಮಾರ್ಗಂ ೧೦೮

೧೦. ........ಭ್ರಾಂತಿಲ್ಲದಱಿದುಕೊಳ್ಗೆ ಕವಿಗಳ್ ಕೃತಿಗಳೊಳ್ ೧೨೪

ಪ್ರಥಮ ಪರಿಚ್ಛೇದದೊಳಗಿನ ಆ ಬಗೆಯ ಬೋಧನೆಗಳೊಳಗಿನಿಂದ ನಾವಿಲ್ಲಿ ಕೆಲವನ್ನೇ ಎತ್ತಿಕೊಂಡುದು. ಕಾವ್ಯದ ಸೌಂದರ್ಯವನ್ನು, ಪ್ರಮುಖವಾಗಿ ಕೆಡಿಸುವುದೆಂಪರೆ ದೋಷ. ಈ ದೋಷವು ಚತುರನೆನ್ನಿಸಿದ ಕವಿಯ ಕೃತಿಯಲ್ಲಾದರೂ, ಅವನಿಗೆ ತಿಳಿಯದಂತೆಯೇ ನುಸುಳಿಬಿಡುತ್ತಿದೆ. ದೀಪದ ಅಡಿ ಕತ್ತಲೆಯಾದಂತೆ, ತನ್ನ ನ್ಯೂನತೆ ತನಗೆ ತೋರದಿರುವುದು ಪ್ರಕೃತಿ. ಅದರಿಂದಲೇ ಹಿಂದಿನ ಆರನೆಯ ದೃಷ್ಟಾಂತದಲ್ಲಿ 'ಪೆಱರಿಂ ಜಾಣರಿಂ ಓದಿಸಿ' ತಿದ್ದಿಸಿಕೊಳ್ಳಬೇಕೆಂದು ಸೂಚಿಸುತ್ತಾನೆ. ವಿದ್ವತ್ಕವಿಯ ಕೃತಿಯಲ್ಲಾದರೂ ದೋಷವು ಹೇಗೆ ವ್ಯೆಮರಸಿ ಹೊಕ್ಕುಬಿಡುತ್ತಿದೆ ಎಂಬುದನ್ನು ಅತ್ಯಾಕರ್ಷಕವಾಗಿ ನಿರೂಪಿಸುತ್ತಾನೆ.

ದೋಸಮೇನಾನುಂ ಸ್ವಲ್ಪಮಾದೊಡಂ
ಮಾಸಿಸಿರ್ಕುಮಣಂ ಕೃತಿವಧುವಂ
ಪೇಸದೆ ದುರ್ಜನದೊಳಾದ ಪರಿಚಯಂ
ಮಾಸಿಸಿ ಕಿಡಿಸುವವೊಲೊಪ್ಪುವ ಕುಲವಧುವಂ (i, 111)

ಇಲ್ಲಿ 'ದುರ್ಜನದೊಳ್'[1] ಎಂಬ ನಾಮಪದದ ವಿಶಿಷ್ಟಾರ್ಥವನ್ನು ಸರಿಯಾಗಿ

[1] ಡಾ. ಪಾಠಕರ ಪ್ರತಿಯಲ್ಲಿ 'ದುರ್ಜನದೊಳ್' ಎಂಬ ಪಾಠವಿದೆ. ಅದರೊಳಗಿನ 'ದೊ' ವನ್ನು ತೆಗೆದು, ಮುದ್ರಾಸ್ ಪ್ರತಿಯ ಸಂಪಾದಕರು 'ರೊ' ಎಂಬ ಅಕ್ಷರವನ್ನು ಕಂಸದೊಳಗೆ ತೋರಿಸಿರುತ್ತಾರೆ. ಆದರೆ, ಡಾ. ಪಾಠಕರ ಪಾಠವೇ ಸರಿ ಎಂದು ನಮ್ಮೆಣಿಕೆ. 'ಸಜ್ಜನ' ಪದವನ್ನು ಕುಲಸ್ತ್ರೀ ಎಂಬ ಅರ್ಥದಲ್ಲಿ ನಪುಂಸಕಲಿಂಗವಾಗಿ ಪ್ರಯೋಗಿಸಬೇಕೆಂದು ಮತ್ತಿನ ವ್ಯಾಕರಣ ನಿಯಮ—'ಸಜ್ಜನವದು ಕುಲವಧುವೆಂಬಲ್ಲಿ ಕನ್ನಡಂ ನಪ್ಪದುವುಂ' ('ಶಬ್ದಮಣಿದರ್ಪಣ' ಸೂತ್ರ ೧೫೫.) ಆ 'ಸಜ್ಜನ' ಪದದಂತೆ 'ದುರ್ಜನ' ಪದವನ್ನು, 'ಕುಲಗೆಟ್ಟ ಸ್ತ್ರೀ' ಎಂಬ ಅರ್ಥದಲ್ಲಿ, ನಪುಂಸಕಲಿಂಗವಾಗಿಯೇ ಪ್ರಯೋಗಿಸುತ್ತಿದ್ದಿರಬೇಕು. ಕುಲವಧುವಿಗೆ 'ದುರ್ಜನರೊಳ್' ಪರಿಚಯವಾಗಲಾರದು. ಆದರೆ ಸೇವಾ ವೃತ್ತ್ಯಾದಿಗಳಿಂದ ಉತ್ತಮ ಗೃಹವನ್ನೊಂದಿದ 'ದುರ್ಜನದೊಳ್' ಪರಿಚಯವಾಗಲು ಆಸ್ಪದವಿದೆ. 'ದೋಸ', 'ದುರ್ಜನ' ಎಂಬ ಪದದ್ವಯವೂ ಏಕವಚನದಲ್ಲಿರುವುದೇ ಗ್ರಂಥಕಾರನ ಆಶಯವಾಗಿ ತೋರುತ್ತಿದೆ.

ಗಮನಿಸಿಕೊಳ್ಳಬೇಕು. 'ಸಜ್ಜನ' ಎಂದರೆ 'ಕುಲಸ್ತ್ರೀ' ಎಂದು ಪ್ರಸಿದ್ಧಾರ್ಥ; 'ದುರ್ಜನ' ಪದಕ್ಕೆ, ತದ್ವಿರುದ್ಧಾರ್ಥಕವಾದ ಅಕುಲೀನ ಸ್ತ್ರೀ ಎಂಬುದು ಕವಿಯ ಭಾವನೆ. ಕುಲ ಸ್ತ್ರೀಯರಲ್ಲಿ ಹೊಕ್ಕು ಬಳಸುವ ಮನೆಗೆಲಸದ ಚೇಟಿಯರೊಳಗೆ, ಅಪ್ಪಿತಪ್ಪಿ ನಡವಳಿ ಮಾಸಿಹೋದ ಹೆಂಗಸರೂ ಸೇರಿಬಿಡುವುದಿದೆ. ಅದನ್ನು ಹೊಲಬರಿದ ಕೂಡಲೆ ತಡೆದು ಬಿಡದಿದ್ದರೆ, ಕ್ರಮೇಣ ಕುಲವಧುವಾದವಳ ನಡವಳಿಯೂ ಮಾಸಿಬಿಡಬಹುದು. ಅದರಂತೆ ಸುಸಂಸ್ಕೃತ ಕವಿಯು ಕಣ್ಮನಗಳಿಗೂ ಮರೆಯಾದ ಗುಪ್ತದೋಷದ ಬಳಕೆ ಯಿಂದಾಗಿ ಕೆಲವೇಳೆ ಕೃತಿವಧುವಾದರೂ ಗತಿಗೆಡುವುದಿದೆ ಎಂಬುದಕ್ಕೆ ಇದಕ್ಕಿಂತಲೂ ಅಂದವಾದ ದೃಷ್ಟಾಂತವಾವುದು? ನಿಯಮಿತ ಲಕ್ಷಣ ರಹಿತವಾಗಿರುವುದರಿಂದಲೇ ದೇಸಿ ಅಷ್ಟೊಂದು ದೋಷ ನಿಬಿಡವಾಗಿರುವುದು. ಅದರಿಂದಲೆ, 'ಕಾವ್ಯಂ ಕಾವ್ಯಕ್ಕೆ ಲಕ್ಷಣಂ' ಎಂದು ಮೇಲಿಂದ ಮೇಲೆ ಭಾವಿಸಿದರೆ ಸಾಲದು; 'ಪೂರ್ವ ಕಾವ್ಯರಚನೆಗಳಂ ತಾಂ ಮೊದಲೊಳ್' ಕಲಿತಿರಬೇಕು; ಅಂಥನನಿಗೇ 'ಪದದೊಳ್ ಜಾಣುಂ ಜೆಡಂಗುಂ ಅಪ್ಪುದು'—ಎಂದು ಬೋಧಿಸುವುದನ್ನೀಕ್ಷಿಸಿರಿ. ಸುಮ್ಮನೆ ಮುಖಪಾಠದ ಕವಿತೆ ಸಾಲದು. ಕಲಿತೋದಿದ ಗಿಳಿಗಳೂ ಕವಿಗಳೆನ್ನಿಸುವರೆ? ಎಂಬ ಎರಡನೆಯ ಮಾತಿನಿಂದ ಕವಿಗಳಲ್ಲಿ ಪ್ರತಿಭೆಯ ಆವಶ್ಯಕತೆಯನ್ನು ಹೊಳೆಯಿಸಿದ್ದಾನೆ. ಹಾಗೆ ಪ್ರತಿಭೆಯಿರುವ ಓದಿ ರಸಿಕ ವಿದ್ವಾಂಸರೆನ್ನಿಸಿ ತಾವು ಕೃತಾರ್ಥರಾಗುವುದಲ್ಲದೆ, ವಿದ್ಯಾರ್ಥಿಗಳಿಗೆ ಬೋಧಿಸಿ ಸಮಾಜೋದ್ಧಾರವನ್ನೂ ಮಾಡಬಹುದು. ಹಾಗೆಸಗದೆ ಪ್ರತಿಭಾರಹಿತರಾದವರು, ತಾವೂ ಕವಿಗಳಾಗಬೇಕೆಂದು ದುರಾಶೆಗಿಳಿದು ಓದುಗರಿಗೂ ತಲೆನೋವನ್ನೇಕೆ ಒದಗಿಸುವುದು? ಎಂಬುದನ್ನು 'ತನಗಿನಿತರ ಜೇವಸಮೇಂ ಕವರ್ದಪರುಮೊಳರೆ ಕವಿಯಲ್ಲದರಂ' ಎಂಬ ಮಾತಿನಿಂದ ಬಲು ಚಂದವಾಗಿ ವರ್ಣಿಸಿದ್ದಾನೆ. ಈಗ ಅಧಿಕ ಶ್ರೀಮಂತರಾದವರು ಆಭರಣ ಗಳನ್ನು ತಮ್ಮ ಮನೆಯೊಳಗೆ ಇಟ್ಟುಕೊಂಡರೆ ಕಳ್ಳರ ಬಾಧೆಯೊದಗಬಹುದು ಎಂದು ಶಂಕಿಸಿ, ಕೋಶಗೃಹ (ಬ್ಯಾಂಕು)ಗಳಲ್ಲಿರಿಸುವುದುಂಟು. ಕಾವ್ಯವನ್ನು ಬರೆಯದಿದ್ದರೆ ಅವರ ವಿದ್ಯಾಧನವನ್ನು ಯಾವ ಕಳ್ಳನಾದರೂ ಅಪಹಾರವೆಸಗುವನೆ? ಎಂಬ ಮಾತನ್ನು ಕೇಳುವಲ್ಲಿ ಈ ಮೇಲೆ ಸೂಚಿಸಿದ ಹೋಲಿಕೆ ನೆನಪಾಗುತ್ತಿದೆ. ಇಂಥ ದೋಷಗಳೆಲ್ಲವೂ ದೇಸಿಗಬ್ಬಗಳಲ್ಲಿಯೇ ಹೆಚ್ಚಾಗಿ ತಲೆದೋರುವುದು. ಅದರಿಂದಲೆ, ಕಾವ್ಯರಚನೆಗಳನ್ನು ಅಥವಾ ಕಾವ್ಯಮಾರ್ಗವನ್ನು ಸರಿಯಾಗಿ ಪರಾಂಬರಿಸಿ, ಭ್ರಾಂತಿಗೊಳ್ಳದೆ, ದೋಷ ವನ್ನುಳಿದು ಕೃತಿಯ ರಚನೆಯಲ್ಲಿ ಪಳಗಬೇಕು. ಆದರಿಂದ, ದೋಷವನ್ನಲ್ಲಗಳೆವ, ಗುಣಾ ಲಂಕಾರಗಳನ್ನು ಒಳಗೊಳ್ಳುವ, ಸಾಮರ್ಥ್ಯವುಂಟಾಗುವುದು. ಅಲ್ಲಿಯೂ ಜಾಣ್ಮೆ ಹೇಗೆ ಆವಶ್ಯಕವೆಂಬುದನ್ನು ಮುಂದೆ ಕಾಣಿಸಿದ ಎರಡು ಮೂರನೆಯ ಪರಿಚ್ಛೇದಗಳೊಳಗಿನ ಎಚ್ಚರಿಕೆಯ ಮಾತುಗಳಿಂದ ಭಾವಿಸಿರಿ:

ಪರಿಚ್ಛೇದ ೨

೧. ನೆಲ್ಲುಂ ಮೊಸರುಂ ಗುಡಿದಂ
ತಲ್ಲದೆ ತಲ್ಲಣಿಸದಲಸದಿಡು ಮೃದುಪದಮಂ ೪
೨. ........ಮುತ್ತುಂ ಮೆಱಸುಂ ಕೋದಂತಕ್ಕುಂ
ಕಟಲ್ಚಿಕಳೆಗೊಂದಿ ಮುಂದೆ ಬಾರದ ಪದಮಂ ೫
೩. ........ಕೂಸಿನ ತಲೆಯೊಳ್ ಬಿಣ್ಪೊಱೆಯನಿಟ್ಟವೋಲಸುಖಕರಂ ೬
೪. ........ಎಂದುಂ ನಿಱಿಸಲ್ಕಲ್ಲದೆಡೆಗಳೊಳ್ ಕಲ್ಲದಿರಿಂ ೧೨
೫. ಎಂದುಂ ಬಲ್ಲವರಿಡದಿಕ್ಕಾರ್
ದಂ ಬಾಯುೞದೂಟ್ಟಿವೊಲ್ ಕರಂ ವಿರಸಕರಂ ೨೧
೬. ........ಕರ್ವಿನ ತುದಿಯಂತಿರೆ ವಿರಸಮಕ್ಕುಮದು.... ೮೬

ಪರಿಚ್ಛೇದ ೩

೧. ಅಲಸದೆ ಪೇೞ್ಗಿಂತು ಹೇತುರೂಪಕವಿಧಿಯಂ ೨೦
೨. ಅತಿನಿಪುಣರಱಿದುಕೊಳ್ಗನುಮತಿಯಿಂ........ ೧೦೬
೩. ಸಂತತ ಗುಣಮಂ ಕೈಕೊ
ಳ್ವಂ ತಾಗಿರೆ ಬಗೆದು ಪೇೞ್ಗೆ.... ೧೫೩
೪. ಅದಂ ಕಾವ್ಯದೊಳಿಂತು ಪೇೞ್ಗೆ ೧೫೬

ಮೇಲೆ ಕಾಣಿಸಿದುದು 'ಸ್ಥಾಲೀಪುಲಾಕ ನ್ಯಾಯ'ದಿಂದ—ಎಂದರೆ ಒಲೆಯೊಳಗೆ ಪಾತ್ರದಲ್ಲಿಟ್ಟು ಬೇಯಿಸುವ ಅನ್ನದಿಂದ ಒಂದಿಷ್ಟನ್ನು ಸವುಟನಿಂದೆತ್ತಿ 'ಇದು ಬೆಂದಿದೆಯೋ ಇಲ್ಲವೋ' ಎಂದು ಪರಾಂಬರಿಸುವಂತೆ. ಇದಕ್ಕಿಂತಲೂ ಹೆಚ್ಚಿನ ಭಾಗವನ್ನೆಲ್ಲ ವಾಚಕರು ಗ್ರಂಥವನ್ನೇ ಓದಿಕೊಂಡು ನಿರ್ಧರಿಸಿಕೊಳ್ಳಬೇಕು. ಈ ಬಗೆಯಲ್ಲಿ ವಿಶಿಷ್ಟವಾಗಿ, ಕವಿಗಳೆಂಬವರ ಎದೆಯನ್ನೇ ಕುರಿತ ಬಲು ಅಂದವಾದ ಬೋಧನೆಗಳು, ಹಿಂದಿನ ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿಯೂ ಮತ್ತಿನ ಕನ್ನಡದ ಕಾವ್ಯಾವಲೋಕನಾದಿಗಳಲ್ಲಿಯೂ ತೋರುವುದಿಲ್ಲ. ಆಯಾ ಗ್ರಂಥಕಾರರಿಗೆ ಈ ಬಗೆಯಲ್ಲಿ ಬೋಧಿಸಬೇಕಾದ ಸಂದರ್ಭವೇ ಒದಗಲಿಲ್ಲ ಎಂಬುದೇ ಅದರ ತಾತ್ಪರ್ಯ. ಈ ಮಾತುಗಳನ್ನಾಲಿಸಿದಲ್ಲಿ, ಈಗಿನ ಉಪಾಧ್ಯಾಯ ವೃತ್ತಿಯನ್ನು ಕಲಿಸುವ ಚತುರನಾದ ಆಚಾರ್ಯನು ತನ್ನ ಶಿಷ್ಯರಾದ ಉಪಾಧ್ಯಾಯರಿಗೆ ಹೇಗೆ ಆಯಾ ವಿಷಯಗಳನ್ನು ಬಿಡಿಸಿ ಬಿಡಿಸಿ ಮುಂದಟ್ಟಾಗುವಂತೆ ನಿರೂಪಿಸುತ್ತಾನೋ ಹಾಗೆ ಗ್ರಂಥಕಾರನು ಆಗಿನ ಕನ್ನಡ ಕವಿವರ್ಗಕ್ಕೆ ಬೋಧಿಸುವಂತೆ ತೋರುತ್ತಿದೆಯಲ್ಲವೆ ? ಮಹಾಕವಿಯ ಪದವಿಗೆ ಏರಬೇಕಾದವನ ಸ್ವಭಾವ, ಆತನ ಅಭ್ಯಾಸ ಕ್ರಮ ಮೊದಲಾದವುಗಳೆಲ್ಲ ಹೇಗಿರತಕ್ಕುವುಗಳೆಂಬುದನ್ನು, ತರುಣರಾಗಿ ಮುಂದೆ ಪಳಗಲಿರುವ ಕವಿಗಳ ಎದೆ ಹಲಗೆಯಲ್ಲಿ ಗ್ರಂಥಕಾರನು ಚಿತ್ರಿಸುವುದನ್ನೇ ಕಾಣುತ್ತೇವೆ. ಅವುಗಳನ್ನು ಇಂದಿನ ಕವಿಗಳು ಮಾತ್ರವೇ ಅಲ್ಲ; ಎಲ್ಲರೂ ಮರೆಯದೆ ಹೃದಯದಲ್ಲಿ ಅಚ್ಚೊತ್ತಿಕೊಳ್ಳತಕ್ಕುದು ಎಂಬೆಣಿಕೆಯಿಂದ ಅವುಗಳೊಳಗೆ ಕೆಲವಾದ ಆದಿಯ ಪದ್ಯಗಳನ್ನು ಕೆಳಗೆ ದೃಷ್ಟಾಂತಿಸುತ್ತೇವೆ.

## ಪ್ರಥಮ ಪರಿಚ್ಛೇದ

ಗುಣಮಿದು ದೋಷಮಿದೆಂಬೀ
ಗಣಿದಮನೆತ್ತಱಿಗುಮಶ್ರುತ ಪ್ರಕೃತಿಜನಂ
ತೃಣಸಸ್ಯಘಾಸವಿಷಯ
ಪ್ರಣಯಂ ಸಮವೃತ್ತಿಯಪ್ಪವೊಲ್ ಮೃಗಗಣದೊಳ್— ೮

ಅದಱಿಂ ಪರಮಾಗಮಕೋ
ವಿದನಪ್ಪುದು ಪೂರ್ವಕಾವ್ಯರಚನೆಗಳಂ ತಾಂ
ಮೊದಲೊಳ್ಕಲ್ತಂಗಲ್ಲದೆ
ಪದದೊಳ್ ಜಾಣುಂ ಬೆಡಂಗುಮಪ್ಪುದೆ ಕೃತಿಯೊಳ್— ೯

ಜಡಜನಮುಮೆಲ್ಲಮೋದಂ
ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ
ನುಡಿವಲ್ಮೆಯಲ್ತದೇಂ ಕ
ಲ್ತೊಡನೋದುವುವಲ್ತೆ ಗಿಳಿಗಳುಂ ಪುರುಳಿಗಳುಂ— ೧೦

ಪ್ರತಿಭಾವತ್ವಮುಮಕೃತಕ
ಚತುರತೆಯುಂ ಪರಮಬುಧಜನೋಪಾಸನಮುಂ
ಕೃತಿಪರಿಚಯಮುಂ ತರ್ಕ್ಕಂ
ಪ್ರತೀತಿಯುಂ ವಾಗ್ವಿದಗ್ಧತಾನಿಪುಣತೆಯೊಳ್— ೧೧

ಪಸರಿಸಿದಾ ಬಗೆ ಮನಮುಂ
ಪೊಸತಾಗೆ ನೆಗಳ್ಚಲಱಿಯನಾ ರಚನೆಯೊಳೇಂ
ಬೆಸನಂ ತನಗಿನಿತಱಿ ಬೇ
ವಸಮೇಂ ಕವರ್ದವರುಮೊಳರೆ ಕವಿಯಲ್ಲದರಂ— ೧೨

ಬಗೆಬಗೆದು ಕೇಳ್ದು ಬುಧರೊಲ
ವೊಗೆದಿರೆ ಹೃದಯದೊಳೆ ತಾಳ್ದ ಮಣಿಹಾರಂಬೊಲ್
ಸೊಗಯಿಸುವ ವಚನವಿರಚನೆ
ನೆಗಳ್ಗುಂ ಭಾವಿಸುವೊಡದಱ ಪೆಂಪತಿ ಸುಲಭಂ— ೧೩

ನೆನೆನೆನೆದು ಪೆಱರ ಮಾತುಗ
ಳನೆ ನೆಗಳ್ದಿರೆ ಕೃತಿಯೊಳಿಡುವವಂ ನಗದ ಗುಹಾ
ಧ್ವನಿಯವೊಲನರ್ಥವಚನಂ
ತನಗಾಗಿಸಲಱಿಯನುಚಿತವಾಕ್ಚತುರತೆಯಂ— ೧೪

ಕುಱಿತಂತು ಪೆಱರ ಬಗೆಯಂ
ತೆಱೆದಿರೆ ಪೆಱರ್ಗಱಿಪಲಾರ್ಪವಂ ಮಾತಱಿವಂ
ಕಿಱಿದಱೊಳ್ ಪಿರಿದುಮರ್ಥಮ
ನಱಿಪಲ್ ನೆಱೆವಾತನಾತನಿಂದಂ ನಿಪುಣಂ— ೧೫

ನುಡಿಯುಂ ಛಂದದೊಳೊಂದಿರೆ
ತೊಡರ್ಚಲಱಿವಾತನಾತನಿಂದಂ ಜಾಣಂ
ತಡೆಯದೆ ಮಹಾಧ್ವಕೃತಿಗಳ
ನೊಡರಿಸಲಾರ್ಪಾತನೆಲ್ಲರಿಂದಂ ಬಲ್ಲಂ— ೧೬

ಮಾತಱಿವರ್ ಕೆಲಬರ್ ಜಗ
ತೀತಳಗತ ಮನುಜರೊಳಗೆ ಮಾತಱಿವವರೊಳ್
ನೀತಿಯುತರಮಳಕವಿತಾ
ನೀತಿಯುತರ್ ಕೆಲರೆ ಪರಮಕವಿವೃಷಭರ್ಕಳ್ —(i, 17)

ಕನ್ನಡ ವಾಙ್ಮಯದೊಳಗೆ ಆಗಿನ ಕಾಲದಲ್ಲಿ ಗದ್ಯಭಾಗವು ಬಹುಶಃ ಮಾರ್ಗಾನುಸಾರವಾಗಿ ವೃದ್ಧಿಂಗತವಾಗಿತ್ತೆಂಬ ಗ್ರಂಥಕಾರನ ಭಾವನೆಯನ್ನು ಹಿಂದೆಯೇ ಸೂಚಿಸಿದ್ದೇವೆ. ಆದರೂ ಕನ್ನಡ ಸಾಹಿತ್ಯವು ಸರ್ವಾತ್ಮನಾ ಏಳಿಗೆಗೊಳ್ಳಬೇಕಾದರೆ ಮಾರ್ಗಾನುಸಾರವಾಗಿ ಕನ್ನಡ ಪದ್ಯಕಾವ್ಯಸಂಸ್ಕೃತಿ ನಾಡಿನಲ್ಲಿ ಬೇರೂರಬೇಕಾಯಿತು. ಅದಕ್ಕಾಗಿಯೇ ಈ ಲಕ್ಷಣಗ್ರಂಥದ ಉದಯವಾದುದು. ಅಂಥ ಪದ್ಯಕಾವ್ಯದ ಉತ್ತಮತೆಯ ಸ್ವರೂಪವೆಂಥದು ಎಂಬುದನ್ನು ಗ್ರಂಥಕಾರನೇ ಸೂಚಿಸುವ ಮುಂದಿನ ಪದ್ಯವನ್ನೀಕ್ಷಿಸಿರಿ:

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತಪ್ರಕಾರಮಿದು ಸುಖಮಿದು ದುಃ
ಖೋಪಾತ್ತಮಿದೆಂದಱಿಪುಗು
ಮಾ ಪರಮಕವಿಪ್ರಧಾನರಾ ಕಾವ್ಯಂಗಳ್ —(i, 18)

ಅಂಥ ಮಾರ್ಗಕಾವ್ಯರಚನೆಗೆ ಶಿಲ್ಪಶಾಸ್ತ್ರಸಮಾನವಾದ ಈ ಲಕ್ಷಣಗ್ರಂಥವನ್ನು ಮೊತ್ತಮೊದಲು ನಿರ್ಮಿಸಿದ ನಮ್ಮ ಕನ್ನಡದ ವಾಗಧಿಪನನ್ನೂ ಅಂಥವನನ್ನೇ ಈ ಮಹಾಕಾರ್ಯಕ್ಕೆ ಆರಿಸಿ ಕನ್ನಡ ಸಾಹಿತ್ಯೋದ್ಧಾರಕನಾದ ವಿವೇಕಬೃಹಸ್ಪತಿ ಉದಾರ ನೃಪತುಂಗದೇವನನ್ನೂ ಕನ್ನಡ ಸಾಹಿತ್ಯವು ಮರೆಯಲಾದೀತೆ? ಒಂದುವೇಳೆ ಮರೆತುಬಿಟ್ಟರೆ ನೆನೆವುದಾದರೂ ಯಾರನ್ನು?

# ಹಿನ್ನೋಟ



೧

ಪರಾಂಬರಿಸಿದಲ್ಲಿ ಲೇಖವಿದು ಮುಂದಿನ 'ಕವಿರಾಜಮಾರ್ಗವಿವೇಕ'ಕ್ಕೆ ಮುನ್ನುಡಿಯಾಗಿದ್ದರೂ, ವಿಷಯಪ್ರಮಾಣಬಾಹುಳ್ಯದಿಂದಾಗಿ ಒಂದು ಸ್ವತಂತ್ರ ಗ್ರಂಥರೂಪವಾಗಿಯೇ ಮಾರ್ಪಟ್ಟಿತು. ಆಯಾ ವಿಷಯಗಳನ್ನೊಮ್ಮೆ ಹಿನ್ನೋಟದಿಂದ ಪರಾಂಬರಿಸುತ್ತೇವೆ. ಹಾಗೆ ಪರಾಂಬರಿಸುವಲ್ಲಿ, ಭಾವನೆಗೆದಿರಾಗುವ ಹೆಗ್ಗುರಿಗಳನ್ನು ಇಷ್ಟಿಷ್ಟು ಮನನಮಾಡಿಕೊಂಡು ಸಾಗುವ ಓದಾಳಿಗಳಿಗೆ ಒಂದಿಷ್ಟು ಕೈಗೊಟ್ಟಂತಾಗುವುದು ಎಂದು ನಂಬಿರುತ್ತೇವೆ.

ಆದಿಯ 'ರಾಷ್ಟ್ರಕೂಟ ವಂಶ' ಎಂಬ ಭಾಗದಲ್ಲಿ, 'ಕವಿರಾಜಮಾರ್ಗ'ಕ್ಕೆ ಆಶ್ರಯದಾತನಾದ ನಮ್ಮ ಅಮೋಘವರ್ಷ–ನೃಪತುಂಗನ ವಂಶವು ಹಿಂದಿನ ಯಾವ ಕಾಲದಿಂದ 'ರಾಷ್ಟ್ರಕೂಟ' ಎಂಬ ಹೆಸರನ್ನೊಂದಿತು? ಆ ಮೊದಲು ಅದಕ್ಕೆ ಯಾವ ಹೆಸರಿದ್ದಿರಬೇಕು? ಎಂಬುದೇ ಮೊದಲಾದ ಸಂಗತಿಗಳನ್ನು ಸಾಧಾರವಾಗಿ· ಚಿತ್ರಿಸಿದೆವು. ರಾಷ್ಟ್ರಕೂಟಸಿಂಹಾಸನಸ್ಥಾಪನಾಚಾರ್ಯನೆನ್ನಿಸಿ ಈಗ ಚರಿತ್ರಪ್ರಸಿದ್ಧನಾದ ದಂತಿದುರ್ಗನೇ ಆ ಕುಲಸ್ಥಾಪಕನಲ್ಲ; ಅವನಜ್ಜನಾಗಿದ್ದ ಒಂದನೆಯ ಕರ್ಕ(ರಟ್ಟ)ನೇ ಅದಕ್ಕೆ ಅಡಿಗಲ್ಲನ್ನು ತಯಾರಿಸಿದರೆ, ಆ ಕರ್ಕನ ಮಗನೂ ದಂತಿಗನ ತಂದೆಯೂ ಆದ ಎರಡನೆಯ ಇಂದ್ರರಾಜನೇ ಅದನ್ನು ಹೂಡಿ ನೆಲೆಗೊಳಿಸಿದವನು. ಆ ರಾಷ್ಟ್ರಕೂಟವಂಶದ ಹಿಂದಿನ ಹೆಸರು ಆಭೀರವಂಶವೆಂದೇ ಆಗಿರಬೇಕು. ಆಭೀರವಂಶದ ಹಲವು ಮನೆತನಗಳವರು ಬಹುಶಃ ಕ್ರಿಸ್ತಶಕದ ಆದಿಯಿಂದಲೇ ವಿಂಧ್ಯಾದ್ರಿಯ ಪ್ರದೇಶದಲ್ಲಿ ರೇವಾ ಗೋದಾವರೀ ನದಿಗಳ ಅಕ್ಕಪಕ್ಕಗಳಲ್ಲಿ ನೆಲಸಿಕೊಂಡಿದ್ದರು. ಈ ಅಂಶವು 'ಗಾಥಾಸಪ್ತಶತಿ' ಎಂಬ ಅತಿಪುರಾತನವಾದ ಪ್ರಾಕೃತ ಭಾಷೆಯ ಕಾವ್ಯದಿಂದಲೂ ಹೊಳೆಯುತ್ತಿದೆ. ಹಲಮಂದಿ ಕವಿಗಳಿಂದ ಬರೆಯಲ್ಪಟ್ಟ ಆ ಕಾವ್ಯದ ಪ್ರಮುಖ ಸಂಪಾದಕನಾದ ಹಾಲರಾಜನೂ, ನೆರವಾಗಿ ಬರೆದ ಕವಿಗಳೂ ಬಹುಶಃ ಈ ಆಭೀರವಂಶದವರೆಂದೇ ಭಾಸವಾಗುತ್ತಿದೆ. ವಿಂಧ್ಯದಿಂದ ಗೋದಾವರಿ ವರೆಗಿನ ಪ್ರಾಂತದ ಪ್ರಕೃತಿಸೌಂದರ್ಯವನ್ನೂ ಅಲ್ಲಿಯ ಆಭೀರಸಮಾಜದ ಯುವಕಯುವತಿಯರ ವಿಲಾಸಗಳನ್ನೂ ವಿಾಸಲಾಗಿಟ್ಟು ವಿಸ್ತರಿಸುವ ಕಾವ್ಯವೇ 'ಗಾಥಾಸಪ್ತಶತಿ'. ಆಭೀರರೆಂದರೆ, ಪಶುಪಾಲನ, ಕೃಷಿಗಳೇ ಪ್ರಮುಖ ವೃತ್ತಿಯಾಗಿರುವ

ಗೊಲ್ಲರು ; ಅವರಿಗೇ ರಟ್ಟರು ಎಂಬ ನಾಮಾಂತರ. ಆ ಆಭೀರವಂಶದ ರಟ್ಟರ ಭಿನ್ನ ಭಿನ್ನ ವರ್ಗಗಳೇ ಕೂಟವಡೆದು ಒಂದಷ್ಟು ಪ್ರಬಲವಾದ ಮೇಲೆ ರಾಷ್ಟ್ರಕೂಟಕುಲವೆಂದು ಹೆಸರುಗೊಂಡಿತು. ಆ ಮೇಲೆ ದಂತಿದುರ್ಗಾದಿಗಳ ಪ್ರತಾಪಗಳಿಂದ ಕೀರ್ತಿಗೊಂಡ ಆ ಕುಲಕ್ಕೆ 'ಯಾದವವಂಶ' ಎಂಬ ನಾಮಾಂತರವೂ ಆಯಿತು. ಪೌರಾಣಿಕ ಯಾದವ ರಾದ ಶ್ರೀಕೃಷ್ಣ-ಬಲಭದ್ರರ ಸಂಬಂಧದಿಂದ ಕೂಡಿ ಹೆಣೆದುದಲ್ಲವೆ ಆ ಗೊಲ್ಲರ ವಂಶ ?

೨

ಆ ಮೇಲೆ ಕ್ರಮವಾಗಿ ದಂತಿದುರ್ಗ, ಶುಭತುಂಗ, ಕೃಷ್ಣರಾಜ, ನಿರುಪಮಧ್ರುವರನ್ನು ವರ್ಣಿಸಿರುತ್ತೇವೆ. ಈ ಮೂವರೂ ಅಸಮಾನ ಪರಾಕ್ರಮಿಗಳಷ್ಟೇ ಅಲ್ಲ ; ಆ ಕುಲದ ಗೌರವವನ್ನು ಪ್ರಪಂಚದಿದಿರಿನಲ್ಲಿ ಎತ್ತಿಹಿಡಿದವರು. ಚಾಲುಕ್ಯ ಕೀರ್ತಿವರ್ಮನನ್ನು ಗೆದ್ದು ಅವನ ಮಗಳನ್ನು ಪಟ್ಟದರಸಿಯನ್ನಾಗಿ ಕೈವಿಡಿದ ದಂತಿದುರ್ಗನ ಆಳಿಕೆ, ಸುಮಾರು ಕ್ರಿ.ಶ. ೭೪೭ರಿಂದ ೭೫೩ರ ವರೆಗೆ ಸಾಗಿತು. ಈ ಮೂವರೊಳಗೆ ಒಬ್ಬನಲ್ಲಿ ಒಂದು ಗುಣ ಹೆಚ್ಚಾದರೆ, ಇನ್ನೊಬ್ಬನಲ್ಲಿ ಬೇರೊಂದು ಗುಣ ಅಧಿಕವಾಗಿದ್ದಿರಬಹುದು. ಅಂತೂ ಮೂವರೂ ಒಂದೇ ಸಾಲಿನ ವೀರಚೂಡಾಮಣಿಗಳೆಂದು ನಮ್ಮ ಭಾವನೆ. ಆದರೆ, ಇವ ರೊಳಗೆ ಕಡೆಯವನಾದ ನಿರುಪಮ ಧ್ರುವನ ಮಗ ಜಗತ್ತುಂಗ ಗೋವಿಂದರಸನೆಂದರೆ ಎಲ್ಲ ವಿಷಯಗಳಲ್ಲಿಯೂ ಅಸಾಮಾನ್ಯನು. ಹಿಂದಿನ ಮೂವರ ಸದ್ಗುಣಗಳೆಲ್ಲವೂ ಆತನಲ್ಲಿ ಮೂರ್ತಿಗೊಂಡಿದ್ದುವು ಎಂದರೂ ಒಂದಿಷ್ಟು ಕಡಿಮೆಯೇ ಆದೀತು. ಕ್ರಿ.ಶ. ೭೯೩ರಿಂದ ೮೧೩ರ ವರೆಗೆ ಅವನ ಆಳಿಕೆ ಉತ್ತರೋತ್ತರಾಭಿವೃದ್ಧವಾಗಿ ಸಾಗಿತು. ಸುಮಾರು ಒಂಬತ್ತನೆಯ ಶತಮಾನದಾದಿಯಿಂದ ತನ್ನಾಳಿಕೆಯ ಕಡೆಯ ವರೆಗೆ ಹಿಮಗಿರಿಯಿಂದ ಹಿಡಿದು ಲಂಕಾಂತವಾದ ಭಾರತಭೂಮಿಗೆ ಚಕ್ರವರ್ತಿಯಾಗಿದ್ದನು. ಆ ಮೊದಲಿನ ಶಕ ಪುರುಷರೆನ್ನಿಸಿದ ವಿಕ್ರಮಾದಿತ್ಯ, ಶಾಲಿವಾಹನರು ಚಕ್ರವರ್ತಿಗಳಾಗಿದ್ದರು ಎನ್ನುತ್ತಾರೆ. ಆದರೆ, ಅದರ ಸಿದ್ಧಾಂತವಿನ್ನೂ ಚಾರಿತ್ರಿಕ ದೃಷ್ಟಿಯಿಂದ ನೆಲೆಗೊಳ್ಳಲಿಲ್ಲ. ಮೌರ್ಯ ಕುಲದ ಅಶೋಕನನ್ನು ಚಕ್ರವರ್ತಿ ಎನ್ನುತ್ತಾರೆ. ಅವನು ಮಹಾ ಪರಾಕ್ರಮಿಯೂ ಹೌದು. ಆದರೆ, ಅವನ ಸಾರ್ವಭೌಮತೆ ಅಹಿಂಸಾತತ್ತ್ವಪ್ರಸಾರಕ ಮಾರ್ಗದಿಂದ ಪ್ರಾಪ್ತವಾದುದಲ್ಲದೆ ಭುಜಬಲದಿಂದಲ್ಲ. ನಮ್ಮ ಗೋವಿಂದರಾಜನ ಸರ್ವಾಧಿಪತ್ಯವೆಂದರೆ ಅಂಥದಲ್ಲ, ತನ್ನ ಬಾಹುಬಲದಿಂದಲೇ ಒದಗಿದುದು—ಎಂಬುದನ್ನು ಈ ಗ್ರಂಥದಲ್ಲಿ ಶಾಸ ನಾದಿಗಳ ಆಧಾರದಿಂದಲೇ ಕಾಣಿಸಿದ್ದೇವೆ. ಈ ವಿಷಯವೆಂದರೆ ನಮ್ಮದೇ ಆದ ನೂತನ ಸಿದ್ಧಾಂತವಲ್ಲ. ಡಾ. ಎ. ಎಸ್. ಅಳ್ತೇಕರರು ತಮ್ಮ 'ರಾಷ್ಟ್ರಕೂಟರೂ ಅವರ ಕಾಲವೂ' ಎಂಬ ಚಾರಿತ್ರಿಕ ಗ್ರಂಥದಲ್ಲಿ ಸಂಪೂರ್ಣವಾಗಿ ವಿಷಯವಿದನ್ನು ಒಪ್ಪಿಕೊಂಡು ಸಾಧಾರ ವಾಗಿ ನಿರೂಪಿಸಿದ್ದಾರೆ. ಹೀಗೆ ಚಾರಿತ್ರಿಕವೆನ್ನಿಸಿ ಸಿದ್ಧವಾದ ಅಖಂಡ ಹಿಂದುಸ್ಥಾನದ ಚಕ್ರವರ್ತಿತ್ವವು ನಮ್ಮ ಕನ್ನಡ ವೀರ ಜಗತ್ತುಂಗನೊಬ್ಬನಿಗೇ ಸ್ವಸಾಹಸ ಫಲವಾಗಿ ಲಭಿಸಿದುದು ಎಂಬುದನ್ನು ಕನ್ನಡಿಗರು ಕೇಳಿ ಹುರುಪೇರಬೇಡವೆ ?

ಆ ಜಗತ್ತುಂಗನ ಏಕಮಾತ್ರ ಕುಮಾರನಾದ ನೃಪತುಂಗನು ಶಾಸನ ಚರಿತ್ರಗಳಲ್ಲಿ ಸಿದ್ಧವಾಗಿರುವಂತೆ, ಆಳುತ್ತಿದ್ದುದು ಮಾನ್ಯಖೇಟ (ಮಳಖೇಡ) ರಾಜಧಾನಿಯಲ್ಲಿ. ಅದು, ಈಗಿನ ಹೈದರಾಬಾದಿನೊಳಗಿನ ಪಟ್ಟದಕಲ್ಲು ಎಂಬಲ್ಲಿಗೆ ಹತ್ತಿರದಲ್ಲಿರುವ ಮಳಖೇಡ. ಅದಿರಲಿ; ಇಂಥ ದಂತಿದುರ್ಗಾದಿ ಪ್ರಮುಖರಾಜರ, ಅವರೊಳಗೂ ಚಕ್ರವರ್ತಿ ಗೋವಿಂದನ ರಾಜಧಾನಿ ಎಲ್ಲಿ ? ಯಾವುದು ? ಎಂಬ ವಿಚಾರವು ಈ ವರೆಗೆ ಸಿದ್ಧಾಂತ ದಲ್ಲಿ ಕೊನೆಗೊಳ್ಳದಿದ್ದುದು ಆಶ್ಚರ್ಯ ಮತ್ತು ವ್ಯಸನಾಸ್ಪದ. ಆ ರಾಜಧಾನಿ ವಿಂಧ್ಯಾದ್ರಿಯ ಒಂದು ಶಿಖರದ ಮೇಲೆ ನೆಲಸಿತ್ತು; 'ರೇವಾ' ಎಂಬುದೇ ಅದರ ಹೆಸರು; ರೇವಾ (ನರ್ಮದಾ) ನದಿಯ ಪಕ್ಕದಲ್ಲೇ ನೆಲೆಗೊಂಡುದರಿಂದ ಅದಕ್ಕೆ ಆ ಹೆಸರಾಯಿತು— ಮೊದಲಾದ ಅಂಶಗಳನ್ನು ಸಾಧಾರವಾಗಿ ವಿಸ್ತರಿಸುವ ಪುಣ್ಯವು ವಿಶಾಸಲಾಗಿ ನಮಗೆ ಒದಗಿದುದಕ್ಕೆ ಆನಂದಪಡಬೇಕಾಗಿದೆ. ಬಹುಶಃ ಆ ಹಿಂದಿನ ಅರಸರೂ ಅದೇ ರಾಜ ಧಾನಿಯಲ್ಲೇ ಆಳುತ್ತಿದ್ದರಾಗಿ ಭಾವಿಸಲಿಕ್ಕೆ ಆಸ್ಪದವಿದೆ. ಆ ವಿಂಧ್ಯಾದ್ರಿಪಾದದ ರೇವಾ ರಾಜಧಾನಿಯಲ್ಲಿ ನೆಲಸಿ ಚಕ್ರವರ್ತಿ ಎನ್ನಿಸಿ ಆಳುತ್ತಿದ್ದವನಾದ ಗೋವಿಂದರಾಜನ ಬಿರುದು ಜಗತ್ತುಂಗ ಎಂದಿದ್ದುದು ಸಾರ್ಥಕವಲ್ಲವೆ ?

೩

ಆ ಭಾರತಚಕ್ರವರ್ತಿಯ ಏಕಮಾತ್ರ ಕುಮಾರಕನಾದ ಅಮೋಘವರ್ಷ ನೃಪತುಂಗನೇ ನಮ್ಮ 'ಕವಿರಾಜಮಾರ್ಗ'ಕ್ಕೆ ಆಶ್ರಯದಾತನು. ಅವನು ಕ್ರಿ.ಶ. ೮೧೪ರಿಂದ ೮೭೭ರ ವರೆಗೆ ರಾಜ್ಯವನ್ನಾಳಿಕೊಂಡಿದ್ದನೆಂಬುದು ಶಾಸನಾಧಾರಗಳಿಂದ ವ್ಯಕ್ತವಾಗಿದೆ. ಅವನೇ ತನ್ನ ತಂದೆಯಾದ ಗೋವಿಂದರಾಜನ 'ಹೇಲಾಪುರ'(ವಿಲಾಸನಗರ)ವನ್ನು ಮಾನ್ಯಖೇಟ ರಾಜಧಾನಿಯನ್ನಾಗಿ ಮಾರ್ಪಡಿಸಿದುದು. ತಂದೆ ದಿವಂಗತನಾದ ಕೂಡಲೆ ಹಲವಂದಿ ವಿರೋಧಿ ಸಾಮಂತರ ಕೈವಾಡದಿಂದ ರಾಜ್ಯಕ್ಷೋಭವು ತಲೆದೋರಿತು. ತರುಣನಾಗಿದ್ದ ನೃಪತುಂಗನ ಕೈಯಿಂದ ತಪ್ಪಿಹೋದ ರೇವಾರಾಜಧಾನಿ ಕಡೆವರೆಗೂ ಲಭಿಸಲಿಲ್ಲ. ಹಿಂದೆ ರಾಷ್ಟ್ರಕೂಟ ಸಿಂಹಾಸನಕ್ಕೆ ವಿಧೇಯರಾಗಿದ್ದ ಗುಜರಾತಿನ ರಾಷ್ಟ್ರಕೂಟರೂ ತನಗೆ ವಿಮುಖರಾದರು. ಆದರಿಂದಲೇ ನೃಪತುಂಗನು ತೆಂಕಣ ಮಾನ್ಯಖೇಟದಲ್ಲಿ ನೆಲೆಗೊಳ್ಳ ಬೇಕಾಯಿತು. ಆ ಮೊದಲು ಕಾವೇರಿಯಿಂದ ರೇವಾನದಿಯ ವರೆಗೆ ಹಬ್ಬಿಕೊಂಡಿದ್ದ ಬೃಹತ್ಕರ್ಣಾಟಕವು 'ಕಾವೇರಿಯಿಂದ ಗೋದಾವರಿ'ವರೆಗಿನ ಸಂಪುಟದಲ್ಲಿ ಅಡಕವಾಗ ಬೇಕಾಯಿತು. ಅಷ್ಟು ಎಡರುಗಳು ತೊಡರಿಕೊಂಡಿದ್ದರೂ ನೃಪತುಂಗನ ಧಾರ್ಮಿಕ ರಾಜನೀತಿ ಗುರಿಗೆಡಲಿಲ್ಲ. ಬನವಾಸಿಪ್ರಾಂತದಲ್ಲಿ ಸಾಮಂತನಾಗಿದ್ದ ಬಂಕೆಯನೆಂಬಾತನು ಅರಸನ ಬಲಗೈಯ ಖಡ್ಗವಾಗಿದ್ದನು. ಅವನ ಪ್ರತಾಪದ ಫಲವಾಗಿಯೇ ಉನ್ಮತ್ತ ರಾಗಿದ್ದ ತಳಕಾಡಿನ ಗಂಗರಾಜರು ಹದಕ್ಕಿಳಿದರು. ನೃಪತುಂಗನು ಅತಿ ದೀರ್ಘಕಾಲ ರಾಜ್ಯವನ್ನಾಳಿದವನೇನೋ ಸರಿ. ಆದರೆ, ನಾನಾ ಬಗೆಯ ರಾಜಕೀಯ ಸಂಬಂಧದ ಸಂಕಟಗಳು ಅವನನ್ನು ಪೀಡಿಸುತ್ತಿದ್ದುವು. ಏನಾದರೂ ತನ್ನ ಧರ್ಮಮಾರ್ಗದಿಂದ

ತೊಲಗದ ಧಾರ್ಮಿಕ ವೀರನೆಂದರೆ ನೃಪತುಂಗನೆಂಬುದನ್ನು ವಿಸ್ತರಿಸಿ ಕಾಣಿಸಿದ್ದೇವೆ. ಆ ಮೇಲೆ ಆತನ ರಾಜ್ಯಪದ್ಧತಿ, ವೈಯಕ್ತಿಕವಾದ ಅವನ ಸರ್ವಮತಸಹಿಷ್ಣುತೆ ಮೊದಲಾದ ಉದಾತ್ತಗುಣಗಳನ್ನು ಸಾಧಾರವಾಗಿ ವಿವೇಚಿಸಿದ್ದೇವೆ.

೪

'ಕವಿರಾಜಮಾರ್ಗ'ವನ್ನು ಬರೆದಾತನು ನೃಪತುಂಗನೋ, ಅವನ ಆಸ್ಥಾನದ ವಿದ್ವಾಂಸ ರೊಳಗೊಬ್ಬನಾದ ಶ್ರೀವಿಜಯನೋ ಎಂಬ ವಿಷಯದಲ್ಲಿ ತಲೆದೋರಿದ ಅಭಿಪ್ರಾಯ ಭೇದವು ಇನ್ನೂ ಬಗೆಹರಿಯಲಿಲ್ಲ. ಅದನ್ನು ಸಂಶಯಕ್ಕೆಡೆಯಿಲ್ಲದಂತೆ ಸಾಧಾರವಾಗಿ ಸೂಚಿಸಿದ್ದೇವೆ. ಗ್ರಂಥಕಾರನ ಹುಟ್ಟುಹೆಸರು 'ಜಯಾಬ್ಬೆ' ಎಂಬುದನ್ನು 'ಕವಿರಾಜ ಮಾರ್ಗ'ದಲ್ಲಿರುವ ಚಕ್ರಬಂಧದೊಳಗಿನ ನಿರ್ದಿಷ್ಟ ಸ್ಥಳಾಕ್ಷರಗಳಿಂದಲೇ ತೋರಿಸಿ ಅವನಿಗೇ ಮತ್ತಿನ 'ಶ್ರೀವಿಜಯ' ಎಂಬ ಹೆಸರೊದಗಿತು ಎಂಬುದನ್ನೂ ವಿಸ್ತರಿಸಿದ್ದೇವೆ. ನೃಪತುಂಗ ಮಹಾಸಭೆಯಲ್ಲಿ 'ವಾಗಧಿಪ' ಎಂಬ ಅಧಿಕಾರನಾಮವೂ ಅವನಿಗೆ ಒದಗಿತ್ತು. ಮಾತ್ರ ವಲ್ಲ; ಈ ವಾಗಧಿಪ ಶ್ರೀವಿಜಯನು 'ಅಸಹಾಯಸಾಹಸವಿನೋದಿ' ಕ್ಷತ್ರಿಯನಾಗಿದ್ದು ನೃಪತುಂಗನಿಗೆ ಸಮೀಪಬಂಧುವೂ ಆಗಿರಬೇಕು ಎಂಬುದನ್ನು ಗ್ರಂಥಾಧಾರದಿಂದಲೇ ಹೊಳೆಯಿಸಿರುತ್ತೇವೆ. ನಾವು ಒಪ್ಪಿಸಿದ ಆಧಾರ ಸಿದ್ಧಾಂತಗಳನ್ನು ವಾಚಕರು ಶಾಂತ ವಾಗಿ ಪರಾಂಬರಿಸಿದಲ್ಲಿ, ನಮ್ಮ ಅಭಿಪ್ರಾಯವು ಅವರಿಗೆ ಸ್ವೀಕಾರ್ಯವಾಗಿ ತೋರದಿರ ಲಾರದು ಎಂದು ನಂಬುತ್ತೇವೆ.

ಆ ಮೇಲೆ, ಆಗಿನ ಕನ್ನಡ ನಾಡಿನ ಮತ್ತು ಕನ್ನಡ ಸಾಹಿತ್ಯದ ಸ್ವರೂಪಗಳನ್ನು ಸಕಾರಣವಾಗಿ ಪರಾಮರ್ಶಿಸಿದ್ದೇವೆ. ಮತ್ತಿನವನಾದ ಎರಡನೆಯ ನಾಗವರ್ಮ (ಕ್ರಿ.ಶ. ಸು. ೧೧೪೪)ನ 'ಕಾವ್ಯಾವಲೋಕನ'ದಲ್ಲಿ ತೋರುವ ಆಧಾರಪದ್ಯಗಳನ್ನು ಒಡನಿರಿಸಿ 'ಕವಿರಾಜಮಾರ್ಗ'ದೊಳಗೆ ತೋರುವ 'ಬೆದಂಡೆ', 'ಚತ್ತಾಣ' ಎಂಬ ದೇಸಿಗಬ್ಬಗಳ ಸ್ವರೂಪಗಳನ್ನು ಪರಾಮರ್ಶಿಸಿದ್ದೇವೆ. ಇವುಗಳೇ ಹಿಂದಿನ ಕಾಲದ ದೇಸಿಗಳಾದ ಶ್ರವ್ಯ, ದೃಶ್ಯಕಾವ್ಯಗಳಾಗಿರಬಹುದು. ಈಗಿನ ದೇಸಿಯಾದ ಯಕ್ಷಗಾನ ಎಂಬ ದೃಶ್ಯಕಾವ್ಯ (ನಾಟಕ)ವು ಹಿಂದಿನ 'ಬಾಜನೆಗಬ್ಬ' 'ಚತ್ತಾಣ'ಗಳ ರೂಪಾಂತರವಾಗಿರಬೇಕೆಂದೇ ನಮ್ಮೆಣಿಕೆ.

ನಮ್ಮ ಈ ಪ್ರಯತ್ನವೆಂದರೆ ಭಕ್ತಿಪೂರ್ವಕವಾದ ಕನ್ನಡ ಮಾತೆಯ ಸೇವೆ ಮಾತ್ರವೇ. ಇದು ಎಷ್ಟರಮಟ್ಟಿಗೆ ಗುರಿಗೊಂಡಿದೆ ಎಂಬುದಕ್ಕೆ ವಿವೇಕಿಗಳಾದ ಕನ್ನಡಿಗರ ಎದೆಯೇ ಪ್ರಮಾಣ.

# ಭಾಗ ಎರಡು

ಅಱಿದು ಪೀನಂ ಮಾರ್ಗಗತಿಯಂ
 ತಱಿಸಲಾಗದಾರ್ಗಂ ಬಹುವಿಕಲ್ಪದೊಳ್
ಕುಱಿತು ಪೂರ್ವಶಾಸ್ತ್ರಪದವಿಯಂ
 ತೆಱದಿರೆ ಪೇೞ್ವೆನಿನಿಸಂ ಕನ್ನಡದೊಳ್

—'ಕವಿರಾಜಮಾರ್ಗ' (ii, 44)

ಮಾತುಗಳಾವುವಾನುಮುಪವರ್ಣಿತಮಾರ್ಗಯುತಪ್ರಯೋಗಸಂ
 ಜಾತವಿಭಾಗದಿಂ ನೆಗೞ್ದ ಕನ್ನಡದೊಳ್ ಗುಣಮಂ ತಗುಳ್ಚುಗುಂ
ನೀತಿನಿರಂತರಾನುಗತವೃತ್ತಿವಿಕಲ್ಪಿತಮಂ ತದೀಯನಿ
 ರ್ಣೀತಿಯನೀ ತೆಱತ್ತು ತಱಿಸಲ್ಗೆ ಬುಧೋತ್ತಮರುಕ್ತಿಪೂರ್ವಕಂ

—'ಕವಿರಾಜಮಾರ್ಗ' (ii, 99)

೧೦

# ಕಾವ್ಯದೋಷಗಳು

ಪ್ರಪಂಚದೊಳಗಿನ ಎಲ್ಲ ವಿಷಯಗಳೂ ಒಂದು ಆದರ್ಶ ಸ್ಥಿತಿಗೇರಬೇಕಾದರೆ, ದೋಷ ರಹಿತವಾಗಿದ್ದು ಗುಣಸಹಿತವೆನ್ನಿಸಿರಬೇಕು. ಕಾವ್ಯದ ಸ್ಥಿತಿಯಾದರೂ ಈ ನಿಯಮಕ್ಕೆ ಭಿನ್ನವಲ್ಲ. ಇದನ್ನೇ ಗ್ರಂಥಕಾರನು 'ಪೇಸದೆ ದುರ್ಜನದೊಳಾದ ಪರಿಚಯಂ ಮಾಸಿಸಿ ಕಿಡಿಸುವವೊಲೊಪ್ಪುವ ಕುಲವಧುವಂ'—ಎಂದು ಅತ್ಯಾಕರ್ಷಕವಾದ ಹೋಲಿಕೆಯೊಡನೆ ವಿವರಿಸಿದ್ದಾನೆ. ದುರ್ಜನದಲ್ಲಿ ಪದ್ಧತಿ ಮಾರಿ (ಪೇಸದೆ) ಆಗಿಹೋದ ಬಳಿಕೆ ಹೇಗೆ ಕೊನೆಗೆ ಕುಲವಧುವನ್ನೂ ಕೆಡಿಸಿಬಿಡುವುದೋ ಹಾಗೆ ದೋಷವು ಅಲ್ಪವಾಗಿದ್ದರೂ ಸಮಗ್ರ ಕೃತಿಯನ್ನೇ ಕೆಡಿಸುವುದು. ಆದುದರಿಂದ ಕಾವ್ಯವು ದೋಷರಹಿತವಾಗಿರತಕ್ಕದ್ದು ಅತಿಮುಖ್ಯ ; ಅಷ್ಟೇ ಅಲ್ಲ, ರೋಗರಾಹಿತ್ಯವು ಮೆಯ್ಯ ಜೀವನಕ್ಕೆ ಹೇಗೋ ಹಾಗೆ ಕಾವ್ಯಕ್ಕೆ ದೋಷ ನಿವೃತ್ತಿಯೂ ಅತ್ಯಾವಶ್ಯಕ. ಈ ವಿಷಯವನ್ನು ಗ್ರಂಥಕಾರನು ಆಗಿನ ಜೀವತ್ಕವಿಗಳಿಗೆ ವಿನಯಪೂರ್ವಕವಾಗಿ ಅಲ್ಲಲ್ಲಿ ಬೋಧಿಸಿರುವುದನ್ನು ಹಿಂದೆಯೇ ಗಮನಿಸಿರುತ್ತೇವೆ.

ಆ ಅನುನಯ ವಚನಗಳೆಲ್ಲ ವಿದ್ವಾಂಸರೆನಿಸಿದ ಕವಿಗಳನ್ನು ಮಾತ್ರವೇ ಉದ್ದೇಶಿಸಿ ಪ್ರಾರ್ಥಿಸಿಕೊಂಡವುಗಳಲ್ಲದೆ, ಉಳಿದ ಸಾಮಾನ್ಯರಿಗಲ್ಲ. 'ನಗದ ಗುಹಾಧ್ವನಿಯವೊಲ್ ಅನರ್ಥವಚನಂ ತನಗಾಗಿಸಲಱಿಯಂ ಉಚಿತ ವಾಕ್ಚತುರತೆಯಂ',....'ಪಟಿಗನ್ನಡಮಂ ಪೊಲಗಿಡಿಸಿ ನುಡಿವರಾಗಮುಬಲಹೀನರ್ ದೇಸಿಯುಲ್ಲ ಅದೆಂದು ಅಱಿದಿರ್ದ್ದಂ'—ಎಂದು ಮೊದಲಾಗಿ ಹೇಳಿ ಅಂಥವರನ್ನು ಈ ಬೋಧ್ಯವರ್ಗದಿಂದ ಆದಿಯಲ್ಲೆ ತೊರೆದುಬಿಟ್ಟಿದ್ದಾನೆ. ಮೇಲಿನ ನುಡಿಗಳೆಲ್ಲವೂ ಎಷ್ಟು ನುಣುಪಾಗಿವೆ ಎಂಬುದು ಆಯಾ ವಾಕ್ಯಭಾಗಗಳಿಂದಲೇ ವೇದ್ಯವಾಗುತ್ತಿದೆ; ಆದರೂ ಗುರಿಗೊಂಡು ಕಾವ್ಯದೋಷಗಳನ್ನೇ ಎತ್ತಿ ವಿಸ್ತರಿಸಿ ತೋರಿಸುತ್ತಿವೆ—ಎಂಬುದು ಉಳಿದ ಆಯಾ ಭಾಗಗಳನ್ನೋದಿದಲ್ಲಿ ವ್ಯಕ್ತವಾಗುವಂತಿದೆ. ಹಾಗೆ ಬರೆದ ಶಕ್ತಿಯುಳ್ಳವನಾದುದರಿಂದಲೇ ಗ್ರಂಥಕಾರನು 'ವಾಗಧಿಪ' ಪದವಿಗೇರಿಸಲ್ಪಟ್ಟನು ; ಈ ಲಕ್ಷಣಗ್ರಂಥ ಮೂಲಕವಾಗಿ ಕನ್ನಡನಾಡಿಗೆಲ್ಲ ವಿಶೇಷವಾಗಿ, ಕವಿತಾಮಾರ್ಗದಲ್ಲಿ ಕಾಲಿಡುವವರಿಗೆ, ಬೋಧಿಸಲು ಅರ್ಹನೂ ಶಕ್ತನೂ ಆದನು.

ದೋಷನಿರೂಪಣಾವಸರದಲ್ಲಿ—ಅದರ ಅನಂತವಾದ ಭೇದಗಳನ್ನೆಲ್ಲ ಸರಿಯಾಗಿ ಸೂಚಿಸಲು ಸಾಧ್ಯವಿಲ್ಲ (ಪದ್ಯ i, 46) ಎಂದೇ ಅಡಿಗಟ್ಟುತ್ತಾನೆ. ದೇಶಿ ಬೇರೆ

ಬೇರಾಗಿರುವುದೇ ಅದಕ್ಕೆ ಮುಖ್ಯ ಕಾರಣ. 'ದೇಸಿಯಲ್ಲ ಅದೆಂದು ಅಱಿದಿರ್ದ್ದಂ' ಆಗಮಬಲಹೀನರಾಗಿ ಹಳಗನ್ನಡವನ್ನು ಪ್ರಯೋಗಿಸುವವರು ಹೆಚ್ಚಾಗಿ ಬರುತ್ತಿರುವುದು ಅದಕ್ಕೆ ಸಹಕಾರಿ ಕಾರಣವಾಗುತ್ತಿದೆ (ಪದ್ಯ i, 48). ಪ್ರಬಲಗಳಾದ ಆ ದೋಷಗಳನ್ನು ಹೆಸರಿಸುವ ಮೊದಲಿನ ಪೀಠಿಕೆಯಲ್ಲಿ ಗ್ರಂಥಕಾರನು ಸಂಗ್ರಹವಾಗಿ ಸೂಚಿಸುವ ಆ ದೋಷಪ್ರವೇಶ ಕಾರಣಗಳು ಹೀಗಿವೆ—(೧) ದೇಸಿ ಬೇರೆಬೇರಾಗಿ ಹಲವಾಗಿರುವುದು, (೨) ಹಳಗನ್ನಡವನ್ನು ಹೊಲಗೆಡಿಸಿ ಸೇರಿಸುವುದು, (೩) ಸಂಸ್ಕೃತ ಪದಗಳಲ್ಲಿ ಕನ್ನಡ ನುಡಿಗಳನ್ನು ಸಮಾಸವೆಸಗುವುದು. ಇವುಗಳು ಕಾವ್ಯದೋಷಗಳಾಗುವುದು ಹೇಗೆ ಎಂಬುದನ್ನೀಗ ವಿವೇಚಿಸೋಣ.

ದೇಸಿ ಎಂದರೆ, ಆಯಾ ಕನ್ನಡ ದೇಶೀಯರ ಅಥವಾ ಪ್ರಾಂತೀಯರ ಪರಂಪರೆ ವಿಡಿದು ಅಲ್ಪಾಲ್ಪವಾಗಿ ಉಚ್ಚಾರಣೆಯಲ್ಲಿ ಸವೆದು, ಹೊಸ ರೂಪುಗೊಂಡು, ಪ್ರಕೃತ ಕಾಲದಲ್ಲಿ ಆದೊಂದು ರೂಪವನ್ನೊಂದಿದ ನುಡಿ ನುಡಿಗಟ್ಟುಗಳಿಂದ ಕೂಡಿದುದು. ಈ ಪದಗಳು ಮೂಲದಲ್ಲಿ ಏಕಧಾತುಜನ್ಯಗಳಾಗಿದ್ದರೂ ಅಲ್ಲಲ್ಲಿಯವರ ಉಚ್ಚಾರಣಾದಿಗಳಿಗನುವಾಗಿ ಅಲ್ಲಿ ಭಿನ್ನರೂಪಗಳಿಂದಿರುತ್ತಿವೆ. ಅದರಿಂದ, ಪದವು ಒಂದೇ ಆಗಿದ್ದರೂ ಒಂದು ಪ್ರಾಂತದವರ ಬಾಯಿಂದ ಹೊರಟುದು ಇನ್ನೊಂದು ಪ್ರಾಂತದವರಿಗೆ ಗೊತ್ತಾಗುವಂತಿರುವುದಿಲ್ಲ. 'ಹೋಗ್ಯಾನೆ' (ಹೋಗಿದ್ದಾನೆ, ಹ.ಗ.—ಪೋಗಿರ್ದ್ದಂ), ಬಂದ್ಯಾನೆ (ಬಂದಿದ್ದಾನೆ, ಹ.ಗ. ಬಂದಿರ್ದ್ದಂ) ಎಂಬ ಒಂದು ಪ್ರಾಂತದ ದೇಸಿಯ ಅರ್ಥವು ಇತರ ಪ್ರಾಂತೀಯರಿಗೆ ಹೇಗಾಗಬೇಕು? ಅದೇ ರೀತಿಯಲ್ಲಿ 'ಹೋಯಿದ' (ಹೋಗಿದ್ದನು, ಹ.ಗ.—ಪೋಗಿರ್ದ್ದಂ); ಬಁಯ್‌ದ[1] (ಬಂದಿದ್ದನು, ಹ.ಗ.—ಬಂದಿರ್ದ್ದಂ) ಎಂಬ ಇನ್ನೊಂದು ಪ್ರಾಂತದ ಕನ್ನಡಿಗ ವರ್ಗದವರ ದೇಸಿಯ ಅರ್ಥವು ಇತರ ಪ್ರಾಂತದವರಿಗೆ ಹೇಗೆ ಒದಗಬೇಕು? ಇತರ ಪ್ರಾಂತೀಯರ ದೇಸಿಯನ್ನು ನಾವು ದೃಷ್ಟಾಂತಿಸಿದರೆ ತಪ್ಪಾಗಿಬಿಡಲೂಬಹುದು; ಅದರಿಂದ ಇತ್ತಣದೇ ಆದ ದೇಸಿಯೊಂದನ್ನು ಎತ್ತಿತೋರಿಸುತ್ತೇವೆ:

'ತೆರವು ಮರವಾಗಿ ಹೋತು ಅದಕ್ಕೆ. ಆರಿಂಗೆ ಹಾಂಗಾಗ? ಅದು ತೊಂಬತ್ತು ವರ್ಷದ ಮುದುಕಿ. ಎಂತದೋ ಹೇಳಿಬಿಟ್ಟತ್ತು ಹೇಳಿ ಗ್ರಯ್ಸ್ನವೋಁ. ಒಂದಿಷ್ಟಾದರೂ ವಿಚಾರ ಇಪ್ಪೋರು ಅಷ್ಟಕ್ಕೇ ಸಮಾಧಾನ ಮಾಡಿಕೊಳ್ಳೆಕ್ಕಲ್ಲದ್ದೆ ಬೇರೆ ನಿವೃತ್ತಿ ಇಲ್ಲೆ. ಹಸೆಹರುಕ್ಕಿನ ಹಾಸಿಗೆಲಿ ಸುತ್ತಿಗೊಳ್ಳೆಕ್ಕು ಹೇಳಿ ಹಿರಿಯೋರ ಮಾತು.'

ಇತರ ಪ್ರಾಂತೀಯರಿಗೆ ಈ ಬರಹವೆಂದರೆ 'ತಲೆಬರಹ'ವಾಗಿಯೇ ತೋರಬಹುದು. ಅದರಿಂದ ಈಗಿನ ಮಾರ್ಗದ ಕನ್ನಡಕ್ಕೆ ಮಾರ್ಪಡಿಸಿ ಕಾಣಿಸುತ್ತೇವೆ—

'ಗೊತ್ತಿದ್ದುದೂ ಮರೆತುಹೋಯಿತವಳಿಗೆ. ಯಾರಿಗೆ ಹಾಗಾಗಲಿಕ್ಕಿಲ್ಲ? ಅವಳು ತೊಂಬತ್ತು ವರ್ಷದ ಮುದುಕಿ. ಏನೋ ಹೇಳಿಬಿಟ್ಟಳೆಂದು ಗ್ರಹಿಸುವ. ಒಂದಿಷ್ಟಾದರೂ

[1] ◌ಁ ಇದು ಅರ್ಧಾನುಸ್ವಾರ ಚಿಹ್ನೆ. ದಕ್ಷಿಣ ಕನ್ನಡ ಪ್ರಾಂತದ ಕನ್ನಡಿಗರ ಒಂದು ವರ್ಗದವರ ಭಾಷೆಯಲ್ಲಿ ಇಂಥ ಅರ್ಧಾನುಸ್ವಾರ ಹಾಸುಹೊಕ್ಕಾಗಿದೆ.

ವಿಚಾರಶಕ್ತಿ ಇರುವವರು ಅಷ್ಟರಿಂದಲೇ ಸಮಾಧಾನಮಾಡಿಕೊಳ್ಳಬೇಕಲ್ಲದೆ ಬೇರೆ ನಿವೃತ್ತಿ ಇಲ್ಲ. ಹರಕನ್ನು ಹಾಸಿಗೆಯಲ್ಲಿ ಸುತ್ತಿಕೊಳ್ಳಬೇಕೆಂದು ಹಿರಿಯರ ಮಾತು.'

ಈ ದೇಸಿಯಲ್ಲಿ ಸ್ತ್ರೀಲಿಂಗವಾಚಕ ಕ್ರಿಯಾಪದಪ್ರತ್ಯಯ ಪ್ರಯೋಗವೇ ಇಲ್ಲ. ಬದಲಾಗಿ ನಪುಂಸಕ ಕ್ರಿಯಾಪದ ಪ್ರತ್ಯಯವೇ ಪ್ರಯುಕ್ತವಾಗಿದೆ. ಕೃದಂತದಲ್ಲಿ ಮಾತ್ರ 'ಬಂದೋಳು, ಹೋದೋಳು (ಬಂದವಳು, ಹೋದವಳು)' ಇತ್ಯಾದಿಯಾಗಿ 'ಓಳ್ (ಅಳ್)' ಎಂಬುದೇ ಬಳಕೆ. ಈ ದೇಸಿಯೊಳಗೆ ಆಧುನಿಕ ಕನ್ನಡ ವಿದ್ವಾಂಸರಿಗೂ ಅತ್ಯಾವಶ್ಯಕವೆನ್ನಿಸಿ ತೋರಬಹುದಾದ ನುಡಿ, ನುಡಿಗಟ್ಟು, ಗಾದೆ, ಅಚ್ಚುಗಟ್ಟಿನ ಮಾತು ಮೊದಲಾದವುಗಳು, ಅಷ್ಟೇ ಏಕೆ, ಇಡಿ ಕನ್ನಡನುಡಿಗೆ ಒಂದು ಹೊಸ ಕಳೆ ಹುರುಪುಗಳನ್ನುಂಟುಮಾಡಬಲ್ಲ ಸಾಧನಗಳೂ ಇವೆ ಎನ್ನಬಹುದು. ಹಾಗಾಗಬೇಕಾದರೆ ಈ ದೇಸಿಯ ಸ್ವರೂಪವನ್ನೆಲ್ಲ ಮಾರ್ಗೀಯ ಭಾಷೆಯಲ್ಲಿ ವಿಸ್ತರಿಸಬೇಕು.

ಇಂಥ ದೇಸಿಗಳು ಬೇಡವೆ? ಬೇಕು. ಅವುಗಳೆಲ್ಲ ಮಾರ್ಗಕ್ಕಿಳಿದರೆ ಮಾತ್ರವೇ ಸಾರ್ಥಕವಾದೀತು. ಈಗಿನ ಮಾರ್ಗದ ಕನ್ನಡವೇ ಬೇರೆ; ಮೇಲೆ ದೃಷ್ಟಾಂತಿಸಿದ ಕನ್ನಡವೇ ಬೇರೆ. ಇತರ ಪ್ರಾಂತಗಳ ದೇಸಿಗಳೂ ಹೆಚ್ಚುಕಡಿಮೆ ಈ ಸಾಲಿನಲ್ಲೇ ಬರಬಹುದು. ದೇಸಿಗಳನ್ನು ಮಾತ್ರ ನೋಡಿದರೆ—ಅಂದಿನಂತೆ ಇಂದೂ 'ಕನ್ನಡಂಗಳ್' ಎನ್ನಬೇಕು. ನಮ್ಮ ಗ್ರಂಥಕಾರನು ಅಂದಿನ ಅವುಗಳನ್ನೆಲ್ಲ ಒಂದುಗೂಡಿಸಿ 'ಕನ್ನಡ'ವನ್ನಾಗಿ ಮಾಡಲು ಪ್ರಯತ್ನಿಸಿದ್ದನು. ಇದರಿಂದ, ದೇಸಿಗಳೆಲ್ಲ ಮಾರ್ಗವನ್ನೊಂದಿ ಒಂದು ದೇಸಿಯಾಗಬೇಕು; ಹಾಗಿಲ್ಲವಾದರೆ ಅವುಗಳು ದೋಷಕಾರಕಗಳಾಗುತ್ತಿವೆ—ಎಂದು ಭಾವಿಸತಕ್ಕುದು.

ಇನ್ನು, ಹಳಗನ್ನಡವನ್ನು ಹೊಲಗೆಡಿಸಿ ಮಾರ್ಗಕಾವ್ಯದಲ್ಲಿ ಸೇರಿಸುವ ವಿಚಾರ. ದೇಸಿಗಳಾಗಿದ್ದರೂ, ಪ್ರಾಂತೀಯ ಭೇದವಿಶಿಷ್ಟಗಳಾಗಿದ್ದು 'ದೇಸಿ'ಯಾಗದುದನ್ನು ಮಾರ್ಗದಲ್ಲಿ ಬೆರಸಲಾಗದು ಎಂದ ಮೇಲೆ ಹಳಗನ್ನಡವನ್ನೆಂತು ಸೇರಿಸುವುದು? ಅದು ಪ್ರಕೃತ ಕಾಲದಲ್ಲಿ ಏಕರೂಪದಲ್ಲಿದ್ದರೂ ಅರೂಢವೆನಿಸಿದುದರಿಂದ ದೇಸಿಯಲ್ಲವಷ್ಟೆ.

ನೆಲಸಿದ ಕಾವ್ಯಂ ಕಾವ್ಯ
ಕ್ಕೆ ಲಕ್ಷಣಂ ಸತತಮೆಂದೆ ಪೞಗನ್ನಡಮಂ
ಪೊಲಗೆಡಿಸಿ ನುಡಿವರಾಗಮ
ಬಲಹೀನರ್ ದೇಸಿಯಲ್ಲದೆಂದಱಿದಿರ್ದುಂ —(i, 48)

ಆಗಿನ ಆಗಮಬಲಹೀನರು ಹಳಗನ್ನಡ ಪದಗಳನ್ನು ಪ್ರಯೋಗಿಸುತ್ತಿದ್ದುದಕ್ಕೆ— 'ಪೊಡವಿಪತಿ ಗೊರವನೆನೆ ಜೇಬ್ಬಿಡೆಯದುವದೆಕರಿಸಿ ಕಬ್ಬಿಗರ್ದೂಱಿನೆಯುಂ ಹಡುವಸು ಮಱಿಸುಜ್ಜಿಸುಗೆಂ ಮುಡಿಯೊಳವಾರ್ಗೆ' ಎಂದು ದೃಷ್ಟಾಂತವನ್ನು ಹೇಳಿ, 'ಎಂದು ನುಡಿವ ಪೞಗನ್ನಡಮುಂ' ಎಂದು ಮುಂದುವರಿಸುತ್ತಾನೆ. ಇದರೊಳಗಿನ ಹಿಂದಿನ ಭಾಗದ ಭಾಷೆ ಆಗ ದೇಸಿಯಲ್ಲದ ಪುರಾತನಕಾಲದ ಹಳಗನ್ನಡವೆಂದು ಸಿದ್ಧವಾಗುತ್ತಿದೆ. ಈ ಹಳೆಯ

ರೂಪಾದಿಗಳಿಂದ ಕೂಡಿದ ಕನ್ನಡವು ಪುರಾತನ ಕಾಲದಲ್ಲಿ, ಎಂದರೆ ದೇಸಿಯಾಗಿದ್ದ ಹಿಂದಣ ಸಮಯದಲ್ಲಿ, ಉಪಯುಕ್ತವಾಗುತ್ತಿದ್ದರೆ ಆಗಿನ ಕಾಲಕ್ಕದು ಹೊಸದಾಗಿ ದೇಸಿ ಎನ್ನಿಸುತ್ತಿತ್ತು. ಈಗ ಅದೇ ದೇಸಿ ಎನ್ನಿಸುವುದು ಹೇಗೆ? ಎಂಬುದನ್ನು ಗ್ರಂಥಕಾರನು ಸಯುಕ್ತಿಕವಾಗಿ ನಿರೂಪಿಸುತ್ತಾನೆ—

ದೊರೆಕೊಂಡಿರೆ ಸೊಗಯಿಸುಗುಂ
ಪುರಾಣಕಾವ್ಯಪ್ರಯೋಗದೊಳ್ ತತ್ಕಾಲಂ
ವಿರಸಂ ಕರಮುವು ದೇಸಿಗೆ
ಜರದ್ವಧೂವಿಷಯ ಸುರತರಸರಸಿಕತೆವೊಲ್ —(i, 50)

ಕವಿತಾದೃಷ್ಟಿಯಿಂದ ನೋಡಿದರೆ ಹೋಲಿಕೆಯಿದು 'ಇಲ್ಲಿಗಿದು ತಕ್ಕುದು' ಎಂದಷ್ಟೇ ಅಲ್ಲ, ಅಂದವೂ ಆಗಿದೆ ಎಂಬುದನ್ನು ವಾಚಕರು ಭಾವಿಸುವಂತಿದೆ. ಹೀಗೆ ಈಗಲೂ ಹಳಗನ್ನಡಗಳನ್ನು ಹೊಸದೆಂಬ ಪದ್ಯಕಾವ್ಯಗಳಲ್ಲಿ ಬೆರಸಿ, ಗದ್ಯಗಳಲ್ಲಿಯೂ ತುರುಕಿ ಬರೆವ ಕವಿ ಲೇಖಕರು ಇಂದಿಗೂ ಬೆಳಗುವುದಿಲ್ಲವೆ? ಹೇಗೂ ಇರಲಿ; ಇದೂ ದೋಷಸಾಧನಗಳೊಳಗೊಂದು ಎಂಬುದು ಗ್ರಂಥಕಾರನ ಅಭಿಪ್ರಾಯ.

ಸಂಸ್ಕೃತ ಪದಗಳೊಡನೆ ಕನ್ನಡವನ್ನು ಬೆರಸಲಾಗದು, ಎಂದರೆ ಸಮಾಸವೆಸಗಿ ಪ್ರಯೋಗಿಸಲಾಗದು. ಈ ವಿಷಯದಲ್ಲಿ ಗ್ರಂಥಕಾರನ ಮಾತನ್ನೆ ಪರಾಂಬರಿಸಬೇಕು:

ಸಮಸಂಸ್ಕೃತಂಗಳೊಳ್ ತ
ಳ್ತಮರ್ದಿರೆ ಕನ್ನಡಮನಱಿದು ಪೇೞ್ಗೆಂಬುದಿದಾ
ಗಮಕೋವಿದನಿಗದಿತಮಾ
ರ್ಗಮಿದಂ ಬೆರಸಲ್ಕಮಾಗದೀ ಸಕ್ಕದದೊಳ್ —(i, 51)

ಇದರಿಂದ ಸಮಸಂಸ್ಕೃತದೊಡನೆ ಕನ್ನಡವನ್ನು ಪರಾಂಬರಿಕೆಯಿಂದ 'ಅಮರ್ದಿರೆ' ಬೆರಸಬಹುದು. ಸಂಸ್ಕೃತಪದದೊಡನೆ ಹಾಗೆ ಬೆರಸಲಾಗದು ಎಂದರ್ಥವಾಗುತ್ತದೆ. ಇಲ್ಲಿ, ಗ್ರಂಥಕಾರನ ಸಮಸಂಸ್ಕೃತಕ್ಕೂ ಸಂಸ್ಕೃತಕ್ಕೂ ಒಂದಿಷ್ಟು ಭೇದವಿದೆ ಎಂದಾಯಿತು. 'ಅಱಿದು ಪೇೞ್ಗೆ ಇದು ಆಗಮಕೋವಿದ ನಿಗದಿತಮಾರ್ಗಂ' ಎಂಬುದರಿಂದ, ಈ ಸಮಸಂಸ್ಕೃತವನ್ನು 'ಅಱಿದು'ಕೊಳ್ಳುವುದು ಸಾಮಾನ್ಯರಿಗೆ ಸುಲಭವಲ್ಲ ಎಂದೂ ಸೂಚಿತವಾಗುತ್ತಿದೆ. ಈ 'ಸಮಸಂಸ್ಕೃತ' ಎಂದರೆ ಎಂಥದು? ಸಮಸಂಸ್ಕೃತ ವಿವೇಚನೆಯನು ಎಷ್ಟೋ ಮತ್ತಿನ 'ಶಬ್ದಮಣಿದರ್ಪಣ'ಕಾರನೇನೋ ವಿಸ್ತರಿಸಿದ್ದಾನೆ. ಆದರೆ ನಾವಿಲ್ಲಿ 'ಕವಿರಾಜಮಾರ್ಗ'ಕಾರನ ಅಭಿಪ್ರಾಯವನ್ನೇ ಪರಾಂಬರಿಸತಕ್ಕುದು. ಅವನ ಹೇಳಿಕೆಯಂತೆ 'ಸಮಸಂಸ್ಕೃತೋದಿತ ಪದಂಗಳೊಳ್' ಕನ್ನಡವನ್ನು ಬೆರಸಬೇಕಾದ 'ಆಗಮಕೋವಿದ ನಿಗದಿತಮಾರ್ಗ' ಎಂದರೆ ಹೀಗೆ—

ಮಾರ್ಗ—

ಬಹಿರುದ್ಯಾನಾಂತರದೊಳ್
ಸಹಸೋದಿತ ಮತ್ತ ಕೋಕಿಲೋಚ್ಚೈರ್ಧ್ವಾನಂ

ಮುಹುರಾಕರ್ಣಿಸೆ ಪಡೆದೆ
ತ್ತಹರ್ನಿಶಂ ಪೆರ್ಚನಂತರಂಗಕ್ಕೆನ್ನಾ —(i, 55)

ಅನ್ಯಾರ್ಗೆ—

ಬಹಿರಂತರುಪವನಂಗಳೊ
ಳಹರಹಮಾ ಪರಭೃತಂಗಳುಲಿವ ರವಂಗಳ್
ಸಹಸಾ ತಳಮುಳಗೊಳಿಸಿದು
ವಹೋ ಮನಂಗಳನಿತಸ್ತತಂ ವಿರಹಿಗಳಾ —(i, 53)

ಮೊದಲಿನ ಪದ್ಯದಲ್ಲಿ ತೋರುವ ಬಹಿಃ, ಸಹಸಾ, ಉಚ್ಚೈಃ, ಮುಹುಃ, ಅಹರ್ನಿಶಂ ಎಂಬ ಪದಗಳು ಸಂಸ್ಕೃತದಲ್ಲಿ ಅವ್ಯಯ ರೂಪಗಳು. ಇಂಥ ಅವ್ಯಯಗಳನ್ನು ವಿವರಿಸುವ ಒಂದು ಪದ್ಯವು ಮದ್ರಾಸು ಪ್ರತಿಯಲ್ಲಿ ದೊರಕುತ್ತಿದೆ—

ಅಹರಹರುಚ್ಚೈರ್ನೀಚೈ
ರ್ಮುಹುರ್ಮುಹುರಿತಸ್ತತಃ ಪುನ[ಃ]ಪುನರಂತ
ರ್ಬಹಿರಾದಿಹಪ್ರಾದುರಹೋ
[ಸಹ]ಸಾದಿಗಳವ್ಯಯಂಗಳಸಹಾಯಂಗಳ್ —(ಮದ್ರಾಸ್ ಪ್ರತಿ i,52)

ಅಹರಹಃ, ಉಚ್ಚೈಃ, ನೀಚೈಃ, ಮುಹುರ್ಮುಹುಃ (ಮುಹುಃ ಮುಹುಃ), ಇತಸ್ತತಃ, (ಇತಃ ತತಃ), ಪುನಃಪುನಃ (ಪುನಃ ಪುನಃ), ಅಂತಃ, ಬಹಿಃ, ಆದ್ (ಆ), ಇಹ, ಪ್ರಾದುಃ, ಅಹೋ, ಸಹಸಾ, ಇವೇ ಮೊದಲಾದುವು ಅವ್ಯಯಗಳು, ಅಸಹಾಯಗಳು—ಎಂಬುದಿದು ಪದ್ಯಾರ್ಥ. ಇಲ್ಲಿಯ 'ಅಸಹಾಯಂಗಳ್' ಎಂಬ ವಿಶೇಷಣಕ್ಕೆ, 'ಸಂಸ್ಕೃತ'ದಲ್ಲಿ ಇದ್ದಂತೆ ಇರುವ ಕನ್ನಡದ ಯಾವ ಬಗೆಯ ಸಹಾಯವನ್ನೂ, ಎಂದರೆ ಕನ್ನಡ ಭಾಷಾ ಪ್ರತ್ಯಯಾದಿಗಳನ್ನು, ಒಳಕೊಳ್ಳದವುಗಳು ಎಂಬುದೇ ತಾತ್ಪರ್ಯವಿರಬೇಕು. ಮೇಲಿನ ಪದ್ಯದಲ್ಲಿ ತೋರುವ 'ಅಹರಹಃ,' 'ಉಚ್ಚೈಃ' ಮೊದಲಾದುವು ಈ ಭಾವನೆಗನುವಾಗಿಯೇ ಇರುವುದನ್ನು ಭಾವಿಸತಕ್ಕುದು. ಇದರಿಂದ, 'ಅಹರಹಃ', ಮೊದಲಾದುವು ಸಂಸ್ಕೃತಗಳು ; ಅವುಗಳು 'ಅಹರಹಂ' ಮೊದಲಾದ ರೂಪಗಳನ್ನೊಂದಿದಲ್ಲಿ ಸಮಸಂಸ್ಕೃತಗಳೆನ್ನಿಸುವುವು—ಎಂಬ ಭಾವನೆ ನೆಲೆಗೊಳ್ಳುತ್ತಿದೆ.[1]

---

[1] ಮತ್ತಿನವನಾದರೂ ಈ ಸಮಸಂಸ್ಕೃತವನ್ನು ತನ್ನ ದೃಷ್ಟಿಯಲ್ಲಿ ಕೂಲಂಕಷವಾಗಿ ವಿವೇಚಿಸಿ ನಿರ್ಧಾರಕ್ಕೆ ಬಂದವನೆಂದರೆ ಕೇಶಿರಾಜನು. ಆ ನಿರ್ಧಾರವು ಈ ಗ್ರಂಥಕಾರನ ಹಜ್ಜೆಯಲ್ಲಿಯೇ ನಡೆದುದೋ ಎಂಬುದನ್ನೂ ಒಂದಿಷ್ಟು ವಿಚಾರಿಸುವ. ಅವನು, ತನ್ನ 'ಶಬ್ದಮಣಿದರ್ಪಣ'ದ ಸೂತ್ರ ೮೦ರಿಂದ ಸೂತ್ರ ೮೭ರ ವರೆಗೆ, ಎಂದರೆ ಎಂಟು ಪದ್ಯಗಳಿಂದ, ಸಮಸಂಸ್ಕೃತ ಲಿಂಗದ ಸ್ವರೂಪವನ್ನು ಹೀಗೆ ನಿರೂಪಿಸುತ್ತಾನೆ—

'ಸಂಖ್ಯಾವ್ಯಯರಹಿತವಾದ ನಾಮಪದ ಪ್ರಕೃತಿಗಳನ್ನು ಎತ್ತಿಕೊಂಡು ಅದಕ್ಕೆ 'ಸಮಸಂಸ್ಕೃತ ಲಿಂಗ' ಎಂದು ಹೆಸರಿಡುತ್ತಾರೆ (ಶ.ಮ.ದ. ಸೂತ್ರ ೮೦). ಉದಾ : ಕಾಮ, ಭೀಮ ಇತ್ಯಾದಿ. ಅವ್ಯಯ ತ್ಯದಾದಿ ಶತೃ ಇಂತಗಳು (ಸಮಸಂಸ್ಕೃತವೆನ್ನಿಸಲಿರುವ ಮುಂದಿನ) ಸಂಸ್ಕೃತ ಪದಗಳೊಡನೆ ಸಮಾಸವಡೆದು ಸೇರಿಕೊಳ್ಳುತ್ತವೆ, ಸ್ವತಃ ಲಿಂಗವಾಗವು (ಸೂ. ೮೧).

ಮೇಲೆ ಸೂಚಿಸಿದ ಅವ್ಯಯಗಳನ್ನು 'ಅಸಹಾಯಂಗಳಾಗಿ', ಎಂದರೆ ಸಮಾಸದಲ್ಲಿ ಬೆರಸದೆ ಸ್ವತಂತ್ರವಾಗಿ, ಕನ್ನಡದಲ್ಲಿ ಬೆರಸಲಾಗದು ಎಂದು 'ಕವಿರಾಜಮಾರ್ಗ'ಕಾರನೇ

---

ಉದಾ: ಅಂತರ್(ಃ) ಬಹಿರ್(ಃ)—ಇತ್ಯಾದಿ ಸಹಜಾವ್ಯಯಗಳು ಸಮಸಂಸ್ಕೃತ ಲಿಂಗಗಳಾಗವು. ಆದರಿಂದ ಅವುಗಳಿಗೆ 'ಮ್—ಅಮ್' ಮೊದಲಾದ ನಾಮಪ್ರತ್ಯಯಗಳನ್ನು ಹತ್ತಿಸಲಾಗದು. ಆದರೆ, 'ಅಂತರ್ಮುಖ, ಬಹಿರಂಗ' ಮೊದಲಾದುವು ಸಮಸಂಸ್ಕೃತ ಲಿಂಗಗಳೆನಿಸುವುವು. ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿ ಅವುಗಳನ್ನು 'ಅಂತರ್ಮುಖಂ, ಅಂತರ್ಮುಖನಂ' ಮೊದಲಾಗಿ ಪ್ರಯೋಗಿಸಬಹುದು. ತ್ಯದಾದಿಗಳಾದ ಸರ್ವನಾಮಗಳೂ ಅದರಂತೆಯೇ. 'ತ್ವದ್, ತದ್' ಮೊದಲಾದುವು ಕನ್ನಡದಲ್ಲಿ ಲಿಂಗಗಳಲ್ಲ. 'ತತ್ ಕಥನಂ', 'ತದ್ ವಚನಂ', 'ಏತತ್ಸೌಖ್ಯದಿಂ' ಮೊದಲಾಗಿ ಕನ್ನಡ ಪ್ರತ್ಯಯಗಳೊಡನೆ ಆ 'ತತ್ ಕಥನ' ಮೊದಲಾದ 'ಲಿಂಗ'ಗಳನ್ನು ಪದಗಳನ್ನಾಗಿ ಮಾಡಬಹುದು. 'ಕ್ವಣತ್', 'ಝಣತ್' ಮೊದಲಾದ ಶತೃ ಇಂತಗಳೆಂಬ ಕೃದಂತಗಳೂ ಹಾಗೆಯೇ–ಕ್ವಣತ್ಕಂಕಣ ಮೊದಲಾದ ಸಮಾಸರೂಪಗಳನ್ನೊಂದಿದ ಮೇಲೆ ಲಿಂಗಗಳೆನ್ನಿಸುತ್ತಿವೆ; ಪ್ರತ್ಯಯಯೋಜನಾನಂತರ 'ಕ್ವಣತ್ಕಂಕಣಂ' ಮುಂತಾಗಿ ರೂಪುಗೊಂಡು ಪದಗಳಾಗುತ್ತವೆ. 'ಏಕ', 'ದ್ವಿ', 'ತ್ರಿ' ಮುಂತಾದ ಸಂಖ್ಯಾವಾಚಕಗಳು ಸಮಾಸಯುತವಾಗಿದ್ದರೆ ಅಥವಾ ಪ್ರತ್ಯಯಾಂತವಾಗಿದ್ದರೆ, ಲಿಂಗವೆನ್ನಿಸುವುವು. ಮಾತ್ರವಲ್ಲ; ಆಕಾರಾಂತ ಪದಗಳು ಕೆಲವು ಎಕಾರಾಂತಗಳಾಗಿ, ಕೆಲವು ಅಕಾರಾಂತಗಳಾಗಿ ಮಾರ್ಪಟ್ಟು ಲಿಂಗಗಳೆನ್ನಿಸುತ್ತಿವೆ. ಕ್ರಮವಾಗಿ, ಉದಾ: ಏಕಾಂಗ(ಂ), ದ್ವಿಮುಖ(ಂ) ; ದ್ವಿತಯ(ಂ), ತ್ರಿತಯ(ಂ), ದಶಮ(ಂ) ; ಮಾಲೆ, ಬಾಲೆ ; ಗ್ರೀವೆ, ಗ್ರೀವ(ಂ) ; ಭಿಕ್ಷೆ, ಭಿಕ್ಷ(ಂ) ; ಕಂಧರಾ, ಉಪತ್ಯಕಾ, ಕರುಣಾ ಮೊದಲಾದುವು ಸಂಸ್ಕೃತದಲ್ಲಿ ಆಕಾರಾಂತಗಳಾಗಿದ್ದರೂ ಸಮಸಂಸ್ಕೃತವನ್ನೊಂದುವಲ್ಲಿ 'ಕಂಧರ(ಂ)', 'ಉಪತ್ಯಕ(ಂ)', 'ಕರುಣ(ಂ)' ಎಂದು ಅಕಾರಾಂತತೆಯನ್ನೇ ಪಡೆಯುವುವು (ಸೂ. ೮೨). ಕೆಲವು ಆಕಾರಾಂತಗಳು ಎಕಾರಾಂತಗಳೆನ್ನಿಸಿ, ಈ ಊಕಾರಾಂತಗಳು ಇ ಉಕಾರಾಂತತೆಯನ್ನೊಂದಿ ಸಮಸಂಸ್ಕೃತ ಲಿಂಗಗಳಾಗುವುವು. ಜ್ಯಾ, ಮಾ, ಶ್ರೀ ಮೊದಲಾದ ಏಕಾಕ್ಷರ ಪದಗಳು ಇದ್ದ ರೀತಿಯಲ್ಲೇ ಲಿಂಗಗಳಾಗುವುವು. 'ವಧೆ', 'ಅಭಿಲಾಷೆ'—ಇವು ಸಂಸ್ಕೃತದಲ್ಲಿ ಆಕಾರಾಂತಗಳು. 'ಲಕ್ಷ್ಮಿ', 'ಗೌರಿ'–ಇವು ಮೂಲದಲ್ಲಿ ಈಕಾರಾಂತಗಳು. 'ಸರಯು', 'ಸ್ವಯಂಭು'–ಇತ್ಯಾದಿಗಳು ಆದಿಯಲ್ಲಿ ಊಕಾರಾಂತಗಳು (ಸೂತ್ರ, ೮೩). ಅ—ಇ—ಉ—ಋಕಾರಾಂತಗಳು ಮೊದಲಿನ ರೂಪದಲ್ಲಿಯೇ ಸಮಸಂಸ್ಕೃತ ಲಿಂಗಗಳಾಗುವುವು. ಉದಾ: ಭುವನ(ಂ), ಶ್ರುತಿ, ಪಶು, ಪಿತೃ. ಆದರೆ ಋಕಾರಾಂತಕ್ಕೆ 'ಆರ' ಎಂಬಾದೇಶವಾಗಿ, ದಾತೃ ಶಬ್ದದ ಕಡೆಗೆ ತಕಾರವಾಗಿ, ವಿಧಾತೃ ಶಬ್ದ ತುದಿಯ ಋಕಾರಕ್ಕೆ ರೇಫೆ ಆದೇಶವಾಗಿ ಲಿಂಗವೆನ್ನಿಸುತ್ತದೆ. 'ಆರಾ'ದೇಶಕ್ಕೆ ಸವಿತಾರ(ಂ), ಕರ್ತಾರ(ಂ) ಮೊದಲಾದುವನ್ನು ಪರಾಂಬರಿಸಿಕೊಳ್ಳಬೇಕು. 'ದಾತೃ' ಎಂಬುದು ದಾತ (ಂ) ಎಂಬ ರೂಪವನ್ನು ಪಡೆಯಬಹುದು. ಹಾಗೆ, 'ವಿಧಾತೃ' ಶಬ್ದವು 'ವಿಧಾತ್ರಂ' ಎಂದಾಗುತ್ತದೆ (ಸೂ. ೮೪) ಸ್ವರ್ಗಸ್ಥ 'ಪಿತೃ' ಶಬ್ದಕ್ಕೆ 'ಅರ'ವೂ 'ಸಖಿ' ಶಬ್ದಕ್ಕೆ 'ಅ'ತ್ವವೂ ಆದೇಶವಾಗಿ ಲಿಂಗವೆನ್ನಿಸುವುದು. ಉದಾ: ಪಿತರ(ಂ), ಸಖ(ಂ) (ಸೂ. ೮೫). ಸಂಸ್ಕೃತದ ವ್ಯಂಜನಾಂತ ಲಿಂಗಗಳೊಳಗೆ ಕೆಲವು ಅಕಾರಾಂತವನ್ನು, ಕೆಲವು ದ್ವಿತ್ವಸಹಿತವಾದ ಉಕಾರಾಂತತೆಯನ್ನು, ಇನ್ನು ಕೆಲವು ಅಂತ್ಯಲೋಪವನ್ನು ಪಡೆದು ಕನ್ನಡದಲ್ಲಿ ಲಿಂಗವೆನ್ನಿಸುತ್ತವೆ. ಉದಾ: 'ದಿವ್, ಸ್ರಜ್' ಇತ್ಯಾದಿಗಳು 'ದಿವ(ಂ)', 'ಸ್ರಜ(ಂ)' ಎಂದೂ 'ವಿದ್ಯುತ್', 'ವಾಕ್' ಮೊದಲಾದವು 'ವಿದ್ಯುತ್ತು', 'ವಾಕ್ಕು' ಎಂದೂ 'ರಾಜನ್', 'ಬ್ರಹ್ಮನ್' ಮೊದಲಾದವು 'ರಾಜ(ಂ)' 'ಬ್ರಹ್ಮ(ಂ)' ಎಂದೂ ಕೆಲವು, ಯಶ(ಂ)–ಯಶಸ್ಸು, ತೇಜ(ಂ)–ತೇಜಸ್ಸು ಎಂಬ ರೂಪದ್ವಯದಿಂದಲೂ ಲಿಂಗಗಳಾಗುವುವು (ಸೂ. ೮೬). ಪ್ರಥಮಾ ಬಹುವಚನಗಳ ಕಡೆಯ ವಿಸರ್ಗ

ಹೇಳುತ್ತಾನೆ. ಯಾಕೆಂದರೆ, 'ಅಹರಹಃ', 'ಉಚ್ಚೈಃ' ಇತ್ಯಾದಿ ಶಬ್ದಗಳು ಸಮಾಸದಲ್ಲಿ ಬೆರೆಯದೆ ಮೂಲರೂಪದಿಂದಲೇ ಪ್ರಯುಕ್ತವಾದರೆ, ಅವುಗಳು ಸಮಸಂಸ್ಕೃತ ಶಬ್ದಗಳಲ್ಲ, ಶುದ್ಧಸಂಸ್ಕೃತ ಶಬ್ದಗಳೇ ಆಗಿರುತ್ತವೆ. 'ಸಮಂ ಚ ತತ್ ಸಂಸ್ಕೃತಂ ಚ ಸಮಸಂಸ್ಕೃತಂ' ಎಂಬ ವಿಗ್ರಹವಾಕ್ಯಕ್ಕೆ ಕನ್ನಡದಲ್ಲಿ ಸಮಾನರೂಪದಿಂದಿದ್ದುಕೊಂಡ ಸಂಸ್ಕೃತ, ಎಂದು ಅರ್ಥ.

'ಸಂಸ್ಕೃತ' ಎಂದರೆ ಸಂಸ್ಕೃತಪ್ರತ್ಯಯದಿಂದ ಕೂಡಿದ ಸಂಸ್ಕೃತಪದ. 'ಸಮಸಂಸ್ಕೃತ' ಎಂದರೆ ಕನ್ನಡ ಪ್ರತ್ಯಯದಿಂದ ಕೂಡಿದ ಸಂಸ್ಕೃತ ಪದ. ಇಂಥ ಸಮಸಂಸ್ಕೃತಗಳೊಡನೆ 'ತಳ್ತು ಅಮರ್ದಿರೆ ಕನ್ನಡಮುಂ ಅಱ'ದು ಪೇೞಬಹುದು; ಆದರೆ 'ಇದಂ (ಈ ಕನ್ನಡವನ್ನು) ಬೆರಸಲ್ಕಂ ಆಗದು ಈ ಸಕ್ಕದದೊಳ್' ಎಂದಿಷ್ಟೇ ಭೇದ. ಹಿಂದೆ ದೃಷ್ಟಾಂತಿಸಿದ 'ಬಹಿರಂತರುಪವನಂಗಳೊಳ್ (i, 53) ಎಂದು ಪ್ರಾರಂಭವಾಗುವ ಪದ್ಯದಲ್ಲಿ ಈ ದೋಷವನ್ನು ಗಮನಿಸಬೇಕು. ಇಲ್ಲಿ 'ಉಪವನಗಳ ಹೊರಗೂ ಒಳಗೂ' ಎಂಬ ಅರ್ಥ. 'ಅರ್ಥವತ್ ಸಮಾಸಃ' ಎಂದರೆ 'ಅರ್ಥಾನುಸಾರವಾಗಿ ಸಮಾಸವು ರೂಪುಗೊಳ್ಳಬೇಕು', ಎಂಬುದು ಸಮಾಸಲಕ್ಷಣ. ಮೇಲೆ ಸೂಚಿಸಿದ ಅರ್ಥವು ಆ ರೂಪದಿಂದ ಹೊರಡಲಾರದು; ಅದರಿಂದ, ಆ ರೂಪವು ವ್ಯಸ್ತವಾಗಿದೆಯೆಂಬುದು ವ್ಯಕ್ತವಾಗುತ್ತಿದೆ. 'ಉಪವನಂಗಳೊಳ್ ಬಹಿಃ ಅಂತಃ' ಎಂಬುದೇ ಲೇಖಕನ ಆಶಯವಾಗಿದ್ದರೆ, ಸಂಸ್ಕೃತ ರೂಪದಲ್ಲೇ ಇದ್ದ ಆ ಅವ್ಯಯಗಳು ಸಮಸಂಸ್ಕೃತಾಂಗವೆನ್ನಿಸುವುದೇ ಇಲ್ಲ. ಆದರೆ ಲೇಖಕನ ಆಶಯವೇನೆಂಬುದು, ತಿದ್ದಿ ಕಾಣಿಸಿದ ಮತ್ತಿನ ಪದ್ಯದ 'ಬಹಿರುದ್ಯಾನಾಂತರದೊಳ್' (i, 55) ಎಂಬಲ್ಲಿ ಸ್ಪಷ್ಟವಾಗಿದೆ. ಇಲ್ಲಿ 'ಬಹಿಃ' ಎಂಬ ಅವ್ಯಯವನ್ನು ಹಿಂದೆ ಸೇರಿಸಿ, 'ಅಂತಃ' ಎಂಬ ಅವ್ಯಯವನ್ನು 'ಅಂತರ' ಎಂಬ ಸ್ಥಾನವಾಚಕ ನಾಮಪದಕ್ಕೆ ಮಾರ್ಪಡಿಸಿರುವುದನ್ನು ಎಣಿಸಿಕೊಳ್ಳಬೇಕು. ಮುಂದೆ 'ಅಹರಹಂ', 'ಇತಸ್ತತಂ' ಎಂದಿದೆ. ಹಿಂದಿನ ಭಾಗದಲ್ಲಿ 'ಬಹಿಃ', 'ಅಂತಃ', ಎಂಬ ಅವ್ಯಯಗಳು ವ್ಯಸ್ತಗಳಾಗಿದ್ದರೆ ಅರ್ಥದೋಷವಾಗುವುದು; ಸಮಸ್ತಗಳಾಗಿದ್ದರೆ ಅರ್ಥಯೋಜನೆಯಾಗದು. ಇಲ್ಲಿ 'ಮ್' ಎಂಬ ನಾಮಪದ ಕನ್ನಡ ಪ್ರತ್ಯಯವನ್ನು ಆ ಅವ್ಯಯಗಳಿಗೆ ಸೇರಿಸಿ ಸದೋಷವಾಗಿದೆ. ಹಾಗೆ

---

ವನ್ನುಳಿದು ಸಮಸಂಸ್ಕೃತದ ಏಕವಚನಕೃತ ಲಿಂಗಗಳಾಗುತ್ತವೆ. ಉದಾ : ಯುವಾನಃ (ಯುವಕರು), ವಿದ್ವಾಂಸಃ (ವಿದ್ವಾಂಸರು), ಶ್ರೀಮಂತಃ (ಐಶ್ವರ್ಯವಂತರು), ಮೊದಲಾದವು ಕಡೆಯ ವಿಸರ್ಗವನ್ನುಳಿದು 'ಯುವಾನ(೦),' 'ವಿದ್ವಾಂಸ(೦)', 'ಶ್ರೀಮಂತ(೦)' ಎಂದು ಮುಂತಾಗಿ ಸಮಸಂಸ್ಕೃತ ಲಿಂಗಗಳಾಗುತ್ತವೆ (ಸೂ. ೮೭).

ಈ ಮೇಲಿನ ವಿವರಣೆಯಿಂದ, ಕೇಶಿರಾಜನ ಅಭಿಪ್ರಾಯಕ್ಕನುವಾಗಿ, ಅವನ ಕಾಲದ ಕಾವ್ಯಮಾರ್ಗದೊಳಗಿನ ಸಮಸಂಸ್ಕೃತ ಪದಸ್ವರೂಪವು ಸಿದ್ಧವಾಗುತ್ತಿದೆ. ಕೇಶಿರಾಜನು ವಿಸ್ತರಿಸಿದಷ್ಟು ವಿಸ್ತರವಾದ ಸಮಸಂಸ್ಕೃತಸ್ವರೂಪ ವಿವೇಚನೆಯನ್ನು 'ಕವಿರಾಜಮಾರ್ಗ'ಕಾರನು ಮಾಡಿಲ್ಲ. ಆ ಹಿಂದಿನ ಕಾಲದಲ್ಲಿ ಆ ವಿಚಾರವು ಇಷ್ಟು ವಿಸ್ತಾರವಾಗಿ ನೆಲೆಗೊಳ್ಳದಿದ್ದುದೇ ಅದಕ್ಕೆ ಕಾರಣವಿರಬೇಕು. ಆದರೆ, ಕೇಶಿರಾಜನು 'ಕವಿರಾಜಮಾರ್ಗ'ಕಾರನಿಂದ ಲಕ್ಷಿತವಾದ ಸಮಸಂಸ್ಕೃತ ಸ್ವರೂಪವನ್ನು ಖಂಡಿಸಲಿಲ್ಲ; ಅದನ್ನೇ ವ್ಯಾಪಕವಾಗಿ, ವಿಶದವಾಗಿ ವಿವೇಚಿಸಿದ್ದಾನೆ.

ಕನ್ನಡ ಪ್ರತ್ಯಯಗಳನ್ನು ಸಂಸ್ಕೃತಾವ್ಯಯಗಳಿಗೆ ಸೇರಿಸಲಾಗದು ಎಂಬ ಭಾವನೆಯನ್ನೇ ಗ್ರಂಥಕಾರನು 'ಅವ್ಯಯಂಗಳ್ ಅಸಹಾಯಂಗಳ್' ಎಂದು ಸೂಚಿಸಿರುವುದು. ಅವುಗಳು, ಹಿಂದೆ ನಿರೂಪಿಸಿದಂತೆ ಸಮಸ್ತಗಳಾಗಿ ಸಮಸಂಸ್ಕೃತಗಳಿಗೆ ಸಹಾಯಕಗಳಾಗಬಹುದಲ್ಲದೆ, ಅವುಗಳಿಗೆ ಈ ಬಗೆಯ ಕನ್ನಡ ಪ್ರತ್ಯಯಗಳ ಸಹಾಯವನ್ನಿತ್ತರೆ ದೋಷವೇ ಸರಿ. ಅವ್ಯಯ ಎಂಬುದು ವಿಭಕ್ತಿ ಪ್ರತ್ಯಯಾದಿಗಳ ಸಂಬಂಧವನ್ನುಳಿದ ಏಕರೂಪವಾಗಿರಬೇಕೆಂದಲ್ಲವೆ ವ್ಯಾಕರಣ ಮಾರ್ಗ? 'ಸದ್ಯದಲ್ಲಿ', 'ಇಹವನ್ನು' ಎಂದು ಮೊದಲಾಗಿ ಸಂಸ್ಕೃತಾವ್ಯಯಗಳಿಗೆ ಕನ್ನಡಪ್ರತ್ಯಯವನ್ನು ಹತ್ತಿಸುವ ದೋಷಯುತವಾದ ದೇಸಿಯ ದಾರಿ, ಈಗಿನ ಕಾಲದಲ್ಲಿರುವುದು ಅಂದಿನಿಂದಲೇ ಹರಿದುಬಂದುದಾಗಿ ಭಾವಿಸಬೇಕು. ಮತ್ತಿನ 'ಸಹಸಾ', 'ಅಹೋ' ಎಂಬ ಅವ್ಯಯಗಳ ಪ್ರಯೋಗವು 'ಬಹಿಃ', 'ಅಂತಃ' ಎಂಬಂತೆ ಅಮಾರ್ಗವು. ಆದರೆ ಪದ್ಯದೊಳಗೆ 'ಆ ಪರಭೃತಂಗಳ್ (ಅವು+ಪರಭೃತಂಗಳ್), 'ಉಲಿವ ರವಂಗಳ್' (ಉಲಿವ + ರವಂಗಳ್) ಎಂಬ ಪ್ರಯೋಗಗಳಿವೆ. ಇಂಥ ಪ್ರಯೋಗಗಳು, ಎಂದರೆ ಹೀಗೆ ಕನ್ನಡ ಸಮಸಂಸ್ಕೃತಗಳನ್ನು ಸಮಾಸವೆಸಗಿದುವುಗಳು, ಈ ಗ್ರಂಥದಲ್ಲಿ ಅಲ್ಲಲ್ಲಿ ತೋರುತ್ತಿವೆ. ಆದರಿಂದ ಈ ಬಗೆಯ ಸಮಾಸಗಳು ದುಷ್ಟಗಳಲ್ಲವೆಂಬಲ್ಲಿ ಯಾವ ಸಂದೇಹವೂ ಇಲ್ಲ. 'ಪ್ರಕಟಂ ಮಾಡು' ಇತ್ಯಾದಿ ಕ್ರಮದಲ್ಲಿ ಇದೇ ಗ್ರಂಥದಲ್ಲಿ ತೋರುವ ನಿರ್ದುಷ್ಟ ಸಮಸಂಸ್ಕೃತ ಪದಪ್ರಯೋಗ ಪದ್ಧತಿಯನ್ನೂ ಭಾವಿಸಬೇಕು. ಹೀಗೆ ಮಾರ್ಗಾನುಸಾರವಾಗಿ 'ಸಮಸಂಸ್ಕೃತಂಗಳೊಳ್ ತಳ್ತು ಅಮರ್ದಿರೆ' ಕನ್ನಡವನ್ನು ಸಮಾಸವೆಸಗಬಹುದು ಎಂಬುದು 'ಅಱಿದು ಪೇೞ್ಗೆ' ಎಂಬ ಮಾತಿನಿಂದ ಸ್ಫುಟವಾಗುತ್ತಿದೆ. ಮುಂದೆ ದೋಷವನ್ನು ತಿದ್ದಿ ದೃಷ್ಟಾಂತಿಸುವ ಪದ್ಯಕ್ಕೆ ಪೀಠಿಕೆಯಾಗಿ ಹೇಳಿದ ಲಕ್ಷಣಭಾಗವೂ ನಮ್ಮೆಣಿಕೆಯನ್ನು ಆಧರಿಸುತ್ತಿದೆ:

ವಿದಿತ ಸಮಸಂಸ್ಕೃತೋದಿತ
ಪದಂಗಳೊಳ್ ಪುದಿದು ಬೆರಸಿ ಬರೆ ಕನ್ನಡದೊಳ್
ಮುದಮನವು ತರ್ಕುಮತಿಶಯ
ಮೃದಂಗ ಸಂಗೀತಕಾದಿ ಮಧುರ ರವಂಬೊಲ್ —(i, 54)

ಇದರ ಮುಂದೆ ತಿದ್ದಿ ಬರೆದ 'ಬಹಿರುದ್ಯಾನಾಂತರದೊಳ್' ಎಂಬ ಪದ್ಯದಲ್ಲಿರುವ 'ಅಹರ್ನಿಶಂ' ಎಂಬ ಅವ್ಯಯ ಪದವನ್ನು ನೋಡಿರಿ. ಇದು ಸಂಸ್ಕೃತದಲ್ಲಿ ಇದೇ ರೂಪದಲ್ಲಿದೆ. ಆದರಿಂದ ಸಮಸಂಸ್ಕೃತತ್ವಕ್ಕೆ ಭಂಗವಾಯಿತು ಎನ್ನಬಾರದು. 'ಜ್ಞಾನಂ, ದಾನಂ, ಮುಖಂ' ಇತ್ಯಾದಿ ನಪುಂಸಕ ಲಿಂಗ ವಾಚಕಗಳೂ ಸಂಸ್ಕೃತ ಕನ್ನಡಗಳ ಏಕವಚನದಲ್ಲಿ ಏಕರೂಪವಾಗಿಯೇ ಇಲ್ಲವೆ? ಆದರೆ ಆಯಾ ಭಾಷೆಗಳನ್ನೊಂದಿ ಬರುವಲ್ಲಿ ತೋರುವ ಪ್ರತ್ಯಯಗಳು ಆಯಾ ಭಾಷೆಗಳವು ಎಂಬುದನ್ನಿಲ್ಲಿ ಮರೆಯಲಾಗದು. ಹಾಗಾದರೆ 'ಅಹರಹಂ', 'ಇತಸ್ತತಂ' ಎಂದಿರುವಲ್ಲಿ ಹೇಗೆ ತಪ್ಪು? ಎನ್ನಬಹುದು. ಅಲ್ಲಿ ವಿಸರ್ಗವನ್ನು ತೆಗೆದು ಕನ್ನಡದ ಬಿಂದುವನ್ನು ಸೇರಿಸಿದೆ. ಇಲ್ಲಿ ಹಾಗಲ್ಲ; ಸಂಸ್ಕೃತದಲ್ಲಿಯೇ ಬಿಂದುವಿದ್ದು ಕನ್ನಡದ ಬಿಂದುವೋ ಎಂಬ ಭ್ರಮೆಯನ್ನುಂಟುಮಾಡುತ್ತಿದೆ. ಇಂಥ

ದೃಷ್ಟಾಂತವು ಗ್ರಾಹ್ಯವೆಂದು ಗ್ರಂಥಾದಿಯಲ್ಲಿ ಸರಸ್ವತಿಯನ್ನು ಸ್ತುತಿಸುವ ಪದ್ಯದೊಳಗಿನ 'ಚಿರಂ ದೇವಿ ಸರಸ್ವತಿ. . . .' (i, 3) ಎಂಬ ಭಾಗದಲ್ಲಿರುವ 'ಚಿರಂ' ಪದದಿಂದಲೂ ಸಿದ್ಧವಾಗುತ್ತಿದೆ.

ಸಂಸ್ಕೃತವು ಸಮಸಂಸ್ಕೃತಕ್ಕಿಂತ ಒಂದಿಷ್ಟು ಭಿನ್ನವೆಂಬುದು ಮೇಲಿನ ವಿವೇಚನೆಯಿಂದಲೇ ಸಿದ್ಧವಾಗುತ್ತಿದೆ. ಇನ್ನಷ್ಟು ಸ್ಫುಟವೆಸಗಬೇಕಾದರೆ ಹೀಗೆ ಹೇಳಬಹುದು. ಸಂಸ್ಕೃತ ನಾಮ ಕ್ರಿಯಾ ಪ್ರತ್ಯಯಗಳಿಂದ ಕೂಡಿದುವುಗಳೂ ಸಮಸಂಸ್ಕೃತದಲ್ಲಿ ಸಮಾಸ ನಡೆದು ಹಿಂದೆ ಸೇರಿದುವುಗಳೂ ಸಂಸ್ಕೃತಪದಗಳೇ. ಅರ್ಥಾನುಸಾರವಾದ ತಂತಮ್ಮ ವಿಭಕ್ತಿಪ್ರತ್ಯಯಗಳು ಲೋಪವಾಗಿ ಪದಗಳು ಒಡಗೂಡುವುದಕ್ಕೆ 'ಸಮಾಸ' ಎಂಬ ಹೆಸರಲ್ಲವೆ? 'ನರಪತಿತನಯನಂ' ಎಂಬುದು ಸಮಸ್ತ ಪದ. ಕನ್ನಡ ವ್ಯಾಕರಣಕಾರರು ಈ ಪದದ ವಿಗ್ರಹವಾಕ್ಯವನ್ನು 'ನರಪತಿಯ + ತನಯಂ—ನರಪತಿತನಯಂ; ನರಪತಿತನಯಂ + ಅಮ್—ನರಪತಿತನಯನಂ' ಎಂದು ವಿವರಿಸಬಹುದು. ಆದರೆ ಶಬ್ದಶಾಸ್ತ್ರಾನುಸಾರವಾಗಿ ನೋಡಿದಲ್ಲಿ, 'ನರಪತಿ' ಎಂಬ ಹಿಂದಣ ಪದವು 'ತನಯ' ಎಂಬ ಮುಂದಣ ಪದದೊಡನೆ ಸಂಸ್ಕೃತವ್ಯಾಕರಣೋಕ್ತ ಕ್ರಮದಿಂದಲೇ ಸೇರಿದುದಲ್ಲದೆ ಕನ್ನಡವ್ಯಾಕರಣ ನಿಯಮದಂತಲ್ಲ; ಅದರಿಂದ ಆ ಎರಡು ಪದಗಳ ವಿಗ್ರಹವಾಕ್ಯ ರಚನೆಯನ್ನು ಸಂಸ್ಕೃತೋಕ್ತ ಕ್ರಮದಿಂದಲೇ ಮಾಡಬೇಕು. ಹಾಗೆ ಮಾಡಿದಲ್ಲಿ 'ನರಪತೇಃ ತನಯಃ—ನರಪತಿತನಯಃ' ಎಂದಾಗುತ್ತಿದೆ. ಆ ಮೇಲೆ ಕಡೆಯ ಪ್ರತ್ಯಯವಾದ ವಿಸರ್ಗವನ್ನು ಲೋಪಿಸಿ ಸಮಸಂಸ್ಕೃತಲಿಂಗವೆಸಗಬೇಕು; ಮತ್ತೆ 'ಅಮ್' ಎಂಬ ದ್ವಿತೀಯಾ ವಿಭಕ್ತಿ ಪ್ರತ್ಯಯವನ್ನು ಕೂಡಿಸಿದಲ್ಲಿ 'ನರಪತಿತನಯನಂ' ಎಂದಾಗುತ್ತಿದೆ. ಇದು ಬರಿಯ ಶಬ್ದಶಾಸ್ತ್ರದ ಪದ್ಧತಿಯಾದರೂ ಆ ಮಾರ್ಗವನ್ನು ಮರೆಯಬಾರದು. ಈ ವಿಷಯವನ್ನು ಗ್ರಂಥಕಾರನೇ ಅತಿಸಂಗ್ರಹವಾಗಿ ಹೊಳೆಯಿಸುವ ಬಗೆಯನ್ನವಲೋಕಿಸಿರಿ:

ನೆಗೞ್ದಿರ್ದ ಕನ್ನಡಂಗಳೊ
ಳಗಣಿತ ಗುಣವಿದಿತ ಸಂಸ್ಕೃತೋಕ್ತ ಕ್ರಮಮಂ
ಬಗೆದೊಂದುಮಾಡಿ ಪೇೞ್ದೊಡೆ
ಸೊಗಯಿಸುಗುಂ ಕಾವ್ಯಬಂಧಮೆಂದುಮಸಂದಷ್ಯಂ —(i, 56)

ಇಲ್ಲಿ ತೋರುವ 'ನೆಗೞ್ದಿರ್ದ ಕನ್ನಡಂಗಳೊಳ್' ಎಂದರೆ 'ಪ್ರಸಿದ್ಧವಾದ ಸಮಸಂಸ್ಕೃತಗಳೆನ್ನಿಸಿದ ಕನ್ನಡ ಮಾರ್ಗೀಯ ಪದಗಳಲ್ಲಿ' ಎಂಬ ಅರ್ಥ. ಅಂಥ ಪದಗಳು ಅನೇಕವಾಗಿರುವುದರಿಂದಲೇ 'ಕನ್ನಡಂಗಳೊಳ್' ಎಂದು ಬಹುವಚನ ಪ್ರಯೋಗವನ್ನೆಸಗಿರಬೇಕು. ಹಾಗಿಲ್ಲದೆ, 'ದೇಸಿಗನ್ನಡಂಗಳೊಳ್' ಎಂದಾಗುತ್ತಿದ್ದರೆ ಅವುಗಳ ವಿವೇಚನೆಗೆ 'ಅಗಣಿತ ಗುಣವಿದಿತ ಸಂಸ್ಕೃತೋಕ್ತ ಕ್ರಮಮಂ ಬಗೆ'ವುದಾದರೂ ಯಾಕೆ? ಇದನ್ನೆಲ್ಲ ಭಾವಿಸಿಕೊಂಡಲ್ಲಿ, ಕೇಶಿರಾಜನ 'ಸಮಸಂಸ್ಕೃತ' ಸ್ವರೂಪವಿವೇಚನೆ 'ಕವಿರಾಜಮಾರ್ಗ'ಕಾರನ ಆಶಯವನ್ನೇ ವಿಸ್ತರಿಸಿದೆ ಎಂದು ನಮ್ಮ ಭಾವನೆ.

'ತತ್ಸಮ'ಪದ ವಿಚಾರವು 'ಕವಿರಾಜಮಾರ್ಗ'ದಲ್ಲಿ ತೋರುವುದಿಲ್ಲ. ಅದರಿಂದಲೆಂದೇ

ತೋರುತ್ತಿದೆ—ಸುತ್ತಿನ ಕೆಲಮಂದಿ ವಿದ್ವಾಂಸರೂ ಪ್ರಕೃತಕಾಲದ ಕೆಲವರೂ 'ಸಮಸಂಸ್ಕೃತ', 'ತತ್ಸಮ'ಗಳೆರಡೂ ಅಭಿನ್ನಗಳೆಂದು ಭಾವಿಸಿರುವುದು. ಆದರೆ ಕೇಶಿರಾಜನು 'ತತ್ಸಮ'ಗಳನ್ನು ಬೇರೆಯಾಗಿ ತನ್ನ ಗ್ರಂಥಾಂತ್ಯದಲ್ಲಿ ನಿರೂಪಿಸಿದ್ದಾನೆ. ಕನ್ನಡದಲ್ಲಿ ಸಮಾನ ಪ್ರಕೃತಿ ರೂಪದಿಂದ ಪ್ರಯೋಗಿಸಲ್ಪಡುವ ಸಂಸ್ಕೃತವು (ಪ್ರಕೃತಿಯು) ಸಮಸಂಸ್ಕೃತವೆನ್ನಿಸುತ್ತಿದೆಯಷ್ಟೆ. 'ತತ್ಸಮ' ಎಂದರೆ ಹಾಗಲ್ಲ. 'ತೇನ (ಸಂಸ್ಕೃತೇನ) ಸಮಂ (ಸಮಾನರೂಪಂ)', ಎಂದರೆ ಸಂಸ್ಕೃತ ಲಿಂಗರೂಪದೊಡನೆ ಸಮಾನವಾದ ರೂಪದ ದೇಶ್ಯಪ್ರಕೃತಿ ವರ್ಗ. ಅಂಥ 'ಮಣಿ, ಮಂಚ, ಗಲ್ಲ, ಅಟ್ಟ' ಮೊದಲಾದುವು ಸಂಸ್ಕೃತ ಪ್ರಬಂಧಗಳಲ್ಲಿಯೂ ಉಚಿತ ಪ್ರತ್ಯಯಗಳೊಡನೆ ಬಳಕೆಗೊಂಡಿವೆ. ಆದರೂ ಅವುಗಳು ಸ್ವಭಾವತಃ ದೇಸಿಗಳಾದುದರಿಂದಲೇ ಅವುಗಳಲ್ಲಿ ಅರಿಸಮಾಸದೋಷಕ್ಕೆಡೆಯಿಲ್ಲ. ಈ ವಿಷಯವನ್ನು ಒಂದಿಷ್ಟು ವಿಸ್ತರವಾಗಿ ನಮ್ಮ 'ಸೊಬಗಿನ ಬಳ್ಳಿ' ಎಂಬ ಅಚ್ಚಗನ್ನಡಗಬ್ಬದ ಮುನ್ನುಡಿಯಲ್ಲಿ ವಿಮರ್ಶಿಸಿದ್ದೇವೆ.[1] ಆ ನಮ್ಮ ಅಭಿಪ್ರಾಯವು ಈಗಲೂ ಬದಲಾಗಿಲ್ಲ. ಇಲ್ಲಿ ಅದನ್ನು ವಿವರಿಸಬೇಕಾಗಿಲ್ಲವಾದರೂ ಈ 'ಸಮಸಂಸ್ಕೃತ'ವೇ ಆ 'ತತ್ಸಮ' ಎಂಬ ರೂಪವನ್ನು ಆ ಮೇಲೆ ಪಡೆದಿರಬೇಕು ಎಂಬ ಭಾವನೆ ವಾಚಕರೆದೆಯಲ್ಲಿ ಬೇರೂರಬಾರದು, ಎಂಬುದಕ್ಕಾಗಿ ಇಷ್ಟನ್ನು ನಿವೇದಿಸಿಕೊಂಡುದು.

'ಕವಿರಾಜಮಾರ್ಗ'ಕಾರನು ಸಂಸ್ಕೃತವನ್ನೂ ಕನ್ನಡವನ್ನೂ 'ಸಮಾಸೋಕ್ತಿಗಳೊಳ್' ಬೆರಸಬಾರದು, ಸಮಸಂಸ್ಕೃತದೊಡನೆ ಎಲ್ಲ ಕಡೆಯಲ್ಲಿಯೂ ಕನ್ನಡವನ್ನು ಬೆರಸಬಹುದು ಎನ್ನುತ್ತಾನಲ್ಲದೆ, 'ಸಮಾಸ'ವೆಸಗಬಹುದು ಎನ್ನುವುದಿಲ್ಲ. ಆ ಬೆರಸುವಿಕೆಯನ್ನು ದೃಷ್ಟಾಂತದೊಡನೆ ಗ್ರಂಥಕಾರನು ಸೂಚಿಸಿದ್ದಾನೆ. 'ಬೆರಸುವಿಕೆ'–'ಸಮಾಸ' ಎಂದರೆ ಅಭಿನ್ನಾರ್ಥವಿರುವುದೇನೋ ನಿಜ; ಆದರೂ ಹಿಂದಿನದು ಮುಂದಿನ 'ಸಮಾಸ' ಎಂಬ ಪದದಷ್ಟು ನಿಷ್ಕೃಷ್ಟಾರ್ಥವನ್ನು ಕೊಡುವುದಿಲ್ಲ, ಎಂಬುದು ನುರಿತ ವಾಚಕರಿಗೆ ಮನನವಾಗದಿರಲಾರದು. ಮಾತ್ರವಲ್ಲ, ಸಮಸಂಸ್ಕೃತ ಲಿಂಗಗಳಿಗೆ ಮುಂದಿನ ಕನ್ನಡ ಪ್ರತ್ಯಯಗಳನ್ನು (ಉದಾ : ತನಯಂ, ತನಯನಂ ಇತ್ಯಾದಿ), ಕನ್ನಡ ಕೃದಂತ ಕ್ರಿಯಾಪದಗಳನ್ನು (ಉದಾ : ಪ್ರಕಟಂ ಮಾಡಿರೆ, ಪ್ರಕಟಂ ಮಾಡದೆ ಇತ್ಯಾದಿ), ಮತ್ತು ಕನ್ನಡ ಸರ್ವನಾಮ, ಕೃದಂತ, ಗುಣವಚನ, ಸಂಖ್ಯಾ, ಪರಿಮಾಣವಾಚಕಗಳನ್ನು (ಉದಾ : ಈ ರಾಜಂ, ಉಲಿವ ರವಂಗಳ್, ಇನಿಯ ಫಲಂ, ಮೂಲೋಕಂ, ಅನಿತು ಬಲಂ ಇತ್ಯಾದಿ) ಕೂಡಿಸುವಲ್ಲಿ, ಇವುಗಳೊಳಗೆ ಕೆಲವು ಸಮಾಸವರ್ಗದಲ್ಲಿ ಸೇರಿಕೆಯಾಗುವುದೇನೋ ಹೌದು; ಆದರೂ, ಎರಡು ಅಲ್ಲದೆ ಹೆಚ್ಚು ನಾಮಪದಗಳೇ ಒಡಗೂಡಿ ರೂಪಿಸುವ ಪ್ರಸಿದ್ಧ ಸಮಾಸವರ್ಗದಲ್ಲಿ ಸೇರುವುದಿಲ್ಲ. ಅದರಿಂದಲೇ ಸಮಸಂಸ್ಕೃತದೊಡನೆ ದೇಸಿಯಾದ ಕನ್ನಡಪದವು ಮಾರ್ಗಾನುಸಾರವಾಗಿ ಕೂಡಬಹುದು ಎಂಬಲ್ಲೆಲ್ಲ ಎಚ್ಚರಿಕೆಯಿಂದ 'ಬೆರಸಿರೆ, ಬೆರಸಿ ಬರೆ' ಮೊದಲಾದ ಕನ್ನಡ ಪದವನ್ನೇ ಪ್ರಯೋಗಿಸುತ್ತಾನೆ. ಇಷ್ಟನ್ನು ಭಾವಿಸಿಕೊಂಡು ಮುಂದಿನ ಪದ್ಯವನ್ನೀಕ್ಷಿಸಬೇಕು :

1 ಸೊಬಗಿನ ಬಳ್ಳಿ, ಮುನ್ನುಡಿ, ಪುಟ xvi–xix.

ತಱಿಸಂದಾ ಸಕ್ಕದಮುಮ
ನೆಱಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್
ಕುಱಿತು ಬೆರಸಿದೊಡೆ ವಿರಸಂ
ಮಱುಗುವ ಪಾಲ್ಗಳೆಯ ಪನಿಗಳಂ ಬೆರಸಿದವೋಲ್ —(i, 57)

ಇಲ್ಲಿಯ 'ಸಮಾಸೋಕ್ತಿಗಳೊಳ್ ಕುಱಿತು ಬೆರಸಿದೊಡೆ' ಎಂಬ ಹೇಳಿಕೆಯನ್ನು ಒಳಗೊಂಡು ಪರಾಂಬರಿಸಿರಿ. ಇದರಿಂದ 'ಸಮಾಸ', 'ಬೆರಸು' ಎಂಬವುಗಳಲ್ಲಿ ಗ್ರಂಥಕಾರನು ಇರಿಸಿದ ಅರ್ಥವ್ಯತ್ಯಾಸವು ಮಿರುಗುತ್ತಿದೆ. ಹಾಗೆ ಸಮಾಸವೆಸಗಬಾರದು, ಎಂಬುದಕ್ಕೆ 'ಅರಸುಕುಮಾರನಂ', 'ಆಯತತರಕಡೆಗಣ್ಣಿಂದೆ', 'ಕೆಳದಿಸಮೇತಂ', 'ಪರಿಗತನಗೆಯಿಂದೆ', 'ಗುರುನಾಣ್ಭರದಿಂದಂ', 'ಮುಖದಾವರೆಯುಂ'—ಇವನ್ನು ಪದ್ಯಮೂಲಕವಾಗಿ (i, 58) ಉದಾಹರಿಸಿದ್ದಾನೆ. ಮುಂದಿನ ಪದ್ಯದಲ್ಲಿ (i, 59), ಆ ದುಷ್ಟರೂಪಗಳನ್ನೆಲ್ಲ ತಿದ್ದಿ 'ನರಪತಿತನಯನಂ', 'ಆಯತತರಳಾಪಾಂಗದೊಳ್', 'ಕೆಳದಿಯರೊಡನೆ', 'ಪರಿಗತಹಾಸ್ಯದೊಳ್', 'ಗುರುಲಜ್ಜಾಭರದಿಂ', 'ಮುಖಸರಸಿಜಮುಂ'—ಎಂದು ಶುದ್ಧರೂಪಗಳನ್ನು ಕಾಣಿಸಿದ್ದಾನೆ.

## ಪ್ರಮುಖ ದೋಷಸಾಧನಗಳು

ಅಂತೂ ಕನ್ನಡ ಕಾವ್ಯರಚನಾದೋಷದ ಪ್ರಮುಖ ಸಾಧನಗಳೆಂದರೆ ನಾಲ್ಕು—(೧) ಬೇರೆ ಬೇರೆ ರೂಪಗಳಲ್ಲಿರುವ ಅಭಿನ್ನಾರ್ಥಕಗಳಾದ ದೇಸಿಗಳನ್ನು ಆಯಾ ಪ್ರಾಂತದ ಕವಿಗಳು ಮಾರ್ಗೀಯವೆನಿಸುವ ಒಂದು ರೂಪಕ್ಕೆ ತಂದುಕೊಳ್ಳದೆ, ತಂತಮ್ಮಲ್ಲಿ ಬಳಕೆಗೆ ಬಂದ ರೂಪದಲ್ಲಿ ಪ್ರಯೋಗಿಸುವುದು; (೨) ಹಳಗನ್ನಡವನ್ನು ಹಾಗೆಯೇ ಹೊಸಗನ್ನಡ ಕಾವ್ಯಗಳಲ್ಲಿ ಬಳಸುವುದು; (೩) ಸಮಸಂಸ್ಕೃತ ಪದಗಳನ್ನು ಅವುಗಳ ನಿಜಸ್ವರೂಪ ರೀತಿಗಳನ್ನರಿಯದೆ ನಿಯೋಜಿಸುವುದು; ಮತ್ತು (೪) ಸಂಸ್ಕೃತ ಪದಗಳೊಡನೆ ಕನ್ನಡ ಪದಗಳನ್ನು ಸಮಾಸವೆಸಗುವುದು. ಹೀಗೆ ಅಮಾರ್ಗದಲ್ಲಿ ಕಾಲಿಡುವವರು ಆಗಸು ಬಲಹೀನರಾದ ಕವಿಗಳೆಂಬವರು.

ಈ ನಾಲ್ಕು ಬಗೆಯ ಸಾಧನಗಳಿಂದಾಗಿ ತಲೆದೋರುವ ದೋಷಗಳನ್ನು ಗ್ರಂಥಕಾರನು ವಿವೇಚಿಸುತ್ತಾನೆ:

ಶ್ರುತದುಷ್ಟಮರ್ಥದುಷ್ಟಂ
ಶ್ರುತಿಕಷ್ಟಂ ಕಲ್ಪನೋಕ್ತಿಕಷ್ಟಮುಮೆಂದೀ
ಕೃತಕೃತ್ಯಮಲ್ಲವಲ್ಲಭ
ಮತದಿಂ ನಾಲ್ಕಕ್ಕುಮಿಲ್ಲಿ ಕೃತಿದೋಷಂಗಳ್ —(i, 61)

ಈ ದೋಷಗಳೊಳಗೆ ಮೊದಲಿನ ಎರಡು ಕ್ರಮವಾಗಿ ಕಿವಿಯನ್ನೂ ಆ ಪದವಾಚ್ಯವಾದ ಅರ್ಥಪ್ರಸಾರವನ್ನೂ ದೂಷಿಸುವುವು; ಮತ್ತಿನ ಎರಡು ಕ್ರಮವಾಗಿ ಕಿವಿಗೂ ಭಾವನೆಗೂ ಕಷ್ಟವನ್ನೊದಗಿಸುವುವು. ಅಂತೂ ಎರಡು—ದುಷ್ಟರೂಪದೋಷಗಳು; ಎರಡು—ಕಷ್ಟ

ರೂಪದೋಷಗಳು. ಈ ನಾಲ್ಕನ್ನು ಗ್ರಂಥಕಾರನು ಪೂರ್ವಾಚಾರ್ಯನಾದ ಭಾಮಹನಿಗನುವಾಗಿ ನಿರೂಪಿಸಿದ್ದಾನೆ[1]. ಅದರಿಂದ ಇವು ಸಂಸ್ಕೃತ ಕಾವ್ಯಪ್ರಪಂಚಕ್ಕೆ ಮಾತ್ರ ಸೇರಿದುದು ಎನ್ನಬಹುದು. ಇವುಗಳು 'ಕೃತಿಸಾಮಾನ್ಯ ದೋಷಗಳಲ್ಲದೆ ಭಾಷಾನುಸಾರವಾಗಿರುವ ವಿಶಿಷ್ಟ ದೋಷಗಳಲ್ಲ. ಇವುಗಳೇ ಕನ್ನಡ ಕೃತಿಗಳ ಪದವಾಕ್ಯಗಳನ್ನೊಂದಿ ವಿಶಿಷ್ಟಗಳೆನ್ನಿಸುತ್ತಿವೆ. ಆಗಿನ ಕನ್ನಡ ಕಾವ್ಯಗಳೊಳಗಿನ ಆ ದೋಷಗಳನ್ನು ಮುಂದೆ ಕ್ರಮವಾಗಿ ಉದಾಹರಿಸುತ್ತಾನೆ—

**ಶ್ರುತದುಷ್ಟ**

.ನಿಲ್ತೋಳಂ ಬರ್ಪುದು ಸೈ
ತಲ್ತೂರುಂ[2] ದೂರ[ವೋಡಲಾಱ]ರ್ಪೂರಂ[2]
ಕಲ್ತುಲ್ಲಿಂದೋಡುವಮೆ[ೕ]ಂ[3]
ಬಲ್ತುಣ್ಣಿಂ ತಂದ ಕೂೞನೂ ಸಂಗಮದೊಳ್ —(i, 62)

ಇದು ಒಬ್ಬ ಬೇಟೆಗಾರನು ತನ್ನವರಿಗೆ ಹೇಳಿದ ಜಾಗರೂಕತೆಯ ನುಡಿಯಾಗಿ ತೋರುತ್ತದೆ. 'ನಿಲ್ಲು, ತೋಳಗಳು ಬರುವಂತಿದೆ. ಅವುಗಳಿಂದ ತಪ್ಪಿಸಿಕೊಳ್ಳುವುದು ಸುಲಭವಲ್ಲ. ಊರಾದರೋ ದೂರವಾಗಿದೆ; ಓಡಿಬಿಡಲು ಸಾಧ್ಯವಾಗದು. ಒಂದೆಡೆ ಅಡಗಿಕೊಂಡಿದ್ದು, ಪೂರ್ಣವಾಗಿ ಅವುಗಳ ಹೊಲಬನ್ನು ಕಲಿತುಕೊಂಡು ಆ ಮೇಲೆ ಅಲ್ಲಿಂದ ಓಡುವ. ಪ್ರಕೃತ, ತಂದ ಕೂಳಿನ ಬುತ್ತಿಯನ್ನು ಆ ನದೀ ಸಂಗಮದ ಹತ್ತಿರ ಊಟ ಮಾಡಿ ಬಲಿತುಕೊಳ್ಳಿರಿ'—ಇದು ಅನ್ವಯಾರ್ಥ. ಆದರೆ, ಪ್ರಕೃತದ ಪದಯೋಜನಾಕ್ರಮಕ್ಕನುವಾಗಿ ಪದ್ಯವು 'ಶ್ರುತ'ವಾಗುವಲ್ಲಿ ಕವಿಯ ಭಾವನೆಯನ್ನುಳಿದು ಅಸಹ್ಯಾರ್ಥಗಳು ಭಾಸವಾಗುತ್ತಿವೆ. ಅದರಿಂದ ಇದು ಶ್ರುತದುಷ್ಟ.

**ಅರ್ಥದುಷ್ಟ**

ನೆರೆದೂರ್ಧ್ವರೇತನೊಳ್ಪರು
ಹಿರಣ್ಯರೇತೋತಿತೀವ್ರನೊಳ್ ಮುನಿವರನೊಳ್
ಪರಮ ಭಗಸಹಿತೆ ಮುದದಿರೆ
ಪರಿಶ್ರಮಕ್ಕೆನ್ನ ನಿರ್ವಿಶೇಷನೊಳಾಗಳ್ —(i, 63)

---

1 ಶ್ರುತದುಷ್ಟಾರ್ಥದುಷ್ಟೇ ಚ ಕಲ್ಪನಾದುಷ್ಟಮಿತ್ಯಪಿ
ಶ್ರುತಿಕಷ್ಟಂ ತಥೈವಾಹುರ್ವಾಚಾಂ ದೋಷಂ ಚತುರ್ವಿಧಂ
—ಭಾಮಹನ ಕಾವ್ಯಾಲಂಕಾರ (i, 47)

2 ಈ ಭಾಗವು ಡಾ. ಪಾಠಕರ ಪ್ರತಿಯಲ್ಲಿ 'ದೂಡಂರಮೆಡೆತುನಮುರ್ಪೂರಂ' ಎಂದೂ ಮದ್ರಾಸು ಪ್ರತಿಯಲ್ಲಿ 'ದೂಡ (ಂ) ರಮೆಡೆತು (ನೆ) (ಗ) ರ್ಪ್ಪೂರಂ ?' ಎಂಬೂ ಇವೆ. ಇದನ್ನು, ಅರ್ಥವ್ಯಕ್ತಿ ಬಂದಿಷ್ಟಾದರೂ ಒದಗುವಂತೆ ಮೇಲಿನಂತೆ ಮಾರ್ಪಡಿಸಿದೆ.

3 ತೃತೀಯ ಪಾದದಲ್ಲಿ, ಎರಡು ಪ್ರತಿಗಳಲ್ಲೂ ದೀರ್ಘ ಚಿಹ್ನವಿಲ್ಲ.

ಇಲ್ಲಿ ಪದಗಳ ಯೋಜನೆಯಿಂದ ಅಸಹ್ಯತೆಯುಂಟಾಗುವುದಲ್ಲ. ಈ ಸಂದರ್ಭದಲ್ಲಿ ಉಪಯೋಗಿಸಿದ ಪದದ ಅರ್ಥವೇ ಅಸಹ್ಯತಾಕಾರಣ.



### ಶ್ರುತಿ ಕಷ್ಟ

ಪರದರ್ಗಾ ಪಾರ್ವರ್ಗಾ
ದರಸರ್ಗಾ ಕುಡಿಯರಪ್ಪ ನಾಲ್ವರ್ಗಾಗಳ್
ಸ್ಥಿರಗೋಪಾಧ್ಯಾಯಕ್ಷ್ಮಾ
ಪರಿಪಾಲ್ಯ ಕ್ಷೇತ್ರಕರ್ಷಣಂಗಳ್ ಕ್ರಿಯೆಗಳ್ —(i, 64)

ಈ ಕಂದದಲ್ಲಿ ಅರ್ಥದೋಷವಾವುದೂ ಇಲ್ಲ ; ಆದರೆ ಬುಡದಿಂದ ಕಡೆವರೆಗೆ ರೇಫಾಕ್ಷರ ಪುಂಜವಾಗಿ ಎರಡನೇ ಭಾಗದಿಂದ ಕ್ಷ್ಮಾ—ಕ್ಷೇತ್ರ—ಕರ್ಷ—ಕ್ರಿ ಎಂಬ ಸಂಯುಕ್ತ ಪರುಷಗಳಿಂದ ನಿಬಿಡವೆನ್ನಿಸಿದುದರಿಂದಾಗಿ ಶ್ರುತಿಗೆ ಕಷ್ಟವಾದುದು ವಿಶದವಾಗಿದೆ.

### ಕಲ್ಪನೋಕ್ತಿ ಕಷ್ಟ

ಮಸಗಿ ಬೆಸದಿರ್ದು ವಿವರಮ
ನಸಿಯುದಱಿಡೆ(ಯೊ)ತ್ತಿ ಪೊಕ್ಕು ಕೆಲನಂ ಕೊರ್ಬು
ತ್ತೆಸೆದು ವಿದಿರ್ದಾರ್ದುಮೆಱೆ
ದ್ದಿಸಮುಂಜಸನಿಕ್ಕಿ ಮಿಕ್ಕನರಿವಾಹಿನಿಯಂ —(i, 65)

'ಅಸಿಯುದಱ' ಎಂದರೆ 'ಸೂಕ್ಷ್ಮದ್ವಾರ'. ಕೋಟಾವಳಯವನ್ನು ಮುರಿಯದೆ ಆ ತೂತ (ವಿವರವ)ನ್ನು ಬೆಸೆವುದು, ಹೊಗುವುದು, ಬಿದಿರ್ವುದು, ಅದರೊಳಗೆ ಎಸೆವುದು—ಇವೆಲ್ಲ ಕಲ್ಪನೆ ಮಾಡಲಿಕ್ಕೆ ಕಷ್ಟ, ಅಲ್ಲವೇ ಅಸಾಧ್ಯವೇ ಸರಿ. ನಾಲ್ಕು ಬಗೆಯ ಕಾವ್ಯ ದೋಷಗಳನ್ನೂ ಇದೇ ರೀತಿಯವುಗಳನ್ನೂ 'ಅಸಾಧುಜನ ಸಂಗತಿ'ಯನ್ನು ಹೇಗೋ ಹಾಗೆ ತೊರೆಯತಕ್ಕುದು ಎಂದು ಹೇಳುತ್ತಾನೆ. ಈ ನಾಲ್ಕು ಬಗೆಯ ಪ್ರಮುಖ ದೋಷಗಳಾದರೂ ವಿಶಿಷ್ಟ ಸಂದರ್ಭದಲ್ಲಿ ಮಾತ್ರ 'ಅದೋಷಂ' ಎಂಬುದನ್ನು ಹೀಗೆ ತಿಳಿಸುತ್ತಾನೆ :

ಮಿಗೆ ದುಷ್ಕರ ಕಾವ್ಯಂಗಳೊ
ಳಗರ್ಹಿತ ಪ್ರಾಯಮಕ್ಕುಮಾ ಶ್ರುತಿಕಷ್ಟಂ
ಪಗರಣದೊಳುಱಿದ ಮೂಱುಂ
ನಗಿಸುಗುಮಪ್ಪುದಱಿನಲ್ಲಿಗಂತವದೋಷಂ —(i, 67)

'ಸರ್ವತೋಭದ್ರ', 'ಚಕ್ರಬಂಧ' ಮೊದಲಾದ ಚಿತ್ರ ಕಾವ್ಯಗಳಿಗೆ 'ದುಷ್ಕರ ಕಾವ್ಯ'ಗಳೆಂದು ಹೆಸರು. ಅಂಥವುಗಳಲ್ಲಿ 'ಶ್ರುತಿ ಕಷ್ಟ' ಎಂಬುದು ದೋಷವಾಗಿ ಗಣಿಸಲ್ಪಡುವುದೇ ಇಲ್ಲ. ಯಾಕೆಂದರೆ, ಅಂಥವುಗಳ ರೂಪರಚನೆ ನೇರ್ಪಡಬೇಕಾದರೆ, ಮುಕ್ಕಾಲು ಪಾಲಿಗಿಂತಲೂ ಹೆಚ್ಚಾಗಿ ಇಂಥ ಶ್ರುತಿಕಷ್ಟಾಕ್ಷರಗಳ ಯೋಜನೆ ಆಗಲೇ ಬೇಕಾಗುತ್ತಿದೆ. 'ಪಗರಣ' ಎಂಬುದು ದೃಶ್ಯಕಾವ್ಯ ಭೇದಗಳೊಳಗೆ ಬಂದಾಗ 'ಪ್ರಕರಣ'ದ ತದ್ಭವರೂಪ.

ಪ್ರಕರಣದಲ್ಲಿ ಶಕಾರಾದಿಗಳ ಹಾಸ್ಯಪ್ರಧಾನವಾದ ದೃಶ್ಯಗಳು ಬರಬೇಕಾಗುತ್ತವೆ ಯೆಂಬುದು 'ಮೃಚ್ಛಕಟಿಕ'ವನ್ನೋದಿದವರಿಗೆ ವಿದಿತವಾದ ಸಂಗತಿಯಷ್ಟೆ. ಉಳಿದ 'ಶ್ರುತದುಷ್ಟ', 'ಅರ್ಥದುಷ್ಟ', 'ಕಲ್ಪನೋಕ್ತಿ ಕಷ್ಟ'ಗಳೆಂಬ ಮೂರು ದೋಷಗಳು ಶಕಾರಾದಿಗಳ ಮೂಢತಾವಾಕ್ಯಾನುಭಾವಗಳನ್ನು ಕೇಳಿ ನೋಡಿ ವಾಚಕರನ್ನು ನಗಿಸುವಂತೆ ಮಾಡಿ ಹಾಸ್ಯರಸವನ್ನು ಉದ್ರೇಕಿಸುವುದರಿಂದ, ಅಲ್ಲಿಗೆ ಅವುಗಳು ದೋಷಗಳಲ್ಲ. ಈ ನಾಲ್ಕು ಪ್ರಧಾನ ದೋಷಗಳಿಗೆ ಕವಿಗಳೆಂಬವರ ಆಗಮುಬಲಹೀನತೆಯೇ ಕಾರಣ.

## ದೋಷವಿಸ್ತೃತಿ (೧)—ಅರ್ಥದೋಷಗಳು

ಮುಂದೆ ತೋರಿಸುವ ದೋಷಗಳೆಲ್ಲ ಇವುಗಳಿಂದಲೇ ಕವಲೊಡೆದು ವಿಸ್ತರಿಸುವುವೆಂದು ನನ್ನ ಭಾವನೆ. ಈ ಗ್ರಂಥದಲ್ಲಿ ಅಂಥ ದೋಷಗಳೊಳಗೆ ಕೆಲವಕ್ಕೆ ಉದಾಹರಣೆಗಳನ್ನು ಕೊಟ್ಟಿರುತ್ತಾನೆ; ಕೆಲವಕ್ಕೆ ಉದಾಹರಣೆ ತೋರುವುದಿಲ್ಲ. ಅವುಗಳಲ್ಲಿ ಮೊದಲಿನವನ್ನು ಕ್ರಮವಾಗಿ ನೋಡುವ. ಯತಿಭಂಗ, ಅರ್ಥಶೂನ್ಯ, ವಿರುದ್ಧಾರ್ಥ, ಪುನರುಕ್ತ, ಚ್ಯುತ ಯಥಾಸಂಖ್ಯ (ಅಕ್ರಮ), ವ್ಯವಹಿತ, ಅಚ್ಛಂದ (ಛಂದೋಭಂಗ), ವಿಸಂಧಿ, ನೇಯಾರ್ಥ, ಆಗಮವಿರುದ್ಧ, ಸಮಯ ವಿರುದ್ಧ, ನ್ಯಾಯವಿರುದ್ಧ ಕಳಾವಿರುದ್ಧ ಕಾಲ ವಿರುದ್ಧ, ಲೋಕವಿರುದ್ಧ, ದೇಶವಿರುದ್ಧಗಳೆಂಬ ಹದಿನಾರು ದೋಷಗಳಿಗೆ ಗ್ರಂಥಕಾರನು ಕೊಟ್ಟ ದೃಷ್ಟಾಂತಗಳನ್ನು ಸಂಗ್ರಹವಾಗಿ ವಿವೇಚಿಸಬೇಕು.

## ಯತಿಭಂಗ

ವೃತ್ತ ಜಾತಿಗಳೆಂದರೆ ಮಾರ್ಗ ಕಾವ್ಯಗಳಲ್ಲಿ ಬಳಕೆಗೆ ಬರುವ ಛಂದೋಭಾಗಗಳು. ಇವುಗಳಲ್ಲಿ ಛಂದಃಶಾಸ್ತ್ರದ ವಿಧಿಗನುವಾಗಿ ಪದಗಳು ಪದ್ಧತಿಗೊಳ್ಳಬೇಕು. ಅಂಥ ಪದ್ಯ ಗಳೊಳಗೆ ವಿಶೇಷವಾಗಿ ಪಾದಾಂತಗಳಲ್ಲಿ, ಕೆಲವು ವೃತ್ತಗಳೊಳಗೆ ನಿಯಮಿತ ಪಾದಮಧ್ಯ ಗಳಲ್ಲಿಯೂ, ಅರ್ಥಕ್ಕೆ ತೊಡಕೆಸಗದಂತೆ ಪದಗಳು ನಿಲುಗಡೆಗೊಳ್ಳಬೇಕು. ಆ ನಿಲುಗಡೆಗೆ 'ಯತಿ' ಎಂಬ ಹೆಸರು. ಆ ಯತಿಗೆ ಭಂಗವಾದರೆ ಮಾರ್ಗಕಾವ್ಯದ ಅರ್ಥವು ನೇರವಾಗಿ ಒದಗಲಿಕ್ಕೆ ತಡೆಯಾಗುವುದರಿಂದ, ಅರ್ಥಕ್ಕೆ ಒಂದಿಷ್ಟು ತಡೆಯಾಗುವುದು. ಆದರಿಂದ ಅದು ಅರ್ಥದುಷ್ಟಕ್ಕೆ ಆಶ್ರಯವಾಗಬಹುದು. ಇದು ದೋಷವೇನೋ ಸರಿ. ಆದರೂ ಕನ್ನಡದಲ್ಲಿ ಯತಿಯನ್ನು ಅಲಕ್ಷಿಸುವುದು ಹಿಂದಿನಿಂದಲೂ ವಿದ್ವನ್ಮತವಾಗಿಬಿಟ್ಟಿದೆ.

ದೋಸಮನೆ ಗುಣದವೋಲು
ದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್
ದೇಸಿಯೆನೆ ನಿಱಿಸಿ ಖಂಡ
ಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ —(i, 74)

ಹೀಗೆ ಯತಿಭಂಗವನ್ನು ದೋಷವನ್ನಾಗಿ ಭಾವಿಸದಿರುವುದು ಅಂದಿನ ಪೂರ್ವಾಚಾರ್ಯ ರಿಂದ ಇಂದಿನ ವರೆಗೂ ನಡೆದು ಬಂದಿದೆ. ಹಾಗೆ ದೋಷವನ್ನು ಭಾವಿಸದಿರಲು 'ದೇಸಿಯೆನೆ

ಖಂಡ ಪ್ರಾಸಮುಂ ನಿಜಾಂಸು'ವುದೇ ಕಾರಣವೆಂಬುದನ್ನು ಸೂಚಿಸಿದನು. ಪ್ರಾಸಾಕ್ಷರ ಎಂದರೆ ಪಾದದೊಳಗಿನ ಎರಡನೆಯ ಅಕ್ಷರ. ಇದರೊಳಗೆ ಪ್ರಾಸ (ದ್ವಿತೀಯಾಕ್ಷರ ಪ್ರಾಸ), ಶಾಂತ, ವರ್ಗ, ಸವಿಾಪ, ಅನುಗತ (ಅನುಪ್ರಾಸ), ಅಂತಪ್ರಾಸಗಳೆಂದು ಆರು ಭೇದಗಳೆಂಬುದಾಗಿಯೂ, ಇವುಗಳೊಳಗೆ ಪ್ರಾಸ, ಅನುಪ್ರಾಸ, ಅಂತಪ್ರಾಸಗಳೆಂಬ ಮೂರು ಕನ್ನಡಕ್ಕೆ ಅತಿಶಯಗಳು, ಉಳಿದ ಮೂರು 'ಪ್ರಾಸಾಭಾಸಂಗಳ್' ಎಂಬು ದಾಗಿಯೂ ಮುಂದೆ ಪ್ರಾಸವಿವೇಚನಾವಸರದಲ್ಲಿ ಸೂಚಿಸಿದ್ದಾನೆ. ಈ ಆರರೊಳಗೆ ಮೇಲೆ ಸೂಚಿಸಿದ 'ಖಂಡ ಪ್ರಾಸ' ಎಂಬ ಹೆಸರು ತೋರುವುದಿಲ್ಲ. ಆದರೂ, ಈ ಆರು ಪ್ರಾಸಗಳನ್ನು ಎರಡು ಖಂಡವನ್ನಾಗಿ ಮಾಡಿ, ಒಂದು ಕನ್ನಡಕ್ಕೆ 'ಅತಿಶಯ', ಎಂದರೆ ವಿಶೇಷವೆಂದೂ, ಮತ್ತೊಂದು 'ಪ್ರಾಸಾಭಾಸ' ಎಂದರೆ ಪ್ರಾಸದಂತೆ ತೋರುವುದಲ್ಲದೆ ಅಮುಖ್ಯವೆಂದೂ ನಿವೇದಿಸಿದ್ದಾನೆ. ಅದರಿಂದ ಈ 'ಖಂಡಪ್ರಾಸ' ಎಂದರೆ ಕನ್ನಡ ನಾಡುಗಳೊಳಗೆಲ್ಲ ದೇಸಿಯಾಗಿ ಏಕರೀತಿಯಲ್ಲಿ ನೆಲೆಗೊಂಡ ಆದಿಖಂಡದ ಪ್ರಾಸಗಳು ಎಂದು ಭಾವಿಸಬೇಕು. ಅದೊಂದು ರೀತಿಯ ಉತ್ತಮ ಕಾವ್ಯಪದ್ಧತಿಯನ್ನು ಕನ್ನಡ ನಾಡಿನೊಳಗೆಲ್ಲ ನೆಲೆಗೊಳಿಸುವುದೇ ಮಾರ್ಗದ ಗುರಿ ಎಂಬುದನ್ನು ಹಿಂದೆಯೇ ವಿಚಾರಿಸಿದೆವು. ಈ ವಿಷಯದಲ್ಲಿ ದೇಸಿ ಬೇರೆ ಬೇರಾಗದೆ ಅಭಿನ್ನವಾಗಿರುವಲ್ಲಿ ಪೂರ್ವಾಚಾರ್ಯರು 'ಯತಿಯುಂ ಪಿಾರಿ'ದುದು ದೋಷವಲ್ಲವೆಂದೇ ನಮ್ಮೆಣಿಕೆ.

### ಅರ್ಥಶೂನ್ಯ, ವಿರುದ್ಧಾರ್ಥ, ಪುನರುಕ್ತ

ಈ ಮೂರೂ ದೋಷಗಳು ಆದಿಯಲ್ಲಿ ನಿರೂಪಿಸಿದ 'ಅರ್ಥದುಷ್ಟ' ಎಂಬ ಪ್ರಮುಖ ದೋಷದ ಒಳಗವಲುಗಳು. ಒಳಗೊಳಗಿನ ಖಂಡ ವಾಕ್ಯಗಳಿಗೆ ಅರ್ಥಗಳೇನೋ ಮಿನುಗುತ್ತಿವೆಯಾದರೂ ಅಖಂಡ ವಾಕ್ಯಗಳ ಸಮುದಾಯವು ಒಂದು ಅರ್ಥಪ್ರತೀತಿಯನ್ನೊದಗಿಸುವಂತಿಲ್ಲವಾದರೆ ಆದಕ್ಕೆ 'ಅರ್ಥಶೂನ್ಯ' ಎಂಬ ಹೆಸರು. ಉದಾ.: "ಮುನಿ ರಾಗದ್ವೇಷಗಳಿಲ್ಲದವನು ; ಯಾವಾಗಲೂ ವನವನ್ನು ಕುರಿತೈದುವನು ; ನಾವು ಯಾವ ತೆರದಲ್ಲಿ ಹೋಗುವುದು ? ಮನಸ್ಸು ಅಂಜುತ್ತಿದೆ ; 'ಅಱಿಯದವಂ' (ಮೂಢನು) ಅಂಜುವನು ; ಹಗೆಯಾದವನಿಗೆ ಪಾಪಕರ್ಮವು ಹೊಲ್ಲದು" (i, 78). ಗ್ರಂಥಕಾರನು ಕೊಟ್ಟ ಪದ್ಯದೊಳಗುಳ್ಳ ಈ ಖಂಡ ವಾಕ್ಯಗಳ ಸಮುದಾಯಾರ್ಥವು ಹೊಳೆಯುವುದಿಲ್ಲ. ಅದರಿಂದಲೇ 'ಅರ್ಥಶೂನ್ಯ'ವಿದು.

ಖಂಡ ವಾಕ್ಯಗಳೊಳಗಿನ ಹಿಂದಿನ ವಾಕ್ಯಾರ್ಥಕ್ಕೆ ಮುಂದಿನದು ವಿರುದ್ಧವಾಗಿದ್ದರೆ ಅದು 'ವಿರುದ್ಧಾರ್ಥ'. ಉದಾ.: "ವೈರಿಸೇನೆಯನ್ನು ಪರಾಕ್ರಮದಿಂದ ಗೆದ್ದು ಶೌರ್ಯವನ್ನು ಬೆಳಗಿಸು'; 'ನರಮಹಿತ'ನೆ, 'ಪರಹಿತಾಚಾರ ಪರ' ನೆನಿಸಿದವನೆ, ನಿನಗೆ 'ಅಹಿತರಾದವರೂ ಇದ್ದಾರೆಯೆ?" (i, 81). ಇದು ಪೂರ್ವಾಪರವಾಕ್ಯಗಳೊಳಗಿನ 'ವಿರುದ್ಧಾರ್ಥ' ದೋಷಕ್ಕೆ ಗ್ರಂಥಸ್ಥೋದಾಹರಣದ ಹೊಸಗನ್ನಡ ರೂಪ.

ಮೊದಲಿನ ಪದಕ್ಕೆ ಒಂದಿಷ್ಟು ವಿಶೇಷಾರ್ಥವಿಲ್ಲದ ಪದವನ್ನು ಮತ್ತೆ ಕೊಡುತ್ತಾ

ಬಂದರೆ, 'ಪುನರುಕ್ತ' ಎಂಬ ದೋಷವು ತಲೆದೋರುವುದು. ಉದಾ : 'ತ್ರಿದಶಸುರ ಲೋಕವಾಸಾಸ್ಪದಂ .... ಮನುಷ್ಯಮನುಜಂ .... ಪದಚರಣಯುಗದ್ವಯಂ .... ಮುದದೆ ಅಲ್ತಿಯೆ....ಬಗೆದು ನೆನೆವಂ....ಅನುದಿನಂ ಎಂದುಂ' (i, 84). ಇಲ್ಲಿ 'ಪುನರುಕ್ತ ದೋಷ'ವು ಹೊಳೆಯುತ್ತಿದೆ.

## ಚ್ಯುತಯಾಥಾಸಂಖ್ಯ

'ಚ್ಯುತಯಾಥಾಸಂಖ್ಯ', ಅಲ್ಲವೆ ಕ್ರಮಭಂಗ ಎಂಬ ದೋಷವನ್ನರಿತುಕೊಳ್ಳ ಬೇಕಾದಲ್ಲಿ, ಮೊದಲು 'ಯಾಥಾಸಂಖ್ಯ' ಅಥವಾ 'ಕ್ರಮ' ಎಂದರೆ ಏನು ಎಂಬುದನ್ನು ತಿಳಿದುಕೊಂಡರೆ, ಸುಗಮವೆನ್ನಿಸುವುದು. 'ಯಾಥಾಸಂಖ್ಯ' ಎಂಬುದು ಆಡುಮಾತಿ ನಲ್ಲಿಯೂ ಬಳಸುವಷ್ಟು ಬಳಕೆಗೆ ಬಂದುದಾಗಿದೆ. ಆದರೆ ಕಾವ್ಯ ಪ್ರಬಂಧಕ್ಕೆ ಸಂಬಂಧಿ ಸಿದ ಆ ಪದವನ್ನು ಸರಿಯಾಗಿ ಭಾವಿಸಿಕೊಳ್ಳುವುದು ಮೇಲು.

ನಿಯತೋದ್ದೇಶಿಯುಮನುದೇ
ಶಿಯುಮನನು[ವಿನಂ]ತು ಪೇೞ್ಗೆ ಯಾಥಾಸಂಖ್ಯಾ
ಹ್ವಯಮಕ್ಕುಂ.... ಮದ್ರಾಸ್ ಪ್ರತಿ—(i, 86)

'ಉದ್ದೇಶಿ' ಎಂದರೆ ಕ್ರಮವಾದ ಗುರಿಗಳು ಎಂಬ ಅರ್ಥವನ್ನೊಳಗೊಂಡ ಪದಗಳು; 'ಅನುದೇಶಿ', ಎಂದರೆ ಗುರಿಗಳ ಸಂಖ್ಯೆಯನ್ನನುಸರಿಸಿ ಆ ಗುರಿಗಳನ್ನೊಂದುವ ಪದಾರ್ಥ ವರ್ಗ. ಉದಾ : 'ಗುರುಶಿಷ್ಯರ ಬೋಧನಾಭ್ಯಾಸಗಳು ಹೃದಯಂಗಮಗಳಾಗಿದ್ದುವು'— ಇದು ಯಾಥಾಸಂಖ್ಯ. ಪೂರ್ವೋಕ್ತನಾದ ಗುರುವಿನ (ಅನುದೇಶಿಯು) ಉದ್ದೇಶ, ಆ ಮೇಲಿನ ಸಮಸ್ತಪದದ ಮೊದಲಿನ ಬೋಧನೆ (ಉದ್ದೇಶಿ)ಯನ್ನೂ ಅನಂತರೋಕ್ತ ಶಿಷ್ಯನ (ಅನುದೇಶಿಯು) ಗುರಿ ಮತ್ತಿನ ಅಭ್ಯಾಸವ(ಉದ್ದೇಶಿಯು)ನ್ನೂ ಸಂಖ್ಯಾಕ್ರಮ ವಿಡಿದು ತಗಲುವುದರಿಂದ ಇದು ಯಾಥಾಸಂಖ್ಯ. ಈ ಕ್ರಮವು ತಪ್ಪಿ ಹಿಂದುಮುಂದಾಗಿ ಪ್ರಯೋಗಿಸಿದಲ್ಲಿ, ಅದು ಚ್ಯುತ ಯಾಥಾಸಂಖ್ಯವೆನ್ನಿಸಿ ದೋಷವಾಗುವುದು. ಅರ್ಥ ದುಷ್ಟ ಕಲ್ಪನಾದೋಷಗಳ ಕೂಟಗಳು ಈ ಚ್ಯುತ ಯಾಥಾಸಂಖ್ಯದಲ್ಲಿ ಭಾಸವಾಗುತ್ತಿವೆ.

## ವ್ಯವಹಿತ

ಪದಗಳು ಚೆದರಿಹೋಗಿ ಅರ್ಥಸಂಬಂಧಕ್ಕೆ ತಡೆಯಾಗುವುದೇ 'ವ್ಯವಹಿತ'—'ಸವಿಶೇಷಾ ಲಂಕಾರೋದ್ಭವಮಾಗಿಯುಂ ಒಂದುವ ಅರ್ಥದೊಳ್ ಸಂಬಂಧ ವ್ಯವಧಾನಮಾದೊಡೆ ಅಕ್ಕುಂ ವ್ಯವಹಿತದೋಷಂ' (i, 89).

ಉದಾ :

ಮನದೆ ನೆನೆವವರ ಕಿಡುಗುಂ
ಜಿನಾಧಿಪಾ ನಿನ್ನ ಪಾಪನಿಚಯಂ ಗುಣಮುಂ
ಮುನಿಗಳುಮುದಜುಂ ತೃತ್ಸೇ
ವನೆಯಿಂ ಕಿಡಿಸಲ್ಕೆ ಪತ್ತಿದರ್ ಸಂಸೃತಿಯುಂ —(i, 90)

ಇದ್ದಕ್ಕೆ ಇದ್ದ ಹಾಗೆ ಅನ್ವಯ ಮಾಡಿದರೆ, ಮೇಲಿಂದ ಮೇಲೆ 'ಜಿನಾಧಿಪಾ ನಿನ್ನ ಪಾಪ ನಿಚಯಂ....' ಎಂಬುದೂ 'ಅದಱಿಂ ಮುನಿಗಳುಂ....ಕಿಡಿಸಲ್ಕೆ ಪತ್ತಿದರ್ ಸಂಸೃತಿಯಂ' ಎಂಬುದೂ ವಿರುದ್ಧಾರ್ಥದಂತೆ ಭಾಸವಾಗುತ್ತಿದೆ. ಆದರೆ ಉಳಿದ ಪದಗಳ ಕೂಟವನ್ನು ಪರಾಂಬರಿಸಿದಲ್ಲಿ, ಆ ವಿರುದ್ಧಾರ್ಥವು ಮಾಸಿಹೋಗುತ್ತಿದೆ. 'ವ್ಯವಹಿತ'ವಾದ ಈ ಪದ್ಯಾರ್ಥವನ್ನು ವಿವೇಚಿಸಿದಲ್ಲಿ, ಹೀಗೆ ಅನ್ವಯಿಸಬಹುದು—"ಜಿನಾಧಿಪಾ, ನಿನ್ನ ಗುಣಮಂ ಮನದೆ ನೆನೆವವರ ಪಾಪನಿಚಯಂ ಕಿಡುಗುಂ, ಅದಱಿಂ ಮುನಿಗಳುಂ ತ್ವತ್ಸೇವನೆಯಿಂ (ಆ ಪಾಪನಿಚಯಮುಮಂ) ಕಿಡಿಸಲ್ಕೆ ಸಂಸೃತಿಯಂ ಪತ್ತಿದರ್". ಹೀಗಾದರೆ, ವ್ಯವಹಿತ ದೋಷವು ನಿವೃತ್ತವಾಗುವುದು. ಈ ದೋಷವು ಶ್ರುತದುಷ್ಟ, ಅರ್ಥ ದುಷ್ಟಗಳ ಸೇರಿಕೆಯಿಂದಾದುದು.

## ಛಂದೋಭಂಗ

ಆಯಾ ವೃತ್ತ ಜಾತ್ಯಾದಿಗಳಿಗೆ ಸ್ಥಾನ ನಿಯಮಿತವಾದ ಗುರು ಲಘ್ವಕ್ಷರ ಮಾತ್ರೆಗಳಲ್ಲಿ ನ್ಯೂನಾತಿರಿಕ್ತತೆಗಳಿಂದ ಉಂಟಾಗುವ ದೋಷವಿದು. ಇದಕ್ಕೆ ದೃಷ್ಟಾಂತವನ್ನು ವಾಚಕರೇ ಸುಲಭವಾಗಿ ಭಾವಿಸಿ ನಿರ್ಧರಿಸಬಹುದು. ಇದು ಯತಿಭಂಗದಂತೆ ಛಂದಃಶಾಸ್ತ್ರ ಸಂಬಂಧವಾಗಿದೆ. ಶ್ರುತದುಷ್ಟದಲ್ಲೇ ಹೆಚ್ಚಾಗಿ ದೋಷವಿದು ಸೇರಬಹುದು.

## ವಿಸಂಧಿ, ವಿರೂಪ ಸಂಧಿ

ಇವೆರಡೂ ವ್ಯಾಕರಣ ವಿಷಯಕಗಳು. ಆಯಾ ಭಿನ್ನ ಭಿನ್ನ ದೇಸಿಗಳಲ್ಲಿ ಬರುವ ದೋಷಗಳಿವು. ಉದಾ: 'ಜನಪತಿಗೆ ಒಸಗೆಯುಂ' ಎಂಬ ಪ್ರಯೋಗವು ವಿಸಂಧಿಯಾಗುವುದು. 'ಜನಪತಿಗೊಸಗೆಯುಂ' ಎಂದು ಸಂಧಿನಡೆದು ಲೋಪವಾಗಬೇಕಾದರೂ, ಅದರಿಂದ ಒಂದು ಮಾತ್ರೆ ಕಡಿಮೆಯಾಗಿ ಛಂದೋದೋಷವಾಗುವುದು. ಮೇಲೆ ದೃಷ್ಟಾಂತಿಸಿದ ಪದ್ಯವನ್ನು ಬರೆದ ಆ ದೇಸಿ ಕವಿ ಛಂದೋಭಂಗಕ್ಕೆ ಹಿಂಜರಿದು 'ವಿಸಂಧಿ' ದೋಷವನ್ನೆಸಗಿದನು, ಎಂದು ಭಾವಿಸಬೇಕು.

'ವಿರೂಪ' ಸಂಧಿ ಎಂಬುದನ್ನು ಗ್ರಂಥದೊಳಗಿನ ದೋಷ ಭೇದಗಳಲ್ಲಿ ಬೇರೆಯಾಗಿ ಕಾಣಿಸಲಿಲ್ಲ. ಆದರೆ ಅದಕ್ಕೆ ಉದಾಹರಣೆಯಾಗಿ ಬೇರೊಂದು ಪದ್ಯವನ್ನು ಕೊಟ್ಟಿದ್ದಾನೆ. ಅದರಿಂದ ವಿಸಂಧಿ, ವಿರೂಪ ಸಂಧಿಗಳೆಂಬ ಎರಡೂ 'ವಿಸಂಧಿಕ' ಎಂಬ ಒಂದೇ ದೋಷದೊಳಗಿನ ಭೇದಗಳೆಂದು ಭಾವಿಸಬೇಕು. 'ಅರಮರಸಂ....ಅರಮರಮನೆಯೊಳಗೆ....ಅರಮುದ್ಯಾನವನಂಗಳೊಳ್....ಅರಮಂತಃಪುರದೊಳ್ (i, 98) ಎಂದು ಅದರ ಉದಾಹರಣೆ. ಇಲ್ಲಿ ವ್ಯಾಕರಣ ದೋಷವಿಲ್ಲವಾದರೂ, 'ಅರಮೆ' ಎಂಬ ಅವ್ಯಯವು ಎಲ್ಲೆಡೆಯೂ ಸಂಧಿವಡೆದು ಸೇರಿ ವಿರೂಪವನ್ನುಂಟುಮಾಡಿದೆ. 'ಮರಸಂ....ಮರಮನೆ' ಎಂಬಿವೇ ಆ ವಿರೂಪ ಭಾಗಗಳು.

## ನೇಯಾರ್ಥ

ನೇಯಾರ್ಥದ ದುಷ್ಪರಿಣತಿ ಮೇಲಿಂದ ಮೇಲೆ ಹೊಳೆಯದಿದ್ದರೂ ದೋಷವಿದು ಕಾವ್ಯ ಮಾರ್ಗವನ್ನು ಕೆಡಿಸದಿರಲಾರದು. ಸೂಚಿಸಿದ ಪದಮೊಳಗೆ ಗುರಿಗೊಂಡ ಅರ್ಥವು ಹೊಳೆಯುವಲ್ಲಿ, ಅಲ್ಲಿಲ್ಲದ ಪದವೊಂದನ್ನು ಬಲ್ಲ ಶ್ರೋತೃಗಳು ತಿಳಿದು ಅಧ್ಯಾಹರಿಸಿಕೊಂಡರೆ 'ನೇಯಾರ್ಥ'.

ಪರೆದಿರೆ ರಾಗಂ ತನ್ನೊಳ್
ನಿರಂತರಂ ಗಗನವಿವರಮೊಪ್ಪಿತ್ತಾದಂ
ವರಪಾರಿಜಾತ ಕುಸುಮೋ
ತ್ಕರ ಸಾಂದ್ರಪರಾಗ ವಿಸರಪಿಂಜರಿತಂಬೊಲ್ —(i, 101)

ಇದರ ಅರ್ಥವಿಷ್ಟು: 'ಕೆಂಬಣ್ಣವು ಪಸರಿಸಿದ ಬಾಂದಳವು ಕಲ್ಪವೃಕ್ಷಗಳ ಪರಾಗ ಪ್ರಸೃತವಾದಂತೆ ಮಿರುಗುತ್ತಿದೆ.' ಇಲ್ಲಿ ನಿಜವಾಗಿ ಸಂಧ್ಯಾರಾಗದಿಂದ ಅಂಬರತಳವು ಕೆಂಪಾದುದು. ಹಾಗೆ ಸ್ಫುಟವಾಗಿ ಹೇಳಲಿಲ್ಲ; ಹೋಲಿಸಿದ ಪುಷ್ಪಪರಾಗ ಪದ ಸಂದರ್ಭ ವನ್ನೀಕ್ಷಿಸಿದರೆ ಬಿರುಗಾಳಿಯ ತೀಟದಿಂದಾಗಿ ಮೇಲೇರಿದ ಧೂಳಿಯಿಂದ ಕೆಂಪಾಗಿರ ಬಹುದೆಂಬ ಭಾವನೆಯೇ ಬೇರೂರುತ್ತಿದೆ. ಇದೀಗ 'ನೇಯಾರ್ಥ ದೋಷ.' ಈ ದೋಷದಲ್ಲಿ ವಾಚಕರೆದೆ ಸಂದೇಹ ಭ್ರಮೆಗಳಿಂದ ಬಲಿದು ಅರ್ಥ ನಿರ್ಣಯವು ಸಡಿಲಾಗುತ್ತಿದೆ. ಅದರಿಂದ ಇದು ಅರ್ಥದುಷ್ಟದ ಅಂಗ.

ಇಲ್ಲಿಂದ ಮುಂದಿನ ದೋಷಗಳ ಲಕ್ಷಣಗಳನ್ನು ಮಾತ್ರವೇ ಸೂಚಿಸುತ್ತಾನೆಯಲ್ಲದೆ ಗ್ರಂಥಕಾರನು ಅವುಗಳ ಲಕ್ಷ್ಯಗಳನ್ನು ಕೊಡುವುದಿಲ್ಲ—

## ಆಗಮವಿರುದ್ಧ

ರಾಗದ್ವೇಷಯುಕ್ತವಾದ ಭಾವನೆಗೆಡೆಯಿಲ್ಲದೆ ಎಲ್ಲ ಪದಾರ್ಥಗಳನ್ನೂ ಸತ್ಯದಲ್ಲಿ ಒರೆದು ತೋರಿಸುವ ಯೋಗಿವರ್ಗದಿಂದ ಅನುಗತವಾದ ಮಾತೇ 'ಆಗಮ.' ಇದಕ್ಕೆ ವಿರೋಧ ವಾದುದೇ 'ಆಗಮವಿರುದ್ಧ'. ಇಂಥ 'ಆಗಮ'ದ ಸಾರವನ್ನು ವಿವೇಚಿಸಿದಲ್ಲಿ, ಅದು ಏಕರೂಪವು. ಆದರೂ ಅದನ್ನು ಆಚಾರದಲ್ಲಿ ಚಿತ್ರಿಸಿದ 'ಯೋಗಿಗಣ'ದಲ್ಲಿ ಹಲವ ರಿದ್ದಾರೆ. ಈ 'ಆಗಮ' ಪದದಲ್ಲಿ ಜೈನಾಗಮಭಾವನೆಯೇ ಗ್ರಂಥಕಾರನಿಗಿದ್ದಿರಬಹುದೆ? ನನಗೆ ಹಾಗೆಯೇ ತೋರುತ್ತಿದೆ.

## ಸಮಯ ವಿರುದ್ಧ

ಕಪಿಲ (ಸಾಂಖ್ಯ), ಸುಗತ (ಬುದ್ಧ), ಕಣಚರ (ವೈಶೇಷಿಕ), ಲೋಕಾಯತಿಕ (ನಾಸ್ತಿಕ) ಮತಗಳಿಗೆ 'ಸಮಯ' ಎಂಬ ಹೆಸರು; ಅವುಗಳಿಗೆ ವಿಪರೀತವಾದುದು 'ಸಮಯ ವಿರುದ್ಧ' ಎಂಬ ದೋಷ.

## ನ್ಯಾಯ ವಿರುದ್ಧ

ಮಾತಿನ, ವಿಚಾರಗಳ ಗುರಿಯೆಲ್ಲವೂ ನ್ಯಾಯಶಾಸ್ತ್ರ ನಿಯುಕ್ತವಾದ ಪ್ರಮಾಣಕ್ಕೆ ಅನುವಾಗಿರತಕ್ಕುದು. ಆ ಪ್ರಮಾಣದೊಳಗೆ ಪ್ರತ್ಯಕ್ಷ, ಅನುಮಾನ, ಉಪಮಾನ, ಶಾಬ್ದ ಎಂಬ ನಾಲ್ಕು ಭೇದಗಳು; ತದ್ವಿರುದ್ಧವಾದುದಕ್ಕೆ 'ನ್ಯಾಯ ವಿರುದ್ಧ' ಎಂದು ಹೆಸರು.

## ಕಲಾ ವಿರುದ್ಧ

ಕಲೆಯೊಳಗೆ ನಾಟ್ಯ (ಗಂಧರ್ವಗತಿ), ಸ್ವರ (ಸರಿಗಮಾದಿ), ಚಿತ್ರ, ಶಿಲ್ಪ ಮೊದಲಾಗಿ ಅರುವತ್ತನಾಲ್ಕು ಭೇದಗಳಿವೆ. ಅವುಗಳಿಗೆ ವಿಪರೀತವಾದುದು 'ಕಲಾ ವಿರುದ್ಧ'.

## ಲೋಕ ವಿರುದ್ಧ

ಸ್ವರ್ಗ, ಪಾತಾಳ, ಮರ್ತ್ಯ ಮೊದಲಾದುದು ಪೌರಾಣಿಕ ಲೋಕ ವಿಭಾಗ. ಅದರೊಡನೆ ಆಧುನಿಕ ಭೇದವನ್ನು ಬಳಸಿದರೂ ದೋಷವಲ್ಲ; ಅದಕ್ಕೆ ಅನುವಾದ ಸಲುವಳಿಗೆ ಕೂಡದುದು 'ಲೋಕ ವಿರುದ್ಧ'.

## ದೇಶ ವಿರುದ್ಧ

ರಾಷ್ಟ್ರದಿಂದ ಮೊದಲಾಗಿ ಒಬ್ಬನು ವಾಸಿಸುವ ಮನೆಯ ವರೆಗಿನ ಭೂಭಾಗಕ್ಕೆ ದೇಶ ಎಂಬ ಅಭಿಧಾನ. ಅದಕ್ಕೆ ಒಪ್ಪದ ವರ್ಣನಾದಿ ಕಾವ್ಯಾಂಶಕ್ಕೆ 'ದೇಶವಿರುದ್ಧ' ಎಂಬ ಹೆಸರು. ಉದಾಹರಣವನ್ನು ಕೊಡದಿರುವ ಈ ಆಗಮ ವಿರುದ್ಧಾದಿಗಳೆಲ್ಲ 'ಅರ್ಥದುಷ್ಟ'ದ ಉಪಾಂಗಗಳೆಂದು ತಿಳಿಯಬೇಕು.

ಯತಿಭಂಗವೇ ಮೊದಲಾಗಿ ನೇಯಾರ್ಥದ ವರೆಗೆ ದೃಷ್ಟಾಂತಗಳನ್ನಿತ್ತು ತೋರಿದ ಒಂಬತ್ತು, ಆಗಮವಿರುದ್ಧ ಮೊದಲ್ಗೊಂಡು, ದೇಶ ವಿರುದ್ಧ ಪರ್ಯಂತವಾಗಿ ಲಕ್ಷಣ ಮಾತ್ರದಿಂದ ಸೂಚನೆಗೈದ ಏಳು—ಹೀಗೆ ಹದಿನಾರು ಬಗೆಯ ಕಾವ್ಯದೋಷಗಳು. ಇವುಗಳು ಮೊದಲು ವಿವರಿಸಿದ ಶ್ರುತದುಷ್ಟ, ಮುಂತಾದ ನಾಲ್ಕುತರದ ಮೂಲದೋಷಗಳ ಸಂತತಿಯೇ ಹಬ್ಬಿ ರೂಪಿಸಿದುವು ಎಂಬುದನ್ನು ವಿವರಿಸಿದೆವು. ಈ ನಾಲ್ಕರೊಳಗೂ ಅರ್ಥದುಷ್ಟದ ಸಂತತಿಯೇ ಸಂಖ್ಯೆಯಲ್ಲಿಯೂ ಕಾವ್ಯಘಾತಕ ಶಕ್ತಿಯಲ್ಲಿಯೂ ಪ್ರಬಲವಾದುದೆಂಬುದು ಆಯಾ ವಿವೇಚನೆಯಿಂದಲೇ ಗೊತ್ತಾಗಬಹುದು. ಈ ಶ್ರುತದುಷ್ಟಾದಿ ಮೂಲದೋಷಗಳೂ 'ಯತಿಭಂಗ' ಮೊದಲಾದ ವಿಸ್ತೃತದೋಷಗಳೂ ಸಂಸ್ಕೃತ ಕಾವ್ಯ ಮಾರ್ಗಕ್ಕನುವಾಗಿಯೇ ರೂಪಿಸಿದವುಗಳಲ್ಲವೆ? ಅದರಿಂದ, ದೇಸಿಗನ್ನಡದ ಕಾವ್ಯ ಮಾರ್ಗದಲ್ಲಿ ಇಂಥ ದೋಷವಾವುದಕ್ಕೂ ಎಡೆಯೇ ಇಲ್ಲ. ತಮ್ಮ ರಾಜಕೀಯ ಪದ್ಧತಿಯನ್ನು ಗೆದ್ದ ನಾಡುಗಳಲ್ಲಿ ಹಬ್ಬಿಸುವ, ಹಬ್ಬಿಸಿದ ಮೇಲೆ ಆ ಆದರ್ಶವನ್ನಿಟ್ಟು ಬಗೆವಳಿ, ನುಡಿವಳಿ, ನಡವಳಿಗಳನ್ನು ಅಚ್ಚುಗೊಳಿಸುವ, ಅಚ್ಚುಗೊಳಿಸಿ ಅದೇ ಧರ್ಮ ಎಂದು ಪ್ರಪಂಚಕ್ಕೆ ಸಾರುವ ಆದೊಂದು ರಾಜಕೀಯ ಮಾರ್ಗದಂತೆ ಈ ಕವಿರಾಜಮಾರ್ಗವೂ

ಆಯಿತಲ್ಲವೆ? ಎಂದು ಕೆಲವರು ಕೊಂಡಾಡಬಹುದು. ಅದಕ್ಕಾಗಿ ಈ ಮಾತನ್ನು ಹೇಳಬೇಕಾಗಿದೆ—ಈ ಸಂದೇಹವು 'ಕವಿರಾಜಮಾರ್ಗ'ಕಾರನ ಎದೆಯಲ್ಲಿ ಗೊಣಗುತ್ತಿತ್ತು, ಎಂಬುದು ಆತನು ಸೂಚಿಸಿದ ದೋಷಗಳ ಅಡಿಗಟ್ಟಿನಲ್ಲೇ ಹೊಳೆದು ತೋರುವುದು. ಈ ಆಕ್ಷೇಪಕಾರರು ಆ ಅಡಿಗಟ್ಟನ್ನು ಮತ್ತೊಮ್ಮೆ ಪರಾಂಬರಿಸಿಕೊಳ್ಳಲಿ. ನಾಲ್ಕಾಗಿ ತಲೆದೋರಿ, ಹದಿನಾರಾಗಿ ಹರಡಿದ ದೋಷಗಳಿಗೆ ಆಯಾ ರೋಗಗಳ ನಿದಾನಗಳಂತೆ ನಾಲ್ಕು ಸಾಧನಗಳನ್ನು ಸೂಚಿಸಿದ್ದಾನೆ. ದೇಸಿ ಬೇರೆ ಬೇರಾಗಿ ಅಭಿನ್ನವಾಗಿರಬೇಕಾಗಿದ್ದ ಕನ್ನಡವೂ 'ಕನ್ನಡಂಗಳ್' ಎನ್ನಿಸಿ ಸಾರ್ವತ್ರಿಕವೆಂದೆನಿಸಿದುದು ಒಂದನೆಯದು; 'ಪೞಗನ್ನಡಮಂ ಪೊಲಗಿಡಿಸಿ' ತಾತ್ಕಾಲಿಕರಾದ ಕೆಲಮಂದಿ ಕವಿಗಳು ಕನ್ನಡ ಕಾವ್ಯವನ್ನು ಬರೆಯುತ್ತಿದ್ದುದು ಎರಡನೆಯದು; 'ಸಮಸಂಸ್ಕೃತಂಗಳೊಳ್....ಅಮರ್ದಿರೆ ಕನ್ನಡಮಂ ಅಱಿದು ಪೇೞ'ದಿದ್ದುದು ಮೂರನೆಯದು; 'ಸಕ್ಕದಮುಮಂ ಅಱಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್ ಕುಱಿತು' ಬೆರಸುತ್ತಿದ್ದುದು ನಾಲ್ಕನೆಯದು. ಈ ನಾಲ್ಕರೊಳಗೆ ಹಿಂದಿನವೆರಡು ಬರಿಯ ಕನ್ನಡದ ದೋಷಸಾಧನವೇ ಎಂಬುದು ತಾನಾಗಿ ವಿದಿತವಾಗುತ್ತದೆ; ಮತ್ತಿನವೆರಡು ಸಂಸ್ಕೃತದೊಡನೆ ಕನ್ನಡವು ಬೆರಸುವಲ್ಲಿ, ಪದವಿಧಿಗೊಳ್ಳುವಲ್ಲಿ 'ಆಗಮಬಲಹೀನ' ಕವಿ ಲೇಖಕರೆಂಬವರಿಂದಾಗಿ ಮೂಡುವವುಗಳೆಂಬುದೂ ವ್ಯಕ್ತವಾಗುತ್ತಿದೆ. ನಾಡಿನ ಉದ್ದಕ್ಕೂ ಅಗಲಕ್ಕೂ ಬೇರೂರಿ ಪಸರಿಸಿದ ಸಂಸ್ಕೃತವನ್ನು ಕನ್ನಡ ಮೊದಲಾದ ದೇಶೀಯ ಭಾಷೆಗಳಿಂದ ಕಿತ್ತುಬಿಡಬೇಕೆಂಬ ಹೇಳಿಕೆ ಅಸಾಧ್ಯವಾದುದು, ಅಸಂಭವನೀಯವಾದುದು, ಆತ್ಮಘಾತಕವಾದುದು ಎಂಬುದು ಬಲ್ಲವರಿಗೆ ತಿಳಿಯದ ಮಾತಲ್ಲ. ಮಾತ್ರವಲ್ಲ; ಸಹೃದಯರಾಗಿ ಕನ್ನಡದಲ್ಲಿ 'ಮಾರ್ಗ'ದ ಆವಶ್ಯಕತೆಯನ್ನು ಕಂಡು ಹಿಡಿದವರು, ಪ್ರಯತ್ನಿಸಿ ಕೃತಾರ್ಥರಾದವರು ಎಂದರೆ ಕನ್ನಡ ಸಂಸ್ಕೃತಗಳೆರಡರಲ್ಲಿಯೂ ನುರಿತು ಸಂಸ್ಕೃತಿವಡೆದ ಕನ್ನಡ ವಿದ್ವಾಂಸರೇ. ಈ ಕಾರಣದಿಂದ ಆ ಮತ್ತಿನ ಎರಡು ದೋಷ ಸಾಧನಗಳೂ ಕನ್ನಡ ಭಾಷಾ ಸಂಬದ್ಧಗಳೆಂಬುದನ್ನು ಒಪ್ಪಲೇಬೇಕು. ಇನ್ನೊಂದು ಅತಿ ಮುಖ್ಯ ವಿಷಯವನ್ನಿಲ್ಲಿ ಭಾವಿಸಿರಿ—'ಯತಿಭಂಗ' ಎಂಬ ದೋಷವು ಸಂಸ್ಕೃತ ಮಾರ್ಗಾನುಸಾರವಾಗಿ ತಲೆದೋರಿದುದು. ಕನ್ನಡದಲ್ಲಿ ಅತಿಶಯವೆನಿಸಿದ ಖಂಡಪ್ರಾಸಕ್ಕನುಗೊಂಡ ಯತಿವಿಲಂಘನವೆಂಬುದು ಸಾರ್ವತ್ರಿಕವಾಗಿರುವುದರಿಂದ ಪೂರ್ವಾಚಾರ್ಯರೇ ಅದನ್ನು ಸ್ವೀಕರಿಸಿದ್ದಾರೆಂದು ಗ್ರಂಥಕಾರನೇ ಸಾರಿದ್ದಾನೆ. ಅದರಿಂದ, ಎಲ್ಲೆಲ್ಲಿ ಕನ್ನಡದ ದೇಸಿಗಳಲ್ಲಿ ಐಕಮತ್ಯವಡೆವ ಸಂದರ್ಭವುಂಟಾಗುವುದೋ ಅಲ್ಲಲ್ಲಿ ಸಂಸ್ಕೃತ ಮಾರ್ಗಾನುಸರಣೆ ಬೇಡವೆಂಬುದು ಸಿದ್ಧವಾಗುತ್ತದೆ. ಐಕಮತ್ಯಕ್ಕೆ ಭಂಗವೊದಗುವಲ್ಲಿ ಮಾತ್ರ—ಸಂಸ್ಕೃತ ಪದ್ಧತಿಯನ್ನಲ್ಲ, ಅದರ ನೆರವನ್ನಷ್ಟೆ ಪಡೆದುಕೊಳ್ಳಬೇಕೆಂಬುದು ಗ್ರಂಥಕಾರನ ಸೂಚನೆ.

ಕನ್ನಡದ ನಾಲ್ಕು ದೋಷ ಸಾಧನಗಳಿಂದ ವಿಸ್ತರಿಸಿ ಹಬ್ಬಿದ ಕಾವ್ಯದೋಷದ ವಂಶಚಿತ್ರವನ್ನು ಕೆಳಗೆ ಕಾಣಿಸಿದಲ್ಲಿ ವಾಚಕರಿಗೆ ಹೆಚ್ಚಿನ ನೆರವಾಗುವುದೆಂದು ನಂಬಿ ಮುಂಬರಿಯುತ್ತೇವೆ—




## ದೋಷ ವಿಸ್ತೃತಿ (೨)—ಶಬ್ದ ದೋಷಗಳು

ಮೇಲೆ ತೋರುವವುಗಳು ಬಲು ಹೆಚ್ಚಾಗಿ ಆರ್ಥಿಕ ದೋಷಗಳು. ಮುಂದಿನವು ಶಾಬ್ದಿಕವಾದುವುಗಳು. ಅವುಗಳನ್ನು ಮೊದಲು ಹೀಗೆ ಗಣಿಸಿಕೊಳ್ಳಬಹುದು—(೧) ಕಾರಕ ದೋಷ (೨) ವಚನ ದೋಷ (೩) ಗುರುದೋಷ (೪) ಲಘುದೋಷ (೫) ಸಮುಚ್ಚಯ ದೋಷ (೬) ವಿಕಲ್ಪ ದೋಷ (೭) ಅವಧಾರಣ ದೋಷ ಮತ್ತು (೮) ವಿಶಂಕಾದೋಷ. ಈ ಎಂಟು ಬಗೆಯ ಶಾಬ್ದಿಕ ದೋಷ ವಿವೇಚನೆ ದೇಸಿಗಬ್ಬಿಗರಿಗೆ ಇರಲಾರದು ಎಂಬುದಕ್ಕೆ ಪ್ರತ್ಯಕ್ಷ ಪ್ರಮಾಣವನ್ನು ಈಗಿನ ಕಾಲದಲ್ಲೂ ಕಂಡುಕೊಳ್ಳಬಹುದು. ಇವುಗಳು ಮಾರ್ಗವಿಘಾತಕ್ಕೆ ಕಾರಣಗಳೆಂಬಲ್ಲಿ ಸಂಶಯವಿಲ್ಲ. ಗ್ರಂಥಕಾರನು ಈ ದೋಷಗಳ ಸ್ವರೂಪವನ್ನು ಕ್ರಮವಾಗಿ ನಿರೂಪಿಸುತ್ತಾನೆ :

## ಕಾರಕದೋಷ

ಕಾರಕಮಾಱು ಕರ್ಮಕರಣಾದಿಕದಿಂ ಪ್ರಥಮಾದಿ ಭೇದನಿ
ರ್ಧಾರಣದಿಂದದಂ ಪಿಡಿದು ಸಿಲ್ಕ ವಿಭಕ್ತಿಗಳೇೞನಿಕ್ಕುಮಾ
ಚಾರುಗುಣೋದಯಂ ವಚನಮೇಕಬಹು ಕ್ರಮದಿಂದೆರಡಿತ್ತೆಱ
ಕ್ಕಾರಯೆ ಪೇೞ್ವೆನಿಂತಿವಱ ಜಾತಿ ವಿಭಾಗ ಗುಣಾಗುಣಂಗಳಂ —(i, 113)

ಇಲ್ಲಿ ಕಾರಕ, ವಿಭಕ್ತಿ, ವಚನ ಎಂಬವುಗಳನ್ನು ಅತಿ ಸಂಗ್ರಹವಾಗಿ ನಿರೂಪಿಸಿದ್ದಾನೆ. ಮೇಲೆ ಕಾಣಿಸಿದ ಎಂಟು ದೋಷಗಳಲ್ಲಿ 'ವಿಭಕ್ತಿ ದೋಷ' ಎಂಬುದಿಲ್ಲ. ಆದರೆ 'ಏಕ ಬಹು' ಎಂಬ ವಚನ ಭೇದವನ್ನು ಕಾರಕಗಳನ್ನೊಂದಿ ನಿಲ್ಲುವ ವಿಭಕ್ತಿ ಪ್ರತ್ಯಯಗಳೇ ಕಾಣಿಸುವುದರಿಂದ ಆ ವಿಭಕ್ತಿಯನ್ನೂ ಗ್ರಂಥಕಾರನು ಕಾಣಿಸಬೇಕಾಯಿತು. ಈ ದೋಷಗಳ ಸ್ವರೂಪವನ್ನು ಸಾಮಾನ್ಯ ವಾಚಕರು ಸರಿಯಾಗಿ ಅರಿತುಕೊಳ್ಳಬೇಕಾದರೆ, ಕಾರಕದ ನಿಜ ಸ್ವರೂಪವನ್ನೂ ಮನನಮಾಡಿಕೊಳ್ಳತಕ್ಕದು. ಮೇಲೆ ದೃಷ್ಟಾಂತಿಸಿದ ಪದ್ಯ ಮಾತ್ರದಿಂದ ಅದು ಗೊತ್ತಾಗದೆಂದು ಭಾವಿಸಿ ಕಾರಕವನ್ನು ಮುಂದೆ ವಿವೇಚಿಸುತ್ತೇನೆ.

'ಕಾರಯತೀತಿ' (ಮಾಡಿಸುತ್ತಿದೆ) ಎಂಬ ವ್ಯುತ್ಪತ್ತಿಗನುಸಾರವಾಗಿ 'ಕಾರಕ' ಎಂಬುದು ಸಂಸ್ಕೃತದಲ್ಲಿ ರೂಪಿತವಾದ ಪ್ರಕೃತಿ ಅಥವಾ ಲಿಂಗ. ಅದು ಸಮಸಂಸ್ಕೃತವಾಗಿ ಮಾರ್ಪಟ್ಟು 'ಮ್' ಅಥವಾ 'ಂ' ಯ ರೂಪವಾದ ಕನ್ನಡ ಪ್ರಥಮಾ ವಿಭಕ್ತಿ ಪ್ರತ್ಯಯ ದೊಡಗೂಡಿ 'ಕಾರಕಮ್', ಅಥವಾ 'ಕಾರಕಂ' ಪದವಾಗಿದೆ; ಆ ಮೇಲೆ 'ಕಾರಕಮಂ', 'ಕಾರಕದಿಂ', 'ಕಾರಕಕ್ಕೆ' ಮೊದಲಾದ ಪ್ರತ್ಯಯಗಳನ್ನೊಂದಿ ಆಯಾ ವಾಕ್ಯಸಂದರ್ಭ ಗಳಿಗೆ ಸಲುವಳಿಗೊಳ್ಳುತ್ತಿವೆ. ಇದರಿಂದ, 'ಕಾರಕ' ಎಂದರೆ 'ಮಾಡಿಸುವ' ಇಲ್ಲವೆ 'ಮಾಡಿಸುವ ಪದಾರ್ಥವನ್ನು ಸೂಚಿಸುವ' ಎಂದಾಗುತ್ತದೆ. ಗ್ರಂಥಕಾರನು ಕಾರಕಗಳನ್ನು ದೃಷ್ಟಾಂತಿಸಲು ಕೊಟ್ಟ ಮುಂದಿನ ಪದ್ಯವನ್ನು ನೋಡಿರಿ :

> ನರಪತಿ ಬಂದನಾ ನೃಪನನಲ್ತಯೆ ಕಾಣ್ಬುದು ತನ್ನರೇಂದ್ರ ನಿಂ
> ಧರಣಿ ಸನಾಥೆ ಭೂಪತಿಗೆ ಕಪ್ಪವನೀಗವನೀಶನತ್ತಣಿಂ
> ಪರಿಭವಮುಂ ಕಟಿಲ್ಕುವುದಧೀಶ್ವರನಾ ದಯೆ ಸಾಲ್ಗುಮಾ ಮಹೀ
> ಶ್ವರನೊಳಿದಪ್ಪುದೆಂಬುದಿದು ಕಾರಕಯುಕ್ತ ವಿಭಕ್ತ್ಯನುಕ್ರಮಂ —(i, 114)

ಪದ್ಯಾನುಸಾರವಾಗಿ, 'ನರಪತಿ' ಎಂಬ ಒಂದೇ ಪದವನ್ನು ಭಿನ್ನ ಭಿನ್ನ ಪ್ರತ್ಯಯಗಳು ಸೇರುವಲ್ಲಿ ಬೇರೆ ಬೇರೆ ಪರ್ಯಾಯ ರೂಪಗಳಿಂದ ಯೋಜಿಸಿದ್ದಾನೆಂಬುದು ಗೊತ್ತಾಗುವ ಸಂಗತಿಯೇ ಸರಿ. ಮೇಲಿನ ಪದ್ಯಗತ ದೃಷ್ಟಾಂತವನ್ನು ಇನ್ನಷ್ಟು ಸಂಗ್ರಹಿಸಿ ನೋಡುವ : "(ಪ್ರ) ನರಪತಿ ಬಂದಂ ; (ದ್ವಿ) ನರಪತಿಯಂ ಕಾಣ್ಬುದು ; (ತೃ) ನರಪತಿಯಿಂ ಧರಣಿ ಸನಾಥೆ ; (ಚ) ನರಪತಿಗೆ ಕಪ್ಪಮಂ ಈಗೆ ; (ಪಂ) ನರಪತಿಯತ್ತಣಿಂ ಪರಿಭವಮುಂ ಕಟಿಲ್ಕು ವುದು ; (ಷ) ನರಪತಿಯಾ ದಯೆ ಸಾಲ್ಗುಂ ; (ಸ) ನರಪತಿಯೊಳ್ ಇದಪ್ಪುದು." ಇದು ಕಾರಕಯುಕ್ತ ಸಪ್ತ ವಿಭಕ್ತಿಗಳ ಅನುಕ್ರಮ. ಕ್ರಿಯೆಯ ಕಾರಕಗಳು ಅಥವಾ ಕ್ರಿಯಾರ್ಥಗಳನ್ನು ಮಾಡಿಸುವ ವ್ಯಕ್ತಿಗಳನ್ನು ಸೂಚಿಸುವ ನಾಮಪದಗಳು ಕ್ರಿಯೆ ಗಳನ್ನು ಮಾಡಿಸುವ ಅನೇಕ ರೂಪಗಳನ್ನೊಂದುತ್ತಿವೆ. ಅವುಗಳೇ 'ನರಪತಿ, ನರಪತಿಯಂ' ಮೊದಲಾಗಿ ಭಿನ್ನ ಭಿನ್ನ ಪ್ರತ್ಯಯಗಳಿಂದ ಕೂಡಿದ ಏಳು ರೂಪಗಳು. ಇಲ್ಲಿ ಕರ್ಮಕರ ಣಾದಿ ಕಾರಕಗಳು, ಪ್ರಥಮಾದಿ ವಿಭಕ್ತಿ ಪ್ರತ್ಯಯಗಳು—ಎಂಬ ಪಾರಿಭಾಷಿಕ ಪದಗಳು ತೋರುತ್ತಿವೆ. ಅವುಗಳ ಸ್ವರೂಪವನ್ನು ಕೆಳಗಣ ದೃಷ್ಟಾಂತಗಳಿಂದ ತಿಳಿದುಕೊಳ್ಳಬಹುದು :

| ಕಾರಕ | ಪ. ಸಂ. ಲಿಂಗ | + ಪ್ರತ್ಯಯ | ವಿಭಕ್ತಿ |
|---|---|---|---|
| ೧. ಕರ್ತೃ | ನರೇಂದ್ರ | + ಮ್ | (ನರೇಂದ್ರಮ್)....(ಪ್ರಥಮಾ) |
| ೨. ಕರ್ಮ | ನರೇಂದ್ರ | + ಅಮ್ | (ನರೇಂದ್ರನಮ್)....(ದ್ವಿತೀಯಾ) |
| ೩. ಕರಣ | ನರೇಂದ್ರ | + ಇಂ | (ನರೇಂದ್ರನಿಂ)....(ತೃತೀಯಾ) |
| ೪. ಸಂಪ್ರದಾನ | ನರೇಂದ್ರ | + ಗೆ | (ನರೇಂದ್ರಂಗೆ)....(ಚತುರ್ಥಿ) |
| ೫. ಅಪಾದಾನ | ನರೇಂದ್ರ | + ಅತ್ತಣಿಂ | (ನರೇಂದ್ರನತ್ತಣಿಂ)....(ಪಂಚಮಿ) |
| ೬. ಸಂಬಂಧ | ನರೇಂದ್ರ | + ಅ | (ನರೇಂದ್ರನ) ...(ಷಷ್ಠಿ) |
| ೭. ಅಧಿಕರಣ | ನರೇಂದ್ರ | + ಒಳ್ | (ನರೇಂದ್ರನೊಳ್)... (ಸಪ್ತಮಿ) |

ಮೇಲೆ ತೋರುವ 'ಸಮಸಂಸ್ಕೃತ ಲಿಂಗ—ಕಾರಕ'ಗಳ ವ್ಯುತ್ಪತ್ತಿಗಳನ್ನು ಹಿಂದೆ ಕ್ರಮವಾಗಿ ವಿವರಿಸಿದ್ದೇವೆ. ಮತ್ತಿನ 'ಲಿಂಗ ಪ್ರತ್ಯಯ ವಿಭಕ್ತಿ'ಗಳವನ್ನು ಇಲ್ಲಿ ಸೂಚಿಸುತ್ತೇವೆ.

'ಲೀನಂ ಅರ್ಥಂ ಗಮಯತಿ ಇತಿ ಲಿಂಗಂ'—ಎಂದರೆ, ಒಳಗೆ ಅಡಕವಾದ ಅರ್ಥವನ್ನು ಓದುವವರ ಅಲ್ಲವೆ ಕೇಳುವವರ ಗಮನಕ್ಕೆ ತರುತ್ತಿದೆ—ಎಂಬುದರಿಂದ 'ಲಿಂಗಂ' ಎಂಬ ಹೆಸರಾಯಿತು. 'ನರೇಂದ್ರ' ಎಂಬಲ್ಲಿ ಪ್ರತ್ಯಯದ ಸೇರಿಕೆ ಇಲ್ಲದುದರಿಂದ ಅದು ವ್ಯಾಕರಣ ದೃಷ್ಟಿಯಿಂದ ಪದವಲ್ಲ—ಬರಿಯ ಲಿಂಗ ಅಥವಾ ಪ್ರಕೃತಿ ; ಅದನ್ನೊಂದಿದ ಕ್ರಿಯಾಪದಾದಿಗಳತ್ತ ಹರಿಯಲು ಎಡೆ ಇಲ್ಲದಿದ್ದರೂ ತೂಬಿಲ್ಲದ ಚಿಲುಮೆಯ ನೀರಿನಂತೆ ಅದರೊಳಗೇ ತುಳುಕಿ ಲೀನವಾಗುತ್ತಿದೆ. ಆ ಲಿಂಗಕ್ಕೆ ವಿಭಕ್ತ್ಯನುಸಾರವಾಗಿ ಸೇರಿಸುವ ತುಣುಕುಗಳೇ ಪ್ರತ್ಯಯಗಳು. ಭೇದಾವಗಮನಕ್ಕಾಗಿ ಮುಂದೆ ಕಾಣಿಸಿದರೂ 'ವಿಭಕ್ತಿ'ಯ ವ್ಯುತ್ಪತ್ತಿಯನ್ನು ಮೊದಲೇ ಸೂಚಿಸಬೇಕಾಗಿದೆ. 'ಪದದ ಅರ್ಥಮಂ ವಿಭಾಗಿಸುವುದ ಱಿಂದೆ ವಿಭಕ್ತಿ' ಎಂದು 'ಶಬ್ದಮಣಿದರ್ಪಣ'ಕಾರನು ವಿವೇಚಿಸಿದುದು ಯುಕ್ತವಾಗಿದೆ. 'ವಿಭಜತಿ ಇತಿ ವಿಭಕ್ತಿ', ಎಂಬುದು ಅದರ ಶಾಸ್ತ್ರೀಯವಾದ ವ್ಯುತ್ಪತ್ತಿ. ಹಾಗೆ ಅರ್ಥ ವನ್ನು ವಿಭಾಗಿಸುವ ವಿಭಕ್ತಿಯ ಬಾಹ್ಯರೂಪವು, ಲಿಂಗಕ್ಕೆ ಪ್ರತ್ಯಯಗಳನ್ನು ಕೂಡಿಸಿದಲ್ಲಿ ಒದಗುತ್ತಿದೆ. ಇದರಿಂದ, ವಿಭಕ್ತಿ ಪ್ರತ್ಯಯಗಳೆಂದರೆ ಅಂತರ್ಬಾಹ್ಯಗಳ ಅರ್ಥಸ್ವರೂಪ ಗಳಲ್ಲದೆ ನಿಜವಾದ ಭೇದವಲ್ಲ ಎಂದಾಗುವುದು. ಆದರಿಂದಲೆ ದರ್ಪಣಕಾರನು ಹಿಂಪೆ ದೃಷ್ಟಾಂತಿಸಿದ ಸೂತ್ರ ಭಾಗವನ್ನು—'ಅಂತದಂ ಪ್ರತ್ಯಯಮೆಂಬುದು ; ತತ್ಪ್ರತ್ಯಯದಿಂ ಪೂರ್ವದೊಳಿರ್ಕ್ಕುಂ ಪ್ರಕೃತಿ ; ಎರಡುಂ ಅಮರ್ದೊದವೆ ಪದಂ' ಎಂದು ವಿಸ್ತರಿಸಿರುವುದು. ಈ ಸಂದರ್ಭದಲ್ಲಿ 'ಪ್ರತಿ ಏತಿ ಇತಿ ಪ್ರತ್ಯಯಃ' (—ಕ್ರಿಯಾಪದವನ್ನು ಗುರಿಗೊಂಡು ಕಾರಕದ ಅರ್ಥವನ್ನು ಕೊಂಡುಹೋಗುತ್ತಿದೆ) ಎಂಬ ಪ್ರತ್ಯಯ ಸ್ವರೂಪ ನಿರೂಪಣ ವನ್ನೂ ಅವಗಾಹಿಸಿರಿ. ಈ ಮೇಲೆ ಕಾಣಿಸಿದ ಅಂಗೋಪಾಂಗ ಭೇದಯುತವಾದ ಪದದ ಸ್ವರೂಪವನ್ನು ವಿವೇಚಿಸಿದಲ್ಲಿ, ಅದರ ಸಾಮಾನ್ಯಾರ್ಥವು ಹೀಗೆಂದು ತೋರುತ್ತಿದೆ : ಸ್ವಲಿಂಗಾಂತರ್ಗತವಾದ ಅರ್ಥವನ್ನು ಆಯಾ ಕಾರಕಾರ್ಥವನ್ನಾಗಿ ವಿಭಾಗಿಸಿ, ಅದನ್ನು ಆಯಾ ಕಾರಕ ಸಂಬಂಧಕ್ಕನುವಾಗಿ ಕ್ರಿಯಾಪದವತ್ತ ಕೊಂಡೊಯ್ಯುವ ಅಕ್ಷರವರ್ಗವೇ ವಿಭಕ್ತಿಪ್ರತ್ಯಯ. ಉದಾ : 'ನರಪತಿ ಬಂದಂ' ಎಂಬಲ್ಲಿ ಕರ್ತೃತ್ವ ಸಂಬಂಧದಿಂದ ಪದವು ತನ್ನ ಪ್ರತ್ಯಯಮೂಲಕವಾಗಿ ಕ್ರಿಯಾಪದವನ್ನೊಂದುತ್ತಿದೆ. ಅದರಂತೆ

'ನೃಪನಂ ಕಾಣ್ಬುದು, ನರೇಂದ್ರನಿಂ ಧರಣಿ ಸನಾಥೆ (ಯಾದಳ್), ಭೂಪತಿಗೆ ಕಪ್ಪಮನೀಗೆ, ಅವನೀಶನತ್ತಣಿಂ ಪರಿಭವಮುಂ ಕಟಿಲ್ಬುವುದು, ಅಧೀಶ್ವರನಾ ದಯೆ ಸಾಲ್ಗುಂ, ಮಹೀಶ್ವರನೊಳ್ ಇದು ಅಪ್ಪುದು' ಎಂಬಲ್ಲಿ ಕ್ರಮವಾಗಿ ಕರ್ಮ, ಕರಣ, ಸಂಪ್ರದಾನ ಅಪಾದಾನ, ಸಂಬಂಧ, ಅಧಿಕರಣಗಳೆಂಬ ಸಂಬಂಧಮೂಲಕವಾಗಿ ನಾಮಪದವು ಕ್ರಿಯಾಪದವನ್ನೊಂದುವ ವ್ಯಾಕರಣ ಮಾರ್ಗವನ್ನು ಕಾಣಬಹುದು.

ಇಲ್ಲಿ ಇನ್ನೊಂದು ಸಂದೇಹಕ್ಕೆ ಎಡೆಯಾಗಿದೆ. ಸಂಸ್ಕೃತ ವ್ಯಾಕರಣಾನುಸಾರವಾಗಿ ನೋಡಿದರೆ 'ಕರ್ತೃ' ಮೊದಲಾಗಿ, 'ಸಂಬಂಧ' (ವಿಭಕ್ತಿ ಪ್ರತ್ಯಯದಿಂದ ಸೂಚಿತವಾಗುವ ಪದ)ವನ್ನುಳಿದ ಆರು ಕಾರಕಗಳು ಈ ಗ್ರಂಥಕಾರನ 'ಕಾರಕಮಾಱು' ಎಂಬ ಹೇಳಿಕೆಗೇನೋ ಸರಿಯಾಗುತ್ತಿದೆ. ಮದರಾಸು ವಿಶ್ವವಿದ್ಯಾನಿಲಯದಿಂದ ಪ್ರಕಟಿತವಾದ 'ಕವಿರಾಜಮಾರ್ಗ'ದ ಸಂಪಾದಕರು ಹೀಗೆನ್ನುತ್ತಾರೆ :

"ಷಷ್ಠಿಗೆ ಕಾರಕತ್ವವಿಲ್ಲವಾಗಿ ಕಾರಕಗಳು ಆಱಾದುದರಿಂದ ಇಲ್ಲಿ 'ವಿಭಕ್ತಿಗಳಾಱಿನಿಕ್ಕುಂ' ಎಂದಿರಬಹುದೆಂದು ತೋರುವುದು. ಆದರೆ ಲಕ್ಷ್ಯದಲ್ಲಿ ಷಷ್ಠಿಯ ವಿಭಕ್ತಿಯನ್ನೂ ಕಾರಕಕ್ಕೆ ಉದಾಹರಣೆಯಾಗಿ ಕವಿಯು ಕೊಟ್ಟಿರುವನು—ಅಧೀಶ್ವರನಾ ದಯೆ. ಈ ಕವಿಗೆ ಕಾರಕವೆಂದರೆ ನಾಮ ವಿಭಕ್ತಿ ಪ್ರತ್ಯಯವೆಂಬ ಅಭಿಪ್ರಾಯವಿದ್ದಂತೆ ಕಾಣುವುದು" (ಮದರಾಸು ಪ್ರತಿ, ಪುಟ ೨೩, ಅಡಿಟಿಪ್ಪಣಿ).

ಸಂಪಾದಕರು ತಮ್ಮ ಅಭಿಪ್ರಾಯಗಳೆರಡರೊಳಗೆ ಮೊದಲಿನದನ್ನು ತಳ್ಳಿ ಮತ್ತಿನದನ್ನು ನೆಲೆಗೊಳಿಸಿದಂತೆ ನಮಗೆ ಕಾಣುವುದು. ಷಷ್ಠಿಗೆ ಕಾರಕತ್ವವಿಲ್ಲದಿರುವುದು ಸಂಸ್ಕೃತ ವ್ಯಾಕರಣ ಪದ್ಧತಿಗನುವಾಗಿ. ಅದನ್ನು ಅನುಸರಿಸಿದಲ್ಲಿ, 'ವಿಭಕ್ತಿಗಳಾಱು' ಎನ್ನುವುದು ಹೇಗೆ? ಸಂಸ್ಕೃತದಲ್ಲಿ ನಾಮ ವಿಭಕ್ತಿಗಳು ಆರಲ್ಲ, ಏಳು. ಅವರು ತಮ್ಮ ಆ ಸಂದೇಹ ನಿವೃತ್ತಿಯನ್ನು 'ಆದರೆ ಲಕ್ಷ್ಯದಲ್ಲಿ ಷಷ್ಠಿಯ ವಿಭಕ್ತಿಯನ್ನೂ ಕಾರಕಕ್ಕೆ ಉದಾಹರಣೆಯಾಗಿ ಕವಿಯು ಕೊಟ್ಟಿರುವನು' ಎಂಬುದರಿಂದ ಮಾಡಿಕೊಳ್ಳುತ್ತಾರೆ. ಷಷ್ಠೀ ವಿಭಕ್ತಿಯನ್ನು ಕ್ರಮವಾಗಿ ಕಾರಕಾಧಾರವೆನ್ನಿಸಿದ ವಿಭಕ್ತಿ ನಿರೂಪಣೆಯಲ್ಲಿ ಒಟ್ಟಿಗೆ ಸೇರಿಸಿದುದು ಮಾತ್ರ—ಎಂದೇಕೆ ಭಾವಿಸಬಾರದು? ಸಂಬಂಧದ ಷಷ್ಠಿಗೆ ಕಾರಕತ್ವವಿಲ್ಲವಾದರೂ ಕಾರಕಗಳ ಸಾಲಿನಲ್ಲಿರುವುದರಿಂದ ಅದನ್ನು ಅವುಗಳೊಡನೆ ನಿರೂಪಿಸಿದ್ದಾನೆ ಎಂದೇ ಭಾವಿಸತಕ್ಕುದು. ಷಷ್ಠಿಗೆ ಸಂಬಂಧವಾಚಕತೆ ಮಾತ್ರವೇ ಇರುವುದು, ಕಾರಕತ್ವವಿಲ್ಲ ಎಂಬ ಸಂಸ್ಕೃತ ವೈಯಾಕರಣ ಮಾರ್ಗವನ್ನೊಂದಿದರೆ 'ವಿಭಕ್ತಿಗಳಾಱು' ಎನ್ನುವುದಾದರೂ ಹೇಗೆ? ಷಷ್ಠಿಗೆ ವಿಭಕ್ತಿ ಪ್ರತ್ಯಯವೂ ಇಲ್ಲವಾಗದು. ಆ ವಿಭಕ್ತಿಯ ಸ್ವರೂಪವನ್ನೂ ತಿಳಿಸಲಿಕ್ಕಾಗಿ ಷಷ್ಠಿಯನ್ನೂ ಅಲ್ಲಿ ಸೂಚಿಸಿರಬೇಕು, ಎನ್ನುವ.

ಇಲ್ಲಿ ನಮಗೆ ತೋರಿದ ಕವಲೆಣಿಕೆ ಅದಲ್ಲ, ಬೇರೊಂದು. ಗ್ರಂಥಕಾರನು 'ಕಾರಕಮಾಱು ಕರ್ಮಕರಣಾದಿಕದಿಂ' ಎಂದೂ 'ಪ್ರಥಮಾದಿ ಭೇದನಿರ್ಧಾರಣದಿಂದಮಂ ಪಿಡಿದು ನಿಲ್ಪ ವಿಭಕ್ತಿಗಳೇೞಿನಿಕ್ಕುಂ' ಎಂದಿದ್ದಾನಷ್ಟೆ. ಇದನ್ನು ಅವಗಾಹಿಸಿ ನೋಡಿದಲ್ಲಿ ಅವನೆಣಿಕೆಯಂತೆ, 'ಕರ್ಮ'ವನ್ನು ಹಿಡಿದು ಮೊದಲ್ಗೊಂಡು 'ಅಧಿಕರಣ'ದ ವರೆಗಿನ

ವೆಲ್ಲ—ಎಂದರೆ 'ಸಂಬಂಧ' (ಷಷ್ಠಿ) ಸಹಿತವಾಗಿ—ಕಾರಕಗಳು ಎಂಬ ಭಾವನೆ ಹೊಳೆಯುತ್ತಿದೆ. ಅಲ್ಲವಾಗಿದ್ದರೆ 'ಕಾರಕಮಾಱು ಕರ್ತೃಕರ್ಮಾದಿಕದಿಂ' ಎನ್ನಬೇಕಾಗಿತ್ತು. ಹಾಗೆಂದರೆ, ಛಂದೋಭಂಗವಾಗುತ್ತಿತ್ತು ಎಂದೆನ್ನಬಾರದು. 'ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದಿದೆಂದಱಿದು' ಪದಗಳನ್ನು ಬಳಸಬೇಕು ಎಂದು ಬೋಧಿಸಿದ 'ವಾಗಧಿಪ'ನಿಗೆ ತಕ್ಕಂತೆ ಪದಗಳನ್ನು ಪ್ರಯೋಗಿಸಲು ತಿಳಿಯುತ್ತಿದ್ದಿಲ್ಲವೆ? ನಾವು ಮೇಲೆ ಸೂಚಿಸಿದುದು ಅರ್ಥಾನುಸಾರವಾಗಿ ಮಾತ್ರವಲ್ಲದೆ ಛಂದೋಭಂಗವನ್ನು ಅಲ್ಲಗಳೆದಲ್ಲ. ಅದರಿಂದ, ಪ್ರಥಮಾವಿಭಕ್ತಿಪ್ರತ್ಯಯ ಯುತ 'ಕರ್ತೃ' ಪದವೊಂದು ಮಾತ್ರ 'ಕಾರಕವಲ್ಲ'— ಉಳಿದುವೆಲ್ಲ ಕಾರಕಗಳು ಎಂಬ ಭಾವನೆ ಅವನಿಗೆ ಇದ್ದಂತೆ ತೋರುತ್ತದೆ. ಮತ್ತಿನ ಕನ್ನಡ ವೈಯಾಕರಣರು ಈ ಭಾವನೆಯನ್ನು ಸಂಸ್ಕೃತಾನುಸಾರವಾಗಿ ಒಪ್ಪದಿದ್ದರೂ, ಅಭಿನ್ನವಾದ ದೇಸಿಯಲ್ಲಿ ಯತಿಭಂಗವನ್ನು ಗುಣವನ್ನಾಗಿ ಭಾವಿಸಿದ ಪೂರ್ವಾಚಾರ್ಯರನ್ನು ಅನುಸರಿಸಿದಂತೆ, ಅಭಿನ್ನವಾದ ದೇಸಿಯೆಂದೇ ಕಾರಕನಿರ್ಣಯವನ್ನು ಹೀಗೆ ಮಾಡಿದುದಾಗಿರಬೇಕು. ಈ ನಿರ್ಧಾರದಲ್ಲಿ ಸಕಾರಣತೆಯೂ ಇಲ್ಲವೆಂದಲ್ಲ. 'ಕಾರಕಂ' ಎಂಬ ಪದವು ಸಂಸ್ಕೃತ ವ್ಯಾಕರಣಾನುಸಾರವಾದ ವ್ಯುತ್ಪತ್ತಿಯಂತೆ 'ಮಾಡಿಸುವ ವ್ಯಕ್ತಿ'ಯನ್ನು ಸೂಚಿಸುವುದಲ್ಲದೆ, 'ಮಾಡುವ ವ್ಯಕ್ತಿ'ಯನ್ನಲ್ಲ. 'ಕಾರಯತಿ ಇತಿ ಕಾರಕಂ' ಎಂದು ಕಾರಕಪದ ವಿವೇಚನೆಯನ್ನು ಹಿಂದೆಯೇ ಮಾಡಿದ್ದೇವಷ್ಟೆ. 'ಕರೋತಿ ಇತಿ ಕರ್ತಾ' ಎಂದು 'ಕರ್ತೃ' ಪದವು ರೂಪಿತವಾಗಿದೆ. ಇಂಥ 'ಕರ್ತೃ' ಎಂಬ ಪದವು ಕಾರಕವೆನ್ನಿಸುವುದು ಹೇಗೆ? 'ನರಪತಿ ಬಂದಂ' ಎಂಬ ದೃಷ್ಟಾಂತವನ್ನು ನೋಡಿರಿ. ಅದಕ್ಕೆ "ನರಪತಿಯು ಬರುವಿಕೆ ಎಂಬ ಕಾರ್ಯವನ್ನು 'ಮಾಡಿದನು' ಎಂದಲ್ಲದೆ 'ಮಾಡಿಸಿದನು'" ಎಂದು ಅರ್ಥವಲ್ಲ. ಹಾಗಾದರೆ, 'ನರಪತಿ ಮಂತ್ರಿಯಂ ಬರಿಸಿದಂ' ಎಂದಿದ್ದಲ್ಲಿ ಹೇಗೆ? ಎಂಬ ಪ್ರಶ್ನವು ತಲೆದೋರುವುದೋ ಏನೋ. ಅಲ್ಲಿಯೂ 'ನರಪತಿ'ಯು ಬರಿಸುವುದು ಎಂಬ ಕ್ರಿಯೆಯ 'ಕರ್ತೃ'ವಲ್ಲದೆ 'ಕಾರಕ'ನಲ್ಲ; ಎಂದರೆ, ಬರಿಸುವಿಕೆಯನ್ನು ಮಾಡುವವನಲ್ಲದೆ ಮಾಡಿಸುವವನಲ್ಲ.

ಇನ್ನು, 'ಕರ್ತೃ'ವನ್ನು ಬಿಟ್ಟು 'ಕರ್ಮ ಕರಣಾದಿ'ಗಳನ್ನು ನೋಡುವ. 'ಆ ನೃಪನ ನಚ್ಚಿಯೆ ಕಾಣ್ಬುದು' ಎಂಬಲ್ಲಿ 'ನೃಪನಂ' ಎಂಬುದು ಕರ್ಮಕಾರಕ (ಪ್ರಜಾವರ್ಗವು ಆ ನೃಪನನ್ನು ಭಕ್ತಿಯಿಂದ ದರ್ಶನವೆಸಗತಕ್ಕುದು—ಎಂಬುದು ಈ ಪದ್ಯಭಾಗದ ಅರ್ಥ. ಇಲ್ಲಿ 'ಪ್ರಜಾವರ್ಗವು' ಎಂಬ ಕರ್ತೃ ಪದವನ್ನು ಕೂಡಿಸಿಕೊಳ್ಳಬೇಕು). 'ನೃಪನಂ' ಎಂಬ ಕರ್ಮ ಪದವು 'ಕಾಣ್ಬುದು' ಎಂಬ ಕ್ರಿಯಾಪದಕ್ಕೆ 'ಕರ್ಮ'ರೂಪ ಕಾರಕವೇ ಆಗುವುದು. ಅದರಂತೆ ಉಳಿದವುಗಳೂ ಸಲುವಳಿಗೊಳ್ಳುವಲ್ಲಿ ಸಂದೇಹವಿಲ್ಲ.

ಈಗ, ಬೇರೆಯವುಗಳನ್ನು ಬಿಟ್ಟು 'ಅಧೀಶ್ವರನಾ ದಯೆ ಸಾಲ್ಗುಂ' ಎಂಬುವನ್ನು ಮನಸೆವೆಸಗುವ. ಇಲ್ಲಿ 'ಅಧೀಶ್ವರನಾ' ಎಂಬ ಷಷ್ಠೀ ವಿಭಕ್ತಿಯುತವಾದ ಪದವು 'ಸಾಲ್ಗುಂ' ಎಂಬ ಕ್ರಿಯೆಯ ಕಾರಕವಲ್ಲವೆಂಬುದೇನೋ ಸರಿ. ಆ ಕ್ರಿಯೆಗೆ ಕರ್ತೃ 'ದಯೆ.' ಅಂತಹ ಕರ್ತೃರೂಪದ ದಯೆ 'ಅಧೀಶ್ವರನ ಸಂಬಂಧವಾದುದು.' ಮೇಲಿನ ವಿವೇಚನೆಗನುವಾಗಿ

'ಕರ್ತೃ' ಕಾರಕವಾಗದು ಎಂಬುದು ಸರಿಯಾದರೆ, ಈ ವಾಕ್ಯದಲ್ಲಿ 'ಕಾರಕ'ವೇ ಇಲ್ಲ ವೆನಿಸುತ್ತದೆ. ಆದರಿಂದ, ಮುಂದಿನ ನಾಮಪದಕ್ಕೆ ತನ್ನ ಸಂಬಂಧವನ್ನು ಮಾತ್ರ ಕೊಡುವ 'ಅಧೀಶ್ವರನಾ' ಎಂಬ ಪದವು ಆ ಸ್ವಸಂಬಂಧಿಯಾದ 'ದಯೆ' ಎಂಬ ಕರ್ತೃವಿನ ಮೂಲಕವಾಗಿ 'ಸಾಲ್ಗುಂ' ಎಂಬ ಭಾವನಾತ್ಮಕ ಕ್ರಿಯೆಯನ್ನು ಮಾಡಿಸುವುದಲ್ಲವೆ? ಇನ್ನೊಬ್ಬನ 'ದಯೆ'ಯಾದರೆ, ಅದು 'ಸಾಲ್ಗುಂ' ಎಂಬುದಕ್ಕೆ ಕರ್ತೃವಾಗಲಾರದು. ಅದರಿಂದಲೇ ಷಷ್ಠೀ ವಿಭಕ್ತಿಯುಕ್ತ ಪದವು ಮುಂದಿನ ನಾಮಪದಕ್ಕೆ ತನ್ನ ಸಂಬಂಧ ವನ್ನಿತ್ತು ಆ ಮೂಲಕವಾಗಿ ಕ್ರಿಯೆಗೆ ಕಾರಕವಾಗುವುದು. ಅದನ್ನು ಬೇಕಾದರೆ 'ಸಂಬದ್ಧ ಕಾರಕ' ಎಂದು ಕರೆಯಬಹುದು.

ಇಷ್ಟು ಮಾತ್ರವಲ್ಲ. ಪ್ರಾಕೃತ ದೇಶಿಗಳಲ್ಲಿ ಷಷ್ಠೀ ವಿಭಕ್ತಿಕ ಪದಕ್ಕೆ ಕರ್ಮಾದಿಯಾದ ಕೆಲವು ಕಾರಕಗಳ ಅಧಿಕಾರವೂ ಇದ್ದಂತೆ ಗೊತ್ತಾಗುತ್ತಿದೆ. ಲಕ್ಷ್ಮೀಧರನ 'ಷಡ್ಭಾಷಾ ಚಂದ್ರಿಕೆ'ಯ 'ಶಾಸ್ತ್ರೋಪೋದ್ಘಾತ ಪ್ರಕ್ರಿಯಾ' ಎಂಬ ಭಾಗದೊಳಗಿನ ಈ ಶ್ಲೋಕಾಂಶ ಗಳನ್ನೀಕ್ಷಿಸಿರಿ.

(೧) ದ್ವಿತೀಯಾದಿ ವಿಭಕ್ತೀನಾಂ ಸ್ಥಾನೇ ಷಷ್ಠೀ ಕ್ವಚಿದ್ಭವೇತ್
ಚತುರ್ಥ್ಯಾ ಅಪಿ ಷಷ್ಠೀ ಸ್ಯಾನ್ನಿತ್ಯಮೇಕಬಹುತ್ವಯೋಃ

ತಾದರ್ಥ್ಯೇ ತು ಚತುರ್ಥ್ಯಾಃ ಸ್ಯಾದೇಕತ್ವೇ ಸಾ ವಿಕಲ್ಪಿತಾ
ವಧಾತ್ಪರಸ್ಯ ಙೇಃ ಸ್ಥಾನೇ ಷಷ್ಠೀ ಡಾಯಿ ಚ ವಾ ಭವೇತ್[1]

ಈ ಲಕ್ಷಣಕ್ಕೆ ಅದೇ ಗ್ರಂಥದೊಳಗಿನ ದೃಷ್ಟಾಂತಗಳನ್ನೀಕ್ಷಿಸಿರಿ—

(೨) ಕ್ವಚಿದಸಾದೇ: (೨-೩-೩೮)[2]
ಙಮನುವರ್ತತೇ (ದ್ವಿತೀಯಾದಿ ವಿಭಕ್ತಿಗಳ ಸ್ಥಾನದಲ್ಲಿ ಕೆಲವೆಡೆ ಷಷ್ಠಿಯಾಗುತ್ತದೆ).
(ಅಸ್ = ದ್ವಿತೀಯೆ ; ಙಮ್ = ಷಷ್ಠಿ)
ಉದಾ: ಮಾಹವಸ್ಸ ವಂದೇ (ಮಾಧವಂ ವಂದೇ);
ಧಣಸ್ಸ ಲದ್ಧೋ (ಧನೇನ ಲಬ್ಧಃ);
ಚೋರಸ್ಸ ಭಿಹಇ (ಚೋರಾದ್ಬಿಭೇತಿ);
ಅಂತೇಉರಸ್ಸ ರಮಿಉಂ ಆಅಓ (ಅಂತಃಪುರೇ ರಂತುಮಾಗತಃ);

(೩) ಙೇಸೋ ಙಮ್ (೨-೩-೩೫)[3] (ಚತುರ್ಥಿಯ ಸ್ಥಾನದಲ್ಲಿ ಷಷ್ಠಿಯಾಗುತ್ತದೆ).
ಉದಾ: ಮುಣಿಸ್ಸ ಮುಣಿಣೋ ಭೋಅಣಂ ದೇಹಿ (ಮುನಯೇ ಮುನಿಭ್ಯಃ ಭೋಜನಂ ದೇಹಿ);
ಣಮೋ ದೇವಸ್ಸ ದೇವಾಣ (ನಮಃ ದೇವಾಯ ದೇವೇಭ್ಯಃ)

(೪) ತಾದರ್ಥ್ಯೇ ಙೇಸ್ತು (೨-೩-೩೬)[4]—ತಾದರ್ಥ್ಯಾರ್ಥದಲ್ಲಿ ಚತುರ್ಥಿಯ ಏಕವಚನ ಸ್ಥಾನದಲ್ಲಿ ಷಷ್ಠಿಯು ವಿಕಲ್ಪವಾಗಿ ಬರುವುದು.

---

[1] ಕೆ. ಪಿ. ತ್ರಿವೇದಿ, (ಸಂ.): ಲಕ್ಷ್ಮೀಧರನ 'ಷಡ್ಭಾಷಾ ಚಂದ್ರಿಕೆ', ಪುಟ ೬.
[2] ಅದೇ ಗ್ರಂಥ ಪು. ೧೬೨; ೩. ಅದೇ ಗ್ರಂಥ ಪು. ೧೬೧; ೪ ಅದೇ ಗ್ರಂಥ ಪು. ೧೬೨.

ಉದಾ : ದೇವಸ್ಸ—ದೇವಾಯ (ದೇವಾರ್ಥಮಿತ್ಯರ್ಥಃ)

(೫) ವಧಾಡ್ಡಾ ಇ ಚ (೨-೩-೩೭)[1]—'ವಧ' ಎಂಬ ಪದಕ್ಕೆ ಉತ್ತರದ ಚತುರ್ಥೀ ಸ್ಥಾನದಲ್ಲಿ 'ಆ ಇ' ಎಂಬುದೂ ಕೆಲವೆಡೆ ಷಷ್ಠಿಯೂ ಕಂಡುಬರುತ್ತವೆ.

ಉದಾ : ವಹಾಇ—ವಹಸ್ಸ—ವಹಾಯ (ವಧಾರ್ಥಂ)

ಕನ್ನಡ ವೈಯಾಕರಣರೂ ಈ ವಿಚಾರವನ್ನು 'ವಿಭಕ್ತಿ ಪಲ್ಲಟ' ಎಂಬ ಹೆಸರಿನಿಂದ ವಿಸ್ತರಿಸಿದ್ದಾರಷ್ಟೆ. ಇದು ದೇಸಿಯಲ್ಲಿ ಪುರಾತನ ಕಾಲದಿಂದಲೂ ನಡೆದು ಬಂದು ಈಗಲೂ ನೆಲೆಗೊಂಡಿರುವ ಪದ್ಧತಿ ಎಂಬುದನ್ನು ಮರೆಯಬಾರದು. ಮಾತ್ರವೇ ಅಲ್ಲ; ಈ ವಿಚಾರವನ್ನೆಲ್ಲ ಮಥನವೆಸಗಿಯೆ ಆಗಿರಬೇಕು—ನಾಗವರ್ಮನು ತನ್ನ 'ಭಾಷಾಭೂಷಣ'ದಲ್ಲಿ 'ಕಾರಕ'ವನ್ನು ಲಕ್ಷಿಸುವ ರೀತಿಯನ್ನೀಕ್ಷಿಸಿರಿ :

ಸೂತ್ರ : ಅಥ ಕಾರಕಂ ನಿರೂಪ್ಯತೇ—

ವೃತ್ತಿ : ಸಂಜ್ಞಾ ಸಂಧಿ ವಿಭಕ್ತಿ ವ್ಯಾಖ್ಯಾನಾನಂತರಂ ಕರ್ತೃಕರ್ಮ ಸಂಪ್ರದಾನಾಪಾದಾನ ಸ್ವಾಮ್ಯಾಧಿಕರಣಾಖ್ಯಂ ಕಾರಕಂ ಯಥಾಕ್ರಮಂ ನಿರೂಪ್ಯತೇ[2]

ಈ ಸೂತ್ರ ವೃತ್ತಿಗಳಿಂದ ಸ್ವಾಮಿ ಸಂಬಂಧದ ಷಷ್ಠಿಯೂ ಕಾರಕವೆಂದು ಸೂಚಿಸಿದಂತಾಗುತ್ತಿದೆ. ಆದರೆ, ಅದರೊಡನೆ ಕರ್ತೃವೂ ಕಾರಕವೆಂಬುದನ್ನು ಸಂಸ್ಕೃತ ವೈಯಾಕರಣ ಮಾರ್ಗದಲ್ಲಿ ಅವನೇ ಸೂಚಿಸಿದ್ದಾನೆ. ಇಲ್ಲಿ 'ಕರ್ಮಕರಣಾದಿಕದಿಂ' ಎಂಬ ಗ್ರಂಥಕಾರನ ಹೇಳಿಕೆಯನ್ನಾಧರಿಸಿ ಕಾರಕ ಕರ್ತೃಗಳ ವ್ಯುತ್ಪತ್ತಿ ಕ್ರಮವನ್ನು ಬಿಡಿಸಿ, ಕರ್ತೃ ಕಾರಕವಾಗದೆಂದೂ ಕರ್ಮಾದಿಗಳು ಮಾತ್ರವೇ ಕಾರಕಗಳೆಂದೂ ನಿರ್ಧರಿಸಿಕೊಂಡುದು ನಾವೆ. ಇದರ ತಪ್ಪೊಪ್ಪುಗಳನ್ನು ವಿದ್ವಾಂಸರೇ ನಿರ್ಧರಿಸಿ ನಿರೂಪಿಸಬೇಕು.

ಕಾರಕದ ನಿಜಸ್ವರೂಪವನ್ನು ಹೀಗೆ ನಿರ್ಧರಿಸಿದ ಗ್ರಂಥಕಾರನು ಪ್ರಕೃತವಾದ ಅದರ ದೋಷಗಳನ್ನು ಕಾಣಿಸುತ್ತಾನೆ.

> ಬರವೆಮಗೀಗೆ ದೇವತೆಗಳಾದರದಿಂ ಕರುಣಿಪ್ಪುದಕ್ಕೆ ಬಂ
> ಧುರಗುಣಬಂಧುಸಂತತಿಯನೆಂಬುದು ಕಾರಕದೋಷಮಾಗಳುಂ
>
> —i, 115 (ಪೂರ್ವಾರ್ಧ)

ಎಂದು ಅಲ್ಲಗಳೆಯುತ್ತಾನೆ. ಆ ಮೇಲೆ ಮುಂದಿನ ಅರ್ಧ ಭಾಗದಲ್ಲಿ ಅದನ್ನೇ ತಿದ್ದಿ—

> ಬರವನವೋಘಮಾಗೆಮಗೆ ದೇವತೆಗಳ್ ಕರುಣಿಪ್ಪುದಕ್ಕೆ ಬಂ
> ಧುರಗುಣಬಂಧುಸಂತತಿಗೆ ನಿಕ್ಕುವಮೆಂಬುದದುಷ್ಟಕಾರಕಂ
>
> —i, 115 (ಉತ್ತರಾರ್ಧ)

---

[1] ಅದೇ ಗ್ರಂಥ ಪು. ೧೬೨.

[2] ಕರ್ಣಾಟಕ ಭಾಷಾಭೂಷಣ—'ಕಾರಕ ವಿಧಾನಂ' ಎಂಬ ಚತುರ್ಥ ಪ್ರಕರಣದ ಆದಿಭಾಗ.

ಎನ್ನುತ್ತಾನೆ. ಹಿಂದಿನ ಭಾಗದ ಕಾರಕ ದೋಷಕ್ಕೆ ಕಾರಣವೇನು, ಮುಂದಿನೆಡೆಯಲ್ಲಿ ಅದು ಹೇಗೆ ಸರಿಗೊಂಡಿದೆ—ಎಂಬುದನ್ನು ಕ್ರಮಗೊಂಡು ವಿವರಿಸಿದರೆ ಉತ್ತಮವೆಂದು ತೋರುವುದು. 'ದೇವತೆಗಳ್ ಆದರದಿಂ ಬರಮೆಮಗೆ ಈಗೆ, (ಆ ವರದಾನ ಕ್ರಿಯೆ) ಬಂಧುರಗುಣಬಂಧುಸಂತತಿಗೆ ಕರುಣಿಪ್ಪುದು ಅಕ್ಕೆ'—ಎಂಬುದು ಹಿಂದಿನ ಭಾಗದ ಅನ್ವಯ. 'ದೇವತೆಗಳು ನಮಗೆ ಸೌಭಾಗ್ಯವನ್ನು ಒದಗಿಸಲಿ; ಆ ನಮ್ಮ ಸೌಭಾಗ್ಯವು ಸ್ವಾರ್ಥರಹಿತವಾಗಿ ಬಂಧುಬಾಂಧವರ ಏಳಿಗೆಯಲ್ಲಿ ಪರಿಣಮಿಸಲಿ'—ಎಂದು ಇದರ ತಾತ್ಪರ್ಯ. ಇಲ್ಲಿ 'ಬರಮೆಮಗೀಗೆ' ಎಂಬ ರಚನೆಯಿಂದ, ಗುರಿಗೊಂಡ ಅರ್ಥವು ಒದಗಲಾರದು. 'ಬರಂ ಎಮಗೆ ಈವುದು' ಎಂಬ ರಚನೆಗೆ 'ವರವು ನಮಗೆ ಕೊಡುವುದು' ಎಂಬ ಅರ್ಥವಾಗುವುದು; ಆದರಿಂದ, ಅರ್ಥಸಂಬಂಧವು ನೇರ್ಪುಗೊಳ್ಳುವಂತಾಗಿ ಪದ ರಚನೆ ದುಷ್ಟವೆನ್ನಿಸುತ್ತಿದೆ. ಅದನ್ನು ಒಂದೋ ಉತ್ತರಾರ್ಧದಲ್ಲಿ ಸೂಚಿಸಿದಂತೆ 'ಬರಮಂ ಈಗೆ' ಎಂದು ಮಾರ್ಪಡಿಸಿಕೊಳ್ಳಬೇಕು; ಅಥವಾ ಕ್ರಿಯಾಪದವನ್ನು ಬೆರಸಿ 'ಬರಮೀಗೆ' ಎಂದು ಕ್ರಿಯಾಸಮಾಸವೆಸಗಬೇಕು. ಈ 'ಬರಮೀಗೆ' ಎಂಬುದನ್ನು ವಿಗ್ರಹಿಸಿಕೊಂಡಲ್ಲಿ 'ಬರಮಂ ಈಗೆ—ಬರಮೀಗೆ' ಎಂಬ ರೂಪವು ಮಾರ್ಗಾನುಸಾರವಾಗಿಯೇ ಸಲ್ಲುವುದು. ಇದನ್ನೀಕ್ಷಿಸಿದಲ್ಲಿ ಗ್ರಂಥಕಾರನು ತನ್ನ ಹಿಂದಿನ ಸೂಚನೆಯಂತೆ 'ಕರ್ಮ' ಕಾರಕದಿಂದಲೇ ಪ್ರಾರಂಭಿಸುತ್ತಾನೆಂಬುದು ಹೊಳೆಯುತ್ತಿದೆ. ಈ ಪದ್ಯದ ಪೂರ್ವಾರ್ಧ ಭಾಗದಲ್ಲಿ ದೋಷವನ್ನೂ ಉತ್ತರದಲ್ಲಿ ಗುಣವನ್ನೂ ನಾವು ಹೀಗೆ ವಿವೇಚಿಸಿದುದು—ಗ್ರಂಥಕಾರನೇ ಕೊಟ್ಟ ವೃತ್ತಿಯನ್ನು ಅನುಸರಿಸಿ. ಆ ವೃತ್ತಿ ರೂಪದ ಪದ್ಯವನ್ನು ನೋಡಿರಿ :

ನಿಕ್ಕುವಮಿಂತುಮಲ್ಲಪದಜಾ ಕ್ರಿಯೆ ಸಾರ್ದಿರೆ ಪತ್ತಿ ಮುಂದೆ ಸೈ
ತಕ್ಕುಮನುಕ್ರಮಾನುಗತದಿಂ ಬರಮೀಗೆಮಗೆಂಬ ಕಾರಕಂ
ಸಕ್ಕದಪೇನೊ ಕಾರಕವಿಭಕ್ತಿಯೊಳೊಂದೆ ಸಮಾಸಯುಕ್ತಿ ಲೇ
ಸಕ್ಕುಮಭೇದರೂಪಗುಣಮಾಗಿ ತಗುಳ್ದಿರೆ ಮೇಣ್ ಕ್ರಿಯಾಪದಂ —(i, 116)

'ಬರಮೆಮಗೀಗೆ' ಎಂದರೆ ಕಾರಕ ದೋಷವಾಗುವುದು; ಶುದ್ಧವಾಗಬೇಕಾದರೆ, 'ಬರದ ಮೋಘಮೀಗೆ' ಎನ್ನಬೇಕು—ಎಂದು ಹೇಳಿದ ಮೇಲೆ, ಕಾರಕದ ನಿರ್ದೋಷತೆಗೆ ಇನ್ನೊಂದು ಉಪಾಯವನ್ನು ಸೂಚಿಸುವ ಪದ್ಯವಿದು. ಈ ಕ್ರಿಯಾಪದವು ಅವ್ಯವಹಿತವಾಗಿದ್ದುಕೊಂಡು ಹಿಂದಿನ ಕಾರಕದೊಡನೆ ಸಮಾಸವನ್ನೊಂದಬಹುದು. ಹಾಗಾದಲ್ಲಿ, ಪೂರ್ವೋಕ್ತ ದೃಷ್ಟಾಂತವು 'ಬರಮೀಗೆ' ಎಂದಾಗುವುದು. ಆ ಸಮಾಸಯೋಜನೆ, ಹಿಂದೆ ವಿಸ್ತರಿಸಿದ 'ಸಮಸಂಸ್ಕೃತಂಗಳೊಳ್ ಸಮ್ಮತಮಿರ್ದಿರೆ ಕನ್ನಡಮನಜಂದು ಪೇೞ್ಕೆ' ಎಂಬ ಸೂತ್ರಾನುಸಾರವಾಗಿ ಮಾರ್ಗವೆನ್ನಿಸುವುದು. ಹಿಂದಿನದು 'ಬರ' ಅಲ್ಲದೆ 'ವರ' ಎಂಬ ಸಂಸ್ಕೃತವಾದರೂ ಏನು? ಅದು ತನ್ನ ಕಾರಕವಿಭಕ್ತಿಯ 'ಅಮ್' ಎಂಬ ಪ್ರತ್ಯಯದಿಂದ ಬೆರಸಿ, ಆ ಮೇಲೆ 'ಈಗೆ' ಎಂಬ ಕ್ರಿಯೆಯೊಡನೆ ತಗಲಿತು. ಆಗ ಮಧ್ಯಗತ ವಿಭಕ್ತಿ ಪ್ರತ್ಯಯವು ಲೋಪಗೊಂಡು ರೂಪಿತವಾದ ಸಮಾಸಯೋಜನೆ ಮಾರ್ಗೀಯವೇ ಆಗಿದೆ. ಇಲ್ಲಿ ಸೂಚಿತವಾದ 'ಕಾರಕ ವಿಭಕ್ತಿ' ಎಂಬುದಕ್ಕೆ ಮೊದಲು ಸೂಚಿಸಿದ 'ಕರ್ಮ

ಕರಣಾದಿಕದಿಂ' ಎಂಬುದರಲ್ಲಿ ಮೊದಲಿನದು ಕರ್ಮವಿಭಕ್ತಿ ಎಂಬುದನ್ನು ಭಾವಿಸಿರಿ. ಉಳಿದ ಕಾರಕದೋಷಗಳನ್ನು ಮನನಮಾಡಿಕೊಳ್ಳಬಹುದು.

## ವಚನ ದೋಷ

ಹೀಗೆ ಕಾರಕ ದೋಷವನ್ನು ವಿವರಿಸಿದ ಮೇಲೆ, ಗ್ರಂಥಕಾರನು ವಚನದೋಷವನ್ನೂ ತನ್ನಿವೃತ್ತಿ ಕ್ರಮವನ್ನೂ ವಿವೇಚಿಸುತ್ತಾನೆ—

ಬಂದುವು ಪಾವುಡಂ ನೃಪತಿಗೆಂಬುದುಮಾನೆಗಳೀ ಪ್ರದೇಶದೊಳ್
ನಿಂದುದಿದೆಂಬುದುಂ ವಚನದೋಷವಿಶೇಷಮನೈಪುಣೋಕ್ತಿಯಿಂ
ಬಂದುದು ಪಾವುಡಂ ನೃಪತಿಗೆಂಬುದುಮಾನೆಗಳೀ ಪ್ರದೇಶದೊಳ್
ನಿಂದುವಿವೆಂಬುದುಂ ಬಗೆದು ನೋಡೆ ಗುಣಂ ವಚನಕ್ಕೆ ನಿಕ್ಕುವಂ —(i, 117)

ಇಲ್ಲಿ, 'ನೃಪತಿಗೆ ಪಾವುಡಂ ಬಂದುವು'; 'ಈ ಪ್ರದೇಶದೊಳ್ ಆನೆಗಳ್ ನಿಂದುದು'—ಎಂಬೆರಡೂ ವಚನದೋಷಗಳು. ಪೂರ್ವಾರ್ಧದ ಮೊದಲಿನ ವಾಕ್ಯದಲ್ಲಿ ಕರ್ತೃಪದವು ಏಕವಚನದಲ್ಲಿದ್ದರೆ, ಕ್ರಿಯಾಪದವು ಬಹುವಚನದಲ್ಲಿದೆ; ಮತ್ತಿನದರಲ್ಲಿ ಕರ್ತೃಪದವು ಬಹುವಚನವನ್ನೊಂದಿದರೆ, ಕ್ರಿಯಾಪದವು ಏಕವಚನವಾಗಿದೆ. ಇವು ವಚನದೋಷಗಳೆಂಬಲ್ಲಿ ಸಂದೇಹವಿಲ್ಲವಷ್ಟೆ. ಉತ್ತರಾರ್ಧದಲ್ಲಿ ಕ್ರಮವಾಗಿ ಅವು ತಿದ್ದಿ ನಿರೂಪಿತವಾಗಿವೆ. ಅದು ಸುಲಭ ವಿಚಾರವಾದರೆ, ಮುಂದಿನದೂ ಅದೇ ಸಾಲಿನದೆನ್ನಲಾಗದು. ಹಿಂದೆ ಸೂಚಿಸಿದ ಲಕ್ಷಣದಲ್ಲಿ ತೋರುವ ಈ ವಚನವಿಭಾಗ, ಆ ವಿಭಾಗಯುತಪದಗಳು ಕ್ರಿಯಾಪದಗಳೊಡನೆ ವಾಕ್ಯಗಳಲ್ಲಿ ಸಲುವಳಿವಡೆವ ದೇಶಿಯಾದ ಪದ್ಧತಿ, ಅದರಿಂದ ಮಾರ್ಗದಲ್ಲಿ ಗುಣವೆಂದೂ ಅವಗುಣವೆಂದೂ ಭಾಸವಾಗುವ ಬಗೆ—ಇವುಗಳನ್ನು ವಿವರಿಸಲೇಬೇಕು. ಅದನ್ನು ಹಿಂದೆ ದೃಷ್ಟಾಂತಿಸಿದ ೧೧೩ನೆಯ ಪದ್ಯಾಂತದಲ್ಲಿ 'ಪೇಟ್ತ್ವನಿಂತಿವಱ ಜಾತಿವಿಭಾಗ ಗುಣಾಗುಣಂಗಳಂ' ಎಂದು ಸೂಕ್ಷ್ಮವಾಗಿ ಗ್ರಂಥಕಾರನು ಸೂಚಿಸಿದ್ದಾನೆ. ಈ ವಿಷಯಕವಾದ ಅವನ ವಿವೇಚನೆಯಲ್ಲಿ ಮನವಿರಿಸುವ :

ಜಾತಿವಿಭಾಗಮುಂ ಬಗೆದು ಪೇೞೆ ಬಹುತ್ವಮನೇಕ ವಾಕ್ಯ ಸಂ
ಜಾತಗುಣಂ ತದೇಕವಚನಂಗಳೊಳಂ ದೊರೆವೆತ್ತು ಕೂಡುಗುಂ
ಮಾತಿನೊಳೇನೊ ಸಂಖ್ಯೆಗಳೊಳೇಕಬಹುತ್ವವಿಪರ್ಯಯಕ್ಕೆ ಸಂ
ಖ್ಯಾತಗುಣಂ ವಿಕಲ್ಪಮದು ಕನ್ನಡದೊಳ್ ಗುಣಮುಂ ತಗುಳ್ಕುಗುಂ —(i, 118)

ಇದರ ವಿವೇಚನೆಯನ್ನು ಎಚ್ಚರಿಕೆಯಿಂದೆಸಗಿ ದೃಷ್ಟಾಂತದಲ್ಲಿ ಪೋಣಿಸಿ ನೋಡತಕ್ಕುದು. 'ಅನೇಕ ವಾಕ್ಯಗಳಲ್ಲಿ ಸಂಜಾತಗುಣವಾದ ಬಹುತ್ವವು, ಜಾತಿ ವಿಭಾಗವನ್ನು ಬಗೆದು ಹೇಳುವಲ್ಲಿ, ಏಕವಚನಗಳಲ್ಲಿಯೂ ಸಾಗುತ್ತಿದೆ; ಎಂದರೆ ಬಹುವಚನ ಏಕವಚನಗಳಲ್ಲಿ ಕವಿ ಭಾವನೆಗನುಸಾರವಾಗಿ ವಿಕಲ್ಪಿಸಬಹುದು. ಮಾತ್ರವಲ್ಲ, ಸಂಖ್ಯಾವಾಚಕ ಪದಗಳಲ್ಲಿಯೂ ಈ ವಿಕಲ್ಪವು ಗುಣವಾಗಬಹುದು'—ಇದು ಈ ಪದ್ಯದ ಅನ್ವಯಾರ್ಥ. ಇಲ್ಲಿ 'ಜಾತಿ ವಿಭಾಗ' ಮತ್ತು 'ಬಹುತ್ವಮನೇಕ ವಾಕ್ಯ ಸಂಜಾತಗುಣಂ' ಎಂಬೆರಡನ್ನು ಒಂದಿಷ್ಟು

ಪ್ರ[illegible]ರಿಸತಕ್ಕುದು. ಸಮಾನ ಸ್ವರೂಪ ಗುಣಾದಿಗಳಿಂದ ಕೂಡಿದ ಪದಾರ್ಥವರ್ಗಕ್ಕೆ 'ಜಾತಿ' ಎಂಬ ಹೆಸರು. ಉದಾ: 'ಇದು ಮನುಷ್ಯನಿಗೆ ಸಲ್ಲದ ಕಾರ್ಯ', ಇಲ್ಲಿ 'ಮನುಷ್ಯನಿಗೆ' ಎಂಬುದು ಏಕವಚನವಾಗಿದ್ದರೂ, 'ಮನುಷ್ಯ ಜಾತಿಯಲ್ಲಿ ಜನಿಸಿದವರಿಗೆ' ಎಂದು ಮನುಷ್ಯಸಾಮಾನ್ಯ ವಾಚಕವಾಗಿದೆ. ಇಂತಹ ಸಂದರ್ಭದಲ್ಲಿ, ಬಹುವಚನ ಕ್ಕಿಂತಲೂ ಏಕವಚನವೇ ಯುಕ್ತವಾಗಿದೆ. 'ಮನುಷ್ಯರಿಗೆ' ಎಂದು ಬಹುವಚನವಾಗಿದ್ದರೆ, ಕೆಲವರು ಅಂಥ ನೀಚಕಾರ್ಯ ಪ್ರವರ್ತಕರಿದ್ದಲ್ಲಿ ಲಕ್ಷಣ ಸಮನ್ವಯವಾಗದು. ಏಕವಚನ ವಾಗಿದ್ದರೆ, ಅಂಥ ನೀಚರು ಬಾಹ್ಯದಲ್ಲಿ ಮನುಷ್ಯರಾಗಿ ತೋರಿದರೂ, ಆಂತರಂಗಿಕವಾಗಿ ನೋಡಿದರೆ, ಮನುಷ್ಯರೇ ಅಲ್ಲ ಎಂಬ ಭಾವನೆ ಹೊಳೆಯುವುದು. ಉತ್ತಮವಾದ ದೇಸಿ ಯಲ್ಲೇ ನೆಲೆಗೊಂಡ ಈ ಪದ್ಧತಿಯನ್ನು ಮಾರ್ಗವು ಮನ್ನಿಸುತ್ತದೆ. ಸಂಸ್ಕೃತದಲ್ಲಿ 'ಜಾತಾ ವೇಕವಚನಂ' ಎಂಬುದು ಇಂಥ ಸಂದರ್ಭದಲ್ಲಿ ರೂಢವಾಗಿದೆ. ಅಷ್ಟೇ ಅಲ್ಲ; ಕಣ್ಣು, ಕೈ, ಕಾಲು ಮೊದಲಾದ ಎರಡೆರಡಾಗಿರುವ ಪ್ರಾಣ್ಯಂಗಗಳನ್ನು ಸೂಚಿಸುವಲ್ಲಿಯೂ ಏಕ ವಚನವನ್ನೇ ಉಪಯೋಗಿಸುವುದು ಪದ್ಧತಿ. ಅವುಗಳನ್ನು ಸಂಸ್ಕೃತದಲ್ಲಾದರೆ, ದ್ವಿವಚನ ದಲ್ಲೂ ದೇಶೀಯ ಭಾಷೆಗಳಲ್ಲಿ ಬಹುವಚನದಲ್ಲೂ ಯೋಜಿಸತಕ್ಕುದು. ಇಂಥ ಒಂದು ಜಾತಿಗೆ ಸೇರಿದ ಭಿನ್ನ ಭಿನ್ನ ವ್ಯಕ್ತಿಗಳ ಗುಣದೋಷಗಳನ್ನು ವಿಸ್ತರಿಸಬೇಕಾದಲ್ಲಿ, ಅದಕ್ಕೆ 'ಅನೇಕ ವಾಕ್ಯ'ಗಳು ಅವಶ್ಯವಾಗುವುವು. ಹಾಗೆ 'ಅನೇಕವಾಕ್ಯ ಸಂಜಾತ ಗುಣ' ವಾದುದು ಆ ಜಾತಿಗತ ವ್ಯಕ್ತಿಗಳ 'ಬಹುತ್ವ.' ಆ ಬಹುತ್ವಾರ್ಥವು ಜಾತಿಸೂಚಕ ಗಳಾದ 'ಏಕವಚನಂಗಳೊಳಂ' ಸಲುವಳಿಯಾಗುವುದು. ವಿವೇಚನೆಯಿದು ಮುಂದಿನ ಉದಾಹರಣೆಯಿಂದ ವಿಶದವಾಗುವುದು :

ಕುದುರೆ ತಗುಳ್ದುವಾ ದೆಸೆಯ ಬಿಲ್ಲವರಂ ಸುಜಿದಾನೆ ನಿಂದು ಮೆ
ಟ್ಟಿದುವೆಲೆ ನೋಡಿಮೆಂಬುದಿದು ಜಾತಿಕೃತೈಕಬಹುತ್ವಮೊಂದುಗುಂ
ಕುದಿಕುದಿದತ್ತಣಿಂ ಕುದುರೆ ನೂಱಱೊಳಾ ಬಲದಾನೆ ಪತ್ತು ತಾ
ಗಿದುವೆನೆ ದೋಷಮಾ ಪಿರಿದು ಸಂಖ್ಯೆಯೊಳೇಕಬಹುತ್ವಸಂಗಮಂ —(i, 119)

'ಕುದುರೆ ಆ ದೆಸೆಯ ಬಿಲ್ಲವರಂ ತಗುಳ್ದುವು'—ಎಂಬ ವಾಕ್ಯದಲ್ಲಿ ಕರ್ತೃವಾದ 'ಕುದುರೆ' ಏಕವಚನದಲ್ಲಿದ್ದು, 'ತಗುಳ್ದುವು' ಎಂಬ ಬಹುವಚನ ಕ್ರಿಯಾಪದವನ್ನೊಂದಿದೆ. ಅದರಂತೆ ಮತ್ತಿನ ಏಕವಚನದ ಕರ್ತೃವಾದ 'ಆನೆ' ಬಹುವಚನದ 'ಮೆಟ್ಟಿದುವು' ಎಂಬ ಕ್ರಿಯೆ ಯೊಡನೆ ಅನ್ವಯಿಸಿದೆ. ಇಂಥ 'ಜಾತಿಕೃತೈಕ ಬಹುತ್ವಂ', ಎಂದರೆ ಜಾತಿ ಸಂಬಂಧ ದಿಂದೊಡಗೂಡಿ ಏಕವಚನದಲ್ಲಿರುವ ಕರ್ತೃಪದವು ಬಹುವಚನ ಕ್ರಿಯಾಪದದಲ್ಲಿ ಸೇರುವ ಪದ್ಧತಿ, ಸಲುವಳಿಯಾಗುವುದೆಂಬುದನ್ನೂ ಗ್ರಂಥಕಾರನು ಹಿಂದೆ ಸೂಚಿಸಿದ್ದಾನೆ. ಶುದ್ಧ ವ್ಯಾಕರಣಕ್ಕೊಪ್ಪದ ಇಂಥ ದೇಸಿಯ ಬಳಕೆಯನ್ನು ಮಾರ್ಗೀಯ ಕಾವ್ಯಗಳೂ ಕೈಕೊಳ್ಳು ವುದೇಕೆ—ಎಂಬ ಪ್ರಶ್ನೆ ಸಲ್ಲದು. 'ರೂಢಿರ್ಯೋಗಾಪಹಾರಿಣೀ', 'ಪ್ರಯೋಗಶರಣಾ ವೈಯಾಕರಣಾಃ' ಎಂಬ ವಿದ್ವಾಂಸರ ಬೋಧನೆಯನ್ನೆಣಿಸಿದಲ್ಲಿ, ರೂಢಿ (ದೇಸಿ), ಯೋಗ (ವ್ಯಾಕರಣ ನಿಯಮ)ಗಳ ಮಟ್ಟವೆಂತಹದು ಎಂಬುದು ವ್ಯಕ್ತವಾಗುವುದು. ಈ

ದೇಸಿಯ ವಿಶಿಷ್ಟ ಪದ್ಧತಿಯಲ್ಲಿ ಅದೊಂದು ಅರ್ಥವಿಶೇಷವಿದೆ. ಅದರಿಂದಲೆ, ಮಾರ್ಗಾನುಯಾಯಿ ಕವಿಗಳು ಬರಿಯ ವ್ಯಾಕರಣನಿಯಮವನ್ನುಳಿದು ಇದನ್ನವಲಂಬಿಸಿಬೇಕು. 'ಕುದುರೆ ತಗುಳ್ದುದಾ ದೆಸೆಯ ಬಿಲ್ಲವರಂ' ಎಂದರೆ 'ಒಂದೇ ಕುದುರೆ ಇದಿರ್ಗಾಳಿಗಳಾದ ಬಿಲ್ಲುಗಾರರನ್ನು ಇದಿರಿಸಿತು' ಎಂದಾಗುವುದಲ್ಲದೆ, ಜಾತ್ಯರ್ಥವನ್ನೊಂದಿ 'ಎಲ್ಲಾ ಕುದುರೆಗಳು ತಗುಲಿದವು' ಎಂಬ ಉದ್ದಿಷ್ಟಾರ್ಥವಾಗದು. 'ಕುದುರೆಗಳ್....ತಗುಳ್ದುವು' ಎಂದರೆ, ಬಹುವಚನ ಬಲದಿಂದ 'ಕೆಲವು ಕುದುರೆಗಳು ಮಾತ್ರವೇ ತಗುಲಿದುವು' ಎಂಬ ಅರ್ಥವೂ ಒದಗಿ ಗುರಿತಪ್ಪಿಹೋಗುವುದಕ್ಕೂ ಎಡೆಯುಂಟು. ಅದರಿಂದಲೇ, ಈ ದೇಸಿ ಅರ್ಥಾನುಗತವಾಗಿ ಸಹೃದಯರ ಎದೆಯನ್ನಾಕರ್ಷಿಸಿರಬೇಕು. ಹಾಗಾದರೆ, ಇದರಂತೆ 'ಕುದುರೆಗಳ್ ತಗುಳ್ದುದು' ಎಂದು ಬಹುವಚನದ ಕರ್ತೃಪದವನ್ನು ಏಕವಚನದ ಕ್ರಿಯಾಪದದೊಡನೆ ಯೋಜಿಸಬಹುದೆ ?—ಅದಾಗದು. ಅದು ದೇಸಿ, ಮಾರ್ಗ, ವ್ಯಾಕರಣಗಳೆಂಬ ಮೂರಕ್ಕೂ ಹೊರಗಾದುದು. ಯಾಕೆಂದರೆ, ದ್ರವ್ಯ ಗುಣಗಳೆಂಬ ಪದಾರ್ಥಗಳಿಗೆ ಮಾತ್ರವೆ ಜಾತಿ (ಸಾಮಾನ್ಯ) ಸಂಬಂಧಿಸಿದುದಲ್ಲದೆ ಕ್ರಿಯಾಪದಕ್ಕಲ್ಲ. ಈ ವಿಷಯವನ್ನೆಲ್ಲ ಭಾವಿಸಿಕೊಂಡು, ಉತ್ತರಾರ್ಧದ ದೋಷವನ್ನು ಪರಿಭಾವಿಸಿರಿ : '....ಕುದುರೆ ನೂಱುಱೊಳ್ ಆ ಬಲದಾನೆ ಪತ್ತು ತಾಗಿದುದು ಎನೆ ದೋಷಂ' ಎನ್ನುತ್ತಾನೆ. ಇದು ದೋಷವೆಂಬುದು ಹೇಗೆ ? 'ಕುದುರೆ ತಗುಳ್ದುವು' ಎಂಬಂತೆಯೇ ಅಲ್ಲವೆ—ಈ 'ಆನೆ ಪತ್ತು ತಾಗಿದುವು' ಎಂಬುದು ? ಎಂಬ ಆಕ್ಷೇಪಣೆ ತಲೆದೋರಲೂ ಬಹುದು. ಆದರೆ, ಗ್ರಂಥಕಾರನು ಹಿಂದೆಯೇ ಕೊಟ್ಟ ಸೂಚನಾತ್ಮಕ ಲಕ್ಷಣವನ್ನೂ ದೋಷಕಾರಣ ನಿರೂಪಣವನ್ನೂ ಅವಧರಿಸಬೇಕು. ಇಲ್ಲಿ 'ಪಿರಿದು ಸಂಖ್ಯೆಯೊಳ್ ಏಕಬಹುತ್ವಸಂಗ'ವಾದುದೇ ದೋಷಕಾರಣ. 'ಕುದುರೆ ನೂಱು, ಆನೆ ಪತ್ತು' ಎಂಬಲ್ಲಿಯ ಮುಂದಿನ ಪದಗಳೆರಡೂ 'ಪಿರಿದು ಸಂಖ್ಯೆ'ಗಳನ್ನು ಸೂಚಿಸುತ್ತವೆ. ಅವುಗಳೆರಡೂ ಹಿಂದಿನ ಜಾತಿ ವಾಚಕ್ಕೈಕವಚನಪದಗಳ ಕೂಟದಿಂದಾಗಿ ಏಕವಚನ ಸಂಗವನ್ನೊಂದಿವೆ. ಆ ಪದ್ಧತಿ ದೋಷವಲ್ಲ. ಗ್ರಂಥಕಾರನೂ ಹಾಗೆ ಹೇಳುವುದಿಲ್ಲ. ಆದರೆ 'ಆನೆ ಪತ್ತು ತಾಗಿದುವು' ಎಂಬಲ್ಲಿಯ 'ಪತ್ತು' ಸಂಖ್ಯೆಯೊಡನೆ ಹಿಂದಿನ 'ಆನೆ'ಯಿಂದ ಏಕತೆಯೂ ಮುಂದಿನ ಕ್ರಿಯಾಪದದಿಂದ ಬಹುತೆಯೂ ಒಂದೇ ಸಮಯದಲ್ಲಿ ತಾಗುತ್ತಿವೆ. ಇಂಥ ದೇಸಿಯನ್ನು ಮಾರ್ಗವು ಗುಣವೆನ್ನದೆ ದೋಷವೆಂದೇ ಸಾರುತ್ತದೆ. ಈ ಅಭಿಪ್ರಾಯವನ್ನೇ ಅವನು 'ಎನೆ ದೋಷಮಾ ಪಿರಿದು ಸಂಖ್ಯೆಯೊಳೇಕ ಬಹುತ್ವ ಸಂಗದಿಂ' ಎನ್ನುತ್ತಾನೆ.

ಈ ವಚನ ಸಂಬದ್ಧವಾದ ಗುಣದೋಷಗಳನ್ನು ಗಾಳಿಸುವೆಡೆಯಲ್ಲಿ ಇನ್ನೊಂದು ಬಗೆಯ ವಿಚಾರವು ಗ್ರಂಥಕಾರನಲ್ಲಿ ತಲೆದೋರಿದೆ :

ಬೆರಸಿರೆ ಮುಂ ಸಮುಚ್ಚಯಪದದ್ವಿತಯೋಕ್ತಿ ವಿಭಕ್ತಿ ಕೂಡೆ ಬಂ
ದಿರದೆಯುಮೇಕವಾಕ್ಯದೊಳೆ ಕಾರಕಸಂಪದಮುಂ ತಗುಳ್ಚುಗುಂ
ನರಪತಿಯುಂ ನೃಪಾಂಗನೆಯರುಂ ನೆರೆದಱ್ತಿಯಿನಾಡಿ ಪೋದರಾ
ಪರಿಜನಮುಂ ಮಹೋತ್ಸವದೊಳೊಂದಿದುದೆಂಬುದಿದಲ್ಪದೂಷಿತಂ (—i, 120)

ಈ ಲಕ್ಷಣೋದಾಹರಣಗಳೆರಡನ್ನೂ ಸಾವಧಾನವಾಗಿ ನೋಡತಕ್ಕುದು—ಎಂದರೆ, 'ವಿಭಕ್ತಿಪ್ರತ್ಯಯಗಳು ಎರಡು ಕರ್ತೃಪದಗಳೊಳಗೆ ಒಂದೇ ರೀತಿಯಲ್ಲಿ (ಕೂಡೆ) ಇರದಿದ್ದರೂ ಅವುಗಳ ಮುಂದೆ ಒಂದೇ ಕ್ರಮವಾಗಿ ಎರಡು ಸಮುಚ್ಚಯಗಳು ಬೆರಸಿಕೊಂಡಿದ್ದರೆ, ಅವುಗಳಿಗೆ ಏಕವಾಕ್ಯದಲ್ಲಿ ಕಾರಕ ಸಂಪದವುಂಟಾಗುವುದು.' 'ನರಪತಿಯುಂ ನೃಪಾಂಗನೆಯರುಂ ನೆರೆದು ಅಟ್ಟಿಯಿನಾಡಿಪೋದರ್ ; ಆ ಪರಿಜನಮುಂ ಮಹೋತ್ಸವದೊಳ್ ಒಂದಿದುದು'—ಇದು 'ಅಲ್ಪದೂಷಿತಂ', ಎಂದರೆ, ದೋಷಲೇಶವಿರುವುದಾದರೂ ಇದು ಮಹಾದೋಷವಲ್ಲವೆಂದು ತಾತ್ಪರ್ಯ. ಇಲ್ಲಿಯ 'ವಿಭಕ್ತಿ ಕೂಡೆ ಬಂದಿರದೆಯುಂ' ಎಂಬುದಕ್ಕೆ 'ಹಿಂದಿನ ಪದಗಳೆರಡರ ವಿಭಕ್ತಿಗಳೂ ಒಂದೇ ರೀತಿಯಲ್ಲಿ ಕೂಡಿ ಇಲ್ಲವಾದರೂ' —ಎಂದರೆ, 'ಒಂದು ಏಕವಚನಸೂಚಕವಾಗಿ, ಇನ್ನೊಂದು ಬಹುವಚನನಿರೂಪಕವಾಗಿದ್ದರೂ'—ಎಂಬರ್ಥವೆಂಬುದನ್ನು ಅವಗಾಹಿಸಿಕೊಳ್ಳಬೇಕು. ದೃಷ್ಟಾಂತದ 'ನರಪತಿಯುಂ (ನರಪತಿ+ಉಂ) ನೃಪಾಂಗನೆಯರುಂ (ನೃಪಾಂಗನೆ+ಅರ್+ಉಂ).... ಪೋದರ್' ಎಂಬುದರಿಂದ ಅರ್ಥವದು ಮತ್ತಷ್ಟು ಸಿದ್ಧವಾಗುತ್ತಿದೆ. ಮತ್ತಿನ 'ಆ ಪರಿಜನಮುಂ ಮಹೋತ್ಸವದೊಳ್ ಒಂದಿದುದು' ಎಂಬ ವಾಕ್ಯದ ಒಂದೇ ಆದ ಕರ್ತೃಪದದಲ್ಲಿಯೂ ಸಮುಚ್ಚಯದ 'ಉಂ' ಸೇರಿದೆ. ಇದು ಹಿಂದಿನ ವಾಕ್ಯ ಸಂಬಂಧದಿಂದಲ್ಲದೆ ಬೇರೇನೂ ಅಲ್ಲ. ಆದರೆ ನಮಗೆ ಲಕ್ಷ್ಯವಾಗಿರುವುದು ಈ ವಾಕ್ಯವಲ್ಲ—ಹಿಂದಿನ ವಾಕ್ಯ. ಅದರೊಳಗೆ 'ನರಪತಿ', 'ನೃಪಾಂಗನೆಯರ್' ಎಂಬ ಎರಡೂ ಪದಗಳು 'ಆಡಿ ಪೋದರ್' ಎಂಬ ಕ್ರಿಯಾಪದಕ್ಕೆ ಕರ್ತೃಗಳು. ಇಲ್ಲಿ, ಹಿಂದಿನದು ಏಕವಚನವಾದರೆ, ಮುಂದಿನದು ಬಹುವಚನ. ಮುಂದಿನದು ಬಹುವಚನ ವಾಚಕ ಕ್ರಿಯಾಪದದೊಡನೆ ಅನ್ವಯಿಸುವುದು ಸರಿ ; ಆದರೆ ಹಿಂದಿನದನ್ನು ಹೇಗೆ ಬೆರಸಬೇಕು ? 'ನರಪತಿ ಆಡಿ ಪೋದಂ' ಎಂದು ಹೇಳಿ, ಆ ಮೇಲೆ 'ನೃಪಾಂಗನೆಯರ್ ಆಡಿ ಪೋದರ್' ಎಂದು ಭಿನ್ನ ವಾಕ್ಯಗಳನ್ನೆಸಗಿದಲ್ಲಿ ವ್ಯಾಕರಣಬದ್ಧವಾದೀತಲ್ಲದೆ, 'ಏಕವಾಕ್ಯ'ದಲ್ಲಿ, ಏಕವಚನ ಬಹುವಚನ ಕರ್ತೃಪದಗಳೆರಡನ್ನೂ ಕೂಡಿ ಬಹುವಚನಕ್ರಿಯಾಪದದೊಡನೆ ಬೆರಸುವ ಈ ದೇಸಿ ಮಾರ್ಗಕ್ಕೊಪ್ಪದು ಎಂದು ತೋರಬಹುದು. ಹಾಗೆಂದರೆ, ವಾಕ್ಯರಚನೆಯೇನೋ ವ್ಯಾಕರಣದೃಷ್ಟಿಯಿಂದ ನಿರ್ದುಷ್ಟವಾಗಿ ತೋರುವುದು ನಿಜ. ಆದರೆ, 'ನರಪತಿ' ಅವನಷ್ಟಕ್ಕೆ 'ಆಡಿ ಪೋದಂ', 'ನೃಪಾಂಗನೆಯರ್' ಅವರಷ್ಟಕ್ಕೆ 'ಆಡಿ ಪೋದರ್' ಎಂದಾಗುವುದು. ಅವರೆಲ್ಲರೂ 'ನೆರೆದು ಅಟ್ಟಿಯಿಂ ಆಡಿ ಪೋದರ್' ಎಂದಿದ್ದರಲ್ಲವೆ ಪ್ರಯೋಗ ಸೌಂದರ್ಯವು ರಸವತ್ತಾಗಿ ಚಿತ್ರಿತವಾಗುವುದು ? ಅದಕ್ಕೆ, ಒಂದೇ ವಾಕ್ಯವಿರತಕ್ಕುದು. ಆ ಸಂದರ್ಭದಲ್ಲಿ ಅಡ್ಡ ಬರುವ ವ್ಯಾಕರಣ ನಿಯಮವನ್ನು ನೇರ್ಪಡಿಸುವುದಕ್ಕಾಗಿ ಮೇಲೆ ಸೂಚಿಸಿದಂತೆ 'ಸಮುಚ್ಚಯ ಪದದ್ವಿತಯ'ವನ್ನು ಅಲ್ಲಲ್ಲಿಗನುವಾಗಿ ಅಣಿಯಿಸಿಕೊಳ್ಳಲೂ ಬೇಕು.

ಹಿಂದೆ ಒಂದು ಬಗೆಯಲ್ಲಿ ಶಾಂತವಾದ ಕಾರಕವಿವೇಚನೆ ಇಲ್ಲಿ ಇನ್ನೊಮ್ಮೆ ಪ್ರಕ್ಷುಬ್ಧವಾಗಬಹುದು. ಪ್ರಥಮಾವಿಭಕ್ತಿಗೆ ಕರ್ತೃತ್ವವಲ್ಲದೆ ಕಾರಕತ್ವವಿಲ್ಲವೆಂಬುದೇ ಪ್ರಕೃತಗ್ರಂಥಕಾರನ ಎಣಿಕೆಯಾಗಿರಬೇಕೆಂದಲ್ಲವೆ ನಮ್ಮ ಹಿಂದಿನ ವಿಮರ್ಶೆ ? ಈ ಮೇಲೆ

ಕಾಣಿಸಿದ ಪದ್ಯವು 'ಬೆರಸಿಲೆ....ಏಕವಾಕ್ಯದೊಳೆ ಕಾರಕ ಸಂಪದಮಂ ತಗುಳ್ಚುಗುಂ' ಎಂದು ಸೂಚಿಸುತ್ತದೆ. ದೃಷ್ಟಾಂತದಲ್ಲಿ ಆ ಕಾರಕವೆಂದರೆ 'ನರಪತಿಯುಂ ನೃಪಾಂಗನೆಯುರುಂ' ಎಂಬ ಕರ್ತೃವಾಚಕದ್ವಯವೆಂದು ಮತ್ತಷ್ಟು ವಿಶದವಾಗುವುದಲ್ಲವೆ?—ಎಂಬುದೇ ಆ ಕ್ಷೋಭೆ. ಇರಲಿ; ಈ ಸಂದರ್ಭದಲ್ಲಿ ಮುಂದಿನ ಕರ್ತೃಪದವು ಬಹುವಚನದಲ್ಲಿದೆ. ಒಂದು ವೇಳೆ 'ನರಪತಿಯುಂ ನೃಪಾಂಗನೆಯುಂ' ಎಂದು ಮತ್ತಿನದು ಸಹ ಏಕವಚನದಲ್ಲಿದ್ದರೂ ಕ್ರಿಯಾಪದವು ಬಹುತ್ವದಲ್ಲಿಯೇ ನೆಲೆಗೊಳ್ಳಬೇಕು; ಎಂದರೆ, 'ಅಟ್ಟಿಯಿನಾಡಿ ಪೋದರ್' ಎಂದಾಗಬೇಕಲ್ಲದೆ ಏಕತ್ವವನ್ನೊಂದಲಾರದು. ಆದರಿಂದ ಆ ಪದಗಳೆರಡೂ ಈ ಕ್ರಿಯಾಪದಕ್ಕೆ ಬೇರೆ ಬೇರೆಯಾಗಿ ಏಕವಾಕ್ಯದಲ್ಲಿ ಕರ್ತೃಗಳೆನ್ನಿಸಲಾರವು. ಏಕವಚನ ಗಳಾಗಿರುವ ಅಲ್ಲವೆ ಏಕಬಹುತ್ವಮಿಶ್ರಿತಗಳಾಗಿರುವ ಅವುಗಳ ಕೂಟವು 'ಆನೆ ಬಂದುವು' ಎಂಬುದರಂತೆ ಜಾತಿವಾಚಕವೂ ಆಗದು. ಅದರಿಂದ, ಬಹುತ್ವ ಕ್ರಿಯೆಗೆ ಆ ಏಕವಚನದ ಪದವಂತೂ ಏಕವಾಕ್ಯದಲ್ಲಿ ಕರ್ತೃವಾಗಲಾರದೆಂಬಲ್ಲಿ ಸಂದೇಹವಿಲ್ಲವಷ್ಟೆ. ಅದನ್ನು ಉಳಿದ ಕರ್ತೃಪದದ ಅಥವಾ ಕರ್ತೃಪದಗಳ ಜತೆಗೆ ಸೇರಿಸುವುದು, ಆ ಸಮುಚ್ಚಯ ಪದ. ಹಾಗೆ ಸಮುಚ್ಚಯ ಪದಗಳ ಕೂಟದಿಂದ ಪದಗಳು ಏಕವಾಕ್ಯದಲ್ಲಿ ತಂತಮ್ಮ ಕರ್ತೃತ್ವ ವನ್ನುಳಿದು ಕಾರಕಗಳೇ ಆಗಿ ಪರಿಣಮಿಸುವುದು ನ್ಯಾಯವಿದೆ. ಎಂದರೆ ಕ್ರಿಯೆಯನ್ನು ಒಂದೊಂದಾಗಿ ಮಾಡಲಾರದೆ ಎರಡೂ ಕೂಡಿ ಮಾಡಿಸುವ ಕಾರಕತ್ವವನ್ನೊಂದಿದುವು ಎನ್ನಬೇಕು. ಆದುದರಿಂದಲೇ ಆಗಿರಬೇಕು—ಗ್ರಂಥಕಾರನು 'ಏಕವಾಕ್ಯದೊಳ್ ಕಾರ ಕಮಂ ನೆಲೆಗೆಯ್ಗುಂ' ಇತ್ಯಾದಿ ರೀತಿಯಲ್ಲಾಡದೆ '**ಕಾರಕಸಂಪದಮಂ** ತಗುಳ್ಚುಗುಂ' ಎಂದು ಬಾಗಿಸಿ ಹೇಳಿರುವುದನ್ನು ಅವಧರಿಸಿರಿ.

ಇದೇ ರೀತಿಯಲ್ಲಿ, ಸಮುಚ್ಚಯ ಸಂಗತಿ ಮೊದಲಾದುವುಗಳಿಂದ ಕಾರಕಗಳಲ್ಲಿ ತಲೆ ದೋರುವ ದೋಷಗುಣಗಳ ಸ್ವರೂಪವನ್ನು ಮುಂದೆ ಭಾವಿಸಬೇಕು:

> ಗಣಿದದೊಳೊಂದಿ ಬರ್ಪ ಪದಮೊಂದೆಡೆಗೊ[ಇದು][1] ವಿಶೇಷ್ಯಮುಂ ವಿಶೇ
> ಷಣಮುಮನೊಂದಲೀಯದಿರೆಯುಂ ಮಿಗೆ ಕಾರಕದೋಷ[ಮುಲ್ಲ್ದುಂ]
> ಪ್ರಣುತ ಪದಾಂತರೀಕರಣಮಂತದೆ ತಾಣದೊಳಾದೊಡಂ ಮಹಾ
> ಗುಣಮನೆ ತರ್ಕುಮೇಕಬಹುಭೇದವಿಕಲ್ಪಮನಲ್ಲಿ ನೋಡಲಿಂ —(i, 121)

ಗಣನಾನುಸಾರವಾಗಿ—ಎಂದರೆ ಎಲ್ಲೆಲ್ಲಿ ವಿಶೇಷಣವಿದೆಯೋ ಅಲ್ಲಲ್ಲಿ ಒಂದು ವಿಶೇಷ್ಯ ಪದವಿರುವಂತೆ—ಹೊಂದ್ಗೆಯಾಗದಿದ್ದರೆ ಅದು ಕಾರಕದೋಷವಲ್ಲ. ಏಕೆಂದರೆ, ವಿಶೇಷ್ಯ ಪದವು ತೋರದಿದ್ದರೂ ಅದನ್ನು ಸೂಚಿಸುವ ಉತ್ತಮ ಪದಾಂತರವೊಂದು ಆಯಾ ಎಡೆಯಲ್ಲಿ ಕೋದು ಇದ್ದೇ ಇರುತ್ತದೆ. ಆ 'ಪದಾಂತರೀಕರಣ' ರೂಪ ವಿಶೇಷ್ಯಾರ್ಥ ಸೂಚಕ ಪದವು ಮೇಲೆ ಸೂಚಿಸಿದಂತೆ 'ಒಂದೆಡೆಗೊಂದಾಗಿ'ದ್ದರೂ, ಭಿನ್ನ ಸ್ವರೂಪದಿಂದ ಆಯಾ ಸ್ಥಾನಗಳಲ್ಲಿ ಬೇರೆ ಬೇರೆಯಾಗಿದ್ದರೂ, ಮಹಾಗುಣವನ್ನೇ ಒದಗಿಸುವುದು.

[1] 'ಎಡೆಗೊಂದು' ಎಂದು ಪಾಠಕರ ಪ್ರತಿಯಲ್ಲೂ, 'ಎಡೆಗೊಂಡು' ಎಂದು ಮದರಾಸು ಪ್ರತಿಯಲ್ಲೂ ಇದೆ. ಇದು 'ಎಡೆಗೋದು' ಎಂದಿದ್ದಿರಬಹುದೆ?

ಆದರೆ ಈ ದ್ವಿತೀಯ ವರ್ಗದಲ್ಲಿ ಏಕ ಬಹುತ್ವ ಭೇದವಿಲ್ಲ—ಎಂಬುದನ್ನು ಮರೆಯಲಾಗದು. ದೃಷ್ಟಾಂತವನ್ನು ಸರಿಯಾಗಿ ಮನನಮಾಡಿಕೊಳ್ಳದಿದ್ದರೆ ಈ ಲಕ್ಷಣಾರ್ಥವು ವಿಶದವಾಗದು. ಆದರಿಂದ ಲಕ್ಷ್ಯವನ್ನು ನೋಡೋಣ.

ಗುಣಯುತನಪ್ಪನಂ ಸುಭಟನಪ್ಪನನಾಯುಧಯುಕ್ತನಪ್ಪನಂ
ಪ್ರಣುತಸಮಸ್ತವೈರಿಗಣನಪ್ಪನನುಜ್ಜ್ವಲಕೀರ್ತಿಯಪ್ಪನಂ
ಗಣಿಪಮನೇನುಮಂ ಬಗೆಯವಾಗಡುಮಂತೆ ಪರೋಪಕಾರಕಾ
ರಣಪರನಪ್ಪನಂ ಮನದೆ ಮೆಚ್ಚದರಾರಭಿಮಾನಿಯಪ್ಪನಂ —(i, 122)

ಇಲ್ಲಿ 'ಪದಾಂತರೀಕರಣಂ' ಎಂಬುದು ಹೊಳೆದು ತೋರುತ್ತಿದೆ. 'ಗುಣಯುತಂ' ಮೊದಲಾಗಿ ಕಡೆಯ 'ಅಭಿಮಾನಿ'ವರೆಗಿನ ವಿಶೇಷಣ ಪದಗಳು ವ್ಯಕ್ತವಾಗಿವೆ; ಆದರೆ ವ್ಯಕ್ತ ವಿಶೇಷ್ಯಪದವೇ ಇಲ್ಲ. ಇದು, ಗ್ರಂಥಕಾರನ ಅಲ್ಲವೆ ಕವಿಯ ಎಣಿಕೆಯಂತೆ, ವಿಶೇಷಣ ಪದಗಳೆಲ್ಲ 'ಪರೋಪಕಾರಕಾರಣಪರ'ನೆನ್ನಿಸಿದ ಆದರ್ಶವ್ಯಕ್ತಿಯಾದ ಸುಭಟನೊಬ್ಬನನ್ನು ಬಣ್ಣಿಸುವ ಪದ್ಯವಷ್ಟೆ. ಅಂಥ ವೀರನಾದವನ ಗಣಿತವಿಡಿದ ವಿಶೇಷಣದ ಮುಂದಿನ ಪ್ರತಿಯೊಂದೆಡೆಯಲ್ಲಿಯೂ 'ಅಪ್ಪನಂ' ಎಂಬ ಒಂದೇ ಕರ್ಮಕಾರಕವನ್ನು ಅಭಿನ್ನವಾಗಿ ಕೋದು, ಹಿಂದಿನ ವಿಶೇಷಣವನ್ನೂ ಆ ಕಾರಕತ್ವಕ್ಕೆ ಮಾರ್ಪಡಿಸಿ ಕಡೆವರೆಗೂ ಹೆಣೆದ ಹೆಣೆತವನ್ನವಲೋಕಿಸಿರಿ. ಅದರಿಂದ, ಆ ಉದ್ದಿಷ್ಟ ವಿಶೇಷ್ಯವನ್ನು ಹೆಸರಿಸಿ ಆ 'ವಿಶೇಷ್ಯಮುಂ ವಿಶೇಷಣಮುಮಂ ಒಂದಲೀಯ'ದಂತೆ ಚಿತ್ರಿಸಿದುದನ್ನು ಮನನ ಮಾಡಿರಿ. ಹಾಗೆ 'ಒಂದಲೀಯದಿ'ದ್ದರೂ ಅದು ದೇಶಿಯ ಅಂದವಾದ ಹೊಲಿಗೆಯ ಬಲದಿಂದ 'ಕಾರಕದೋಷಮುಲ್ತು' ಎಂಬ ರೂಢಿಯ ಹೊಲಬನ್ನು ಬಗೆದುಕೊಳ್ಳಿರಿ.[1]

ಹೀಗೆ 'ಪದಾಂತರೀಕರಣ'ವನ್ನು ಅವಗಾಹಿಸಿದ ಮೇಲೆ 'ಅದೆ' (ಆ ವಿಶೇಷ್ಯವೇ) 'ತಾಣದೊಳ್' ಆಗುವುದಕ್ಕೆ ಉದಾಹರಣವನ್ನು ಗ್ರಹಿಸಿರಿ:

ನೆಗೆದ ಮುಗಿಲ್ಗಳುಂ ಸುರಿವ ಪೆರ್ಮಳೆಯುಂ ಮಿಗೆ ನುಣ್ಣನಪ್ಪ ಕೇ
ಕಿಗಳ ಸರಂಗಳುಂ ಪೊಳೆವ ಮಿಂಚುಗಳುಂ ಕರಮುಚ್ಚಮಪ್ಪ ಜಿ .
ಟ್ಟುಗಳ ತಟಂಗಳಿಂ ಸುರಿವ ನಿರ್ಝರಮುಂ ಪೊಸ ಕಾರೊಳಿಂತು ಬೆ
ಳ್ಪಗೆ ಪಥಿಕಾಂಗನಾಜನಮನಂಜಿಸುವಂತಿರೆ ತೋಱೆ ಸುತ್ತಲುಂ —(i, 123)

ಇಲ್ಲಿ 'ನೆಗೆದ' ಎಂಬುದರಿಂದ ಹಿಡಿದು, ಮೂರನೆಯ ಪಾದದೊಳಗಿನ 'ಸುರಿವ' ಎಂಬವರೆಗಿನ ಬೇರೆ ಬೇರೆ ವಿಶೇಷಣ ಪದಗಳು ವ್ಯಕ್ತವಾಗಿವೆ. 'ಮುಗಿಲ್ಗಳುಂ....ಮಳೆಯುಂ ....ಸರಂಗಳುಂ....ಮಿಂಚುಗಳುಂ....ನಿರ್ಝರಮುಂ' ಎಂಬ ಆಯಾ ತಾಣಗಳಲ್ಲಿ ಬೇರೆ ಬೇರೆ ವಿಶೇಷ್ಯ ಪದಗಳು ತಲೆದೋರಿವೆ. ಇವೆಲ್ಲ ಏಕ ಬಹುತ್ವಯುತ ಕರ್ತೃಪದಗಳಾಗಿದ್ದರೂ ಹಿಂದಿನ ವಿವೇಚನೆಗನುವಾಗಿ ಅಲ್ಲಲ್ಲಿ ಸಮುಚ್ಚಯಗಳ ಕೂಟದಿಂದ ಕಾರಕಗಳಾಗಿರುವುದನ್ನು ಗಮನಿಸಬೇಕು.

---

[1] ಹಿಂದೆ ಕೊಣ್ಣೂರು ಶಾಸನದಿಂದ (ಪುಟ ೪೦, ೪೧, ೪೨) ಸಿದ್ಧವಾದ ಸಾರವನ್ನಿನ್ನೊಮ್ಮೆ ಭಾವಿಸಿಕೊಂಡು, ಇಲ್ಲಿ ಸೂಚಿತನಾದ ವೀರಭಟನೆಂದರೆ ಬಂಕೆಯನೇ ಆಗಿರಬಹುದೇ—ಎಂಬುದನ್ನು ಬಗೆದು ನೋಡಿರಿ.

ಹೀಗೆ ಕಾರಕ ವಚನಗಳ ಸಂಬಂಧಗಳಾದ ದೋಷಗಳು, ಅವುಗಳ ನಿವಾರಣ ಕ್ರಮಗಳು, ತನ್ಮೂಲಕ ಅವುಗಳೇ ಗುಣಗಳಾಗುವ ಬಗೆ—ಇವು ನಿರೂಪಿತವಾಗಿವೆ.

## ಗುರು ಲಘುಗಳ ದೋಷಗಳು

ಗುರು ಆಗಬಾರದ (ಲಘುವಾಗತಕ್ಕ) ಕಡೆಯಲ್ಲಿ ಗುರುವನ್ನಿರಿಸಿದುದರಿಂದ ತಲೆದೋರಿದುದಕ್ಕೆ ಗುರುದೋಷವೆಂದೂ, ಲಘುವಲ್ಲದ (ಗುರು ಆಗಬೇಕಾದ) ಕಡೆಯಲ್ಲಿ ಲಘುವನ್ನಿಟ್ಟುದರಿಂದ ಉಂಟಾದುದಕ್ಕೆ ಲಘುದೋಷವೆಂದೂ ಹೆಸರು. ಇವು ಛಂದೋವಿಷಯಕಗಳೆಂದೇ ಹೇಳಬೇಕು. ಹಿಂದೆ ವಿಸ್ತರಿಸಿದ ಛಂದೋಭಂಗವೆಂಬುದು ಛಂದಸ್ಸಿನ ಸಾಮಾನ್ಯ ದೋಷವಾದರೆ, ಇವು ಬರಿಯ ಗುರು ಲಘುಮಾತ್ರೆಗಳಿಂದ ಉಂಟಾಗುವ ವಿಶೇಷ ಶಾಬ್ದಿಕ ದೋಷಗಳು ಎಂದು ಮಾತ್ರ ತಿಳಿಯಬೇಕು. ಉದಾ:

(i) ಸಾದುಗೆತ್ತು ಬಗೆಯಾದೆ ಅವನಾನ್, ಒಡನಟ್ಟಿದೇನ್''[1] (i, 127). ಇಲ್ಲಿ 'ಬಗೆಯುದೆ' ಎಂದು ಯಕಾರವು ಲಘುವಾಗಿರಬೇಕು. ಹಾಗಿದ್ದರೆ ಮಾತ್ರೆಯೊಂದು ಕಡಿಮೆಯಾಗಿ ಛಂದೋಭಂಗವಾಗುವುದೆಂದು ಲೇಖಕನು ದೀರ್ಘವೆಸಗಿರುತ್ತಾನೆ.

(ii) ನೆರೆದು ಬಂದಪರವರ್ ಸಯಲಾ ಬಲವೆಲ್ಲಮೆ
ಬ್ಬಿರದೆ ಕೊಂದಪೆನಿವಂದಿರನೀಗಳೆ ನಿಕ್ಕುವಂ
ಪರಿದು ಬೀಳ್ವಿವೊಲಿವಂದಿರ ಪಾಡೞಿವಂದಮುಂ
ತಿರವೆ[ೞಿೊ]ಡ್ಡುಯುದಂತಿರೆ ನಮ್ಮವರೆಲ್ಲರಂ —(I, 129)

ಯುದ್ಧರಂಗದಲ್ಲಿ ನಾಯಕ ವೀರನೊಬ್ಬನು ತನ್ನ ಕಡೆಯ ಸೈನಿಕರಿಗೆ ಎಚ್ಚರ ಸಿದ್ಧತೆಗಳನ್ನು ದೂತನೊಬ್ಬನೊಡನೆ ಹೇಳಿ ಕಳುಹುವ ಮಾತಿದು. ಇಲ್ಲಿ 'ಸಯಲ್' ಎಂಬಲ್ಲಿ 'ಸ' ಕಾರವೂ, 'ಇರವೆೞಿ' ಎಂಬಲ್ಲಿ 'ವೆ'ಯೂ ದೀರ್ಘವಾಗಬೇಕು.

## ಸಮುಚ್ಚಯ ದೋಷ

ಹಿಂದೆ ಸಮುಚ್ಚಯದ ಕೂಟದಿಂದ 'ಕಾರಕ' ದೋಷಗಳು ಹೇಗೆ ನಿವೃತ್ತವಾಗುವುವು ಎಂಬುದು ಮಾತ್ರ ನಿರೂಪಿತವಾಗಿದೆ. ಅದರಿಂದ ಅದು ಗುಣಕಾರಿಯಲ್ಲದೆ ದೋಷಕಾರಿಯಲ್ಲ. ಇಲ್ಲಿ, ಸಮುಚ್ಚಯ ಸಂಬದ್ಧವಾದ ದೋಷವನ್ನೇ ಮೊದಲು ಕಾಣಿಸಿ ಮತ್ತೆ ತಿದ್ದುತ್ತಾನೆ:

ದೇವರುಂ ಗೊರವರುಂ ಗುಣವೃದ್ಧರನಾರತಂ
ಕಾವರಕ್ಕರಸನಂ ಪ್ರಜೆಯುಂ ಪರಿವಾರಮುಂ
ಏವಮುಂ ಬಗೆಯದಂತಿರೆ ಪೇೞ್ದಿ ಸಮುಚ್ಚಯೋ
ದ್ಭಾವಕ ಕ್ರಮವಿಚಾರದೆ ದೋಷಮಿದಗ್ಗಳಂ —(I, 131)

---

[1] ಪಾಠಕರ ಪ್ರತಿಯಲ್ಲಿ 'ಸಾದುಗೆತ್ತು ಬಗೆಯಾದವನಾನೋಡಲಟ್ಟಿದೇನ್' ಎಂದಿದೆ; ಮದರಾಸಿನ ಪ್ರತಿಯಲ್ಲಿ 'ಸಾದುಗೆತ್ತು ಬಗೆಯಾದವನಾನೊಡನಟ್ಟಿದೆನ್' ಎಂದಿದೆ. ಮದರಾಸಿನ ಪ್ರತಿಯ ಪಾಠವನ್ನು ಇಲ್ಲಿ ಒಂದಿಷ್ಟು ವ್ಯತ್ಯಾಸದೊಡನೆ ಅಂಗೀಕರಿಸಿದೆ.

ಮೊದಲಿನ ಪಾದದಲ್ಲಿ ‘ದೇವರುಂ ಗೊರವರುಂ ಗುಣವೃದ್ಧರ್’ ಎಂದು ಕ್ರಮವಾಗಿ ಹೇಳಿ, ಮುಂದಿನದರಲ್ಲಿ ‘ಅರಸನಂ ಪ್ರಜೆಯುಂ ಪರಿವಾರನುಂ ಕಾವರ್ ಅಕ್ಕೆ’ ಎಂದು ಕ್ರಮವಾಗಿ ಪ್ರಾರ್ಥಿಸಿದುದು ತೋರುತ್ತಿದೆ. ಆದಿಪಾದದ ಕಡೆಯ ‘ಗುಣವೃದ್ಧರ್ ಎಂಬುದು ಹಿಂದಿನ ಎರಡು ಪದಗಳಂತೆ ಸಮುಚ್ಚಾಯಕವಾದ ‘ಉಂ’ ಸಹಿತವಾಗಿಲ್ಲ; ಅದರಂತೆ ಮತ್ತಿನ ‘ಅರಸ’ ಮೊದಲಾದ ಕಾರಕಗಳೂ ಸಮುಚ್ಚಯರಹಿತವಾಗಿವೆ. ಅಷ್ಟೇ ಅಲ್ಲ; ಅವರು ದಯವಿರಿಸಿ ಕಾಯುವವರೆಂದರೆ ‘ರಾಜ ಪ್ರಜಾ ಪರಿವಾರ’ಗಳು ಎಂಬುದು ಮತ್ತಿನ ಕ್ರಮ ಗಣನೆಯಿಂದ ಭಾಸವಾಗುತ್ತಿದೆ. ಆದರೆ ಹಿಂದಿನ ಕ್ರಮವಿರುವುದು ಹಾಗಲ್ಲ. ಗೊರವರು ನೃಪನನ್ನು, ದೇವರು ಪ್ರಜೆಯನ್ನು, ಗುಣವೃದ್ಧರು ಪರಿವಾರವನ್ನು ಕಾಯಬೇಕೆಂಬ ಕ್ರಮ ನಿಯಮವು ಮುಂದೆ ತಿದ್ದಿ ಕಾಣಿಸಿದ ಪದ್ಯದಿಂದ ಗೊತ್ತಾಗುತ್ತದೆ. ಈ ಕಾರಣದಿಂದ ಮೇಲಿನ ದೃಷ್ಟಾಂತದಲ್ಲಿ ಸಮುಚ್ಚಯ ದೋಷವೂ, ಹಿಂದೆ ಕಾಣಿಸಿದ ಚ್ಯುತಯಥಾ ಸಂಖ್ಯ ಅಲ್ಲವೆ ಕ್ರಮಭಂಗ ದೋಷವೂ ಸೇರಿವೆ ಎಂದು ತಿಳಿಯಬೇಕು. ಈ ಕ್ರಮಭಂಗ ದಿಂದ ಸಮುಚ್ಚಯ ದೋಷವು ಮತ್ತಷ್ಟು ಉಲ್ಬಣವಾಗಿ ತೋರುವುದು. ಆದರಿಂದ, ಗ್ರಂಥಕಾರನು ಈ ಪದ್ಯವನ್ನೇ ತಿದ್ದಿ ತೋರಿಸುತ್ತಾನೆ:

ನೃಪನುಮಂ ಪ್ರಜೆಯುಮಂ ಪರಿವಾರಮುಮಂ ಮಹಾ
ಕೃಪೆಯಿನಾ ಗೊರವರುಂ ಸುರರುಂ ಗುಣವೃದ್ಧರುಂ
ವಿಪುಳರಾಗಪರರಾಗಿಸುಗೆಂದು ಸಮುಚ್ಚಯ
ಕ್ಕುಪಚಿತೋರುಗುಣಮುಂ ಮಿಗೆ ಪೇೞ್ಗೆ ಕವೀಶ್ವರರ್ —(I, 132)

ಸಮುಚ್ಚಯವು ಸೇರುವಲ್ಲಿ ಕಾರಕಗಳಾಗಲಿ ಕರ್ತೃಪದಗಳಾಗಲಿ ಹಲವು ಇರಲೇ ಬೇಕೆಂಬುದು ಸಿದ್ಧವಾಗುತ್ತಿದೆ. ಆದರಿಂದ, ಅವವುಗಳನ್ನು ಕ್ರಮವಿಡಿದು ನೆಲೆಗೊಳಿಸ ದಿದ್ದರೆ ಅರ್ಥಕ್ಕೂ ಭಂಗವಾಗುವುದು. ಅದೇ ಕಾರಣದಿಂದ, ಈ ಸಮುಚ್ಚಯದ ದೋಷ ಗುಣಗಳೊಡನೆ ಕ್ರಮಭಂಗ ಸಕ್ರಮಗಳೂ ಸ್ವಾಭಾವಿಕವಾಗಿ ಬರಲೇಬೇಕು. ಕ್ರಮ ಭಂಗದ ಲಕ್ಷಣ ದೃಷ್ಟಾಂತಗಳನ್ನು ಹಿಂದೆ ದೃಷ್ಟಾಂತಿಸಿದರೂ, ಇಲ್ಲಿ ಅದನ್ನು ಗ್ರಂಥ ಕಾರನು ಲಕ್ಷಣದಲ್ಲಿ ಕಾಣಿಸದಿದ್ದರೂ ಲಕ್ಷ್ಯದಲ್ಲಿ ಮತ್ತೊಮ್ಮೆ ಕಾಣಿಸಿದ್ದಾನೆ.

ಈಗ ಬೇರೊಂದು ರೀತಿಯಲ್ಲಿ ಸಮುಚ್ಚಯದೋಷ ನಿವಾರಣೋಪಾಯವನ್ನು ನಿರೂಪಿಸುತ್ತಾನೆ:

ಬೇಱೆ ವೇಱೆ ನಿಲೆ ಕಾರಕದೊಳ್ ಕ್ರಿಯೆ ತಳ್ತು ಮುಂ
ತೋಱೆ ಪೇೞ್ದವಗುಣಂ ಗುಣರೂಪದೆ ಪೊರ್ದುಗುಂ —(I, 133 ಪೂರ್ವಾರ್ಧ)

ಹಿಂದೆ ಕ್ರಿಯಾಪದವೊಂದೇ ಹಲವು ಕಾರಕಗಳಲ್ಲಿ ಸೇರಿದ ಕ್ರಮವನ್ನು ಲಕ್ಷಣ ಲಕ್ಷ್ಯ ಗಳಿಂದ ವಿಶದಪಡಿಸಿರುತ್ತಾನೆ; ಈಗ ‘ಕಾರಕದೊಳ್ ಕ್ರಿಯೆ’ ಬೇರೆಬೇರೆಯಾಗಿ ನಿಂದಲ್ಲಿ ದೋಷವು ‘ಗುಣರೂಪದೆ ಪೊರ್ದು’ವ ಬಗೆಯನ್ನು ಲಕ್ಷ್ಯ ಮೂಲಕವಾಗಿ ವಿವರಿಸು ತ್ತಾನೆ—

ಸಾಱುಗಾನೆಯವರೆಲ್ಲರುಮಂ ನೃಪನಾನೆ ಮ
ತ್ತೇಱುವೆಂ ಪಣಿದೊಡಾನೆಯನೆಂಬು[ದ] ದೂಷಿತಂ[1] —(I, 133 ಉತ್ತರಾರ್ಧ)

ಇದು ಯುದ್ಧಸಿದ್ಧತೆಯ ವರ್ಣನೆ: "'ನೃಪನ ಆನೆ' ಆನೆಯವರೆಲ್ಲರನ್ನೂ (ಎಂದರೆ ಆರೋಹಕರ ಆನೆಗಳನ್ನು) ಹಿಂಬಾಲಿಸಲಿ; ಮತ್ತೆ 'ಪಣಿದೊಡೆ' (ಸಿದ್ಧಗೊಳಿಸಿದಲ್ಲಿ) ಆನೆಯನ್ನೇರಿ ಅನುಸರಿಸುತ್ತೇನೆ" ಎಂಬುದಿದು ಗಜಾರೋಹಕ ಸೇನಾನಿಯೊಬ್ಬನ ಮಾತು. ಇಲ್ಲಿ ವಾಕ್ಯಗಳು ಎರಡಿವೆ. ಮೊದಲಿನದರಲ್ಲಿ 'ನೃಪನ ಆನೆ' ಎಂಬ ಕರ್ತೃವಿಗೆ ಕ್ರಿಯಾಸಹಾಯಕರಾದ 'ಆನೆಯವರೆಲ್ಲರುಮಂ' ಎಂಬ ಕಾರಕದೊಡನೆ 'ಸಾಱುಗೆ' ಎಂಬ ಕ್ರಿಯೆ 'ತಳ್ತು' ನಿಂತಿದೆ. ಆ ಮೇಲಿನ ವಾಕ್ಯದಲ್ಲಿ, ಅಧ್ಯಾಹೃತವಾದ 'ಆಂ' ಎಂಬ ಕರ್ತೃಪದಕ್ಕೆ ನೆರವಾಗುವ 'ಆನೆಯುಂ' ಎಂಬ ಕರ್ಮಕಾರಕದೊಡನೆ 'ಏಱುವೆಂ' ಎಂಬ ಉತ್ತಮಪುರುಷ ಕ್ರಿಯೆಯೆ ಅನುವಾಗಿ ಬೆರಸಿದೆ. 'ಅವಗುಣಂ ಗುಣರೂಪದೆ ಪೊರ್ದು' ವುದಕ್ಕೇ ಸರಿಯಾದ ಲಕ್ಷ್ಯವಿದು. ಹೀಗೆ ಭಿನ್ನವಾಕ್ಯಗಳಿಂದ ಕಾಣಿಸಿದ ಕಾರಣ, ಇದರೊಳಗೆ ಯಾವ ಕ್ರಮಭಂಗ ದೋಷವೂ ಇಲ್ಲ.

## ವಿಕಲ್ಪ ದೋಷ

ಇನ್ನು ವಿಕಲ್ಪದೋಷವನ್ನು ಭಾವಿಸಬೇಕು. ಲಕ್ಷಣದಲ್ಲಿ ಸೂಚಿಸಿದಂತೆ ಇಲ್ಲಿಯೂ 'ಕ್ರಮ ವಿಕಲ್ಪನೆ'ಯನ್ನೆಸಗುವುದೇ ವಿಕಲ್ಪದೋಷ. 'ವಿಕಲ್ಪ' ಎಂದರೆ ಬೇರೊಂದು ಅಭಿಪ್ರಾಯವನ್ನು ತಿಳಿಸುವ ಪದ. 'ಅಥವಾ', 'ಅಲ್ಲವೆ'—ಇತ್ಯಾದಿ ಅವ್ಯಯಗಳನ್ನು ನಾವೀಗ ವಿಕಲ್ಪ ಸೂಚಕಗಳನ್ನಾಗಿ ಪ್ರಯೋಗಿಸುತ್ತೇವೆ. ಗ್ರಂಥಕಾರನ ದೃಷ್ಟಾಂತವನ್ನು ನೋಡಿರಿ:

ಒಸೆಗೆ ಮೇಣ್ ಮುನಿಗೆ ಮೇಣವರೆಲ್ಲರುಮಂತೆ ಬ
ಗ್ಗಿಸುಗೆ ಮತ್ತುೞಿಯಲಾಗದು ನೆಟ್ಟನೆ ಪೂಣ್ದುದಂ
ಪುಸಿವರಾಗಿರದೆ ಮಾನಸರೆಂಬುದನಿಂತೆ ಶಂ
ಕಿಸದೆ ನಂಬುವುದು ಮಿಕ್ಕ ವಿಕಲ್ಪದ ದೋಷಮುಂ —(I, 134)

'ಲೋಕದ ಸಾಮಾನ್ಯ ಜನವರ್ಗವು ಹೊಗಳಲಿ, ತೆಗಳಲಿ; ಸತ್ಯಾನುಸಾರಿಗಳಾದ ಮಾನವರು ತಾವು ಪರಾಂಬರಿಸಿ ನಿರ್ಧರಿಸಿದ ಕಾರ್ಯವನ್ನು ಗುರಿಮುಟ್ಟುವ ವರೆಗೂ ಬಿಡಕೂಡದು'—ಎಂಬುದು ಪದ್ಯಾರ್ಥ. ಪದ್ಯದೊಳಗಿನ 'ಮೇಣ್', 'ಮತ್ತೆ'—ಎಂಬ ಎರಡು ವಿಕಲ್ಪಾರ್ಥಗಳು ಸರಿಯಾದೆಡೆಗಳಲ್ಲಿ ಜೋಡಿಸಲ್ಪಟ್ಟಿವೆಯಾದರೂ, ಎರಡನೆಯದು ಭಿನ್ನಸ್ವರೂಪವಾಗಿ ಕ್ರಮ ವಿಕಲ್ಪವಾಗಿದೆ. ಅದೇ ದೋಷ. ಗ್ರಂಥಕಾರನು ಅದನ್ನು ತಿದ್ದಿ ಹೀಗೆ ತೋರಿಸುತ್ತಾನೆ.

---

[1] ಎರಡು ಪ್ರತಿಗಳಲ್ಲಿಯೂ 'ಎಂಬುದು ದೂಷಿತಂ' ಎಂದೇ ಇದೆ. ಲಕ್ಷಣದಲ್ಲಿ 'ಅವಗುಣಂ ಗುಣರೂಪದೆ ಪೊರ್ದುಗುಂ' ಎಂದ ಮೇಲೆ, ಇದು 'ದೂಷಿತ'ಕ್ಕೆ ಉದಾಹರಣವಾಗುವುದಾದರೂ ಹೇಗೆ? ಲಕ್ಷ್ಯವನ್ನು ಪರಾಂಬರಿಸಿದಲ್ಲಿಯೂ ಇದು 'ದೂಷಿತ'ವಾಗಿ ತೋರುವುದಿಲ್ಲ. ಅದರಿಂದ, 'ದು'ವಿನ ಬದಲಾಗಿ 'ದ'ವನ್ನು ಕಂಸದೊಳಗೆ ಸೇರಿಸಿದ್ದೇವೆ.

ಪೞಿಗೆ ಮೇಣ್ ಪೊಗೞ್ಗೆ ಮೇಣ್ ನೆಪಮಿಲ್ಲದೊಡಿಂತು ಕೈ
ಗೞಿಯೆ ಬಗ್ಗಿಸುಗೆ ಮೇಣವರೆಲ್ಲರುಮಂತುಮಾ
ಸುೞಿವೆನಲ್ಲೆನೆನಿತಾದೊಡಮೆಂಬುದು ಚೆಲ್ವ ಪಾಂ
ಗೞಿಯದಿಂತಿ[ಳಿ]ದನಿಂತಿರೆ ಪೇೞ್ಗೆ ವಿಕಲ್ಪಮಂ —(I, 135)

ಇಲ್ಲಿ ವಿಕಲ್ಪವಾಚಕವಾದ 'ಮೇಣ್' ಮೂರು ಕಡೆಗಳಲ್ಲಿಯೂ ಏಕರೂಪವಾಗಿರುವುದು ವಿಶದವಾಗಿದೆ.

## ಅವಧಾರಣ ದೋಷ

ನಿಯಮಿತಾ[ನ್ವಯ] ಜಾತಿಗುಣಕ್ರಿಯಾ
ಶ್ರಯಮಿದಾಯವಧಾರಣ ಲಕ್ಷಣಂ
ನಯ ನಿಯೋಗ ವಿಕಲ್ಪನೆಯೊಳ್ ವಿಶಂ
ಕೆಯೆ ವಿಶೇಷಗುಣಕ್ಕುಪಲಕ್ಷಣಂ —(I, 137)

'ಅವಧಾರ್ಯತೇ ನಿರ್ಧಾರ್ಯತೇ ಅನೇನ ಇತಿ ಅವಧಾರಣಂ'—ಎಂಬ ವ್ಯುತ್ಪತ್ತಿಗನುವಾಗಿ 'ಅವಧಾರಣ' ಪದವು ರೂಪಿತವಾಗಿದೆ. ಕನ್ನಡದಲ್ಲಿ 'ಎ', 'ಏ'ಗಳು ಅವಧಾರಣ ಸಂಜ್ಞೆಗಳು. ಸಂಸ್ಕೃತದಲ್ಲಿ 'ಏವ' ಎಂಬ ಅವ್ಯಯವು ಅವಧಾರಣ ಸೂಚಕವಾಗಿದೆ. ತಾನು ಬಿಗಿವಿಡಿದ ಪದದ ಅರ್ಥವನ್ನು ಬೇರೆಯವುಗಳಿಂದ ಭಿನ್ನವೆಂಬುದನ್ನು ಅವಧಾರಿಸಿ ತೋರಿಸುವುದೇ ಈ ಅವಧಾರಣ ಪದದ ಕೆಲಸ. ಹಾಗೆ ಬಿಗಿವಿಡಿದ ಪದಗಳ 'ಅನ್ವಯ ಜಾತಿ ಗುಣ ಕ್ರಿಯಾರ್ಥ'ಕಗಳು ಇಂಥ ಅವಧಾರಣವನ್ನು ಕೂಡಿಸುವಲ್ಲಿ, ಒಂದು ನಿಯಮಬದ್ಧವಾದ ಕ್ರಮದಿಂದಿರಬೇಕು. ಇಲ್ಲವಾದರೆ ಅರ್ಥಾವಗಾಹನೆ ಸಡಿಲಾಗುವುದರಿಂದಾಗಿ, ಅಂಥ ದೇಸಿಯಾದ ಪ್ರಯೋಗವು ಅವಧಾರಣ ದೋಷವೆನ್ನಿಸುವುದು.

ಕುಲಜನೀತನೆ ಪಂಡಿತನೀತನು
ಜ್ಜ್ವಲ ಯಶೋಧಿಕನೀತನೆ ತಿಬ್ಬಮಂ
ದಲಸಿ ಪೇೞ್ವವಧಾರಣದೋಷಮಂ
ನೆಲಸಲೀಯದಿರಿಂ ಕೃತಿನಾರಿಯೊಳ್ —(I, 138)

ಇಲ್ಲಿ ಒಂದು ವಿಶಿಷ್ಟ ವ್ಯಕ್ತಿಯ ಅನ್ವಯ, ಜಾತಿ, ಗುಣ, ವಾಚಕ ಪದಗಳಲ್ಲಿ 'ಎ' ಎಂಬ ಅವಧಾರಣೆಯನ್ನು ಸೇರಿಸಿ, ಆ ವ್ಯಕ್ತಿಯು ಸಾಮಾನ್ಯವಾದ ಬೇರೆ ವ್ಯಕ್ತಿ ವರ್ಗದಿಂದ ಭಿನ್ನವೆಂಬುದನ್ನು ತಿಳಿಸಲು ಪ್ರಯತ್ನಿಸಿದೆ. ಆದರೂ 'ಕುಲಜಂ ಈತನೆ, ಪಂಡಿತಂ ಈತಂ, ಉಜ್ಜ್ವಲ ಯಶೋಧಿಕಂ ಈತನೆ' ಎಂಬ ಉದಾಹರಣಗಳ ನಡುವಿನ ವಾಕ್ಯವು 'ಎ' ಕಾರರಹಿತವಾಗಿ ಶಿಥಿಲವಾದುದು ವ್ಯಕ್ತವಾಗುತ್ತದೆ. 'ಎ'ಕಾರವು ಹಿಂದು ಮುಂದಣ ಎರಡೆಡೆಗಳಲ್ಲೂ ಇರುವುದರಿಂದ ಮಧ್ಯಕ್ಕೂ ಅದನ್ನು ಉದ್ಧರಿಸಿಕೊಳ್ಳಬೇಕು ಎಂಬುದು ಪ್ರಯೋಗಿಸಿದವನ ಭಾವವಾಗಿರಲೂಬಹುದು. ಇಂಥ ದುಷ್ಟ ಅಥವಾ ಅವಿಚಾರಿತ ಪ್ರಯೋಗಗಳನ್ನು ಮತ್ತಿನ ಮಹಾಕವಿಗಳು ಬಳಸಿಲ್ಲವೆಂದಲ್ಲ; ಅವರು ತಮ್ಮ ಕಾಲದ ಆ ವಿಶಿಷ್ಟ ದೇಸಿಯನ್ನೇ ಅವಲಂಬಿಸಿ ಹಾಗೆ ಮಾಡಿರಬಹುದು. ಆದರೆ ಗ್ರಂಥಕಾರನು

ಮಾರ್ಗಾನುಸಾರವಾಗಿ ಅಂಥದನ್ನು ದೋಷವೆಂದೇ ನಿರ್ಧರಿಸಬೇಕಾಯಿತು. ಆದುದರಿಂದ, ಅವನು ಆ ಪದ್ಯವನ್ನೇ ತಿದ್ದಿ ಸೂಚಿಸುವುದನೀಕ್ಷಿಸಿರಿ :

ಶೂರನೀತನೆ ಪಂಡಿತನೀತನೇ
ಕ್ಷೀರಗೌರಯಶೋಧಿಕನೀತನೇ
ಧಾರಿಣೀತಳದೊಳ್ ಧ್ರುವಮೆಂಬುದಾ
ಧಾರಮಿಂತವಧಾರಣದೊಳ್ ಗುಣಂ —(I, 139)

ಇಲ್ಲಿ ಕ್ರಮವಾಗಿ 'ಎ', 'ಏ' ಎಂಬ ಅವಧಾರಣಗಳು ಬಂದಿರುವುದು ವ್ಯಕ್ತವಿದೆ.

## ವಿಶಂಕಾ ದೋಷ

'ವಿಶಂಕೆ' ಎಂದರೆ ಸಂದೇಹ. ಅದನ್ನು ಸೂಚಿಸುವ ಕನ್ನಡಾವ್ಯಯಗಳು 'ಒ', 'ಓ' ಎಂಬವುಗಳು. ಆ ವಿಶಂಕೆಗಳನ್ನೂ ಕ್ರಮಗೊಂಡು ಪ್ರಯೋಗಿಸದಿದ್ದರೆ, ದೋಷವೆನ್ನಿಸುವುದು :

ದಿವಿಜನೋ ಫಣಿನಾಯಕನೋ ಮನೋ
ಭವನಿವಂ ಕರಮೊಪ್ಪಿದನೆಂಬುದಂ
ಕವಿಗಳಿಟ್ಟ ವಿಶಂಕೆಯ ಪಾಟಿಯುಂ
ತವಿಸಿ ನಿಲ್ಕೆ ಮನೋಹರಕಾವ್ಯದೊಳ್ —(I, 140)

ಹೀಗೆ 'ಕವಿಗಳಿಟ್ಟ ವಿಶಂಕೆಯ ಪಾಟಿ' ದುಷ್ಟವಾಗಿದೆ. ಏಕೆಂದರೆ, 'ದಿವಿಜನೋ ಫಣಿನಾಯಕನೋ ಮನೋಭವಂ' ಎಂಬ ಈ ದೃಷ್ಟಾಂತದೊಳಗಿನ ಅಂತ್ಯ ಪದದಲ್ಲಿ 'ಓ' ಎಂಬ ವಿಶಂಕಾರ್ಥ ಸಂಜ್ಞೆ ಸೇರಿಲ್ಲ. ಹಿಂದಿನ ಅವಧಾರಣ ಸಂಜ್ಞೆಯನ್ನು ಹೇಗೆ ಉದ್ಧರಿಸಿಕೊಳ್ಳಲಾಗುವುದಿಲ್ಲವೋ ಹಾಗೆ ಇದನ್ನೂ ಉದ್ಧರಿಸಿಕೊಳ್ಳಲಾಗುವುದಿಲ್ಲ. ಮುಂದಿನವರಂತೆ ಹಿಂದಿನವರೂ ಅಂಥ ದೋಷವನ್ನು ಗುಣವನ್ನಾಗಿ ಭಾವಿಸಿಕೊಂಡು ಇಟ್ಟುಕೊಂಡುದರಿಂದಲೇ ಗ್ರಂಥಕಾರನು ಅದನ್ನು ವಿಮರ್ಶಿಸಬೇಕಾಯಿತು. ಆ ವಿಮರ್ಶೆಯಾದರೂ 'ತವಿಸಿ ನಿಲ್ಕೆ ಮನೋಹರಕಾವ್ಯದೊಳ್' ಎಂದುದು ಎಷ್ಟೊಂದು ಅಂದವಾಗಿದೆ ಎಂಬುದನ್ನು ಅವಧಾರಿಸತಕ್ಕುದು. ಪದ್ಯವಿದನ್ನು ಗ್ರಂಥಕಾರನು ಹೀಗೆ ತಿದ್ದಿ ತೋರಿಸುತ್ತಾನೆ :

ಸುರಗಣಾಧಿಪನೋ ಫಣಿನಾಥನೋ
ನಿರುತಮಾ ಸ್ಮರನೋ ಸೊಗಯಿಪ್ಪರೀ
ದೊರೆಯರಿಲ್ಲ ಪೆಱರ್ ನರರೆಂಬುದಾ
ದರದಿನಕ್ಕೆ ಗುಣೋದಯಕಾರಣಂ —(I, 141)

ಹೀಗೆ ಕಾರಕಾದಿ ದೋಷಗಳೆರಡನ್ನೂ ತಿದ್ದಿ ಗುಣಗಳಾಗಿ ಮಾರ್ಪಡಿಸಿ ನಿರೂಪಿಸುವಲ್ಲಿ, ಇವು 'ಅಕ್ಕೆ ಗುಣೋದಯಕಾರಣಂ' ಎನ್ನುತ್ತಾನೆ. ಇಲ್ಲಿ 'ಗುಣೋದಯ' ಎಂಬು

ದಕ್ಕೆ ಮುಂದೆ ವರ್ಣಿತವಾಗುವ 'ಕಾವ್ಯ ಗುಣಾಭಿವೃದ್ಧಿ' ಎಂದು ಅರ್ಥ.[1]

ಹಿಂದಿನ ಕಾರಕಾದಿ ದೋಷಗಳು ಕಾವ್ಯಗುಣಾಘಾತಗಳೆಂಬುದರಿಂದ ಅವುಗಳಲ್ಲಿ ಎಚ್ಚರವಿರಬೇಕೆಂಬುದನ್ನು ಈ ವರೆಗೆ ಸೂಚಿಸಿರುವುದಾಗಿದೆ. ಆ ಉಕ್ತಿದೋಷಗಳೊಡನೆ ಇನ್ನೊಂದು ಉಕ್ತಿ ದೋಷವನ್ನು, ಅಥವಾ ಉಕ್ತಿ ಪ್ರಯೋಗ ದೋಷವನ್ನು ಗ್ರಂಥಕಾರನು ನಿರೂಪಿಸುತ್ತಾನೆ. ಇದೀಗ ಉಪಮಿತೋಕ್ತಿ ದೋಷ. (I, ೧೪೨).[2] ಸಂಸ್ಕೃತದ ಆಲಂಕಾರಿಕರು ಹೇಳುವ 'ಉಪಮಾವಾಚಕ'ವನ್ನೇ ಈ ಆಲಂಕಾರಿಕನು 'ಉಪಮಿತೋಕ್ತಿ' ಎಂದು ಹೆಸರಿಸಿರುವುದು. 'ಇವ', 'ವತ್'—ಮೊದಲಾದುವು ಸಂಸ್ಕೃತ ಭಾಷೆಯಲ್ಲಿ ಉಪಮಾವಾಚಕಗಳಾದರೆ, 'ಪೋಲ್ (ವೋಲ್)', 'ಅಂತೆ' ಇತ್ಯಾದಿಗಳು ಕನ್ನಡದಲ್ಲಿ 'ಉಪಮಿತೋಕ್ತಿ'ಗಳು. ಒಂದೇ ವಾಕ್ಯದೊಳಗಿನ ಭಿನ್ನಭಿನ್ನವಾದ ಹೋಲಿಕೆಗಳನ್ನು ಸೂಚಿಸುವಾಗ, ಆ ಉಪಮಾವಾಚಕಗಳ ರೂಪಗಳು ಅಭಿನ್ನಗಳಾಗಿದ್ದರೆ ಗುಣವೆಂದೂ, ಭಿನ್ನಗಳಾಗಿದ್ದರೆ ದೋಷವೆಂದೂ ಗ್ರಂಥಕಾರನ ಹೇಳಿಕೆ. ದೋಷ ದೃಷ್ಟಾಂತವನ್ನು ನೋಡಿ :

ಪೊಳೆವ ಮಿಂಚುಗಳಂತಿರೆ ಕೇತುಗಳ್
ಜಳದವೃಂದದವೋಲಿರೆ ಹಸ್ತಿಗಳ್
ಗಳಿತಧಾರೆಗಳಂತಿರೆ ಪತ್ತಿಗಳ್
ಬಳಸಿ ಕಾರ್ಗಣೆಯಾಯ್ತು ಮಹಾಹವಂ —(I, 143)

ಇದೊಂದು ಮಹತ್ತಾದ ಯುದ್ಧದ ವರ್ಣನೆಯೆಂಬುದು ಸ್ಪಷ್ಟವಾಗಿಯೇ ಇದೆ.[3] ಇಲ್ಲಿ ಕ್ರಮವಾಗಿ 'ಅಂತೆ,' 'ವೋಲ್,' 'ಅಂತೆ' ಎಂಬ ವಾಚಕ ಪದಗಳಿವೆ. ಹೀಗೆ ಏಕತೆಯುಳಿದ ಈ ಪ್ರಯೋಗವು ದೇಸಿಗೆ ಒಪ್ಪುಗೆಯಾದರೂ ಕ್ರಮವಿಡಿದ ಮಾರ್ಗಕ್ಕೆ ಸಾಧುವೆನ್ನಿಸದು. ಈ ಪದ್ಧತಿ ದೋಷಮಿಶ್ರಿತವಾಗುವುದೇಕೆ ಎಂಬುದನ್ನು ಅವನೇ ಸೂಚಿಸುತ್ತಾನೆ :

ನಿಯಮಿತಾಕ್ಷರದಿಂದುಪಮಾ ಪ್ರತಿ
ಜ್ಞೆಯನೆ ತಿರ್ದುವುದಟ್ತುಯಿನಿರ್ದುಮಾ
ಬಯಕೆ ತೀರದ ಕಾರಣದಿಂ ವಿಪ
ರ್ಯಯಮಿದಭ್ಯುಪಮೋಕ್ತ್ಯಪದೂಷಣಂ —(I, 144)

---

[1] ಇದರೊಡನೆ, ಗ್ರಂಥಾಶ್ರಯದಾತನಾದ 'ನೃಪತುಂಗ'ನಿಗೂ 'ವಾಗಧಿಪ'ನಾದ ಗ್ರಂಥಕಾರನಿಗೂ 'ಗುಣೋದಯ' ಎಂಬ ಬಿರುದಿತ್ತೆಂಬುದನ್ನೂ ಗಮನಿಸಬೇಕು.

[2] '......ಅಭ್ಯುಪಗಮೋಕ್ತಿ ಗುಣಾವಗುಣಂಗಳಂ' ಎಂದು ಎರಡು ಪ್ರತಿಗಳಲ್ಲಿಯೂ ತೋರುತ್ತಿದೆ. ಆದರೆ ಶುದ್ಧ ರೂಪವು '...ಅಭ್ಯುಪಮಿತೋಕ್ತಿ...' ಎಂದಿರಬೇಕೆಂದು ಸಂದರ್ಭದಿಂದ ವಿಶದವಾಗುತ್ತಿದೆ. ಮದ್ರಾಸ್ ಪ್ರತಿಯಲ್ಲಿ ಕೊಟ್ಟಿರುವ ಅದೊಂದು ಪಾಠಾಂತರದಿಂದಲೂ ಈ ಊಹೆ ಬಲಗೊಳ್ಳುತ್ತಿದೆ.

[3] ಇದು ಗೋವಿಂದರಾಜನೆಸಗಿದ, ಅಥವಾ ನೃಪತುಂಗನಿಗೆ ಇಲ್ಲವೆ ಬಂಕೆಯನಿಗೆ ವೈರಿಗಳೊಡ್ಡವಗಿಪ, ಹೋರಾಟವನ್ನು ಬಣ್ಣಿಸುವ ಅವುದೋ ಒಂದು ಕಾವ್ಯದೊಳಗಿನ ಇಲ್ಲವೆ ಶಾಸನದ ಪದ್ಯಗಳಲ್ಲೊಂದಾಗಿರಬಹುದೆ?

ನಮ್ಮ ಮೇಲಿನ ವಿವೇಚನೆಗೆ ಈ ಪದ್ಯಾರ್ಥವೇ ಆಧಾರವೆಂಬುದು ಈಗಾಗಲೇ ವ್ಯಕ್ತವಾಗಿರಬಹುದು. ಹಿಂದಣ ದೃಷ್ಟಾಂತದಲ್ಲಿ ವ್ಯಾಕರಣಸಂಬಂಧವಾಗಿ ಪದಗಳ ಬಾಹ್ಯದೋಷವೇನೂ ಇಲ್ಲ; ಅದರಂತೆ ಅರ್ಥದೋಷವೂ ಇಲ್ಲ. ಆದರೂ 'ನಿಯಮಿತಾಕ್ಷರ'ಗಳಿಂದ ಕೂಡಿದ ಉಪಮಾವಾಚಕಗಳ ಐಕ್ಯವಿಲ್ಲವೆಂಬುದೊಂದೇ ತೊಡರು. ಇದು ಪ್ರಮುಖವಾದೊಂದು ದೋಷವೆಂದು ಗ್ರಂಥಕಾರನ ಅಭಿಪ್ರಾಯವಲ್ಲ. 'ಇದು....ಉಪಮೋಕ್ತ್ಯುಪದೂಷಣಂ' ಎಂಬ ಪದವನ್ನು ಭಾವಿಸಿದಲ್ಲಿ, ಅವನೆಣಿಕೆ ಹೊಳೆಯದಿರದು. ದೋಷಗಳಿಗೆ ದೃಷ್ಟಾಂತಗಳನ್ನು ಕೊಟ್ಟು, ಆ ಮೇಲೆ ಅದನ್ನು ತಿದ್ದಿ ಕಾಣಿಸುವುದು ಆತನ ಪದ್ಧತಿ. ಮಾತ್ರವಲ್ಲ; ಮುಂದಿನ ಪದ್ಯವನ್ನು ನೋಡಿದಲ್ಲಿ, ತಿದ್ದಿದ ಪದ್ಯವನ್ನೇ ವಿವೇಚನೆ ಮಾಡಿ ಬರೆದಂತೆ ತೋರುವುದು. ಮೊದಲು ಆ ವಿವೇಚನಾಕ್ರಮುವನ್ನೀಕ್ಷಿಸಿರಿ :

ಉಪಮಿತಾಕ್ಷರಮೆಲ್ಲಿಯುಮೇಕರೂ
ಪಪರಿವೃತ್ತಿಯೊಳೊಂದಿದ ಮಾಟಿಕ್ಕೆಯಿಂ
ದುಪಚಿತಕ್ರಮುಮಕ್ಕುಮಿದೆಂದುಮು
ಭ್ಯುಪ[ಮಿತ][1]ಕ್ಕೆ ಗುಣೋದಯಕಾರಣಂ —(*i*, 145)

ಹಿಂದಿನ ಪದ್ಯವು 'ಉಪಮೋಕ್ತ್ಯುಪದೂಷಣ'ವನ್ನಾದರೆ, ಇದು 'ಉಪ[ಮಿತ]ಕ್ಕೆ' ಗುಣೋದಯಕಾರಣವಾದ ಉದಾಹರಣವನ್ನು ವಿವರಿಸಿರುವುದೆಂಬುದು ಪದ್ಯಗಳಿಂದಲೇ ಹೊಳೆದು ತೋರುತ್ತದೆ. 'ಪರಿವೃತ್ತಿ' ಎಂದರೆ 'ಬದಲಾವಣೆ' ಎಂಬ ತಾತ್ಪರ್ಯಾರ್ಥವೂ ಭಿನ್ನ ಸಂದರ್ಭದಲ್ಲಿ ತಲೆದೋರುವುದೆಂಬುದು ನಿಜ. ನ್ಯೂನಾಧಿಕ ಪದಾರ್ಥಗಳು ವಿನಿಮಯಗೊಂಡಂತೆ ವರ್ಣಿಸಿದರೆ 'ಪರಿವೃತ್ತಿ' ಎಂಬ ಅಲಂಕಾರಕ್ಕೆ ದೃಷ್ಟಾಂತವಾಗುವುದೆಂಬುದೂ ನಿಜ. ಆದರೆ ಅದಕ್ಕೆ ನಿಜವಾದ ಅರ್ಥವು 'ವಿಸ್ತೃತಿ' ಎಂದು. 'ಬದಲಾವಣೆ' ಎಂಬುದು ಲಾಕ್ಷಣಿಕವಾಗಿ ತಲೆದೋರಿದುದು. ಇಲ್ಲಿಯಂತೂ 'ಏಕರೂಪಪರಿವೃತ್ತಿಯೊಳೊಂಪೆ' ಎಂಬುದನ್ನೆಣಿಸಿರಿ. 'ಒಂದೇ ರೂಪವಾಗಿ ಆಯಾ ಎಡೆಗಳಲ್ಲಿ ವಿಸ್ತರಿಸಿದಲ್ಲಿ' ಎಂಬ ಅರ್ಥವದಕ್ಕೆ. ಮಾತ್ರವಲ್ಲ; ಮತ್ತೆ '....ಒಂದಿದ ಮಾಟಿಕ್ಕೆಯಿಂ ಉಪಚಿತಕ್ರಮುಂ ಅಕ್ಕುಂ' ಎಂಬುದಾಗಿಯೂ 'ಇದು....ಗುಣೋದಯಕಾರಣಂ' ಎಂದೂ ಇರುವುದರಿಂದ, ಇದು ತಿದ್ದಿ ಏಕರೂಪಗೊಳಿಸಿದ ಉದಾಹರಣವನ್ನೇ ವಿಮರ್ಶಿಸಿದುದೆಂಬಲ್ಲಿ ಸಂಶಯವಿಲ್ಲ. ಅಂಥ ಪದ್ಯವು ಗ್ರಂಥದಲ್ಲಿ ತೋರುವುದಿಲ್ಲ. ಬಹುಶಃ ಅದು ಮಾತೃಕೆಯಲ್ಲಿ ಶಿಥಿಲವಾಗಿದ್ದಿರಬೇಕು. ಆದರೆ ಹೀಗೆ ತಿದ್ದಿಕೊಂಡು 'ಏಕರೂಪಪರಿವೃತ್ತಿಯೊಳೊಂದಿದ ಮಾಟಿಕ್ಕೆ'ಯನ್ನು ಕಾಣಿಸುವುದು ಕಷ್ಟವಲ್ಲ :

ಪೊಳೆವ ಮಿಂಚುಗಳಂತಿರೆ ಕೇತುಗಳ್
ಜಳದವೃಂದ[ಗಳಂತಿ]ರೆ ಹಸ್ತಿಗಳ್

---

[1] ಹಿಂದಿನ ನಮ್ಮ ಊಹೆಗೆ ಅನುಸಾರವಾಗಿ ಕಂಸದೊಳಗೆ ಮಾರ್ಪಾಡನ್ನು ಸೂಚಿಸಿರುವುದು ನಾವು.

ಗಳಿತಧಾರೆಗಳಂತಿರೆ ಪತ್ರಿಗಳ್
ಬಳಸಿ ಕಾರ್ಗಿಣಿಯಾಯ್ತು ಮಹಾಹವಂ —(i, 143)

ಮೈಸೂರು ಪ್ರಾಚ್ಯ ಗ್ರಂಥಾಲಯದ ಮಾತೃಕೆಯನ್ನು ನೋಡಿದರೆ, 'ಅಂತಿರೆ' ಎಂಬ ರೂಪವೂ ಇದೆ. ಹೇಗಿದ್ದರೂ, ಈ ಪದ್ಯವು 'ಉಪಮೋಕ್ತಿಗುಣ' ದೃಷ್ಟಾಂತದ ವಿವೇಚನೆಯೇ ಸರಿ.

ಹಿಂದೆ ಕಾವ್ಯದೋಷ ಸಂತಾನದ ಆ ವರೆಗಿನ ಚಿತ್ರವನ್ನು ಕೊಟ್ಟಿರುತ್ತೇವೆ. ಅಲ್ಲಿ ಪ್ರಮುಖವಾದ ನಾಲ್ಕು ದೋಷಗಳೊಳಗೆ ಆದಿಯ 'ಶ್ರುತದುಷ್ಟ', 'ಅರ್ಥದುಷ್ಟ', 'ಶ್ರುತಿಕಷ್ಟ' ಎಂಬ ಮೂರನ್ನೇ ವಿಸ್ತರಿಸಲಾಗಿದೆ. 'ಕಲ್ಪನೋಕ್ತಿ ಕಷ್ಟ'ವನ್ನು ಅಲ್ಲಿ ಕೊನೆಗೆ ಸೇರಿಸಿದ್ದರೂ ವಿವರಿಸಿಲ್ಲ. ಈ ಕಾರಕ ದೋಷಾದಿಗಳೆಲ್ಲವೂ ಆ 'ಕಲ್ಪನೋಕ್ತಿ ಕಷ್ಟ'ದ ಸಂತತಿಗಳೆಂದು ತೋರುತ್ತದೆ. ಅದರಿಂದ, ಆ ಚಿತ್ರವನ್ನು ಕೆಳಗೆ ಕಾಣಿಸಿದರೆ ಅನುಕೂಲವಾಗುವುದು.

## ನಾಲ್ಕನೆಯ ದೋಷ—ಕಲ್ಪನೋಕ್ತಿ ಕಷ್ಟ

| | | | |
|---|---|---|---|
| ೧ | ಕಾರಕದೋಷ | — | ಕರ್ಮ ಕರಣಾದಿಗಳು ಆರು |
| ೨ | ವಚನದೋಷ | — | ಏಕ–ಬಹು (ಇದು ಕರ್ತೃ ದೋಷ ಸಂಬಂಧವಾದುದು) |
| ೩ | ಗುರುದೋಷ | | |
| ೪ | ಲಘುದೋಷ | | |
| ೫ | ಸಮುಚ್ಚಯದೋಷ | | |
| ೬ | ವಿಕಲ್ಪದೋಷ | | |
| ೭ | ಅವಧಾರಣದೋಷ | | |
| ೮ | ವಿಶಂಕೆ | | |
| ೯ | ಉಪಮಿತೋಕ್ತಿ ದೋಷ | | |

ಹಿಂದಿನ ದೋಷದಲ್ಲಿ ಕಾಣಿಸಿದುವುಗಳು ಪ್ರಮುಖವಾಗಿ ಆರ್ಥಿಕ ದೋಷಗಳಾದರೆ, ಇವುಗಳು ಶಾಬ್ದಿಕ ದೋಷಗಳು. ಎರಡರಲ್ಲೂ ಗೌಣವಾಗಿ ಶಾಬ್ದಿಕ ಆರ್ಥಿಕ ದೋಷಗಳು ತಲೆದೋರುತ್ತವೆ. ಈ ದೋಷಗಳನ್ನೆಲ್ಲ ಬಗೆಹರಿಸಿ ಒಂದು ಪದ್ಧತಿಗೊಳಿಸದಿದ್ದರೆ ಕಾವ್ಯಮಾರ್ಗವು ನೇರ್ಪಡಲಾರದು. ದೇಸಿಗಳಲ್ಲಿ ಹಲವು ಗುಣಸೌಂದರ್ಯಗಳಿವೆ ಎಂಬಲ್ಲಿ ಆಕ್ಷೇಪವೇ ಇಲ್ಲ. ಆದರೆ ಅವುಗಳೊಳಗೆ ಹುದುಗಿ, ಮೊಳೆದು, ಹೊದರೆದ್ದು ಹಬ್ಬಿದ ಇವೇ ಮೊದಲಾದ ದೋಷಗಳನ್ನು ಚೆನ್ನಾಗಿ ಮನನ ಮಾಡಿಕೊಳ್ಳಲೇಬೇಕು.

# ೧೧

# ಮಾರ್ಗ ವಿಭಾಗ

ಕೆಲಗಾಲಕ್ಕೆ ಹಿಂದೆ ಕನ್ನಡಸಾಹಿತ್ಯ ಕ್ಷೇತ್ರದಲ್ಲಿ ಆಚಾರ್ಯಪುರುಷರಾಗಿದ್ದ ಇಬ್ಬರು ವಿದ್ವಾಂಸರು ಕನ್ನಡ ಮಾರ್ಗಭೇದಗಳ ಸ್ವರೂಪವನ್ನು ಚರ್ಚಿಸಿದ್ದರಷ್ಟೆ. ತೆಲುಗಿನ ಸಂಬಂಧದಿಂದ ಉತ್ತರಮಾರ್ಗವೂ ತಮಿಳಿನ ಸಂಪರ್ಕದಿಂದ ದಕ್ಷಿಣಮಾರ್ಗವೂ ತಲೆದೋರಿದವೆಂದು ಅವರಲ್ಲೊಬ್ಬರಾದ ದಿವಂಗತ ಆರ್. ರಘುನಾಥರಾಯರು ವಾದಿಸಿದ್ದರು.[1] ಕೀರ್ತಿಶೇಷ ಆರ್. ನರಸಿಂಹಾಚಾರ್ಯರಿಗೆ ಈ ವಾದವು ಸಯುಕ್ತಿಕವಾಗಿ ತೋರಿರಲಿಲ್ಲ. ಅವರೆಣಿಕೆಯಂತೆ, ಇವೆರಡು ಮಾರ್ಗಗಳೂ ಸಂಸ್ಕೃತ ಸಾಹಿತ್ಯವನ್ನು ಅನುಸರಿಸಿದ, ದಂಡ್ಯಾದಿ ಲಾಕ್ಷಣಿಕರಿಂದ ಸೂಚಿತವಾದ, ಮಾರ್ಗಗಳು. ಅವುಗಳನ್ನೇ 'ಕವಿರಾಜಮಾರ್ಗ'ಕಾರನು ತನ್ನ ಗ್ರಂಥದಲ್ಲಿಯೂ ಸೂಚಿಸಿದ್ದಾನಲ್ಲದೆ ಕನ್ನಡದಲ್ಲಿ ಅಂತಹ ಭೇದಗಳಿರುವಂತೆ ತೋರುವುದಿಲ್ಲ; ಕೆಲವು ಪದ ರೂಪಭೇದಗಳು ಕನ್ನಡ ದಕ್ಷಿಣೋತ್ತರ ಮಾರ್ಗಗಳಲ್ಲಿರುವಂತೆ 'ಕವಿರಾಜಮಾರ್ಗ'ದಲ್ಲಿ ಹೇಳಿದೆಯಾದರೂ, ಆ ರೂಪಭೇದಗಳು ಅತಿ ಕ್ಷುಲ್ಲಕವಾದವುಗಳು—ಎಂದು ಕೀರ್ತಿಶೇಷ ನರಸಿಂಹಾಚಾರ್ಯರು ಸಿದ್ಧಾಂತಿಸಿದ್ದಾರೆ.[2] ಆದರೆ ನಿಜಸ್ಥಿತಿ ಈ ವಾದದ್ವಯಕ್ಕಿಂತಲೂ ಭಿನ್ನವಾಗಿಯೇ ಇದೆ ಎಂದು ನಮ್ಮ ಭಾವನೆ.

ಕೀರ್ತಿಶೇಷ ನರಸಿಂಹಾಚಾರ್ಯರ ವಾದವನ್ನು ನೋಡಿದರೆ, ಕನ್ನಡ, ತಮಿಳು, ತೆಲುಗು—ಈ ಮೂರು ದೇಶಭಾಷೆಗಳಲ್ಲೂ ಮಾರ್ಗಭೇದ ಸೂಚಕ ಸಾಧನಗಳು ನ್ಯೂನವಾಗಿವೆಯೆಂದೂ ಅವುಗಳೆಲ್ಲ ಸಂಸ್ಕೃತದಿಂದ ಎರವಾಗಿ ಬಂದವುಗಳೆಂದೂ ಅವರ ಅಭಿಪ್ರಾಯವಾಗಿದ್ದಂತೆ ತೋರುವುದು. ಈ ಸಂದರ್ಭದಲ್ಲಿ ಭಾಮಹನೂ ಅವನನ್ನು ಅನುಸರಿಸಿ 'ಕಾವ್ಯಾವಲೋಕನ'ಕಾರನೂ ಉತ್ತರ ದಕ್ಷಿಣ ಮಾರ್ಗವಿಷಯಕವಾಗಿ ಹೇಳಿದ ಮಾತುಗಳನ್ನು ಪರಾಂಬರಿಸಬೇಕು :

> ಗೌಡೀಯಮಿದಮೇತತ್ತು ವೈದರ್ಭಮಿತಿ ಕಿಂಪೃಥಕ್
> ಗತಾನುಗತಿಕ ನ್ಯಾಯಾನ್ನಾನಾಖ್ಯೇಯಮಮೇಧಸಾಂ —'ಕಾವ್ಯಾಲಂಕಾರ' (i, 32)

—'ಇದು ಗೌಡೀಯ ಮಾರ್ಗ (ಉತ್ತರಮಾರ್ಗ), ಇದಾದರೋ ವೈದರ್ಭ ಮಾರ್ಗ (ದಕ್ಷಿಣ ಮಾರ್ಗ) ಎಂಬ ಭೇದವೇನು ? ಅವಿಚಾರಿಗಳು ಅನುಸರಿಸುವ ಗತಾನುಗತಿಕ

[1] ಆರ್. ರಘುನಾಥರಾವ್, ವ್ಯಾಕರಣೋಪನ್ಯಾಸಮಂಜರಿ (ಚತುರ್ಥೋಪನ್ಯಾಸ, 'ಕನ್ನಡದ ದಕ್ಷಿಣೋತ್ತರ ಮಾರ್ಗಗಳ ವಿಚಾರ'), ಪು. ೩೫ ರಿಂದ ೬೬ರ ವರೆಗೆ.

[2] R. Narasimachar, *History of Kannada Language*, pp. 121 to 128.

ನ್ಯಾಯದಿಂದ ನಾನಾ ರೂಪವಾಗಿ ಹೇಳಲ್ಪಟ್ಟಿತು.'

ಇದು ಭಾಮಹನ ಮಾತಾದರೆ, ನಾಗವರ್ಮನದನ್ನೀಕ್ಷಿಸಿರಿ :

ವೈದರ್ಭಗೌಡಮಾರ್ಗ ವಿ
ಭೇದಂ ಬಗೆವೊಡೆ ಗತಾನುಗತಿಕಮಿದೆಂದೊ
ಲ್ದಾದರಿಪರ್ ಕೆಲಬರ್ ಸಂ
ವಾದದೊಳೆರಡುಂ ಸಮರ್ಥಮಪ್ಪುದಱಿಂದಂ —'ಕಾವ್ಯಾವಲೋಕನ' ಪದ್ಯ 522

ಇದು ಭಾಮಹನ ಹೇಳಿಕೆಯನ್ನೇ ಅನುಸರಿಸಿದೆಯಲ್ಲದೆ ಸ್ವತಂತ್ರವಲ್ಲ.

ಭಾಮಹನು ಹೀಗೆಂದುದರಲ್ಲಿ ಸೂಕ್ಷ್ಮ ವಿಚಾರವೇ ಹರಿಯುತ್ತಿದೆ ಎಂದು ತೋರು ವುದು. ಯಾಸ್ಕನ ಕಾಲದಿಂದಿತ್ತ ಸಂಸ್ಕೃತ ಭಾಷೆಗಿದ್ದ ದೇಶರೂಢಿ ಮೆಲ್ಲಮೆಲ್ಲನೆ ಸಡಿಲಾ ಗುತ್ತಾ ಬಂದಿದೆ. ಆಗ ರೂಢಿ ಇದ್ದುದರಿಂದಲೇ ಯಾಸ್ಕನು ತನ್ನ ಗ್ರಂಥದಲ್ಲಿ 'ಇತಿ ಪ್ರಾಚ್ಯಾಃ', 'ಇತಿ ಉದೀಚ್ಯಾಃ', 'ಇತಿ ದಾಕ್ಷಿಣಾತ್ಯಾಃ' 'ಇತಿ ಪ್ರತೀಚ್ಯಾಃ'—ಎಂದು ಆಯಾ ಪ್ರಾಂತೀಯರು ಪ್ರಯೋಗಿಸುತ್ತಿದ್ದ ಭಿನ್ನಭಿನ್ನ ಪದರೂಪಗಳನ್ನು ಸೂಚಿಸಿದ್ದಾನೆ. ಕ್ರಮೇಣ ಆ ಭೇದರೂಪಗಳು ಮಾಸಿಹೋಗಿ ಅದು ಸಾಹಿತ್ಯದ ಭಾಷೆಯಾಗಿ ಪರಿಣಮಿ ಸುತ್ತಾ ಬಂತು; ಕೆಲವರ ವ್ಯವಹಾರದಿಂದಲೂ ತೊಲಗಿಹೋಯಿತು. ಹಾಗಾದ ಮೇಲೆ ಆ ಭಾಷೆಯಲ್ಲಿ 'ದೇಸಿ' ಎನ್ನಿಸುವ ಜೀವದ್ಭಾಷಾ ಚೈತನ್ಯವು ಇರುವುದು ಹೇಗೆ ? ಹಾಗೆ ವ್ಯಾವ ಹಾರಿಕತೆಯನ್ನುಳಿದ, ಅಥವಾ ದೇಶಭಾಷೆಯಲ್ಲದ, ಸಂಸ್ಕೃತದ ಸಾಹಿತ್ಯದೊಳಗೆ ವೈದರ್ಭ ಗೌಡೀಯಾದಿ ಭೇದಗಳಿರುವುದು ಅಸಂಭವವೇ ಸರಿ. ಈ ವಿಚಾರದಿಂದಲೇ ಭಾಮಹನು "ಆ ವೈದರ್ಭ ಗೌಡೀಯಾದಿಗಳೆಂದರೆ 'ಗತಾನುಗತಿಕ ನ್ಯಾಯ'ದಿಂದ ಅವಿಚಾರಿಗಳಾಡುವ ಮಾತು"—ಎಂದು ಕಟುವಾಗಿ ಸೂಚಿಸಿದ್ದಾನೆ. ನಾಗವರ್ಮನು ಭಾಷಾಂತರಿಸಿದ ಈ ಶ್ಲೋಕದ ಆದಿಭಾಗವು ಮೂಲಾನುಸಾರವಾಗಿಯೇ ಇದ್ದರೂ ಉತ್ತರಭಾಗವು ಒಂದಿಷ್ಟು ಭಿನ್ನ ಸ್ವರವಾಗಿದೆ. ಮೂಲಕಾರನು 'ಗತಾನುಗತಿಕ ನ್ಯಾಯದಿಂದ ಅಬುದ್ಧಿವಂತರಿಗೆ ಮಾತ್ರವೇ ಇಲ್ಲಿ ನಾನಾ ಮಾರ್ಗತ್ವವು ಕಾಣುವುದು' ಎಂದು ಸಿದ್ಧಾಂತಿಸಿದರೆ, ಅನುವಾದ ಕಾರನು 'ಗತಾನುಗತಿಕವಾಗಿ ಈಯೆರಡು ಮಾರ್ಗಗಳು ಹರಿದು ಬಂದಿವೆ; ಇವೆರಡು ಮಾರ್ಗ ಗಳೂ (ತಂತಮ್ಮ ಮಟ್ಟಿಗೆ) ಸಮರ್ಥಗಳಾಗಿರುವುದರಿಂದ ಕೆಲಮಂದಿ ವಿದ್ವಾಂಸರು ಒಲಿದು ಈ ಭೇದಗಳನ್ನಾದರಿಸುತ್ತಾರೆ'—ಎನ್ನುತ್ತಾನೆ. ಈ ಭಿನ್ನಸ್ವರದಿಂದಾಗಿ, ಈ ವಿಷಯದಲ್ಲಿ ನಾಗವರ್ಮನ ಭಾವನೆಯು ಭಾಮಹನದಕ್ಕಿಂತ ಭಿನ್ನವಾಗಿದೆಯೆಂಬುದು ಹೊಳೆಯುವು ದಿಲ್ಲವೆ ? ಭಾಮಹನು ಮಾರ್ಗಭೇದಗಳ ಬಾಗಿಲನ್ನೇ ಚಿಲುಕಿಕ್ಕಿ ಬಲಿದರೆ, ನಾಗವರ್ಮನು ಆ ಚಿಲುಕವನ್ನು ಸಡಿಲಿಸಿ ಸೆಳೆದಿದ್ದಾನೆ. ಇದಕ್ಕೆ ಕಾರಣವು ಬೇರಾವುದೂ ಅಲ್ಲ. ಹಿಂದೆಯೇ ಸೂಚಿಸಿದಂತೆ, ಭಾಮಹನ ಕಾವ್ಯಮಾರ್ಗ ನಿರೂಪಣೆಗೆ ಪ್ರಾಂತೀಯ ಭೇದಗಳು ತೊಲಗಿ ಹೋದ ಸಂಸ್ಕೃತ ಸಾಹಿತ್ಯವೇ ಆಧಾರ ; ನಾಗವರ್ಮನದಕ್ಕಾದರೋ ಪ್ರಾಂತೀಯ ಭೇದ ಗಳಿಂದ, ಎಂದರೆ ದೇಸಿಗಳಿಂದ, ಕೂಡಿದ ಕನ್ನಡ ಸಾಹಿತ್ಯವೇ ಮೂಲ. ಅದರಿಂದ, ದಂಡ್ಯಾದಿ ಗಳನ್ನು ಅನುಸರಿಸಿ ರಚಿತವಾದ 'ಕವಿರಾಜಮಾರ್ಗ'ದೊಳಗಿನ ಮಾರ್ಗಭೇದವೆಂಬುದೆಲ್ಲವೂ

ಸಂಸ್ಕೃತ ಸಾಹಿತ್ಯದಿಂದಲೇ ಬಂದುದೆಂಬ ಅಭಿಪ್ರಾಯವನ್ನು ಒಪ್ಪುವುದು ಕಷ್ಟವೆಂದು ನಮ್ರತೆಯಿಂದ ಸೂಚಿಸಬಯಸುತ್ತೇವೆ.

ದಿವಂಗತ ರಘುನಾಥರಾಯರು ಕನ್ನಡದಲ್ಲಿ ಉತ್ತರ ದಕ್ಷಿಣ ಮಾರ್ಗಗಳಿವೆಯೆಂಬುದನ್ನೇನೋ ಒಪ್ಪಿಕೊಂಡಿದ್ದಾರೆ. ಆದರೆ, ಆ ಭೇದಗಳುಂಟಾದುದು ಕ್ರಮವಾಗಿ ಉತ್ತರದ ತೆಲುಗಿನ ಮತ್ತು ದಕ್ಷಿಣದ ತಮಿಳಿನ ಸಂಬಂಧದಿಂದ, ಎಂದೇ ಅವರ ಹೇಳಿಕೆ. ಕನ್ನಡದಲ್ಲಿ ದಕ್ಷಿಣೋತ್ತರ ಮಾರ್ಗಭೇದಗಳನ್ನು ಮೊತ್ತಮೊದಲು ಸೂಚಿಸಿದಾತನೆಂದರೆ 'ಕವಿರಾಜಮಾರ್ಗ'ಕಾರನಷ್ಟೆ. ಅವನ ಕಾಲ ಸುಮಾರು ಕ್ರಿ. ಶ. ಒಂಬತ್ತನೆಯ ಶತಮಾನದ ಮಧ್ಯಭಾಗ. ಆ ಸಮಯದಲ್ಲಿ ಆಂಧ್ರ ಸಾಹಿತ್ಯವು 'ಕಾವೇರಿಯಿಂದಮಾ ಗೋದಾವರಿವರಮಿರ್ದ' ಕನ್ನಡನಾಡಿನ ಉತ್ತರಭಾಗದಲ್ಲಿ ಬೆಳೆದಿದ್ದುದಲ್ಲದೆ, ತೆಂಕಣ ಕನ್ನಡ ಸಾಹಿತ್ಯದಲ್ಲಿ ತನ್ನ ಮಾರ್ಗವನ್ನು ಹರಿಯಿಸುವಷ್ಟು ಸಬಲವಾಗಿತ್ತೆ ? ಹಾಗಿತ್ತೆಂಬುದಕ್ಕೆ ಹಿಂದಿನ ಆಧಾರವೇನಾದರೂ ಇದೆಯೆ ? ಅಷ್ಟು ಹಿಂದಿನ ಕಾಲದಲ್ಲಿ ಆಂಧ್ರ ಭಾಷಾ ಸಾಹಿತ್ಯಗಳು ಅಷ್ಟೊಂದು ಬೇರೂರಿ ಹರಡಿಕೊಂಡಿದ್ದುವೆಂಬುದನ್ನು ಆಂಧ್ರ ಸಾಹಿತ್ಯ ಶಾಸನಾದಿಗಳು ಸೂಚಿಸುವಂತೆ ತಿಳಿದು ಬಂದಿಲ್ಲ. 'ಕವಿರಾಜಮಾರ್ಗ'ಕ್ಕೆ ಆಶ್ರಯದಾತನಾದ ನೃಪತುಂಗನ ವಿಷಯವಂತಿರಲಿ ; ಅವನ ತಂದೆಯಾದ ಪ್ರಭೂತವರ್ಷ ಗೋವಿಂದನ ಮಂಡಳದ ಸಂಸ್ಕೃತ ದಾನಶಾಸನದಲ್ಲಾದರೂ ಹಲಕೆಲವು ಕನ್ನಡ ಪದಗಳು ಹಾಸುಹೊಕ್ಕಾಗಿವೆ. ಮಯೂರಖಂಡೀ ರಾಜಧಾನಿಯಲ್ಲಿದ್ದ ಗೋವಿಂದನು 'ಸಣ್ಣ ಸಾವಿಭಟ್ಟನ ಮಗನಾದ ರಿಸಿಯಪ್ಪಭಟ್ಟ' ಎಂಬವನಿಗೆ ಧಾರಾದತ್ತವಾಗಿ ಕೊಟ್ಟ ಭೂಮಿಯ ಮೂಡು, ಪಡು, ತೆಂಕ ಗಡಿಗಳಂತಿರಲಿ ; ಅದರ ಬಡಗಣ ಗಡಿ ಎಂದರೆ 'ವಿಂಧ್ಯಾದ್ರಿ' (ಉತ್ತರತಃ ವಿಂಧ್ಯ ಪರ್ವತಃ)[1] ಎಂದು ಸ್ಫುಟವಾಗಿಯೇ ಇದೆ. ಇದು ಇಷ್ಟು ಸ್ಪಷ್ಟವಾಗಿರುವಲ್ಲಿ, ಮತ್ತೆ ನಾಲ್ವತ್ತು ವರ್ಷಗಳ ಮೇಲೆ 'ಕವಿರಾಜಮಾರ್ಗ'ದಲ್ಲಿ ತೋರುವ ಈ ಉತ್ತರಮಾರ್ಗವೆಂಬುದು ಉತ್ತರದ ಆಂಧ್ರಸಾಹಿತ್ಯದಿಂದ ಬಂದಿತೆನ್ನುವುದು ಹೇಗೆ ? 'ಕವಿರಾಜಮಾರ್ಗ'ಕಾರನು ಒಂದೇ ಒಂದು ಕಡೆಯಲ್ಲಾದರೂ ಆ ಆಂಧ್ರ ಮಾರ್ಗದ ಅಥವಾ ಈ ದ್ರವಿಡ ಮಾರ್ಗದ ಸಂಬಂಧವನ್ನು ಸೂಚಿಸಲಿಲ್ಲ. ದಂಡಿಯ ಮಾತಿನಲ್ಲಾದರೂ ಕೆಲವೆಡೆ ಉತ್ತರ ಮಾರ್ಗವೆಂಬುದಕ್ಕೆ ಗೌಡಮಾರ್ಗವೆಂದಿದೆಯೇ ಹೊರತು ಆಂಧ್ರಮಾರ್ಗವೆಂದಿಲ್ಲ. ಆ ನೃಪತುಂಗನಿಂದಿತ್ತಣ ಕಾಲದಲ್ಲಿ ಕನ್ನಡದ ಉತ್ತರ ಪ್ರಾಂತಗಳೊಳಗೆ ಕೆಲವನ್ನು ಆಂಧ್ರರು ತಮ್ಮ ಪ್ರಾಂತದಲ್ಲಿ ಸೇರಿಸಿಕೊಂಡಿರುವುದು ನಿಜ. ಅದಕ್ಕನುವಾಗಿ ತೆಲುಗಿನ ಗಡಿನಾಡಾದ ಕನ್ನಡ ಸಾಹಿತ್ಯದೊಳಗೆ ಆಂಧ್ರಮಾರ್ಗವು ಅಷ್ಟಿಷ್ಟು ತಲೆದೋರಿದುದೂ ಇರಬಹುದು. ಆದರೆ ಅದರಿಂದಾಗಿ 'ಕವಿರಾಜಮಾರ್ಗ'ದ ಉತ್ತರಮಾರ್ಗದಲ್ಲಿ ಆಂಧ್ರಮಾರ್ಗದ ವಾಯುವೂ ಬೀಸಿರಲಾರದು.

ಇಲ್ಲಿ ಇನ್ನೊಂದು ವಿಷಯವನ್ನು ಸೂಚಿಸಿಬಿಡಬಹುದು. ಹಿಂದಣ ಸಂಸ್ಕೃತಾಲಂಕಾರಿಕರಾದ ಭಾಮಹ,ದಂಡಿ ಮೊದಲಾದವರೆಲ್ಲರೂ ಮಾರ್ಗಭೇದಗಳನ್ನು ವಿಸ್ತರಿಸುವಲ್ಲಿ ವೈದರ್ಭೀ,

[1] ಭಾರತ ಇತಿಹಾಸ ಸಂಶೋಧಕ ಮಂಡಲದ ತ್ರೈಮಾಸಿಕ, ಸಂಪುಟ ೧೬, ಅಂಕ ೪.

ಗೌಡೀಯಾ, ಪಾಂಚಾಲೀ, ಲಾಟಿ—ಎಂದು ಆಗಿನ ವಿಶಿಷ್ಟ ದೇಶಗಳ ಸಂಬಂಧವನ್ನಿಟ್ಟು ಕೊಂಡು ಹೆಸರುಗಳನ್ನು ಸೂಚಿಸಿದ್ದಾರೆ. ನಮ್ಮ ಗ್ರಂಥಕಾರನು ಭಾಮಹ, ದಂಡ್ಯಾದಿಗಳನ್ನು ಅನುಸರಿಸಿ ಬರೆದವನಾದರೂ ಮಾರ್ಗಗಳಿಗೆ ಹೆಸರನ್ನೀವಲ್ಲಿ, ಅಂಥ ವೈಯಕ್ತಿಕವಾದ ಒಂದೊಂದು ನಾಡನ್ನು ಆರಿಸಿಕೊಳ್ಳಲೇ ಇಲ್ಲ. ಕನ್ನಡ ನಾಡಿನ ಆಯಾ ಗಡಿಗಳೊಳಗಿನ ಎಲ್ಲ ಪ್ರಾಂತಗಳಿಗೂ ಅನ್ವಯಿಸುವಂತೆ ದಕ್ಷಿಣಮಾರ್ಗ, ಉತ್ತರಮಾರ್ಗ—ಎಂಬ ಎರಡೇ ಹೆಸರುಗಳನ್ನಿಟ್ಟುಕೊಂಡಿದ್ದಾನೆ. ದಂಡಿಯೇ ಮೊದಲಾದವರ ಸಂಸ್ಕೃತ ಮಾರ್ಗಗಳೊಳಗೆ ವೈದರ್ಭಮಾರ್ಗ ದಕ್ಷಿಣಮಾರ್ಗಗಳೂ, ಗೌಡಮಾರ್ಗ ಉತ್ತರಮಾರ್ಗಗಳೂ ಪರಸ್ಪರ ಅಭಿನ್ನಗಳು. ಇಲ್ಲಿ ಹಾಗಲ್ಲ; ದಕ್ಷಿಣಮಾರ್ಗ, ಉತ್ತರಮಾರ್ಗಗಳ ವಿಭಾಗ ಕ್ರಮವೇ ಜೇರೆ ಬಗೆಯಲ್ಲಿ ರೂಪುಗೊಂಡಿದೆಯೆಂದು ತೋರುವುದು. ಆಗಿನ ಕನ್ನಡ ದೇಶವು 'ಕಾವೇರಿಯಿಂದಂ ಆ ಗೋದಾವರಿವರಮಿರ್ದ ನಾಡು' ಎಂಬುದನ್ನು ಗ್ರಂಥಕಾರನ ಮಾತಿನಿಂದಲೇ ಹಿಂದೆ ನಿರ್ವಚನ ಮಾಡಿದ್ದೆವಷ್ಟೆ. ಅದರೊಳಗೆ ತೆಂಕಣ ಸೀಮಾರೇಖೆಯ ಕಿಸುವೊಳಲು ಪುಲಿಗೆಱೆಗಳೆಂಬ, ಬಡಗಣ ಗಡಿಯ ಕೊಪಣನಗರ ಒಂಕುಂದಗಳೆಂಬ ನಾಲ್ಕು ಹೆಸರುಗೊಂಡ ನಾಡುಗಳ ನಡುವಣ ನಾಡು ಕನ್ನಡದ ತಿರುಳುನಾಡು ಎಂಬುದೂ ಹಿಂದೆ ಸೂಚಿತವಾಗಿದೆ. ಈ ಗಡಿಯೊಳಗಿನ ಕನ್ನಡ ಭಾಷೆ, ವಿಶೇಷವಾಗಿ ಸಾಹಿತ್ಯ ಭಾಷೆ, ಉಭಯ ಮಾರ್ಗೀಯ ಸಂಸ್ಕೃತಿ ಸಾರವನ್ನೊಳಗೊಂಡುದರಿಂದಲೇ ಅದಕ್ಕೆ 'ಕನ್ನಡದ ತಿರುಳ್' ಎಂಬ ಹೆಸರೊಂದಿರಬೇಕೆಂದರೆ ಗುರಿದಪ್ಪಲಾರದು. ಹೀಗೆ ನೋಡಿದಲ್ಲಿ, ವಿದರ್ಭವೆಂಬುದು 'ಕವಿರಾಜಮಾರ್ಗ'ಕಾರನ ದಕ್ಷಿಣಮಾರ್ಗಕ್ಕೆ ಆಧಾರವಾದ ನಾಡೇ ಆಗಲಾರದು ; ಬಹುಶಃ ಅವನೆಣಿಕೆಯಂತೆ, ಅದು ಉತ್ತರಮಾರ್ಗದ ನಾಡಿನಲ್ಲೇ ಇದ್ದುದಾಗಿರಬೇಕು. ಇದನ್ನೆಲ್ಲ ಪರಾಮರ್ಶಿಸಿದಲ್ಲಿ, 'ಕವಿರಾಜಮಾರ್ಗ'ಕಾರನು ವಿಸ್ತರಿಸಿದ ದಕ್ಷಿಣೋತ್ತರ ಮಾರ್ಗಗಳೆಂದರೆ ಸ್ಫುಟಭೇದಯುತಗಳಾದ, ಕನ್ನಡ ಸಾಹಿತ್ಯದೊಳಗಿನ, ಭೇದಗಳಲ್ಲದೆ ಸಂಸ್ಕೃತ ಲಾಕ್ಷಣಿಕರ ಮಾರ್ಗ ನಿರೂಪಣೆಯ ಪುರಸ್ಕರಣೆಯಲ್ಲವೆಂಬುದು ಹೊಳೆಯದಿರಲಾರದು.

ಇಷ್ಟು ಮಾತ್ರ ಹೇಳಿದುದರಿಂದ, ಕನ್ನಡ ಸಾಹಿತ್ಯದಲ್ಲಿ ಮಾರ್ಗಭೇದಗಳುಂಟೆಂದು ವಾದಿಸಿದಂತಾಯಿತೇ ಹೊರತು, ಆ ಭೇದಗಳ ಸ್ವರೂಪವನ್ನು 'ಇದಮಿತ್ಥಂ' ಎಂದು ಪರಿಚ್ಛೇದಿಸಿದಂತಾಗುವುದಿಲ್ಲ. ಅಂತಹ ವಿಶ್ಲೇಷಣೆ ಬಹುಕಷ್ಟಸಾಧ್ಯವೆಂಬುದನ್ನು ಒಪ್ಪಿಕೊಳ್ಳುತ್ತೇವೆ. ಅದಕ್ಕೆ ಕಾರಣವೇನು ? ಆ ಮಾರ್ಗಭೇದಗಳು ಅತಿಸೂಕ್ಷ್ಮವೆನ್ನಿಸಿ, ನುಣುಪಾಗಿ, ನಯವಾಗಿ ಪ್ರತಿ ಕವಿಯ ಕಾವ್ಯದಲ್ಲೂ ಇವೆ. ಏಕರೀತಿಯ ಲಕ್ಷಣದಿಂದ ಬದ್ಧಗಳಾದರೂ ಆಯಾ ಭಿನ್ನ ವ್ಯಕ್ತಿಗಳ ಮುಖ ಹಸ್ತಾದಿಗಳಿಂದ ಹೊರಹೊಮ್ಮುವ ಸಂಗೀತ ಚಿತ್ರಗಳೊಳಗೆ ಅನ್ಯೋನ್ಯ ಭೇದಗಳಿಲ್ಲವೆ ?—ಇವೆ. ತಾನ ವಿತಾನ ಗಮಕ ಮೂರ್ಛನಾದಿಗಳ, ಭಾವಾನುಭಾವ ದ್ಯೋತಕಗಳಾದ ಕಳಾರೇಖೆಗಳ ಪರಿಜ್ಞಾನವಿರುವ ವಿಶಿಷ್ಟ ಸಹೃದಯರು ಮಾತ್ರವೇ ಆಯಾ ಭೇದಗಳನ್ನು ಭಾವಿಸಿಕೊಳ್ಳಲು ಶಕ್ತರು. ಅವರಾದರೂ, ತಾವು ಹೀರಿಕೊಂಡ ಆ ಜೇರೆ ಜೇರೆ ಸವಿಗಳ ಅಂತರವನ್ನು ಹಾಗೆಯೇ ಇತರರಿಗೆ ಬೋಧಿಸಲು ಸಮರ್ಥರಾಗುವುದು ಕಷ್ಟ. ಅವರದು ಹೃದಯಸ್ಥವಾದ ಶಕ್ತಿ.

ಭೂಮಿಯ ಆಳದಲ್ಲಿರುವ ಒಸರು ಮಳೆಯ ಬಲದಿಂದ ಹೇಗೆ ಹೊರಗೆ ಚಿಮ್ಮಿ ಹೊನಲಾಗಿ ಹರಿಯುವುದೋ ಹಾಗೆ, ಉತ್ತಮ ಕಾವ್ಯಗಳನ್ನು ಆಸ್ವಾದಿಸುತ್ತಿರುವಾಗ ಆ ರಸಿಕರ ಎದೆಯಲ್ಲಿ ಶಕ್ತಿಯದು ಉಕ್ಕಿಬರುವುದು. ಆ ಹೊನಲನ್ನು ಸಮಗ್ರವಾಗಿ ಅಲ್ಲದಿದ್ದರೂ ಅದರ ಒಂದಂಶವನ್ನಾದರೂ ಪಾತ್ರದಲ್ಲಿ ತುಂಬಿಟ್ಟುಕೊಳ್ಳುವಂತೆ, ರಸಿಕರೆದೆಯಲ್ಲಿಯ ಆ ರಾಸಿಕ್ಯ ಭಾಗವನ್ನು ಲೋಕದ ಹಿತಜೀವನಕ್ಕಾಗಿ ತುಂಬಿಟ್ಟುಕೊಳ್ಳಬಹುದು. ಈ ಭಾವವೆಲ್ಲವೂ ಗ್ರಂಥಕಾರನ ಮುಂದಿನ ಮಾತಿನಲ್ಲಿ ಮಿರುಗುತ್ತಿದೆ:

ಅಱಿದು ಪೀನಂ ಮಾರ್ಗಗತಿಯಂ
ತಱಿಸಲಾಗದಾರ್ಗಂ ಬಹುವಿಕಲ್ಪದೊಳ್
ಕುಱಿತು ಪೂರ್ವಶಾಸ್ತ್ರಪದವಿಧಿಯಂ
ತೆಱಿದಿರೆ ಪೇೞ್ವೆನಿನಿಸಂ ಕನ್ನಡದೊಳ್ —(ii, 44)

—'ಬಹುವಿಕಲ್ಪದಿಂದ ಕಾವ್ಯಮಾರ್ಗಗಳನ್ನು ಅರಿತುಕೊಳ್ಳುವುದೇ ಕಷ್ಟ. ಅರಿತುಕೊಂಡರೂ ಅವುಗಳೊಳಗಿನ ಭೇದಗಳನ್ನು ನಿರ್ಧರಿಸಿಕೊಳ್ಳುವುದು ಇನ್ನೂ ಕಷ್ಟ. ಆದರೂ 'ಪೂರ್ವಶಾಸ್ತ್ರ ಪದವಿಧಿಯನ್ನು ವಿವೇಚಿಸಿ ಕನ್ನಡದಲ್ಲಿ ಒಂದಿಷ್ಟನ್ನು (ಮಾರ್ಗಭೇದವನ್ನು) ತೆರೆದಿರುವಂತೆ ಹೇಳುವೆನು.' ದೇಸಿ ಬೇರೆ ಬೇರೆಯಾಗಿರುವುದರಿಂದ ದೇಸಿಗಬ್ಬಗಳೊಳಗಿನ ದೋಷಗಳು ಗಣನಾತೀತವಾಗಿವೆ. ಅದರಿಂದಲೇ ಮಾರ್ಗ ವಿಭಾಗವೆನ್ನೆಸಗಿ ಕಾವ್ಯಗಳನ್ನು ಲಕ್ಷಿಸಬೇಕಾಯಿತು—ಎಂಬುದೇನೋ ಸಯುಕ್ತಿಕವಾದ ಮಾತು. ಆದರೆ ಆ ಮಾರ್ಗವೂ ದೇಶಭೇದದಿಂದ ಭಿನ್ನ ಭಿನ್ನವಾಗಿಯೇ ಇದೆ ಎಂದಾದರೆ ಈ ಮಾರ್ಗಭೇದ ಪರಿಶ್ರಮವೇಕೆ? 'ಮದ್ದು ಕುಡಿದಂತೆ, ರೋಗವಿದ್ದಂತೆ' ಎಂಬ ನಾಣ್ಣುಡಿಗೆ ಇದೂ ಒಂದು ದೃಷ್ಟಾಂತವಾಗಬಹುದಲ್ಲವೆ? ಆದರೆ ದೇಸಿ ನಾಡ ನುಡಿಯ ಪ್ರಕೃತಿ. ಕೆಲಸಂದರ್ಭಗಳಲ್ಲಿ ಸಂಸ್ಕೃತ ಭಾಷೆಯ ನಿರಂಕುಶತೆಯಿಂದ ಕನ್ನಡವೇ ಮೊದಲಾದ ದೇಶಭಾಷೆಗಳ ವಾಙ್ಮಯಗಳು ಇಷ್ಟಷ್ಟು ವಿಕೃತಿಗೊಂಡುದಕ್ಕೆ ಹಲವು ದೃಷ್ಟಾಂತಗಳನ್ನು ಕೊಡಬಹುದು. ಆದರೂ ಸಂಸ್ಕೃತವು ಅಂದಿನಿಂದ ಇಂದಿನವರೆಗೂ, ಇನ್ನು ಮುಂದೆಯೂ, ದೇಶಭಾಷೆಗಳೊಡನೆ ಬಂಧುವಾಗಿ ಬಳಸಿಕೊಂಡೇ ಇದ್ದ, ಇರಬೇಕಾದ, ಭಾಷೆ. ಆದರಿಂದ, ಸಂಸ್ಕೃತದ ಬಳಕೆಯು ದೇಶಭಾಷೆಯಾದ ಕನ್ನಡದಲ್ಲಿ ಹಿತಮಿತವಾಗಿ ಇರುವುದೇ ಪ್ರಕೃತಿಯಾಗಿದೆ ಎನ್ನಬೇಕು. ಹಾಗೆಂದು ಆ ದೇಸಿಯನ್ನೆಲ್ಲ ಕಳಚಿಬಿಟ್ಟರೆ ದೇಶಭಾಷಾ ಸಾಹಿತ್ಯಗಳೆಲ್ಲ ವಿಕೃತವಾಗುವುದರಲ್ಲಿ ಸಂದೇಹವಿಲ್ಲ. ಆದರೆ ದೇಸಿಯ ನಂದನದಲ್ಲಿ ಸ್ವಾಭಾವಿಕವಾಗಿಯೂ, ಕೆಲವೇಳೆ ಸಂಸ್ಕೃತಾದಿ ಭಾಷೆಗಳ ಸಂಪರ್ಕದಿಂದಲೂ, ದೋಷಗಳ ಹೊದರು ಬೆಳೆದು ಅದು ಕಾಡಾಗಿಬಿಟ್ಟಿದೆ. ಅಂಥ ದೋಷರೂಪವಾದ ದೇಸಿ ಮೊದಲಾದುವನ್ನು ಮಾತ್ರವೇ ಕಿತ್ತುಬಿಡಬೇಕು; ಗುಣಯುತವಾದ ಭೇದಗಳನ್ನೆಲ್ಲ ಸ್ಫುಟವಾಗಿ ಕಾಣಿಸಬೇಕು—ಎಂಬುದಕ್ಕಾಗಿಯೇ ಗ್ರಂಥಕಾರನು ಈ ಮಾರ್ಗಭೇದ ಪ್ರಕರಣವನ್ನು ಪ್ರಾರಂಭಿಸಿರುವುದು. ದೋಷರಹಿತವೂ ಗುಣಸಹಿತವೂ ಆದ ಲಕ್ಷ್ಯಗಳೊಳಗೆ ಭೇದಗಳನ್ನು ಸ್ಫುಟವಾಗಿ ಲಕ್ಷಿಸುವುದೇ ಲಕ್ಷಣದ ಗುರಿಯಲ್ಲವೆ? ತದನುಗುಣವಾಗಿ, ಹಿಂದೆ ಕಾವ್ಯದೋಷಗಳನ್ನು ವಿಸ್ತರಿಸಿದ್ದೇವೆ; ಮುಂದೆ ಗುಣಗತವಾದ ಮಾರ್ಗಭೇದವನ್ನು ವಿವೇಚಿಸುತ್ತೇವೆ.

೧೨

# ಮಾರ್ಗವಿಭಾಗ (ಮುಂದುವರಿದುದು-I)

## ಗುಣಗತ ಮಾರ್ಗಭೇದ

ಮನುಷ್ಯನೇ ಮೊದಲಾದ ಸಜೀವ ಪದಾರ್ಥಗಳಿಗೆ ರೋಗವು ತಲೆದೋರುವುದು ಪ್ರಕೃತಿ ಸಂಬಂಧವಾದ ನಿದಾನಗಳಿಂದ. ಪ್ರಕೃತಿ ಸಂಬಂಧಗಳೆನ್ನಿಸಿದವುಗಳೂ ವಿಕೃತಿ ರೂಪ ರೋಗಕ್ಕೆ ಕಾರಣವಾಗುವವೆ? ಎಂದು ಕೇಳಬಹುದು. ಹೌದು; ವಾತ, ಪಿತ್ತ, ಕಫಗಳಿಗೆ ತ್ರಿದೋಷ ಎಂಬ ಹೆಸರಿದ್ದರೂ ಅವು ಸಮತೂಕವಾಗಿದ್ದರೆ ದೋಷಗಳಲ್ಲ; ರೋಗ ನಿದಾನವಾಗುವುದೂ ಇಲ್ಲ; ಬದಲಾಗಿ ಯುಕ್ತಾಹಾರಗಳೊಡಗೂಡಿ ಶರೀರಪೋಷಕಗಳಾಗುತ್ತವೆ. ಶ್ರುತದುಷ್ಟಾದಿ ದೋಷಗಳೂ ಶಬ್ದಾರ್ಥರೂಪ ಕಾವ್ಯ ಶರೀರದಲ್ಲಿ ಹೀಗೆಯೇ. ಅವುಗಳನ್ನು ಅಲ್ಲಲ್ಲಿ ಅಣಿಗೊಳಿಸಿ ಸಮಕಟ್ಟುವ ಉತ್ತಮ ಕವಿಯ ಕೈವಾಡವು ಮಾರ್ಗಾನುಗುಣವಾಗಿ ಹೆಣೆದಲ್ಲಿ ಹಲವು ದೋಷವರ್ಗಗಳೇ ಗುಣಗಳಾಗಿ ಪರಿಣಮಿಸುತ್ತವೆ, ಎಂಬುದನ್ನು ಹಿಂದೆ ದೃಷ್ಟಾಂತಪೂರ್ವಕವಾಗಿ ಕಾಣಿಸಿದೆ. ಅಂತಹ ದೋಷಾಭಾವ ರೂಪಗುಣಗಳಷ್ಟೇ ಅಲ್ಲದೆ, ಕೆಲಕೆಲವು ಸ್ವತಂತ್ರ ಗುಣಗಳೂ ಕಾವ್ಯಶೋಭಾಕರ ಧರ್ಮಗಳೆನ್ನಿಸಿದ ಗುಣಗಳ ಪೂರ್ಣತೆಗೆ ಅವಶ್ಯವಾಗಿವೆ. ಶರೀರವು ನೀರೋಗವಾಗಿ ಪರಿಣಮಿಸಿದ ಮೇಲೂ ಅದು ಉತ್ತಮಾವಸ್ಥೆಗೇರಬೇಕಾದರೆ ಕೆಲನುಟ್ಟಿಗೆ ಆಸವಾದಿಗಳ ಸೇವನೆಯೂ ಉತ್ತಮಾಹಾರ ವಿಹಾರಾದಿಗಳೂ ಹೇಗೆ ಅವಶ್ಯವೋ ಹಾಗೆ ಈ ಕಾವ್ಯಗುಣಗಳು.

ಹಿಂದೆ ದೋಷವಿವೇಚನಾವಸರದಲ್ಲಿ ವಿಸ್ತರಿಸಿದುದು, ಎದ್ದು ತೋರುವ ದೋಷಗಳನ್ನು. ಒಳಗೊಳಗೆ ತೋರಿ ತೊಲಗುವ ಮತ್ತು ತೊಲಗಿ ತೋರುವ, ಗೊಣಸು ಗೊಂಡ ಮತ್ತು ಕೊಂಡಿ ಕಡಿದ ಮತ್ತು ಸುಸುಳಿ ಸುತ್ತುವ ಹಲವು ದೋಷಗಳಿವೆ. ಅವನ್ನೆಲ್ಲ ಲಕ್ಷಿಸಿ ಕಾಣಿಸುವುದು ಅಸಾಧ್ಯ. ಮೇಲೆ ಕಾಣಿಸಿದ ಪ್ರಮುಖ ದೋಷಗಳನ್ನೆಲ್ಲ ಮನನಮಾಡಿಕೊಂಡ ಕಾವ್ಯಕರಣ ಮನಸ್ಸಿಗೆ ಅವುಗಳೆಲ್ಲವೂ ತಾವಾಗಿ ಹೊಳೆದು ತೋರುವುವು; ಆ ಮೇಲೆ ಹಿಳಿದು ಹಿಂಜರಿಯುವುವು. ಅಂತಹ ಮನಸ್ಸೇ ಮುಂದೆ ವಿವರಿಸುವ ಗುಣಗಳನ್ನೊಳಗೊಳ್ಳಲು ಸಮರ್ಥವಾಗುವುದು. ಈ ಸಂದರ್ಭದಲ್ಲಿ ದಂಡ್ಯಾಚಾರ್ಯನು ಕವಿತಾಮಾರ್ಗದ ಅನಂತತೆಯನ್ನು ಹೀಗೆ ಹೇಳಿದ್ದಾನೆ :

> ಅಸ್ತ್ಯನೇಕೋ ಗಿರಾಂ ಮಾರ್ಗಸ್ಸೂಕ್ಷ್ಮಭೇದಃ ಪರಸ್ಪರಂ
> ತತ್ರ ವೈದರ್ಭ ಗೌಡೀಯೌ ವರ್ಣ್ಯೇತೇ ಪ್ರಸ್ಫುಟಾಂತರೌ—'ಕಾವ್ಯಾದರ್ಶ' (i, 40)

—'ಅತಿಸೂಕ್ಷ್ಮಭೇದಗಳಿಂದ ಪರಸ್ಪರ ಭಿನ್ನವಾದ ವಾಙ್ಮಯ ಮಾರ್ಗಗಳು ಹಲವಿವೆ.

ಅವುಗಳೊಳಗೆ ಸ್ಫುಟಭೇದಗಳುಳ್ಳ ವೈದರ್ಭ ಗೌಡೀಯಗಳೆಂಬ ಎರಡು ಮಾರ್ಗಗಳು ಮಾತ್ರ ಇಲ್ಲಿ ವಿವರಿಸಲ್ಪಡುವುವು.'

ಈ ಅಭಿಪ್ರಾಯವನ್ನೇ 'ಕವಿರಾಜಮಾರ್ಗ'ಕಾರನು ದೇಸಿವೆರೆದ ಕನ್ನಡ ಕಾವ್ಯಮಾರ್ಗಕ್ಕನುವಾಗಿ ಹೀಗೆ ಹೇಳುತ್ತಾನೆ:

ಕವಿಗಳುಮನಾದಿಲೋಕೋ
ದ್ಭವರಪ್ಪುದಱಿಂದನಂತಗಣನಾನುಗತಂ
ಸವಿಶೇಷೋಕ್ತಿಗಳುಮನಂ
ತವಿಧಂಗಳನಂತಭೇದವದಱಿಂ ಮಾರ್ಗಂ[1] —(ii, 47)

—'ಕವಿಗಳು ಅನಾದಿ ಲೋಕೋದ್ಭವರಾದ ಕಾರಣ, ಅವರ ಸವಿಶೇಷೋಕ್ತಿಗಳು ಅನಂತ ವಿಧಗಳು. ಅದರಿಂದ, ಕವಿವ್ಯಕ್ತಿಗೊಂದೊಂದರಂತಾಗಿ ಅವರವರ ಮಾರ್ಗಗಳೂ ಅನಂತಗಳು.'

ಇದರಿಂದ, ೯ನೆಯ ಶತಕದ 'ಕವಿರಾಜಮಾರ್ಗ'ಕಾರನು ಕನ್ನಡದಲ್ಲಿ ಕಾವ್ಯಗಳೆಷ್ಟೋ ಅನಾದಿಕಾಲದಿಂದಲೇ ರಚಿತವಾಗಿವೆ ಎಂದು ಸಾರಿದುದು ವ್ಯಕ್ತವಾಗುತ್ತಿದೆ. ಹಿಂದೆ ಕನ್ನಡದ 'ಪುರಾತನ ಕವಿಗಳ್' ಇತ್ಯಾದಿ ವಚನಗಳು ಬಂದಿದ್ದರೂ ಈ 'ಕವಿಗಳುಂ ಅನಾದಿ ಲೋಕೋದ್ಭವರ್ ಅಪ್ಪುದಱಿಂದೆ' ಎಂಬ ಮಾತು ಅದಕ್ಕಿಂತಲೂ ಹಿರಿದು ಮಾತ್ರವೇ ಅಲ್ಲ; ಕನ್ನಡಿಗ ಲೋಕಕ್ಕೆ ಸಾತ್ವಿಕಾಭಿಮಾನದ ಮಾತಾಗಿದೆ. ಈಗ ಕನ್ನಡದಲ್ಲಿ ಕ್ರಿ. ಶ. ೫ನೆಯ ಶತಮಾನದ ಪೂರ್ವಭಾಗದ ಶಾಸನ ಸಾಹಿತ್ಯವೇನೋ ದೊರೆತಿದೆಯಷ್ಟೆ. ಆದರೆ ಅದು 'ಕವಿರಾಜಮಾರ್ಗ'ದ ಕಾಲಕ್ಕೆ 'ಅನಾದಿ ಲೋಕ'ದ ಕವಿಗಳಿಂದ ಹುಟ್ಟಿದ ಸಾಹಿತ್ಯವಲ್ಲ; ಬರಿಯ ನಾಲ್ಕು ಶತಮಾನ ಮಾತ್ರಕ್ಕೆ ಹಿಂದಿನದು. ಈ ಹೇಳಿಕೆಯಿಂದ, ಕ್ರಿಸ್ತಶಕದಿಂದಲೂ ಮೊದಲೇ ಕನ್ನಡದಲ್ಲಿ ಸಾಹಿತ್ಯವು ವಿಸ್ತರಿಸಿತ್ತೆಂಬುದು ನಿಸ್ಸಂದೇಹವಾಗಿ ಸೂಚಿತವಾಗುತ್ತದೆ. ಅದಂತಿರಲಿ: ಈ 'ಅನಾದಿಲೋಕೋದ್ಭವರಾದ ಕವಿಗಳ ಸವಿಶೇಷೋಕ್ತಿಗಳು ಅನಂತ ಗಣನಾನುಗತವಾಗಿವೆ, ಎಂದರೆ ಪ್ರತಿ ಕವಿಗೊಂದೊಂದು ಪದ್ಧತಿಯಂತೆ ಬೇರೆ ಬೇರೆಯಾಗಿವೆ' ಎಂದಂತಾಯಿತು. ಅದನ್ನೇ 'ತದ್ಭೇದಾಸ್ತು ನ ಶಕ್ಯಂತೇ ವಕ್ತುಂ ಪ್ರತಿಕವಿಸ್ಥಿತಾಃ' ಎಂದು ದಂಡಿಯೂ ಹೇಳಿರುತ್ತಾನೆ. ಆದರೆ ಈ ಗ್ರಂಥಕಾರನು ಹೇಳಿದುದು ಕನ್ನಡ ಕವಿಗಳ ಸವಿಶೇಷೋಕ್ತಿ ವಿವಿಧತೆಯನ್ನು—ಎಂಬ ಸಂಗತಿಯನ್ನು ಮರೆಯಬಾರದು. ಹಾಗೆ ಪ್ರತಿ ಕವಿ ವಿಭಿನ್ನವೆನ್ನಿಸಿ, ನಿರ್ದುಷ್ಟವಾಗಿಯೂ ಅಂದವಾಗಿಯೂ ಇರುವ ವಿವಿಧತೆ ಗ್ರಾಹ್ಯವೇ ಸರಿ. ಅವುಗಳೊಳಗಣ ವೈಯಕ್ತಿಕ ಭೇದಗಳನ್ನು ಸರಿಯಾಗಿ ತಿಳಿದು ವಿವರಿಸಲಸಾಧ್ಯವೆಂಬುವನ್ನು ದಂಡಿಯು ತನ್ನ 'ಕಾವ್ಯಾದರ್ಶ'ದಲ್ಲಿ ಹೀಗೆ ಹೇಳುತ್ತಾನೆ—

[1] 'ಮಾತುಂ' ಎಂದು ಮುದರಾಸಿನ ಪ್ರತಿಯಲ್ಲಿದೆ; ಆದರೆ ಪಾಠಕರ ಪ್ರತಿಯಲ್ಲಿರುವ 'ಮಾರ್ಗಂ' ಎಂಬ ಪಾಠವೇ ನಮಗೆ ಸರಿಯಾಗಿ ತೋರುತ್ತದೆ.

ಇಕ್ಷುಕ್ಷೀರಗುಡಾದೀನಾಂ ಮಾಧುರ್ಯಸ್ಯಾಂತರಂ ಮಹತ್
ತಥಾಪಿ ನ ತದಾಖ್ಯಾತುಂ ಸರಸ್ವತ್ಯಾಪಿ ಶಕ್ಯತೇ —'ಕಾವ್ಯಾದರ್ಶ', (i, 102)

—'ಕಬ್ಬು ಹಾಲು ಬೆಲ್ಲಗಳ ಸವಿಗಳೊಳಗೆ ಹಲವು ಭೇದಗಳಿವೆ. ಆದರೂ ಅವುಗಳ ಒಳಗವಲುಗಳನ್ನೆಲ್ಲ ಬಿಡಿಸಿ 'ಅದಂತೆ, ಇದಿಂತೆ' ಎಂದು ಲಕ್ಷಣಪೂರ್ವಕವಾಗಿ ಬೋಧಿಸಲು ಸರಸ್ವತಿಗೂ ಅಸಾಧ್ಯ.'

ಎಲ್ಲವನ್ನೂ 'ಸವಿ' ಎಂಬ ಒಂದೇ ಪದದಿಂದ ಸೂಚಿಸಬೇಕಾಗುವುದು, ಎಂಬುದು ತಾತ್ಪರ್ಯ. ವಿವೃತಿಯಿದು ಅಂದವಾಗಿದೆ. ಆದರೆ ನಮ್ಮ ಗ್ರಂಥಕಾರನದು ಅಂದದ ಮೇಲಂದವಾಗಿದೆ ಎಂದು ನಮ್ಮ ಭಾವನೆ.

ಕರಚರಣಶರೀರಶಿರೋ
ದರವದನಾದ್ಯವಯವಂಗಳಿವು ತಂತಮ್ಮೊಳ್
ದೊರೆಕೊಂಡೆಡೆಗಳೊಳೊಳವಾ
ಗಿರೆಯುಂ ನರರೊರ್ವರೊರ್ವರಂ ಪೋಲದವೋಲ್ —(ii, 45)

ವರ ಶಬ್ದಾಲಂಕಾರದ
ವಿರಚನೆಗಳ್ ನೋಟ್ಪೊಡೊಂದೆ ತೋರ್ಕೆಗಳಿಂತುಂ
ಪೊರೆದಿರಲೊಂದೊಂದಱೊಳಾ
ಪರಮಕವೀಶ ಪ್ರಯೋಗಗತ ಮಾರ್ಗಂಗಳ್ —(ii, 46)

—'ಕೈಕಾಲು ಕೊರಳು ಮೋರೆ ಮೊದಲಾದ ಅವಯುವಗಳು ಎಲ್ಲರಲ್ಲಿಯೂ ಆಯಾ ನಿರ್ದಿಷ್ಟಭಾಗಗಳಲ್ಲಿಯೇ ಸೇರಿಕೊಂಡಿವೆ. ಆದರೆ ಮನುಷ್ಯರು ಒಬ್ಬರಿನ್ನೊಬ್ಬರೊಡನೆ ಸರಿಯಾಗಿ ಹೋಲಿಕೆಗೊಳ್ಳುವುದಿಲ್ಲ. ಬಾಹ್ಯಗಳಾದ ಕರಚರಣಾದಿಗಳೆಲ್ಲವೂ ಸಾಮಾನ್ಯ ದೃಷ್ಟಿಗೆ ಸಮಾನಗಳಾಗಿ ತೋರಿದರೂ ವಿಶೇಷ ದೃಷ್ಟಿಗೆ ಭಿನ್ನಗಳಾಗಿರುವುವೇ ಅದಕ್ಕೆ ಕಾರಣ. ಅದರಂತೆ, ಹಿಂದೆ ವಿಸ್ತರಿಸಿದ ಒಂದೇ ಪದ್ಧತಿಯ ಶಬ್ದ, ಶಬ್ದಾಲಂಕಾರ ವಿರಚನೆಗಳಿಂದಲೇ ಕಾವ್ಯಶರೀರಗಳು ರಚಿತವಾಗುತ್ತಿವೆ. ಆಯಾ ಕಾವ್ಯಮಾರ್ಗಗಳೊಳಗೆ ವಿಶೇಷವಾದ ಸಾರೂಪ್ಯವಿರುವುದಿಲ್ಲ. ಆದರೂ ಸಾಮಾನ್ಯ ದೃಷ್ಟಿಯಲ್ಲಿ ಅವು ಅಭಿನ್ನಗಳೇ ಅಲ್ಲವೆ ?'

ಈ ವಿವರಣೆ ಸಾಮಾಜಿಕ ದೃಷ್ಟಿಯಿಂದ ಹೆಚ್ಚು ಮನೋಹರವಾಗಿದೆ. ಕಾವ್ಯವಸ್ತುವನ್ನು ಪ್ರಾಣವೆಂದೂ ಪದವರ್ಗವನ್ನು ಶರೀರವೆಂದೂ ಆದಿಯಲ್ಲೇ ಗ್ರಂಥಕಾರನು ಸೂಚಿಸಿದುದರಿಂದ ಈ ಮೇಲಿನ ನಿರೂಪಣೆ ಮತ್ತಷ್ಟು ಕಳೆಗೂಡಿದೆ.

ಹಾಗೆ ಪ್ರತಿ ಕವಿಜನ್ಯಗಳಾದ ಕಾವ್ಯಮಾರ್ಗಗಳು ಹಲವು. ಅವನ್ನು ಜನತೆ ಸರಿಯಾಗಿ ಅವಗಾಹಿಸಿಕೊಳ್ಳುವುದಕ್ಕೆ ಆಸ್ಪದವಿಲ್ಲದಿದ್ದರೆ ಎಲ್ಲವೂ ವಿಫಲವೇ. ಹಾಗೆ ಅವಗಾಹಿಸಿಕೊಳ್ಳುವುದಕ್ಕೆ ಎಡೆಯನ್ನು ಕಲ್ಪಿಸಿಕೊಡುವುದು ಬಲ್ಲವರ ಆವಶ್ಯಕ ಧರ್ಮ. ಅದರಿಂದ, ಗ್ರಂಥಕಾರನು ಕಾವ್ಯಮಾರ್ಗಭೇದವನ್ನು ನಿರೂಪಿಸಬೇಕಾಯಿತು. ಆ ನಿರೂಪಣೆ ದೋಷರಹಿತವಾದ ಗುಣಗಳ ಮೂಲಕವೇ ಸಾಧ್ಯ. ಅದರಿಂದಲೇ ದೋಷಗಳನ್ನು ಸೂಚಿಸಿದ ಮೇಲೆ ಗುಣಸ್ವರೂಪಗಳನ್ನು ನೋಡಬೇಕು. ಆದರೆ ಗ್ರಂಥಕಾರನು ಮೊದಲು ಮಾರ್ಗ

ಗಳೊಳಗೆ ವಿಸ್ಫುಟಭೇದಗಳನ್ನು ಎರಡಾಗಿ ಭೇದಿಸಿ, ಆಸ್ಫುಟಭೇದ ಸೂಚಕ ಲಕ್ಷಣಗಳನ್ನು ಹೇಳಿ, ಅನಂತರ ಆಯಾ ಮಾರ್ಗಘಟಕ ಗುಣಗಳನ್ನು ನಿರೂಪಿಸುವ ರೀತಿಯನ್ನು ನೋಡಿರಿ :

ಸತತಂ ದಕ್ಷಿಣಮಾರ್ಗೋ
ದಿತೋಕ್ತಿ ಭೇದಕಗುಣಂ ಸ್ವಭಾವಾಖ್ಯಾನಂ
ವಿದಿ[1]ತೋತ್ತರ ಮಾರ್ಗಗತಂ
ಪ್ರತೀತ ವಕ್ರೋಕ್ತಿಕೃತವಿಕಲ್ಪಮನಲ್ಪಂ —(ii, 51)

ಸ್ವಭಾವಾಖ್ಯಾನ, ವಕ್ರೋಕ್ತಿಗಳೇ ದಕ್ಷಿಣೋತ್ತರ ಮಾರ್ಗ ವಿಭಾಜಕಗಳು, ಎಂಬುದಿದು ಪ್ರಮುಖ ಲಕ್ಷಣ. ಇವುಗಳನ್ನು ಕನ್ನಡದಲ್ಲಿ 'ಸ್ಯೆತು', 'ಕೊಂಕು' ಎನ್ನುತ್ತಾರೆ. ಇವುಗಳೆರಡರಲ್ಲೂ ಕ್ರಮವಾಗಿ 'ವಾಕ್ಯಗತ ಸ್ವಭಾವೋಕ್ತಿ', 'ವಾಕ್ಯಾರ್ಥಗತ ಸ್ವಭಾವೋಕ್ತಿ'—'ವಾಕ್ಯಗತ ವಕ್ರೋಕ್ತಿ', 'ವಾಕ್ಯಾರ್ಥಗತ ವಕ್ರೋಕ್ತಿ' ಎಂಬ ನಾಲ್ಕು ಪ್ರಮುಖ ಭೇದಗಳಾಗಬಹುದು.[2] ಈ ಸ್ವಭಾವೋಕ್ತಿ ವಕ್ರೋಕ್ತಿಗಳ ಇಲ್ಲವೆ ಸ್ಯೆತುನುಡಿ ಕೊಂಕುನುಡಿಗಳ ಸ್ವರೂಪಗಳ ಕೂಲಂಕಷ ವಿವೇಚನೆ ಮುಂದೆ ಬರುವುದು. ಈಗ ಮಾರ್ಗರೂಪಕಗಳೆನ್ನಿಸುವ ಗುಣಗಳನ್ನೀಕ್ಷಿಸುವ :

ಸಮ ಮಧುರ ನಿಬಿಡ ಕಾಂತ ಸು
ಕುಮಾರ ಸುಸಮಾಹಿತ ಪ್ರಸನ್ನೋದಾರ
ಪ್ರಮಿತಗ್ರಾಮ್ಯೌಜಸ್ವಿ
ಕ್ರಮದಿಂ ದಶಭೇದಮಲ್ಲಿ ದಕ್ಷಿಣ ಮಾರ್ಗಂ —(ii, 52)

ಈ ದಕ್ಷಿಣ ಮಾರ್ಗದ ಹತ್ತು ಗುಣಗಳು ದಂಡಿಯ ಗುಣಗಳಿಗೆ ಸಂವಾದಿಯಾಗುತ್ತವೆ. ಆದರಿಂದ ದಂಡಿಯು ನಿರೂಪಿಸಿದ ಆಯಾ ಗುಣಗಳನ್ನು[3] ಕ್ರಮಗೊಳಿಸಿ ಆವರಣದೊಳಗಿಟ್ಟು ಈ ಗುಣಗಳನ್ನು ಪರಿಶೀಲಿಸಬೇಕು—

ಸಮ (ಸಮತಾ), ಮಧುರ (ಮಾಧುರ್ಯಂ), ನಿಬಿಡ (ಶ್ಲೇಷಃ), ಕಾಂತ (ಕಾಂತಿಃ), ಸುಕುಮಾರ (ಸುಕುಮಾರತಾ), ಸಮಾಹಿತ (ಸಮಾಧಿಃ), ಪ್ರಸನ್ನ (ಪ್ರಸಾದಃ), ಉದಾರ (ಉದಾರತ್ವಂ), ಪ್ರಮಿತ ಗ್ರಾಮ್ಯ[4] (ಅರ್ಥವ್ಯಕ್ತಿಃ), ಓಜಸ್ವಿ (ಓಜಃ)—

---

[1] ತ—ದ ಮೊದಲಾದವುಗಳಿಂದಾಗುವ 'ವರ್ಗಪ್ರಾಸ'ವನ್ನು ಹಿಂದೆ ವಿವರಿಸಿದ ಕಾರಣ, ಇಲ್ಲಿ 'ವಿತತೋತ್ತರ' ಎಂದು ತಿದ್ದಿಕೊಳ್ಳಬೇಕಾಗಿಲ್ಲವೆಂದು ಕಾಣುತ್ತದೆ.

[2] ಬರಿಯ ಏಕಪದ ಪದಾರ್ಥಗಳಿಂದ ಸ್ವಭಾವ ವಕ್ರ ಭೇದಗಳು ಒದಗಲಾರವೆಂಬುದರಿಂದ ಇಲ್ಲಿ ವಾಕ್ಯಗತ ಸ್ವಭಾವ ವಕ್ರಗಳನ್ನೇ ಸೂಚಿಸಿದ್ದೇವೆ. ಇದಕ್ಕೆ ವಿಕಲ್ಪವೊದಗುವ ಸಂದರ್ಭವನ್ನು ಮುಂದೆ ಸೂಚಿಸಲಿದ್ದೇವೆ.

[3] ಶ್ಲೇಷಃ ಪ್ರಸಾದಃ ಸಮತಾ ಮಾಧುರ್ಯಂ ಸುಕುಮಾರತಾ
ಅರ್ಥವ್ಯಕ್ತಿರುದಾರತ್ವಮೋಜಃಕಾಂತಿ ಸಮಾಧಯಃ —'ಕಾವ್ಯಾದರ್ಶ' (i, 41)

[4] 'ಪ್ರಮಿತಗ್ರಾಮ್ಯ' ಎಂದು ಪಾಠಕರ ಪ್ರತಿಯಲ್ಲಿದ್ದರೆ, ಮದರಾಸಿನ ಪ್ರತಿಯಲ್ಲಿ 'ಪ್ರಮಿತಾऽಗ್ರಾಮ್ಯ' ಎಂದಿದೆ. ಮದರಾಸಿನ ಪ್ರತಿಯ ಸಂಪಾದಕರು 'ಅಗ್ರಾಮ್ಯ' ಎಂಬುದೊಂದು

ಇವುಗಳೇ ಹಾಗೆ ಪರಿವಿಡಿಗೊಳಿಸಿ ಕಾಣಿಸಿದ ಗುಣನಾಮಭೇದಗಳು.
ಆ ಮೇಲೆ ಉತ್ತರ ಮಾರ್ಗಘಟಕ ಗುಣಗಳನ್ನು ನಿರೂಪಿಸುತ್ತಾನೆ :

ಅವಱ ವಿಪರ್ಯಯ ವೃತ್ತಿ
ಪ್ರವಿಭಕ್ತವಿಕಲ್ಪಮಕ್ಕುಮುತ್ತರಮಾರ್ಗಂ
ಸವಿಶೇಷಗುಣಮನತಿಶಯ
ಧವಳೋಕ್ತಿಕ್ರಮದಿನಱಿಪುವೆಂ ತದ್ಭವದೊಳ್ —(ii, 53)

—'ಹಿಂದೆ ಸೂಚಿಸಿದ ದಕ್ಷಿಣಮಾರ್ಗ ಗುಣಗಳಾದ ಸಮಮಧುರಾದಿಗಳು ಪಲ್ಲಟಗೊಂಡು ರೂಪಿತವಾದ ಗುಣದಿಂದ ಭೇದಿಸಲ್ಪಟ್ಟ ವಿಕಲ್ಪರೂಪವುಳ್ಳುದೇ ಉತ್ತರಮಾರ್ಗ. ಸವಿಶೇಷ ಗುಣವಾದ ಆ ಉತ್ತರಮಾರ್ಗವನ್ನು ತಜ್ಜನ್ಯ(ತದ್ಭವ)ವಾದ ಲಕ್ಷ್ಯ ಸಂದರ್ಭದಲ್ಲಿ ವಿವರಿಸುವೆನು' ಎಂದು ಪದ್ಯದ ತಾತ್ಪರ್ಯ.[1] ಈ ಹೇಳಿಕೆ 'ಏಷಾಂ ವಿಪರ್ಯಯಃ ಪ್ರಾಯೋ ದೃಶ್ಯತೇ ಗೌಡವರ್ತ್ಮನಿ' ಎಂದ ದಂಡಿಯ ಮಾತನ್ನೇ ಅನುಸರಿಸಿದೆ. ದಂಡಿ ಹಲವೆಡೆಗಳಲ್ಲಿ ವೈದರ್ಭ ಗೌಡ ಮಾರ್ಗಗಳನ್ನು ಹೆಸರಿಸಿದರೆ, ನಮ್ಮ ಗ್ರಂಥಕಾರನು ಎಲ್ಲೆಲ್ಲಿಯೂ ದಕ್ಷಿಣೋತ್ತರ ಮಾರ್ಗಗಳನ್ನೇ ಉಲ್ಲೇಖಿಸುತ್ತಾನೆ. ಈ ಕಾಲದಲ್ಲಿ ಕನ್ನಡನಾಡಿನ ಬಡಗಣ ಎಲ್ಲೆಯಾಗಿದ್ದ ಗೋದಾವರಿಯಿಂದಲೇ ದಕ್ಷಿಣಕ್ಕೆ ವಿದರ್ಭವೂ ಉತ್ತರಕ್ಕೆ ಗೌಡದೇಶ ಪ್ರಾಂತವೂ ನೆಲೆಗೊಂಡಿವೆ ಎಂಬುದು ಭೂಗೋಳ ಪರಾಮರ್ಶದಿಂದ ಗೊತ್ತಾಗುತ್ತದೆ. ಅದರಿಂದ ತೆಂಕಣ ಕಾವ್ಯಮಾರ್ಗವೆಲ್ಲವನ್ನೂ ಸಾಮಾನ್ಯವಾಗಿ 'ವೈದರ್ಭ'ವೆಂದೂ ಬಡಗಣದನ್ನು 'ಗೌಡ'ವೆಂದೂ ಸೂಚಿಸುವುದು ಲಾಕ್ಷಣಿಕ ಪದ್ಧತಿ. ಅದಂತಿರಲಿ. ಮೇಲೆ ಸೂಚಿಸಿದ 'ಅವಱ ವಿಪರ್ಯಯ ವೃತ್ತಿ'....ಎಂಬುದರಿಂದ ತಿಳಿದುಕೊಳ್ಳಬೇಕಾದ ಉತ್ತರ ಮಾರ್ಗರೂಪಕ ಗುಣಗಳ ಹೆಸರುಗಳಾವುವು? ದಂಡ್ಯಾಚಾರ್ಯನು 'ಏಷಾಂ ವಿಪರ್ಯಯಃ ಪ್ರಾಯಃ....'ಎನ್ನುತ್ತಾನೆ. 'ಪ್ರಾಯಃ' ಎಂದರೆ 'ಹೆಚ್ಚಾಗಿ' ಎಂಬ ಅರ್ಥ ಅಥವಾ

---

'ಗುಣ'ವೆಂಬ ಭಾವನೆಯಿಂದ ಹೀಗೆ ತಿದ್ದಿಕೊಂಡರೋ ಎಂಬ ಸಂಶಯುವಾಗುತ್ತಿದೆ. ಹಾಗಿದ್ದರೆ, 'ಪ್ರಮಿತ' ಎಂಬ ವಿಶೇಷಣವು ನಿರರ್ಥಕವಾಗುವುದು. ಮಾತ್ರವಲ್ಲ ; ವಾಮನನ 'ಅಗ್ರಾಮ್ಯತ್ವಮುದಾರತಾ' ಎಂಬ ಹೇಳಿಕೆಯಂತೆ 'ಉದಾರತೆ'ಯ ಲಕ್ಷಣವೇ 'ಅಗ್ರಾಮ್ಯತೆ'ಯಾದುದರಿಂದ, ಅದೊಂದು ಬೇರೆಯೇ ಗುಣವಲ್ಲ. ಅದರಿಂದ, 'ಪ್ರಮಿತಗ್ರಾಮ್ಯ'ವೆಂಬುದೇ, ಈ ಗ್ರಂಥಕಾರನೆಣಿಕೆಯಂತೆ, ವಿಶಿಷ್ಟವಾದೊಂದು ಗುಣ ಎಂದು ನಮ್ಮ ಭಾವನೆ.

1 ಮದರಾಸು ಪ್ರತಿಯ ಸಂಪಾದಕರು 'ತದ್ಭವದೊಳ್' ಎಂಬ ಪದಕ್ಕೆ 'ಆ ಕವಿಮಾರ್ಗದಿಂದ ಹುಟ್ಟಿದ ಈ ಗ್ರಂಥದಲ್ಲಿ ಹೇಳುವೆನು'—ಎಂಬ ತಾತ್ಪರ್ಯವನ್ನು ಹೇಳುತ್ತಾರೆ. ('ಕವಿರಾಜಮಾರ್ಗ', ಉಪೋದ್ಘಾತ, ಪುಟ viii) ಅದು ಸರಿಯಲ್ಲವೆಂದು ನಮ್ಮ ನಿರ್ಣೀತಾಭಿಪ್ರಾಯ. ಗ್ರಂಥಕಾರನು ಈ ಪದ್ಯದಿಂದಲೆ ಮುಂದೆ ಪ್ರಥಮತಃ ದಕ್ಷಿಣಮಾರ್ಗದ, ಮತ್ತೆ ಉತ್ತರಮಾರ್ಗದ, ಗುಣಗಳಿಗೆ ವಿಶಿಷ್ಟ ಲಕ್ಷಣ ಲಕ್ಷ್ಯಗಳನ್ನು ಹೇಳಲಾರಂಭಿಸುತ್ತಾನೆ. ಉತ್ತರಮಾರ್ಗ ಲಕ್ಷಣಕ್ಕನುವಾದ ಲಕ್ಷ್ಯವನ್ನು 'ತದ್ಭವದೊಳ್', ಎಂದರೆ ಆ ಉತ್ತರಮಾರ್ಗಭವಗುಣ ಸಂದರ್ಭದಲ್ಲಿ, ಹೇಳುವೆನು ಎಂದೇ ಅರ್ಥ. ಮುಂದೆ ೫೮ನೆಯ ಪದ್ಯಾಂತ್ಯದಲ್ಲಿ 'ಅವಱ ವಿಶೇಷವಿಶೇಷ್ಯಮಿಂತು ಮಾರ್ಗದ್ವಯದೊಳ್' ಎಂದು 'ಮಧುರ' ಗುಣ ಲಕ್ಷಣವನ್ನು ಹೇಳಿದಂತೆ, ಇಲ್ಲಿಯೂ ಅಧಿಕಾರಣಕಾರಕ ಮೂಲಕವಾಗಿ ಸೂಚಿಸಿದ್ದಾನೆ.

ವಿಕಲ್ಪಾರ್ಥ. ಆದರಿಂದ, ಕೆಲವೆಡೆ ಉಭಯ ಮಾರ್ಗಗುಣಗಳಿಗೂ ಅಭಿನ್ನ ನಾಮಾರ್ಥಗಳಿರಬಹುದೆಂದು ಸೂಚಿತವಾಗುವುದು. ದಕ್ಷಿಣ ಮಾರ್ಗದ ಗುಣಗಳನ್ನು ಹೆಸರಿಸಿದಂತೆ ಉತ್ತರ ಮಾರ್ಗದವುಗಳ ವಿಪರ್ಯಯ ಗುಣಾಂಕಿತಗಳನ್ನು ಲಕ್ಷಣದಲ್ಲಿ ಹೇಳಿಲ್ಲ. ಆದರೂ ಅವು ಲಕ್ಷ್ಯ ಸಂದರ್ಭದಲ್ಲಿ ಒಂದಷ್ಟು ಹೊಳೆಯುತ್ತವೆ. ವಾಚಕರ ಅವಗಾಹನೆಗಾಗಿ ಗುಣಭೇದಗಳೊಡನೆ ಆ ಎರಡು ಮಾರ್ಗಗಳನ್ನೂ ಹೀಗೆ ಚಿತ್ರಿಸಬಹುದು—

| ದಕ್ಷಿಣ ಮಾರ್ಗ<br>ಸ್ವಭಾವೋಕ್ತಿ | ಉತ್ತರ ಮಾರ್ಗ<br>ವಕ್ರೋಕ್ತಿ |
|---|---|
| ೧. ಸಮ | ವಿಷಮ |
| ೨. ಮಧುರ | ವಕ್ರಮಧುರ |
| ೩. ನಿಬಿಡ | ಶಿಥಿಲ |
| ೪. ಕಾಂತ | ವಕ್ರಕಾಂತ (ಧೂಸರ ಪುರಾಣಚ್ಛಾಯಾನುಕಾರಿತ್ವ) |
| ೫. ಸುಕುಮಾರ | ವಕ್ರ ಸುಕುಮಾರ |
| ೬. ಸಮಾಹಿತ | ವಕ್ರ ಸಮಾಹಿತ |
| ೭. ಪ್ರಸನ್ನ | ವಕ್ರ ಪ್ರಸನ್ನ |
| ೮. ಉದಾರ | ವಕ್ರ ಉದಾರ |
| ೯. ಪ್ರಮಿತ ಗ್ರಾಮ್ಯ | ಗ್ರಾಮ್ಯ |
| ೧೦. ಓಜಸ್ವಿ | ವಕ್ರ ಓಜಸ್ವಿ |

'ಕಾವ್ಯಾದರ್ಶ'ದ ಲಕ್ಷ್ಯ ಲಕ್ಷಣಗಳೊಡನೆ ನಮ್ಮ ಗ್ರಂಥಕಾರನವುಗಳನ್ನು ಇರಿಸಿ ಪರೀಕ್ಷಿಸಿಕೊಂಡೇ ಈ ಹೆಸರುಗಳನ್ನು ಸಿದ್ಧಪಡಿಸಿಕೊಂಡಿದೆ. ಇವುಗಳಲ್ಲಿ 'ವಿಷಮ', 'ಶಿಥಿಲ', 'ಪರುಷ', 'ಸಹಜ'—ಎಂಬ ನಾಲ್ಕು ಹೆಸರುಗಳೂ ವಿಪರ್ಯಯಗೊಂಡಿವೆ. ಉಳಿದ ಆರರೊಳಗೆ ಬಾಹ್ಯ(ನಾಮ)ವಿಪರ್ಯಯವಿಲ್ಲವಾದರೂ ಅಂತರ್ವಿಪರ್ಯಯ (ಅರ್ಥ ವಿಪರ್ಯಾಸ) ಇದೆ ಎಂಬುದು ಕ್ರಮವಾಗಿ ಲಕ್ಷ್ಯವನ್ನು ಅವಧರಿಸುವಲ್ಲಿ ಗೊತ್ತಾಗುವುದು. ಈ ನಾಮಾರ್ಥ ವಿಪರ್ಯಾಸವೆ ದಂಡಿಯ 'ವಿಪರ್ಯಯಃ ಪ್ರಾಯಃ' ಎಂಬ ಹೇಳಿಕೆಗೆ ಕಾರಣ. ನಾಮವಿಪರ್ಯಾಸವು ಹಾಗಿದ್ದುಕೊಳ್ಳಲಿ; ವಿವೇಚಿಸಿದಲ್ಲಿ, ಗುಣಸ್ವರೂಪ ವಿಪರ್ಯಾಸವು ಬುಡದಿಂದ ಕಡೆವರೆಗೂ ತೋರುವುದು—ಎಂಬುವನ್ನು ಮುಂದೆ ವಿಸ್ತರಿಸುತ್ತೇವೆ.

ಈಗ ಸಮಬಂಧದ ಲಕ್ಷ್ಯ ಲಕ್ಷಣಗಳನ್ನು ಪರಾಮರ್ಶಿಸುವ—

### ಸಮಬಂಧ (ದಕ್ಷಿಣ ಮಾರ್ಗ)

ಸಮಬಂಧಮೆಂಬುದಕ್ಕುಂ
ಸಮನಿಸಿ ಕಿವಿಗೆದಱಿ ಬಾರದಾನಂ ಮುಟ್ಟುಂ
ಸಮೆದ ಪದದಾ ವಿಭೇದ
ಕ್ರಮಮೆರಡಕ್ಕುಂ ಮೃದುಸ್ಫುಟೋಕ್ತಿಯಿನದಱಿಂ

ಮದರಾಸು ಪ್ರತಿ—(ii, 56)

—"ಕಿವಿಯನ್ನು ಕೆದರಿ ಬಾರದ, ಎಂದರೆ ಉಚ್ಚಾರಣ ಸ್ಥಲಭೇದದಿಂದಾಗಿ ಕೇಳುವಲ್ಲಿ ಕಿವಿಯನ್ನು ಕುಕ್ಕುವಂತಿರುವ ವರ್ಣಗಳು ಎಡೆಯೆಡೆಯಲ್ಲಿ ಸೇರದ, ಶ್ರವಣಸುಖದಾಯಕ ವಾಗಿ ಮುಟ್ಟುವಂತೆ (ಆನಂ ಮುಟ್ಟುಂ) ಸಮೆದ ಪದಗಳ ವಿನ್ಯಾಸಕ್ರಮಕ್ಕೆ 'ಸಮ' ಎಂದು ಹೆಸರು. ಅದರೊಳಗೆ 'ಮೃದೂಕ್ತಿ ಸಮ', 'ಸ್ಫುಟೋಕ್ತಿ ಸಮ'—ಎಂದು ಎರಡು ಭೇದಗಳನ್ನು ಕಲ್ಪಿಸಬಹುದು."[1]

ಆ ಸಮಬಂಧದೊಳಗಿನ ಭೇದಗಳು ಹೀಗಿವೆ:

ಮೃದುತರವರ್ಣಾನುಗಮಾ
ಸ್ಪದವಿರಚನೆಯೊಳಗೆ ತೋರ್ಪುದದು ಮೃದುಬಂಧಂ
ವಿದಿತಸ್ಫುಟಾಕ್ಷರಾಧಿಕ
ಪದವಿರಚಿತಮಪ್ಪುದಕ್ಕುಮಾ ಸ್ಫುಟಬಂಧಂ —(ii, 55)

—'ಪದರಚನೆಯೊಳಗೆ ಹೆಚ್ಚಾಗಿ ಮೃದೂಚ್ಚಾರಣೆಯ ಅಕ್ಷರಗಳೇ—ಎಂದರೆ ವರ್ಗೀಯ ತೃತೀಯ, ಪಂಚಮ, ಯಲಾದಿ ಅಕ್ಷರಗಳೇ—ಇದ್ದರೆ ಅದು 'ಮೃದುಬಂಧ'ವೆನ್ನಿಸುವುದು; ಸ್ಫುಟಾಕ್ಷರಗಳು—ಎಂದರೆ ವರ್ಗೀಯ ಚತುರ್ಥ, ರಳಾಕ್ಷರಗಳು—ಹೆಚ್ಚಾಗಿ ಸೇರಿದರೆ ಅದು ಸ್ಫುಟಬಂಧವಾಗುವುದು.'

ಉದಾಹರಣವನ್ನು ಅವಲೋಕಿಸಿರಿ:

### ಮೃದೂಕ್ತಿ ಸಮ

ದೊರೆಕೊಳೆ ನೋಡಿದನಾಯತ
ಕರುಣಾಪಾಂಗದೊಳೆ ಲೋಲಲೋಚನಯುಗೆಯಂ
ಪೂರ್ವಾರ್ಧ—(ii, 56)

### ಸ್ಫುಟೋಕ್ತಿ ಸಮ

ಗುರುಜಘನಪಯೋಧರಯುಗ
ಭರವಿಧುರೆಯನಾ ಧರಾಧಿಪತಿ ವಿಧುಮುಖಿಯಂ
ಉತ್ತರಾರ್ಧ—(ii, 56)

ಇಲ್ಲಿ ಒಂದು ಸಂಗತಿಯನ್ನೆಣಿಸಬೇಕು. ಮೊದಲು ಕ್ರಮವಾಗಿ ವಿಶೇಷಣಾದಿಯುತ ಕರ್ಮ ಕಾರಕಗಳು, ಕಡೆಗೆ ಕ್ರಿಯಾಪದ ರಚನೆ—ಎಂಬ ಪರಿಪಾಡಿಯು ಸೈತು ಗದ್ಯದಲ್ಲಿ ಮಾತ್ರವೇ

[1] 'ಕವಿರಾಜಮಾರ್ಗ'ಕಾರನು ಎರಡೇ ಭೇದಗಳನ್ನು ಹೇಳಿದರೆ, ದಂಡಿಯು—

...ತೇ ಮೃದು ಸ್ಫುಟ ಮಧ್ಯಮಾಃ
ಬಂಧಾಃ ಮೃದುಸ್ಫುಟೋನ್ಮಿಶ್ರವರ್ಣ ವಿನ್ಯಾಸ ಯೋನಯಃ
ಕಾವ್ಯಾದರ್ಶ —(i, 47)

—ಎಂದು ಮೃದುಸ್ಫುಟ ಮಿಶ್ರಾಕ್ಷರ ಬದ್ಧವಾದ ಇನ್ನೊಂದು ಬಂಧಗುಣವನ್ನು ಸೇರಿಸಿದ್ದಾನೆ. ನಮ್ಮ ಮಟ್ಟಿಗೆ ಅದು ಅಪ್ರಸ್ತುತ.

ಸಾಧ್ಯ. ಪದ್ಯದಲ್ಲಿ ಛಂದಸ್ಸಿನ ನಿಯಮಕ್ಕೊಳಗಾಗುವುದು ಮೊದಲಿನ ಕರ್ತವ್ಯ. ಅಲ್ಲಿ ಕಾರಕಾದಿಗಳ ನಿಯಮಿತ ಸ್ಥಾನವು ಒಂದಿಷ್ಟು ವ್ಯತ್ಯಸ್ತವಾಗಲೂಬಹುದು. ಅದರಿಂದ ಬಂಧವು ವಕ್ರವಾಯಿತು ಎನ್ನಲಾಗದು. ಮೇಲಿನ ಪದ್ಯದ ಪೂರ್ವೋತ್ತರಭಾಗಗಳಲ್ಲಿ 'ಸಮಬಂಧ'ದ ಮೃದುಸ್ಫುಟ ಭೇದಗಳೆರಡಕ್ಕೂ ಕ್ರಮವಾಗಿ ಉದಾಹರಣಗಳಿವೆ. ಪ್ರಥಮತಃ 'ನೋಡಿದಂ' ಎಂಬ ಕ್ರಿಯಾಪದದಲ್ಲಿ ಕರ್ತೃವಿನ ಹೊಲಬೂ ತೋರುವುದು. ಆ ಮೇಲೆ ಕರಣಾರ್ಥದಲ್ಲಿ ಪಲ್ಲಟಿಸಿದ 'ಆಯತ....ಅಪಾಂಗದೊಳ್' ಎಂಬ ಅಧಿಕರಣ ಕಾರಕವೂ ತದನಂತರ 'ಲೋಲಲೋಚನಯುಗೆಯಂ' ಎಂಬ ಕರ್ಮಕಾರಕವೂ ನೆಲಸಿ, ಅರ್ಥಾನುಸಾರವಾಗಿ ಬಂಧವು ದ, ನ, ಡ, ಯ, ಣ, ಗ, ಲ—ಎಂಬ ಮೃದ್ವಕ್ಷರಗಳಿಂದ ಒಡಮೆರೆದಿದೆ. ಉತ್ತರಾರ್ಧದಲ್ಲಿ 'ಸಮ'ದ ಸ್ಫುಟಾಕ್ಷರರಚಿತಭೇದಕ್ಕೆ ಲಕ್ಷ್ಯವನ್ನೀಕ್ಷಿಸ ಬೇಕು. ಇಲ್ಲಿ, ಹಿಂದಿನ ಪಾದಾಂತದಲ್ಲಿ ಕರ್ಮಪದವನ್ನು ಸೂಚಿಸಿದ ವಿಶೇಷಣದೊಡನೆ ಬೇರೆರಡು ವಿಶೇಷಣಗಳೂ ಆ ವಿಶೇಷಣಗಳಿಂದಲೇ 'ರಾಣಿಯಂ'ಎಂಬ ವಿಶೇಷ್ಯವೂ ಸೂಚಿತ ವಾಗಿವೆ. ರ, ಧ, ಭ, ಗಳೇ ಇಲ್ಲಿ ಅಧಿಕ ಸಂಖ್ಯೆಯಲ್ಲಿವೆ. ಇವುಗಳೆಡೆಯಲ್ಲಿ 'ಧರಾಧಿಪತಿ' ಎಂಬ ಕರ್ತೃಪದವೂ ಇದೆ. ಈ ಪದ್ಯದಲ್ಲಿ ಎರಡು ಲಕ್ಷಣಗಳಿಗೆ ಉದಾಹರಣಗಳನ್ನು ಕೊಡಬೇಕಾದುದರಿಂದ, ಒಂದೊಂದು ಕಡೆಗೆ ಒಂದೊಂದನ್ನು ಮಾರ್ಗಾನುಸಾರವಾಗಿ ಸೇರಿಸಬೇಕಾಯಿತು. ಅದರಿಂದ. ರಚನಾಕ್ರಮದಲ್ಲಿ ಒಂದಿಷ್ಟು ಕೊಂಕಾದಂತೆ ಭಾಸ ವಾದರೂ ಅದು ನಿಜವಾದ ಕೊಂಕಲ್ಲ. ಛಂದಸ್ಸನ್ನನುಸರಿಸಿ, ಎರಡು 'ಸಮ'ಗಳನ್ನು ಒಂದೇ ಪದ್ಯದೊಳಗೆ ಲಕ್ಷ್ಯವನ್ನೀವಲ್ಲಿ ಇದು ಸೈತೇ ಸರಿ.

ಈಗ, ಉತ್ತರಮಾರ್ಗದ 'ವಕ್ರೋಕ್ತಿ'ಜನ್ಯವಾದ, ಎಂದರೆ ದಕ್ಷಿಣಮಾರ್ಗದ 'ಸಮ'ಕ್ಕೆ ವಿಪರ್ಯಯವಾದ, 'ವಿಷಮ' ಬಂಧವನ್ನು ಪರಿಶೀಲಿಸೋಣ. ಈ 'ವಿಷಮ' ಬಂಧಕ್ಕೆ ಗ್ರಂಥಕಾರನು ಲಕ್ಷಣವನ್ನು ನಿರೂಪಿಸಿಲ್ಲ. ಹಿಂದೆಂದ 'ಅವಱ ವಿಪರ್ಯಯ ವೃತ್ತಿ'ಯೇ ಇದಕ್ಕೆ ಲಕ್ಷಣವಾಗುತ್ತಿದೆ, ಎಂಬುದು ಗ್ರಂಥಕಾರನ ಅಭಿಪ್ರಾಯವಾಗಿದ್ದಿರ ಬಹುದು. ದಕ್ಷಿಣ ಮಾರ್ಗೀಯರು ತಮ್ಮ 'ಸ್ವಭಾವಾಖ್ಯಾನ'ಕ್ಕನುವಾದ 'ಸಮ' ಬಂಧ ವನ್ನು ಗುಣವೆಂದು ಭಾವಿಸಿದರೆ, ಔತ್ತರೇಯರು ತಮ್ಮ 'ವಕ್ರೋಕ್ತಿ'ಗನುವಾದ ವಿಷಮ (ಸಮವಲ್ಲದ, ಎಂದರೆ ಸಮಾನತೆಯಿಲ್ಲದ ವರ್ಣಗಳಿಂದ ಕೂಡಿದ) ಬಂಧವನ್ನೇ ಗುಣ ವೆಂದು ಎಣಿಸುತ್ತಾರೆ. ಅದರಿಂದ 'ವಿಷಮ' ಎಂಬ ನಾಮವನ್ನೀಕ್ಷಿಸಿದೊಡನೆ ಇದು ಗುಣವಲ್ಲ, ದೋಷವೆಂದು ಭ್ರಮಿಸಬೇಕಾಗಿಲ್ಲ. ಹಿಂದೆ ದೋಷನಿರೂಪಣಾವಸರದಲ್ಲಿ, ಕೆಲಕೆಲವು ದೋಷಗಳಾದರೂ ಕಾಲ ದೇಶಾದಿಗಳನ್ನೊಂದಿ ಗುಣಗಳಾಗಿ ಪರಿಣಮಿಸುವುವು ಎಂದು ಗ್ರಂಥಕಾರನೇ ಸೂಚಿಸಿರುತ್ತಾನಲ್ಲವೆ ? ಅದರಂತೆ 'ವಿಷಮ ಬಂಧ'ವೂ ಉತ್ತರ ಮಾರ್ಗೀಯ ಕವಿ ವಾಚಕರ ಅಭಿರುಚಿಗನುವಾಗಿ ಗುಣವೇ ಸರಿ—ಎಂಬುದನ್ನು ಒಪ್ಪಲೇ ಬೇಕು. ಆ ವಿಷಮಾಕ್ಷರ ಬಂಧಕ್ಕೆ ದೃಷ್ಟಾಂತವನ್ನೀಕ್ಷಿಸಿರಿ :

...ಆ ವಿಷಮಬಂಧಮಿನ್ನಿಂತಕ್ಕುಂ
ಚಿಂತ್ಯೈಕಸುಖಾಕ್ರಾಂತರ್
ಸಂತುಷ್ಟೈಕಾಗ್ರಚಿತ್ತರಾದರ್ ತವೊಳ್ —(ii, 57)

ಮೂರನೆಯ ಪಾದದಲ್ಲಿ ಚ, ತ, ಕ, ಖ, ತ—ಎಂಬ ಅಕ್ಷರಗಳೊಳಗಿನ ಪರುಷತೆಯು ಸಮತೆಯನ್ನು ಎಡೆಯೆಡೆಯ ಎರಡು ಸೊನ್ನೆಗಳೂ ಕ್ರ, ರ್‌ಗಳೂ ತಪ್ಪಿಸಿವೆ. ಮತ್ತಿನ ಪಾದದ ಅಕ್ಷರಗಳ ಪರುಷತೆಯನ್ನು ಂ, ಗ್ರ, ರಾದರ್, ಮ್ಮೊಳ್—ಎಂಬ ರೇಫ ವಿಶಿಷ್ಟ ಮೃದ್ವಕ್ಷರಗಳು ಕದಲಿಸಿವೆ. ಅದರಿಂದಲೆ, ಈ ಬಂಧವನ್ನು 'ವಿಷಮಬಂಧ' ಎಂದು ಕರೆದಿರುವುದು. ಈ ದೃಷ್ಟಾಂತದಲ್ಲಿ ನಿಜವಾದ ಕರ್ತೃಪದಗಳು ಎರಡು ಎಂದು ತೋರುತ್ತಿದೆ. ಆದರೆ ಅವು ವಿಶೇಷಣಗಳ ಮೂಲಕವಾಗಿಯೇ ಸೂಚಿತವಾಗಿವೆ. ಆ ಕರ್ತೃಪ್ರತಿನಿಧಿಗಳಾದ ವಿಶೇಷಣಗಳ ನಡುವೆ, ಎಂದರೆ ಮೊದಲನೆಯ ವಿಶೇಷಣದ ಮುಂದೆ, 'ತಮ್ಮೊಳ್' ಎಂಬ ಅಧಿಕರಣಕಾರಕವನ್ನಿರಿಸಿಕೊಂಡು 'ಸಂತುಷ್ಟೈಕಾಗ್ರಚಿತ್ತರಾದರ್' ಎನ್ನುತ್ತಿದ್ದರೆ, ನುಡಿಗಳ ಕೊಂಕು ಹೆಣೆತವು ಒಂದಿಷ್ಟು ಸೈತಾಗಿ ಬಾಗುತ್ತಿತ್ತು. ಗ್ರಂಥಕಾರನು ಹಾಗಿಲ್ಲದ ವಿಷಮರಚನೆಯನ್ನೇ ಕಾಣಿಸಿರುತ್ತಾನೆ. ದಾಕ್ಷಿಣಾತ್ಯರಿಗೆ 'ವಿಷಮ'ವಾಗಿ ತೋರುವ ಈ ಪದ್ಧತಿಯೇ ಔತ್ತರೇಯರಿಗೆ 'ಸಮ'ಬಂಧವಾಗಿ ತೋರುತ್ತಿದ್ದಿರಬಹುದೋ ಏನೋ! ಆದರೆ ಗ್ರಂಥಕಾರನ ಒಲವು ದಂಡಿಯುದರಂತೆ ದಕ್ಷಿಣ ಮಾರ್ಗವನ್ನೆ ಬಳಿಸಂದು ಬಳಸಿಕೊಂಡಿದ್ದುದೆಂದು ಪರಾಂಬರಿಸಿದಲ್ಲಿ ಹೊಳೆದು ತೋರುತ್ತಿದೆ. ಈ ವಿಷಮಬಂಧದಲ್ಲಿ, ಸಮಬಂಧದಲ್ಲಿರುವಂತೆ ಭೇದವಿಲ್ಲ.

ಇನ್ನೀಗ ಮುಂದಿನ 'ಮಧುರ' ಗುಣ ಲಕ್ಷಣವನ್ನೀಕ್ಷಿಸಿರಿ :

## ಮಧುರ

ಸವಿವೊಡೆ ಮಧುರರಸಂಬೊಲ್
ಕಿವಿಗಿನಿದಾಗಿರ್ಪ ವಚನವಿರಚನೆಮಧುರಂ
ಸವಿಳಾಸಾಳಾಪದಿನವ
ಱ ವಿಶೇಷ ವಿಶೇಷ್ಯಮಿಂತು ಮಾರ್ಗದ್ವಯದೊಳ್ —(ii, 58)

—"ನಾಲಗೆಗೆ ಸ್ವಾದುವಾದ ರಸವು ಹೇಗೋ ಹಾಗೆ, ಕಿವಿಗೆ ಇನಿದಾಗಿರುವ ವಚನ ವಿರಚನೆಗೆ 'ಮಧುರ' ಎಂಬ ಹೆಸರು."

ದಾಕ್ಷಿಣಾತ್ಯರ ಸವಿಲಾಸಾಲಾಪದೊಳಗೆ ಒದಗುವ, ಆ ಮಧುರಬಂಧದ ಸ್ವರೂಪವು ಇಲ್ಲಿ ವಿಸ್ತೃತವಾಗುವುದು (ಉತ್ತರಮಾರ್ಗದ ಮಧುರಬಂಧದ ಹೂಣಿಕೆ ಮುಂದೆ ಸೂಚಿತವಾಗುವುದು). ಮೇಲಿಂದ ಮೇಲೆ ನೋಡಿದರೆ, ಹಿಂದಿನವರಂತೆ, ಇದೂ ಬಂಧಗುಣ ಮಾತ್ರವೆಂದು ತೋರುವುದು. ಆದರೆ 'ಕಾವ್ಯಾದರ್ಶ'ಕಾರನು 'ಮಧುರಂ ರಸವದ್ವಾಚಿ ವಸ್ತುನ್ಯಪಿ ರಸಃ ಸ್ಥಿತಃ' ಎಂದು ಹೇಳಿದ್ದಾನೆ ('ಕಾವ್ಯಾದರ್ಶ' i, 51). ಹಾಗೆ 'ವಸ್ತುನ್ಯಪಿ' ಎಂಬಲ್ಲಿ ಸಮುಚ್ಚಯವನ್ನು ಕೂಡಿಸಿದುದರಿಂದ ರಸವತ್ತಾದ ಅರ್ಥರಚನೆಯೂ ಇದರೊಳಗೆ ಆವಶ್ಯಕವೆಂಬಂತೆ ತೋರುತ್ತದೆ. ಅದನ್ನಾಧರಿಸಿ ನಮ್ಮ ಗ್ರಂಥಕಾರನ ಹೇಳಿಕೆಯನ್ನು ಮತ್ತೊಮ್ಮೆ ವಿವೇಚಿಸಿರಿ : 'ಸವಿವೊಡೆ ಮಧುರರಸಂಬೊಲ್' ಎಂದು ಅಲ್ಲಿಯೂ ಇದೆ. ಮತ್ತಿನ 'ಕಿವಿಗಿನಿದಾಗಿರ್ಪ ವಚನವಿರಚನೆ' ಎಂಬಲ್ಲಿ ಪದಬಂಧವು ವ್ಯಕ್ತವಾಗುವುದಾದರೂ, ಹಾಗೆ ವಚನವಿರಚನೆ ಕಿವಿಗೆ ಇನಿದಾಗಿರಬೇಕಾದರೆ, ಅದರೊಳಗೆ ಅರ್ಥ

ರೂಪವಾದ ಮಾಧುರ್ಯವು ಇದ್ದೇ ತೀರಬೇಕೆಂಬುದು ವಿದಿತವಾಗುವುದು. ಹೀಗೆ, ದಂಡಿಯ ಮತ್ತು ನಮ್ಮ ಗ್ರಂಥಕಾರನ ಹೇಳಿಕೆಗಳೆರಡೂ ಒಮ್ಮತದವುಗಳೇ ಸರಿ. ಆದರೆ ಅಂಥ 'ಸವಿಲಾಸಾಲಾಪ'ಗಳ ನುಡಿಗಳ ಕೂಟಗಳು ಮಾರ್ಗದ್ವಯದೊಳಗೆ ಹೇಗೆ ವ್ಯತ್ಯಸ್ತವಾಗಿವೆ ಎಂಬುದನ್ನು ಅವಲೋಕಿಸಿರಿ :

**ಮಧುರ (ದಕ್ಷಿಣಮಾರ್ಗ)**

ದೆಸೆಗಳ್ ವಿಶಾಳಮಾದುವು
ಕೆಸಱಿಂ ಪಿಂಗಿತ್ತು ಧರಣಿ ತಿಳಿದುವು ಕೊಳಗಳ್
ಶ್ವಸನಪಥಮಮಳಮಾಯ್ತುಂ
ದೊಸಗೆಗಳಂ ಬೀಱುವಂತೆ ಶರದಾಗಮದೊಳ್ —(ii, 59)

'ಶರದಾಗಮದೊಳ್ ದೆಸೆಗಳ್ ವಿಶಾಳಮಾದುವು' ಎಂದು ಕಾಲದ ಸ್ವಾಭಾವಿಕ ನಿರ್ಮಲತೆಯು ಮೃದ್ವಕ್ಷರಗಳಿಂದಲೂ ಸಮೀಪಗತ 'ಳ'ಕಾರಗಳಿಂದಲೂ ಅಲ್ಲಲ್ಲಿ 'ಸ'ಕಾರಗಳಿಂದಲೂ ಕೂಡಿದ ಅಚ್ಚುಕಟ್ಟಾದ ನುಡಿಗಳ ಮೂಲಕ ನೇರಾಗಿ ವ್ಯಕ್ತವಾಗುತ್ತಿದೆ. ಕಡೆಗೆ 'ಒಸಗೆಗಳಂ ಬೀಱುವಂತೆ' ಎಂಬ ಉತ್ಪ್ರೇಕ್ಷಾಲಂಕೃತಿಯಾದರೂ ಸ್ಪೈತಿನ ಎಲ್ಲೆಯಿಂದತ್ತ ಉದ್ದಾಮವಾಗಿ ಪದವಿಡದಿರುವುದನ್ನು ಮನನವೆಸಗಬೇಕು. ಇಲ್ಲಿ ಪದದೊಡನೆ ಅರ್ಥದ ಮಾಧುರ್ಯವು ಸಾಲುಗೊಂಡು ತಲೆದೋರಿದೆ.

ಉತ್ತರ ಮಾರ್ಗೀಯರಿಗೆ ಈ ರೀತಿಯ 'ವಚನ ವಿರಚನೆ'ಯಲ್ಲಿ ಮಾಧುರ್ಯವು ತಲೆದೋರುವುದಿಲ್ಲ. ದಾಕ್ಷಿಣಾತ್ಯರ ಮಧುರಬಂಧವು ಬಲು ನುಣ್ಣಗಾಗಿ ತೋರಿದಲ್ಲಿ, ಔತ್ತರೇಯರದು ನುಣುಪಿನೊಡನೆ ದಳದಪ್ಪವೇರಿದಂತಿದೆ—

**ಮಧುರ (ಉತ್ತರ ಮಾರ್ಗ)**

ಧವಳಜಳಧರಕುಳಾಕುಳ
ಮವಿಕಳಮಂಬರತಳಂ ವಿನೀಳಚ್ಛಾಯಂ
ಕುವಳಯ ಕೀರ್ತಿಗೆ ಶಾರದ
ಮವಧಾರಿತಮಾಯ್ತುದೆಂಬುದುತ್ತರ ಮಾರ್ಗಂ —(ii, 61)

ಈಯೆರಡು ಪದ್ಯಗಳೂ ಸಾಮಾನ್ಯವಾಗಿ ಏಕಾರ್ಥಕಗಳೇ ಆಗಿವೆ. ಆದರೆ ನುಡಿಗಳೆಡೆವಡೆದ ಪರಿವಿಡಿಯು ಬಳಕೆ ಬೇರೆ. ಅಲ್ಲಿ 'ಸಮಬಂಧ'ದ ಮೃದು 'ಸ'ಕಾರ-'ಳ'ಕಾರಗಳು ಹೆಣೆದರೆ, ಇಲ್ಲಿ ಅದೇ 'ಸಮ'ದ ಸ್ಫುಟ 'ಳ'ಕಾರಗಳು ಗೆಡೆಗೊಂಡಿವೆ. ಹಾಗಿದ್ದರೆ, ಇವೆರಡೂ ಆ 'ಸಮಬಂಧ'ದ ಬೇರೊಂದು ಭೇದವೆನ್ನಬೇಕಲ್ಲವೆ ?—ಅಲ್ಲ ; 'ಸಮ'ಕ್ಕನುಸಾರವಾಗಿಯೇ ಎಲ್ಲ ವರ್ಣಗಳೂ ಇಲ್ಲಿ ಸೇರಿದುದಲ್ಲ. ಎಲ್ಲ ಪದಾರ್ಥಗಳಲ್ಲೂ ಭಿನ್ನ ಪದಾರ್ಥಗಳ ಕೆಲಕೆಲವು ಗುಣದೋಷಗಳು ತುರುಕಿಕೊಳ್ಳುವುದು ಸ್ವಭಾವ. ಅಷ್ಟು ಮಾತ್ರದಿಂದ ಆಯಾ ಎರಡು ಅಲ್ಲವೆ ಹಲವು ಪದಾರ್ಥಗಳು ಅಭಿನ್ನಗಳೆಂದು ಭಾವಿಸಬಾರದು. ಅಂತಹ ಸಾಮಾನ್ಯ

ಗುಣದೋಷಗಳಲ್ಲದೆ, ವಿಶಿಷ್ಟತೆಯನ್ನು ಲಕ್ಷಿಸುವ ಮಿಸಲಾದ ಗುಣದೋಷಗಳೂ ಅಥವಾ ಅದೊಂದು ಗುಣದೋಷ ಸಂಕ್ರಮಣವೂ ಅವುಗಳಲ್ಲಿ ಕಂಡುಬರುವುದು. ಆದರಿಂದಲೇ ಆಯಾ ಪದಾರ್ಥಗಳು ಬೇರೆಯವುಗಳಿಂದ ಪರಿಚ್ಛಿನ್ನವಾಗುತ್ತವೆ. ಇಲ್ಲಿಯೂ ಹಾಗೆಯೆ. ಈ 'ಮಧುರ'ಗಳೆರಡೂ ಕ್ರಮವಾಗಿ ಹಿಂದೆ ಸೂಚಿಸಿದ 'ಸಮ' ಸಂಬದ್ಧಗಳಾದ ಮೃದು, ಸ್ಫುಟಬಂಧಗಳ ಅಕ್ಷರಗಳಿಂದಲೇ ಪೂರ್ಣವಾಗಿ ರೂಪಿತವಾಗಿಲ್ಲ. ಮಾತ್ರವಲ್ಲ; ಅಲ್ಲಿ ವಿಶಿಷ್ಟ ಪದಬಂಧಗಳೇ ಗುಣಕಾರಕಗಳೆನ್ನಿಸಿದರೆ, ಇಲ್ಲಿ ಮಧುರಾರ್ಥ ಯೋಜನೆಯೂ ಗುಣಘಟಕವಾಗಿದೆ. ಈ 'ಮಧುರ'ಗಳೊಳಗೂ ಭಿನ್ನತೆ ಹೊಳೆಯುತ್ತಿದೆ. ಮೊದಲಿನದು ಓದುವಾಗಲೇ ಅರ್ಥವಾಗುವಂತೆ ರಚಿತವಾಗಿದ್ದರೆ, ಮತ್ತಿನದು ಹಾಗಿಲ್ಲ; ಓದಿದ ಮೇಲೆ ಅರ್ಥವನ್ನೊಂದಿಷ್ಟು ಆರಯ್ಯಬೇಕಾಗುವುದು. ನೋಡಿರಿ : (ಸ್ವಾಭಾವಿಕವಾಗಿ) 'ವಿನೀಳಚ್ಛಾಯಂ' ಆದ 'ಅಂಬರ ತಳಂ' 'ಧವಳಜಳಧರಕುಳಾಕುಳಂ ಅವಿಕಳಂ' ಎನ್ನಿಸಿ (ಎಂದರೆ ಧವಳವಾಗಿರುವುದರಿಂದ), 'ಕುವಳಯ ಕೀರ್ತಿಗೆ' (ಭೂವಳಯದ ಕೀರ್ತಿಯನ್ನು ಅನುಗಮಿಸಿ, ಎಂದರೆ ಕುವಳಯ ಕೀರ್ತಿ ಸ್ವರೂಪವಾಗಿ) 'ಶಾರದಂ ಅವಧಾರಿತಂ ಆಯ್ತು.' ಇದರ ತಾತ್ಪರ್ಯವನ್ನು ಹೀಗೆ ಹೇಳಬಹುದು : 'ಬಾಂದಳವು ಸ್ವಾಭಾವಿಕವಾಗಿ ನೀಲ ವರ್ಣವಾದರೂ ಬಿಳಿ ಮುಗಿಲುಗಳು ಎತ್ತೆತ್ತಲೂ ನಿಬಿಡವಾಗಿ ಹಬ್ಬಿದುದರಿಂದ ಬಿಳಿದಾಗಿ ಮೇಲುಗಡೆ ಆವರಿಸಿದೆ. ಅಂಥ ಶರತ್ಕಾಲವು ಕುವಲಯದ ಕೀರ್ತಿಯನ್ನು ಅನುಸರಿಸಿರುವಂತೆ ತೋರುತ್ತಿದೆ. ಈ ತಾತ್ಪರ್ಯಾರ್ಥವನ್ನು[1] 'ಕುವಳಯ ಕೀರ್ತಿಗೆ' ಎಂಬ ವಿಶೇಷಣ ಪದವು ಪೋಷಿಸುತ್ತಿದೆ, ಹೀಗೆ ದಕ್ಷಿಣಮಾರ್ಗದ 'ಮಧುರ' ಗುಣವೇ ಉತ್ತರ ಮಾರ್ಗೀಯ 'ಮಧುರ'ಗುಣವಾಗಿ ಮಾರ್ಪಡುವಾಗ, ಪದರಚನೆ ಅರ್ಥಯೋಜನೆಗಳಲ್ಲಿ ಎಷ್ಟು ಮಟ್ಟಿಗೆ ಕುಡುಗೊಂಕಾಗಿ ಮೊಗದೋರುತ್ತಿದೆ. ಆದರಿಂದಾಗಿ ಅರ್ಥಾವಗಾಹನೆಗೆ ಎಷ್ಟೆಲ್ಲ ಸುರುಸುತ್ತಬೇಕಾಗುತ್ತಿದೆ ಎಂಬುದನ್ನು ಪರಿಭಾವಿಸಿರಿ.

ಇನ್ನು 'ನಿಬಿಡ ಬಂಧ', 'ಶಿಥಿಲ ಬಂಧ'ಗಳು—

**ನಿಬಿಡ**

ಮಿಗೆ ನಿಬಿಡಬಂಧಮೆಂಬುದು
ತಗುಳ್ಳುವು ವರ್ಣಂಗಳಗಲದಿರೆ ಮತ್ತಕ್ಕುಂ
ನೆಗಟ್ದಲ್ಪಪ್ರಾಣಾಕ್ಷರ
ನಿಗದಿತಮೇತದ್ವಿಪರ್ಯಯೋಕ್ತಂ ಶಿಥಿಲಂ —(ii, 62)

—'ಅಕ್ಷರಗಳು ಒಂದಕ್ಕಿನ್ನೊಂದು ತಗಲಿಕೊಂಡು ಹೆಣೆದಂತಿರುವ ಬಂಧವನ್ನು ದಕ್ಷಿಣಮಾರ್ಗೀಯರು 'ನಿಬಿಡ (ಶ್ಲೇಷ)'ವೆಂದು ಅನುಸರಿಸುತ್ತಾರೆ. ಆದರೆ ಔತ್ತರೇಯರು ಅಲ್ಪ

[1] 'ಕೀರ್ತಿಗೆ' ಎಂಬುದು ಚತುರ್ಥೀ ವಿಭಕ್ತಿಯಲ್ಲ. 'ಕೀರ್ತಿಂ ಗಚ್ಛತಿ ಇತಿ ಕೀರ್ತಿಗಾ' ಎಂದು ನಿಷ್ಪನ್ನವಾದ 'ಕೀರ್ತಿಗಾ' ಪದವು ಸಮಸಂಸ್ಕೃತದಲ್ಲಿ 'ಕೀರ್ತಿಗೆ' ಎಂದಾಗುವುದು. ಇಲ್ಲಿ 'ಕುವಲಯ' ಪದಕ್ಕಿರುವ (೧) ಭೂಮಂಡಲ (೨) ಕನ್ನೈದಿಲೆ ಎಂಬ ಶ್ಲೇಷಾರ್ಥವು ನೀಲ ಪದಾರ್ಥವಾದರೂ ಅದರ ಕೀರ್ತಿ ಬೆಳ್ಳಗೆ ಎಂಬುದಾಗಿ ಕವಿಸಮಯ ಪೋಷಕವಾಗಿದೆ.

ಪ್ರಾಣಾಕ್ಷರಗಳಿಂದ ಕೂಡಿದ, ಸಡಿಲಾದ ಪದಬಂಧವನ್ನೇ ಸ್ವೀಕರಿಸುತ್ತಾರೆ. ಉದಾಹರಣವನ್ನು ಪರೀಕ್ಷಿಸಿರಿ :

**ನಿಬಿಡ (ದಕ್ಷಿಣ ಮಾರ್ಗ)**

ಅರವಿಂದೋತ್ಪಲ ಪುಷ್ಪೋ
ತ್ಕರಂಗಳೊಳ್ ಪಾಯ್ದುಮುದ್ಭ್ರಮದ್ಭ್ರಮರಂಗಳ್
—(ii, 63 ಪೂರ್ವಾರ್ಧ)

ಇದರೊಳಗೆ ಅಕ್ಷರಗಳು ಸಂಕಲೆಯ ಗೊಣಸುಗಳಂತೆ ಹೆಣೆದಿರುವುದು ವ್ಯಕ್ತವಾಗುವುದಷ್ಟೆ. ಈಗ ಔತ್ತರೇಯರ ಒಲವನ್ನು ನೋಡಿ :

**ಶಿಥಿಲ (ಉತ್ತರ ಮಾರ್ಗ)**

ವಿರತಮುದಮಾದುವುರುಮದ
ವಿರಾಮುವನಕರಿ ಕಪೋಲ ಫಲಕದೊಳಾಗಳ್ —(ii, 63 ಉತ್ತರಾರ್ಧ)

ಪೂರ್ವಾರ್ಧವಲ್ಲಿರುವುದಕ್ಕೆ ವಿಪರ್ಯಾಸವಾಗಿ—ಎಂದರೆ ಸಂಯುಕ್ತತೆಗೊಳ್ಳದೆ, ಮಹಾಪ್ರಾಣಾಕ್ಷರಗಳಿಗೂ ಎಡೆಗೊಡದೆ—ಈ ಉತ್ತರಾರ್ಧವು ಅಲ್ಪಪ್ರಾಣಾಕ್ಷರಗಳಿಂದಲೇ ರಚಿತವಾಗಿದೆ.

ಹೀಗೆ 'ನಿಬಿಡ' 'ಶಿಥಿಲ' ಬಂಧಾಸ್ಪದ ಮಾರ್ಗದ್ವಿತಯವನ್ನು ವಿವರಿಸಿದ ಮೇಲೆ ಗ್ರಂಥಕಾರನು 'ಕಾಂತ' ಗುಣವನ್ನು ವಿಸ್ತರಿಸುತ್ತಾನೆ—

**ಕಾಂತ**

........................
ಸದಭಿಕಮನೀಯ ಗುಣಮ
ಪ್ಪುದು ನಿಯತಂ ಕಾಂತಮೆಂಬುದಭಿಗೀತಾರ್ಥಂ —(ii, 64)

ಇಂತಿದು ದಕ್ಷಿಣ ಮಾರ್ಗದ
ಕಾಂತಮಸಂಭಾವಿತಾರ್ಥಮುದ್ದಾಮೋಕ್ತಂ
ಸಂತತಮುತ್ತರ ಮಾರ್ಗಗ
ತಾಂತರಮುದನಿಂತು ಕುಱಿತು ತಱಿಸಲ್ಕೆ ಬುಧರ್ —(ii, 66)

—" 'ಸದಭಿಕಮನೀಯಗುಣಮಪ್ಪುದು', ಎಂದರೆ ಲೌಕಿಕಾರ್ಥಕ್ಕನುವಾಗಿ ಸಜ್ಜನರಿಗೆ ಮನೋಹರವೆನ್ನಿಸಿದ ಪದಾರ್ಥಯೋಜನೆಯಿಂದ ಕೂಡಿದುದು ದಾಕ್ಷಿಣಾತ್ಯರೊಪ್ಪುವ 'ಕಾಂತ' (ಕಾಂತಿ) ಗುಣ ; ತದ್ಭಿನ್ನವಾಗಿ ಎಂದರೆ 'ಲೋಕಾತೀತ'ವೆನ್ನಿಸುವಂತೆ ಅಧ್ಯಾರೋಪಣೆಗೊಳಿಸಿ ಅರ್ಥವನ್ನು ಹೊಳೆಯಿಸುವುದು ಔತ್ತರೇಯರ ಕಾಂತ ಗುಣ."

ಈ ಗುಣವನ್ನು ವಿವರಿಸುವಲ್ಲಿ ದಂಡಿಯು 'ಕಾಂತಂ ಸರ್ವಜಗತ್ಕಾಂತಂ ಲೌಕಿಕಾರ್ಥಾನತಿಕ್ರಮಾತ್' (ಲೌಕಿಕ ವಿಷಯಗಳನ್ನು ಅತಿಕ್ರಮಿಸದೆ ಸರ್ವರಿಗೂ ಮನೋಹರವಾಗುವಂತೆ ಬಣ್ಣಿಸುವ ವಚನ ವಿರಚನೆ 'ಕಾಂತ'ವೆನ್ನಿಸುತ್ತದೆ.—('ಕಾವ್ಯಾದರ್ಶ' i, 85) ಎನ್ನುತ್ತಾನೆ. ಅವನನ್ನು ಬಲುಮಟ್ಟಿಗೆ ಅನುಸರಿಸಿದ ನಮ್ಮ ಗ್ರಂಥಕಾರನು 'ಸಪಭಿಕಮನನೀಯಮಪ್ಪುದಾದ', 'ಅಭಿಗೀತಾರ್ಥ'ಯುತವಾದ ಬಂಧವು 'ಕಾಂತ' ಎಂದೆನ್ನುತ್ತಾನೆ. ಈ ಎರಡು ಲಕ್ಷಣಗಳೊಳಗೂ ಹೊಳೆಯುವ ನಿಸ್ಪೃಷ್ಟವಾದ ತಾತ್ಪರ್ಯಾರ್ಥವೇನು? ಸಾಮಾನ್ಯ ವಾಚಕರಿಗೆ ಗ್ರಂಥಕಾರನು ಸೂಚಿಸುವ 'ಕಾಂತಿ' ಹೊಳೆಯುವಂತಿಲ್ಲವೆಂದು ನನ್ನೆಣಿಕೆ. ದಂಡಿಯ ಹೇಳಿಕೆಯಲ್ಲಿ "'ಲೌಕಿಕಾರ್ಥ'ವನ್ನು ಅತಿಕ್ರಮಿಸಲಾಗದು"—ಎಂದಿದ್ದರೆ, ನಮ್ಮ ಗ್ರಂಥದಲ್ಲಿ "'ಅಭಿಗೀತಾರ್ಥಯುಕ್ತ'ವಾಗಿರಬೇಕು"—ಎಂದು ಹೇಳಿದೆ. ಈ ಹೇಳಿಕೆಯಲ್ಲಿ ಲಕ್ಷಣದ ಹಿಡಿ ಒಂದಿಷ್ಟು ತೋರಿದರೂ ಏನು? ಬಂಧಕಾಂತಕ್ಕೆ ಲಕ್ಷಣವನ್ನು ಹೇಳಬೇಕಾಗಿರುವಲ್ಲಿ,ಗುರಿಯನ್ನುಳಿದು ಅರ್ಥಕಾಂತಕ್ಕೆ ಲಕ್ಷಣವನ್ನೊಂದಂತಾಗಲಿಲ್ಲವೆ ಇದು? ಯೋಗ್ಯವಾದ ಅರ್ಥದಿಂದ ಕೂಡಿದರೆ ಮಾತ್ರವೇ ಬಂಧವು 'ಕಾಂತ'ವಾಗುವುದೆಂಬುದು ನಿಜ. ಆದರೆ ಈ ಹೇಳಿಕೆ ಬಂಧಕಾಂತಕ್ಕೆ ಮಾತ್ರವಲ್ಲ, 'ಸಮ'ವೇ ಮೊದಲಾದ ಎಲ್ಲ ಬಂಧ ಗುಣಗಳಿಗೂ ಸಂಬಂಧಿಸಿದುದೂ ನಿಜ. ಗ್ರಂಥಕಾರನು ಬಂಧಕಾಂತದಲ್ಲಿ ಅರ್ಥಕಾಂತದ ಸಹಾಯವೂ ಹೆಚ್ಚು ಅವಶ್ಯವೆಂದು ಭಾವಿಸಿರುವುದು ವ್ಯಕ್ತವಾಗುತ್ತಿದೆ. ದೃಷ್ಟಾಂತವನ್ನು ನೋಡಿ :

**ಕಾಂತ (ದಕ್ಷಿಣಮಾರ್ಗ)—**

ದಿನಕರಕರನಿಕರಂಗಳ್
ಘನವಿವರಪ್ರಸರಮಾಗಿಯುಂತಮ್ಮಂ ಕಂ
ಡನಿತಱೊಳೆ ತೆರಳ್ದೆನ್ನಾ
ಮನೋಗತಧ್ವಾಂತ ಬಂಧಮುಳಱುತ್ತಿಲ್ಲಂ —(ii, 65)

ಅತಿಥಿಯಾಗಿ ಬಂದ ಮಹಾನುಭಾವನೊಬ್ಬನನ್ನು ಮನ್ನಿಸಿ ಮನೆಯೊಡೆಯನು ಆಡುವ ಮಾತಿದು :

"'ಸೂರ್ಯನ ಕರ (i. ಕಿರಣ, ii. ಹಸ್ತ) ನಿಕರ'ಗಳು 'ಘನ ವಿವರ'ದ (i. ಮಹಾಮಾರ್ಗದ; ii, ಮೇಘ ವಿವರದ, ಎಂದರೆ ಆಕಾಶದ) ಮೂಲಕ ಹರಿಯುವವುಗಳು : ಆದರೂ ತಮ್ಮನ್ನು ಕಂಡೊಡನೆ (ತಾನಿಲ್ಲಿಗೆ ಬಂದು ದರ್ಶನವಿತ್ತೊಡನೆ) ನನ್ನ ಆಂತರಂಗಿಕವಾದ ತಮಸ್ಸಂಕುಲವೆಲ್ಲ ಚೆದರಿ ನಿಶ್ಶೇಷವಾಯಿತು"....(ಸೂರ್ಯ ಕಿರಣಗಳು 'ಘನ ವಿವರ ಪ್ರಸರ'ವಾಗಿದ್ದರೂ ತಮ್ಮ ದರ್ಶನ ರೂಪದಿಂದಲೇ ಅವುಗಳು ನನ್ನೆದೆಯನ್ನು ಹೊಕ್ಕು ತದ್ಗತಧ್ವಾಂತ ಬಂಧವನ್ನು ಬಿಡಿಸಿ ಕಳೆದುವು. ತಮ್ಮ ದರ್ಶನದಿಂದ ನಿಷ್ಕಲ್ಮಷ ಹೃದಯನಾದೆನು—ಎಂಬುದು ತಾತ್ಪರ್ಯ).

ಇಲ್ಲಿ, ಅಭಿಗೀತಾರ್ಥವಾಗಿ ಹೊಸೆದ ಪದಬಂಧದಲ್ಲಿ 'ಕಾಂತ'ವಾದ ಅರ್ಥಗುಣವೂ

ಹೊಸದಾಗಿ, ಲೌಕಿಕವಾಗಿ ಮಿರುಗುತ್ತಿದೆ. ಹೀಗೆ ಲೌಕಿಕಾರ್ಥಾನುಸಾರಿಯಾದುದು ಇಲ್ಲವೆ 'ಸದಭಿಕಮನೀಯ ಗುಣವುಳ್ಳುದು' ದಾಕ್ಷಿಣಾತ್ಯ 'ಕಾಂತ'; ಲೋಕಾತೀತಾರ್ಥವಾದ ಇಲ್ಲವೆ 'ಅಸಂಭಾವಿತಾರ್ಥ'ವಾದ 'ಉದ್ಭಾವನೋಕ್ತ'ವು ಔತ್ತರೇಯರು ಮೆಚ್ಚುವ 'ಕಾಂತ' ಗುಣ. ಲಕ್ಷ್ಯವನ್ನು ನೋಡಿ :

**ಕಾಂತ (ಉತ್ತರಮಾರ್ಗ)**—

ವಿಲಸಿತ ಭವದಭ್ಯಾಗಮ
ಜಲಧಾರೆಗಳೇನುಮುಳಿಯದಂತು ಮದಂತ
ರ್ಮಲಮಂ ಕರ್ಚಿದೊಡಾನೀ
ನೆಲಕೆಲ್ಲಂ ಪಾವನೀಯ ಚರಿತನೆ ಆದೆ —(ii, 67)

ಹಿಂದಿನ ಅರ್ಥವೇ ಇಲ್ಲಿ ರೂಪಾಂತರದಿಂದ ವಿಸ್ತೃತವಾಗಿದೆ. ಮೊದಲಿನ ಪದ್ಯವು ಹೆಚ್ಚಿನ ಮಟ್ಟಿಗೆ ಬಿಡುನುಡಿಗಳಿಂದ ಲಲಿತವಾಗಿ, ಅರ್ಥದಲ್ಲಿ ಸ್ಫೈತಾಗಿದೆ ; ಈ ಮತ್ತಿನ ಪದ್ಯವು ಒಂದಿಷ್ಟು ಸಮಾಸಾಧಿಕ್ಯದೊಡನೆ 'ಅಸಂಭಾವಿತಾರ್ಥ'ವೆನ್ನಿಸಿ ವಕ್ರವಾಗಿದೆ. ಹಿಂದಿನ 'ತಮ್ಮಂ' ಎಂಬ ಬಿಡುನುಡಿಗೆ ಸರಿಯಾಗುವಂತೆ ಇಲ್ಲಿ 'ಭವತ್' ಪದವನ್ನು ಸಮಾಸಾದಿಯಲ್ಲಿ ಬೆರಸಿದುದನ್ನು ನೋಡಬೇಕು. ಅದರಂತೆ 'ತಮ್ಮಂ ಕಂಡ ಅನಿತಱಿಂದೊಳೆ' ಎಂಬ ಬಿಡುನುಡಿಗಳ ಭಾವವನ್ನೆಲ್ಲ ಇಲ್ಲಿ 'ವಿಲಸಿತ ಭವದಭ್ಯಾಗಮಜಲಧಾರೆಗಳ್' ಎಂಬ—ಮುಂದೆ ಹೇಳಿರುವ ಓಜೋಗುಣಕ್ಕೆ ವಿಾಸಲಾದ—ಸಮಸ್ತ ಪದದಲ್ಲಿ ತುರುಕಿದು ದನ್ನೂ ಎಣಿಸಬೇಕು. ಈ ಪದ್ಯದೊಳಗೆ ಪದಗಳ ಸ್ಥಾನಯೋಜನೆಯಲ್ಲಿ ವಕ್ರತೆ ಬಲು ಕಡಿಮೆ ಎಂಬುದು ನಿಜ; ಆದರೆ ಪದರೂಪ ಯೋಜನೆ, ಅರ್ಥಸಂಬಂಧಗಳಲ್ಲಿ ಬಲು ವಕ್ರತೆಯಿದೆ. ಪದ್ಯ ತಾತ್ಪರ್ಯವನ್ನು ಅವಗಾಹಿಸಿರಿ :

—'ಶೋಭಿಸುವ ತಮ್ಮ ಆಗಮನವೆಂಬ ಜಲಧಾರೆಗಳು ಏನೂ ಉಳಿಯದಂತೆ ನನ್ನ ಅಂತರಂಗ ದೋಷವೆಂಬ ಮಲವನ್ನು ತೊಳೆಯಲಾಗಿ ನಾನು ಈ ನೆಲಕ್ಕೆಲ್ಲ ಪರಿಶುದ್ಧ ಚರಿತನಾದೆನು.'

ಹಿಂದಿನ ಪದ್ಯದಲ್ಲಿ ಆತ್ಮಾಹಂಕಾರ ನಿವೃತ್ತಿಪೂರ್ವಕವಾದ ಅತಿಥಿಸ್ತುತಿ ಇದ್ದರೆ, ಇದರಲ್ಲಿ ಅತಿಥಿಸ್ತುತಿಯಿರುವ ಆತ್ಮಸ್ತುತಿ ಪುಟವೇರಿದೆ. ಇದೀಗ 'ಉದ್ಭಾವನೋಕ್ತ.' ಇಲ್ಲಿ 'ಭವದಭ್ಯಾಗಮ'ವನ್ನು 'ಜಲಧಾರೆ'ಯನ್ನಾಗಿ ರೂಪಿಸುವುದೂ, 'ಜಲಧಾರೆ'—ಬಾಹ್ಯ ಮಲವನ್ನಲ್ಲ—'ಅಂತರ್ಮಲಮಂ ಕರ್ಚು'ವುದು, ಆದರಿಂದ ತಾನು 'ನೆಲಕೆಲ್ಲಂ ಪಾವನೀಯ ಚರಿತನೆಂ' ಆಗುವುದು ಎಂಬ ವರ್ಣನೆಯೂ ಉದ್ಭಾವನೋಕ್ತಿಯೊಡನೆ 'ಲೋಕಾತೀತಾರ್ಥ'ವೂ ಆಗಿದೆ ಎಂಬುದನ್ನು ಗಮನಿಸಬೇಕು. ಆಲಂಕಾರಿಕ ದೃಷ್ಟಿಯಿಂದ ನೋಡಿದರೆ, 'ಭವದಭ್ಯಾಗಮ' ಎಂಬ 'ಜಲ', 'ಆ 'ಜಲ'ದ ಧಾರೆಗಳ್' ಎನ್ನಬೇಕೋ, ಅಥವಾ 'ಅಭ್ಯಾಗಮ'ವೆಂಬ 'ಜಲಧಾರೆಗಳ್' ಎಂದು ರೂಪಿಸಬೇಕೋ—ಎಂಬ ಸಂದೇಹವಾಗಬಹುದು. ಆದರೆ 'ಆಗಮ' ಪದವು ಚಲನಾರ್ಥಕವಾದುದರಿಂದ

‘ಅಭ್ಯಾಗಮ’ವನ್ನು ‘ಜಲ’ ದೊಡನಲ್ಲ, ಹರಿಯುವ ‘ಜಲಧಾರೆ’ಗಳೊಡನೆಯೇ ರೂಪಿಸಬೇಕೆಂದು ನಮ್ಮ ಭಾವನೆ. ಹಾಗಿದ್ದರೆ ‘ಅಭ್ಯಾಗಮ’ ಪದವು ಏಕವಚನ ರೂಪವಾಗಿರುತ್ತಾ ‘ಧಾರೆಗಳ್’ ಎಂಬ ಬಹುವಚನೋಕ್ತ ಪದದೊಡನೆ ಹೇಗೆ ರೂಪಕವಾಗಬೇಕು ? ಎಂಬ ತೊಡಕಾಗಬಹುದು. ಅದರ ನಿವೃತ್ತಿಗಾಗಿ, ‘ಆಗಮನ’ದಲ್ಲಿ ಅಡಕವಾಗಿರುವ ಮುಗುಳು ನಗೆ, ನಲ್ನುಡಿ, ಆತಿಥ್ಯಾದಿಗಳನ್ನು ಇರಿಸಿಕೊಂಡುದರಿಂದಲೆ, ಅವುಗಳನ್ನು ‘ಧಾರೆಗಳ್’ ಎಂಬ ಬಹುವಚನ ಪ್ರತ್ಯಯದಿಂದ ಹೊಳೆಯಿಸಿದ್ದಾನೆಂದು ಭಾವಿಸಬೇಕು. ಇರಲಿ; ಈ ರೂಪಕದ ಕೃತಾರ್ಥತೆಗಾಗಿಯೇ ಮುಂದೆ ಶ್ಲೇಷಾರ್ಥಕವಾದ ‘ಅಂತರ್ಮಲಮಂ’ ಎಂಬ ಕರ್ಮಕಾರಕವನ್ನುಪಯೋಗಿಸಿದ್ದಾನೆ. ಹಾಗೆ ರೂಪಿತವಾದ ‘ಜಲಧಾರೆಗಳ್’ ಎಂಬ ಕರ್ತೃ ಪದವು ‘ಅಂತರ್ಮಲಮಂ’ ಎಂಬ ಕರ್ಮಪದದೊಡನೆ ‘ಕರ್ಚಿದೊಡೆ’ ಎಂಬ ಕ್ರಿಯೆಯಲ್ಲಿ ಸೇರಬೇಕಾಯಿತು. ‘ತಮ್ಮ ದರ್ಶನದಿಂದ ನಾನು ಕೃತಾರ್ಥನಾದೆನು’ ಎಂಬ ನೇರಾದ ಅರ್ಥವು ಇಲ್ಲಿ ರೂಪಕ ಶ್ಲೇಷ ವಿಶಿಷ್ಟ ಕ್ರಿಯಾಪದಗಳ ಮೂಲಕ ಎಷ್ಟು ಕೊಂಕಾಗಿ ವಿಸ್ತೃತವಾಗಿದೆಯೆಂಬುದನ್ನು ಭಾವಿಸಬೇಕು.[1]

ಇನ್ನು ‘ಸುಕುಮಾರ ಬಂಧ’ ವಿವೃತಿಯನ್ನು ನೋಡೋಣ :

## ಸುಕುಮಾರ

ಸುಕುಮಾರತರಾಕ್ಷರ ಪದ
ನಿಕರ ವಿಶಿಷ್ಟ ಪ್ರಯೋಗಗತಮಪ್ಪುದದಾ
ಸುಕುಮಾರಮೆಂಬುದಕ್ಕುಂ —(ii, 68)

. . . . .

[1] ‘ಕಾವ್ಯಾದರ್ಶ’ಕಾರನು ಚಿತ್ರಿಸಿದ ಔತ್ತರೇಯ ಗುಣದ ದೃಷ್ಟಾಂತದಲ್ಲಿ ಹೊಳೆಯುವ ‘ಲೋಕಾತೀತ’ತೆಯನ್ನೂ ಇಲ್ಲಿ ಅವಧರಿಸಿಕೊಳ್ಳಬೇಕು—

ದೇವಧಿಷ್ಣ್ಯಮಿವಾರಾಧ್ಯಮದ್ಯಪ್ರಭೃತಿ ನೋ ಗೃಹಮ್
ಯುಷ್ಮತ್ಪಾದರಜಃಪಾತಧೌತನಿಃಶೇಷಕಿಲ್ಬಿಷಮ್
—ಕಾವ್ಯಾದರ್ಶ (i, 90)

—‘ನಿಮ್ಮ ಪಾದ ಧೂಳಿಗಳ ಪತನದಿಂದ ತೊಳೆಯಲ್ಪಟ್ಟ ನಿಶ್ಶೇಷ ಕಲ್ಮಷ (೧. ಕೆಸರು ೨. ಪಾಪ)ವುಳ್ಳ ನನ್ನ ಮನೆ ಇಂದು ಮೊದಲುಗೊಂಡು ದೇವಾಲಯದಂತೆ ಪೂಜ್ಯವಾಗಿದೆ’—ಇದು ಶ್ಲೋಕಾರ್ಥ. ಇಲ್ಲಿ ‘ಪಾದರಜ’ಸ್ಸೆಂಬುದೇ ಕಲ್ಮಷರೂಪವಾಗಿದೆ. ಅಂಥ ರಜಃಪತನದಿಂದ ಮನೆಯ ‘ಕಲ್ಮಷ’ವು ಹೆಚ್ಚಾಗಲೇಬೇಕಲ್ಲವೆ ? ಮಾತ್ರವಲ್ಲ; ನಮ್ಮ ಗ್ರಂಥಕಾರನು ‘ಅಂತರ್ಮಲಮಂ ಕರ್ಚ’ಲಿಕ್ಕೆ ತಕ್ಕ ನೀರನ್ನು ಹೇಗೋ ಹಾಗೆ ಕಲ್ಪಿಸಿಕೊಳ್ಳದೆ, ದಂಡ್ಯಾಚಾರ್ಯನು ಮನೆಯ ‘ನಿಶ್ಶೇಷ ಕಿಲ್ಬಿಷವನ್ನು’ ಕಲ್ಮಷ ರೂಪವೇ ಆದ ಆ ‘ಪಾದ ರಜ’ಸ್ಸಿನ ಪಾತದಿಂದ ತೊಳೆದಂತೆ ನಿರೂಪಿಸಿದ್ದಾನೆ. ಇದೊಂದು ವಿರೋಧಾಭಾಸದ ಛಾಯೆಯನ್ನೊಳಗೊಂಡುದರಿಂದ ಲೋಕಾತೀತತ್ವವನ್ನು ಪಸರಿಸಿದೆ. ಅಂತೂ ಉಭಯ ಪ್ರಕಾರದ ‘ಕಾಂತ’ಗಳೂ ಲೋಕಾನುಸಾರವಾಗಿ, ಲೋಕಾತೀತವೆನ್ನಿಸಿ, ಹೊಸತನದಿಂದ ಹೊಳೆವ ಅರ್ಥಗಳಿಂದ ಕೂಡಿದುದು ವ್ಯಕ್ತವಾಗುತ್ತಿದೆ.

'ನಿಷ್ಠುರತೆಯನ್ನುಳಿದ ಸುಕುಮಾರತರವಾದ ಅಕ್ಷರಗಳಿಂದ ಬೆರೆದ ಬಂಧಗುಣವನ್ನು' ಸುಕುಮಾರ ಇಲ್ಲವೆ 'ಸೌಕುಮಾರ್ಯ' ಎಂದು ದಾಕ್ಷಿಣಾತ್ಯರು ಹೆಸರಿಸುತ್ತಾರೆ. 'ಈ ಗುಣಕ್ಕೆ ಲಕ್ಷ್ಯವಾಗಿ ಈ ಕೆಳಗಣ ಪದ್ಯವು ಉದಾಹೃತವಾಗಿದೆ :

**ತೊಳಪೆಳವೆಱೆಯುಂ ಮೊರೆವಳಿ**
**ಕುಳಂಗಳುಂ ಮೆಲ್ಲನೆಸಪ ಮಳಯಾನಿಳನುಂ**
**ಮುಳಿಸಂ ಕಟಿಲ್ಚಿ ಕಳಿದುವು**
**ಕಳಿಕಾಂಕುರ ಚೂತತತಿಗಳುಂ ಕಾಮಿಗಳಾ** —(ii, 69)

ಈ ಪದ್ಯದಲ್ಲಿ 'ಳ' ಕಾರ ನಿಬಿಡಿತವಾದ ಸುಕುಮಾರಾಕ್ಷರಪತ್ರಾಯತೆ ಹೇಗೋ ಹಾಗೆ ವಾಕ್ಯರಚನೆಯ ಸ್ಥಿತಿಯೂ ವಿಶದವಾಗಿಯೇ ಇದೆ.[1] ಇನ್ನು ಔತ್ತರೇಯ 'ಸುಕುಮಾರ'ವನ್ನೀಕ್ಷಿಸಿರಿ.

..........................

......................................
ತ್ರಿದಶಾಧೀಶ್ವರ ಭೃತ್ಯ
ತ್ಯಾಗಾರವಿವಿಧಾರ್ಥವಿಭವನೀ ಭೂಪೇಂದ್ರಂ —(ii, 70)

ಇಲ್ಲಿ ತ್ರಿ—ಶಾ—ಶ್ವ—ರ—ತ್ಯ—ತ್ಯಾ—ರ್ಥ—ಎಂಬ ನಿಷ್ಠುರಾಕ್ಷರಗಳನ್ನೂ ದೀರ್ಘಸಮಾಸದಿಂದಲೂ ಕ್ರಿಯಾಪದರಾಹಿತ್ಯದಿಂದಲೂ ಒದಗಿದ ವಕ್ರತೆಗಳನ್ನೂ ಗಮನಿಸಬೇಕು.

ಇನ್ನೀಗ 'ಸಮಾಹಿತ' ಗುಣ ವಿವೇಚನೆ—

## ಸಮಾಹಿತ

ಒಂದಱ ಮಾತುಗಳಂ ಪೆಱ
ತೊಂದಱೊಳಱೆದಿಟ್ಟು ಕೂಡೆ ಪೇೞ್ದೊಡದಕ್ಕುಂ
ಸುಂದರತರಂ ಸಮಾಹಿತ
ಮೆಂದುಂ.......................... —(ii, 71)

—'ಒಂದು ಪದಾರ್ಥದ ಧರ್ಮವಾಚಕವಾದ ಮಾತುಗಳನ್ನು ಬೇರೊಂದರಲ್ಲಿ ಕೂಡುವಂತಿರಿಸಿ ಹೇಳಿದರೆ, ಅದು ಸುಂದರವಾದ 'ಸಮಾಹಿತ'ವೆನ್ನಿಸುವುದು' (ಇದನ್ನೇ ಕೆಲವರು 'ಸಮಾಧಿ' ಎಂದೂ ಹೇಳುತ್ತಾರೆ). ಇದರ ಲಕ್ಷ್ಯವು ಈ ತೆರನಾಗುವುದು :

ವಿನಿಮೀಳಿತಕುಮುದವನಂ
ಜನಿತೋನ್ಮೀಲಾರವಿಂದವನಲಕ್ಷ್ಮೀಶಂ
ದಿನಕರನುದಯಂಗೆಯ್ದಂ
ವಿನಿಹತತಿಮಿರಂ ವಿಶಿಷ್ಟ ಸಂಧ್ಯಾಶ್ಲೇಷಂ —(ii, 72)

---

[1] ಉತ್ತರ ಮಾರ್ಗದ ಮಧುರ ಬಂಧದಲ್ಲಿ 'ಳ'ಕಾರವೇನೋ ಸಾಮಾನ್ಯವಾಗಿ ಹೀಗೆಯೇ ಇದೆ. ಆದರೆ ಅಲ್ಲಿ ಸ್ಪುಟಾಕ್ಷರಗಳು, ಎಂದರೆ ವರ್ಗೀಯ ಚತುರ್ಥಗಳು, ಕೂಟಾಕ್ಷರಗಳಾಗಿ ಬೆರೆದುಕೊಂಡಿರುವುದರಿಂದ ಅದು ಇದಕ್ಕಿಂತ ಭಿನ್ನವಾಗಿದೆಯೆಂಬುದನ್ನು ಗಮನಿಸಬೇಕು.

ಪದ್ಯವಿದು ಸೂರ್ಯೋದಯವನ್ನು ವರ್ಣಿಸುವ ಪದಪದ್ಧತಿಗಳಿಂದ ಕೂಡಿದೆ. ಸೂರ್ಯೋದಯ ಸಂದರ್ಭದಲ್ಲಿ ಕುಮುದಗಳು ಮುಚ್ಚಿಹೋಗುವುದೂ ಕಮಲಗಳು ಅರಳುವುದೂ ಕತ್ತಲೆ ಚೆದರುವುದೂ ಸ್ವಾಭಾವಿಕವಷ್ಟೆ. ಪ್ರಕೃತ ವರ್ಣನೆಯಲ್ಲಿ ತೋರುವ 'ವಿನಿಮೀಲನ', 'ಉನ್ಮೀಲನ', 'ವಿನಿಹತತಪ', 'ಆಶ್ಲೇಷಯುಕ್ತತೆ'—ಇವುಗಳೊಳಗೆ ಮೊದಲಿನ ಎರಡು ಲೋಚನಧರ್ಮಗಳು, ಮತ್ತಿನದು ಪರಾಜಿತನಾದ ವೀರನೊಬ್ಬನ ಅವಸ್ಥೆ, ಕೊನೆಯದು ಜಯಶಾಲಿಯಾಗಿ ನಗರ ಪ್ರವೇಶವೆಸಗಿದ ಪ್ರತಾಪಿಯೊಬ್ಬನ ಸ್ವಭಾವಾಂಶ ವರ್ಣನೆ. ಇಲ್ಲಿ ಪ್ರಕೃತವಾಗಿರುವ 'ಒಂದಜ ಮಾತುಗಳ್' ಎಂದರೆ ಉದಯಿಸುತ್ತಿರುವ ಸೂರ್ಯನ ಸಂಬಂಧವಾದ ಮಾತುಗಳು. ಕನ್ನೈದಿಲೆಗಳು ಮುಚ್ಚುತ್ತಿರಲು, ಚೆಂದಾವರೆಗಳು ಅರಳುತ್ತಿರಲು, ಅಂಧಕಾರವೆಲ್ಲ ಚೆದರುತ್ತಿರಲು, ಸೂರ್ಯೋದಯವಾಯಿತು—ಎಂಬುದಿಷ್ಟೇ ಈ ಪದ್ಯದ ಹುರುಳು. ಈ ಹುರುಳನ್ನೇ ಒಂದಿಷ್ಟು ಪಾಕಗೊಳಿಸಿ, ಜಯಶಾಲಿಯಾಗಿ ಉದಿತೋದಿತನಾಗುವ ಪ್ರತಾಪಶೀಲನಾಯಕನೊಡನೆ ಶಬ್ದತಃ ಸರಿಯಾಗಿ ಹೋಲಿಸಿಕೊಂಡಲ್ಲಿ, ಅವನನ್ನು ಮನಸ್ಸಿನಲ್ಲಿರಿಸಿಕೊಂಡು ಅವನ ಸ್ವಭಾವಕ್ಕನುಸಾರವಾಗಿ, ಉದಯಾರೂಢನಾಗುವ 'ದಿನಕರ'ನನ್ನು ಬಣ್ಣಿಸಬೇಕೆಂದು ಕವಿಯ ಅಭಿಪ್ರಾಯ. 'ವಿನಿಮೀಲನ', 'ಉನ್ಮೀಲನ' ಎಂಬ ಎರಡೂ ಪದಗಳು, 'ಕಣ್ಣಿನ ಮುಚ್ಚುವಿಕೆ, ಕಣ್ಣಿನ ತೆರೆಯುವಿಕೆ'–ಎಂದು ವಿಶಿಷ್ಟವಾಗಿ ಕಣ್ಣಿನ ಆಯಾ ಕ್ರಿಯಾರ್ಥಗಳನ್ನೇ ನಿರೂಪಿಸುವ ಪದಗಳು. ಉಭಯ ಮಾರ್ಗೀಯರೂ ಒಪ್ಪುವ ಅರ್ಥಗುಣವಿದು.

ಮುಂದಿನ ಪದ್ಯದಲ್ಲಿ ಇದು 'ಸಮಾಹಿತಾಲಂಕಾರ' ಎಂದು ನಿರೂಪಿತವಾಗಿದೆ:

ವಿನಿಮೀಳಾದಿಗಳಿವು ಲೋ
ಚನಾದಿ ಧರ್ಮಂಗಳಿವನೆ ಕುಮುದಾದಿಗಳೊಳ್
ನೆನೆದಿಂತು ಪೇೞ್ದೊಡಕ್ಕುಂ
ವಿನಿಶ್ಚಿತಕ್ರಮ ಸಮಾಹಿತಾಲಂಕಾರಂ —(ii, 73)

—'ವಿನಿಮೀಲಾದಿ ಲೋಚನ ಧರ್ಮವಾಚಕ' ಪದಗಳನ್ನು 'ಪೆಱತೊಂದಾ'ದ ಕುಮುದಾದಿಗಳಲ್ಲಿರಿಸಿ ಹೇಳಿದುದರಿಂದ ಇದು 'ಸಮಾಹಿತಾಲಂಕಾರ.' ಇಲ್ಲಿ 'ಸಮಾಹಿತಾಖ್ಯಾನಗುಣಂ' ಎನ್ನದೆ 'ಸಮಾಹಿತಾಲಂಕಾರಂ' ಎಂದ ರಚನಾಕ್ರಮವನ್ನೀಕ್ಷಿಸಿರಿ.

ಮುಂದಿನ ಅಲಂಕಾರ ಪ್ರಕರಣದೊಳಗೆ 'ಸಮಾಹಿತ' ಎಂಬ ಅಲಂಕಾರವಿದೆ. ಅದಕ್ಕೂ ಈ 'ಸಮಾಹಿತಾಲಂಕಾರ' (ಗುಣ)ಕ್ಕೂ ಒಂದಿಷ್ಟು ಭೇದವು ತೋರುತ್ತಿದೆ. ಒಂದು ಕೆಲಸವನ್ನುದ್ದೇಶಿಸಿ ಪ್ರಯತ್ನಿಸಲಾರಂಭಿಸುವವನಿಗೆ ದೈವವಶಾತ್ ಸಾಧನಸಂಪತ್ತಿ ತಾನಾಗಿ ಒದಗುವಂತೆ ವರ್ಣಿಸುವುದು ಆ 'ಸಮಾಹಿತಾಲಂಕಾರ'ವಾದರೆ, ಇದು 'ಒಂದರ ಧರ್ಮವನ್ನು ಇನ್ನೊಂದರಲ್ಲಿ ಆರೋಪಿಸಿ ಬಣ್ಣಿಸುವುದು. ಆದರೆ, (೧) 'ಸಮ್ಯಕ್ ಆಧೀಯತೇ ಇತಿ ಸಮಾಧಿಃ'; (೨) 'ಸಮ್ಯಕ್ ಆಹಿತಂ' ಅಥವಾ 'ಸಮ್ಯಕ್ ಆಧಾನಂ ಕೃತಂ ಇತಿ ಸಮಾಹಿತಂ' ಎಂಬ ವ್ಯುತ್ಪತ್ತಿಗಳಿಗನುವಾಗಿ ಎರಡೂ ಪದಗಳಿಗೂ 'ಸರಿಯಾಗಿ ಆಧಾನಗೊಳಿಸಲ್ಪಟ್ಟುದು' 'ಅಥವಾ ಬಲವಾದೊಂದು ಆಧಾರದ ಮೇಲೆ ಇನ್ನೊಂದನ್ನು

ಇರಿಸುವುದು' ಎಂಬುದೇ ಅರ್ಥ. ವ್ಯಾಪಕನಾಗಿ ಸರ್ವಾಧಾರನಾದ ಪರಮಾತ್ಮ ತತ್ತ್ವ ದಲ್ಲಿ ವ್ಯಾಪ್ಯವಾದ ಜೀವಾತ್ಮನನ್ನು ಆಧಾನಗೊಳಿಸುವ ಯೋಗಿಧರ್ಮವನ್ನು 'ಸಮಾಧಿ' ಎಂದು ಕರೆಯುವುದು ಮೇಲೆ ಸೂಚಿಸಿದ ಅರ್ಥಕ್ಕನುಗುಣವಾಗಿಯೇ. 'ಸಮಾಹಿತ' ಪದವು ಹಾಗೆ ರೂಢನಾಗದಿದ್ದರೂ, ಅನ್ವರ್ಥವಾಗಿದೆ ಎಂಬಲ್ಲಿ ಸಂದೇಹವಿಲ್ಲ. ಈ ಗುಣವನ್ನು ದಂಡಿಯೇ ಮೊದಲಾದವರು 'ಸಮಾಧಿ' ಎಂದರೂ ನಮ್ಮ ಗ್ರಂಥಕಾರನು 'ಸಮಾಹಿತ' ಎಂದೇ ನಿರೂಪಿಸಿದ್ದಾನೆ. ಈ 'ಸಮಾಧಿ' ಅಥವಾ 'ಸಮಾಹಿತ' ಗುಣದಲ್ಲಿ ಮುಂದಿನ 'ಗುಣಾಭೇದ ರೂಪಕ'ದ ಅಲ್ಲದೆ 'ಸಮಾಸೋಕ್ತಿ' ಮೊದಲಾದ ಅಲಂಕೃತಿಗಳ ಬೀಜವು ತೋರುತ್ತಿದೆ ಎಂದು ನಮ್ಮೆಣಿಕೆ. ಮೇಲಿನ ಪದ್ಯದಲ್ಲಿ ತೋರುವ 'ವಿನಿಮೀಲಿತ' ಪದಕ್ಕೆ 'ಕಣ್ಮುಚ್ಚಿದ' ಎಂಬ ಲೋಚನಕ್ರಿಯೆ ವಾಚ್ಯಾರ್ಥವಾಗಿದ್ದರೂ ಸಂದರ್ಭಾನು ಸಾರವಾಗಿ ಕುಮುದಧರ್ಮವಾದ 'ಬಾಡಿದ' ಎಂಬರ್ಥವು ಲಾಕ್ಷಣಿಕವಾಗಿ ಬಂದಿದೆ. ಹೀಗೆ ಒಂದರ ಧರ್ಮವನ್ನು ಇನ್ನೊಂದಕ್ಕೊದಗಿಸುವುದನ್ನು 'ಸ್ವಭಾವೋಕ್ತಿ' ಎನ್ನುವುದ ಕ್ಕಿಂತಲೂ ಒಂದು ತರದ 'ವಕ್ರೋಕ್ತಿ' ಎನ್ನಬೇಕಾಗುವುದು. ಆದರಿಂದ, ದಾಕ್ಷಿಣಾತ್ಯರ 'ಸಮಾಹಿತ' ಗುಣದ ಅರ್ಥದಲ್ಲಿ ವಕ್ರತೆ ಇದೆ ಎನ್ನಬೇಕಲ್ಲವೆ? ಇದಕ್ಕೆ ವಿಪರ್ಯಯ ವಾಗಿ ಔತ್ತರೇಯರು 'ಸಮಾಹಿತ' ಗುಣಾರ್ಥವನ್ನು ವಾಚ್ಯಾರ್ಥಯುತ ಪದಗಳಿಂದಲೇ ಸೂಚಿಸುತ್ತಾರೆ:

ವಿನಿಹತ ಸಮಸ್ತ ರಿಪುಕುಳ
ನನಿಮಿಷಲೋಚನದೆ ನೋಡಿ ನೀಡುಂ ಪ್ರಿಯೆಯಂ
ವಿನಿಮೀಲಿತಲೋಚನೆಯಂ
ಜನಪತಿ ನಿಜಬಾಹುಯುಗದಿನಾಶ್ಲೇಷಿಸಿದಂ —(ii, 74)

ಇಲ್ಲಿ 'ವಿನಿಹತ', 'ಅನಿಮಿಷ' (ಉನ್ಮೀಲ), 'ವಿನಿಮೀಲಿತ', 'ಆಶ್ಲೇಷ' ಪದಗಳು ಆಯಾ ವಾಚ್ಯಾರ್ಥಗಳಲ್ಲೇ ಪ್ರಯುಕ್ತವಾಗಿರುವುದನ್ನು ಕಾಣಬಹುದು. ಹಿಂದಿನ ಪದ್ಯವು ಸಾಂಗ ವಾದ ಉಪಮಾನವನ್ನು ನಿರೂಪಿಸುತ್ತದೆ. ಅದರಿಂದ ಅದರೊಳಗೆ ಅಲಂಕಾರವಾಗಿ 'ಸಮಾಸೋಕ್ತಿ' ನೆಲೆಗೊಂಡಿದೆ; ಅದೊಬ್ಬ ವೀರನಾಯಕನ ಧ್ವನಿ ಇದೆ. ಈ ಪದ್ಯವು ಸಾಂಗವಾದ ಉಪಮೇಯವನ್ನು ಬಣ್ಣಿಸಿದೆ. ಅದೊಬ್ಬ ವೀರ 'ಜನಪತಿ'ಯನ್ನು ಸ್ಪಷ್ಟವಾಗಿ ಸೂಚಿಸಿದೆ. ಈ ಪದ್ಯವು ಹಿಂದಿನ ಪದ್ಯಗುಣಕ್ಕೆ 'ವಿಪರ್ಯಯ'ವಾದರೂ ಇಲ್ಲಿ 'ವಕ್ರೋಕ್ತಿ'ಯಿಲ್ಲ. ಆದರಿಂದ ದಾಕ್ಷಿಣಾತ್ಯ ಔತ್ತರೇಯ ಮಾರ್ಗಗಳೆಂದರೆ ಅನ್ಯೋನ್ಯ ವಿಪರ್ಯಯ ವೃತ್ತಿಗಳೆನ್ನಬಹುದೆಂಬುದೇನೊ ನಿಜ; ಆದರೆ, ದಾಕ್ಷಿಣಾತ್ಯರ ಮಾರ್ಗದಲ್ಲಿ ಎಲ್ಲೆಲ್ಲಿಯೂ 'ಸ್ವಭಾವಾಖ್ಯಾನ'ವೂ ಔತ್ತರೇಯರಲ್ಲಿ ಎತ್ತೆತ್ತಲೂ 'ವಕ್ರೋಕ್ತಿ'ಯೂ ನಿೂಸಲಾದವುಗಳು ಎಂದು ಹೇಳಲಾಗುವುದಿಲ್ಲ.

ಮುಂದಿನ ಪದ್ಯ ಭಾಗವು 'ಪ್ರಸನ್ನ' ಗುಣವನ್ನು ಲಕ್ಷಿಸುವುದು—

**ಪ್ರಸನ್ನ**

ಲೋಕಪ್ರತೀತಸುಭಗವಿವೇಕಾಲಾಪಂ ಪ್ರಸನ್ನಂ.... —(ii, 75)

ಎಂದು ಗ್ರಂಥಕಾರನು ಕೊಡುವ 'ಪ್ರಸನ್ನ' ಗುಣ ಲಕ್ಷಣವು 'ಪ್ರಸಾದವತ್ ಪ್ರಸಿದ್ಧಾರ್ಥಂ' ('ಕಾವ್ಯಾದರ್ಶ' i, 45) ಎಂಬ ದಂಡಿಯುದರೊಡನೆ ಸಾಲ್ಗೊಳ್ಳುತ್ತಿದೆ. ಸಾಮಾನ್ಯ ವಾಚಕ ವರ್ಗಕ್ಕೆ ಸ್ಫುಟವಾಗಿ ತಾತ್ಪರ್ಯವಾಗುವಂತಿರುವ ಪದಗಳಿಂದ ಕೂಡಿದ ವಿರ್ವೇಕಾ ಲಾಪವೇ 'ಪ್ರಸನ್ನ' ಎಂದು 'ಕವಿರಾಜಮಾರ್ಗ'ಕಾರನು ಹೇಳುವ ಲಕ್ಷಣವು ವ್ಯಕ್ತಾರ್ಥ ವಾಗಿಯೇ ಇದೆ. ಈ 'ಪ್ರಸನ್ನ' ಗುಣದಲ್ಲಿ ಭೇದಗಳಿವೆ. ಸ್ಥಿತಾದ ಪದಯುಕ್ತ ವಾಕ್ಯದಿಂದ ಅರುಹಿದುದು ದಾಕ್ಷಿಣಾತ್ಯರ ಪ್ರಸಾದವೆಂದೂ ಕೊಂಕಾದ ವಾಕ್ಯದಿಂದ ನಿರೂಪಿಸಿದುದು ಪೌತ್ತ್ರೇಯರ ಪ್ರಸಾದವೆಂದೂ ಭಾವಿಸಬೇಕು. ಇದರ ದೃಷ್ಟಾಂತವನ್ನೀಕ್ಷಿಸುವ :

ಶರದಮಲಾಂಬರದೊಳ್ ಹಿಮ
ಕರನೆಸೆದತ್ತು.................... —(ii, 76-ಪೂರ್ವಾರ್ಧ)

ದಂಡ್ಯಾಚಾರ್ಯನು 'ಇಂದೋರಿಂದೀವರದ್ಯುತಿ ಲಕ್ಷ್ಮ ಲಕ್ಷ್ಮೀಂ ತನೋತಿ' (ಕನ್ನೈದಿಲೆ ಯಂತೆ ಹೊಳೆವ ಚಂದ್ರನ ಕಳಂಕವು ಅದೊಂದು ಕಾಂತಿಯನ್ನುಂಟುಮಾಡುತ್ತಿದೆ— 'ಕಾವ್ಯಾದರ್ಶ' i, 45) ಎಂಬುದನ್ನು 'ಪ್ರಸಾದ' ಗುಣಕ್ಕೆ ದೃಷ್ಟಾಂತವನ್ನಾಗಿ ಕೊಟ್ಟಿ ದ್ದಾನೆ. ಆ ತಿಂಗಳ ವಟ್ಟನಿಂದ ಅಲ್ಲಿಂದಿಲ್ಲಿಯ ವರೆಗೆ ವ್ಯಾಪಕವಾಗಿ ಪಸರಿಸಿದ, ಅತಿ ಸ್ವಚ್ಛವಾಗಿ ತಳತಳಿಸುವ, ತಿಂಗಳ ಬೆಳಕು ; ಆ ಬೆಳಗಿನೊಸರಿನ ಉಕ್ಕಂದವಾದ ಬಟ್ಟಲ ನಡುವೆ ಕನ್ನೈದಿಲೆಯಂತೆ ಕನಕನಿಸುವ ಕಪ್ಪಾದ ಕರೆ; ಹಾಗೆ (ತಿಳಿನೀರಿನಿಂದ ತುಂಬಿದ ಪಳಿಕಿನ ಬಟ್ಟಲಿನ ಅಡಿಯಲ್ಲಿ ನೆಲೆಗೊಂಡ ಕರ್ಮಣಿಯಂತಿರುವ) ಆ ಕರೆಯೂ ಚಂದ್ರನಿಗೆ ಒಂದು ಪ್ರಸನ್ನವಾದ ಸೌಂದರ್ಯವನ್ನೊದಗಿಸುವುದಲ್ಲವೆ ? ಹೌದು. ಇಲ್ಲಿ ಅರ್ಥ ಪ್ರಸಾದದೊಡನೆ ಶಬ್ದ ಪ್ರಸಾದವೂ ಇದೆ. ದಂಡಿ ಹಾಗೆ 'ಲಕ್ಷ್ಮ'ದಿಂದಲೂ 'ಲಕ್ಷ್ಮಿ'ಯನ್ನು (ಪ್ರಸಾದವನ್ನು) ಒದಗಿಸಿದರೆ, ನಮ್ಮ ಗ್ರಂಥಕಾರನು ಆ ಲಕ್ಷ್ಮವನ್ನುಳಿದು ಹಿಮಕರದಿಂದ ಲಕ್ಷ್ಮಿಯನ್ನುಂಟುಮಾಡಿದುದನ್ನೀಕ್ಷಿಸಿರಿ—"ಶರತ್ಕಾಲವಾದುದರಿಂದ ಮುಗಿಲೊಡ್ಡೆಲ್ಲವೂ ಮಾಸಿಹೋದ ಅಂಬರವು ಅತಿ ಸ್ವಚ್ಛವಾಗಿದೆ. ಅಂಥ ಅಚ್ಛ ನೀಲಾಕಾಶದಲ್ಲಿ 'ಹಿಮಕರ ನೆಸೆದತ್ತು'" ಎನ್ನುತ್ತಾನೆ. ದೇವತಾರೋಪದಿಂದ ಚಂದ್ರನನ್ನು ಪುಲ್ಲಿಂಗದಲ್ಲಿ ಪ್ರಯೋಗಿಸು ವುದು ಕನ್ನಡ ಕಾವ್ಯದೊಳಗೆ ರೂಢವಾಗಿದ್ದರೂ ಇಲ್ಲಿ 'ಎಸೆದತ್ತು' ಎಂದು ನಪುಂಸಕತ್ವವೇ ತೋರುತ್ತಿದೆ. ಆದರೆ, ಹಿಂದಿನ 'ಹಿಮಕರಂ' ಎಂಬುದಕ್ಕೆ ಬಹುವ್ರೀಹಿ ಸಮಾಸದ 'ಚಂದ್ರ'ನೆಂಬ ಅರ್ಥವು ಗ್ರಂಥಕಾರನೆಣಿಕೆಯಾಗಿದ್ದಿರಲಾರದು—ಮಧ್ಯಮಪದ ಲುಪ್ತ ಕರ್ಮಧಾರಯದ 'ಹಿಮಾತ್ಮಕ ಕರ (ಕಿರಣ)' ಎಂಬ ಅರ್ಥವೇ ಆಗಿದ್ದಿರಬೇಕು. ಹಾಗಿದ್ದರೆ 'ಎಸೆದತ್ತು' ಎಂಬ ಕ್ರಿಯಾಪದಾನ್ವಯಕ್ಕೆ ತೊಡಕಾಗದು ಎನ್ನಲಡ್ಡಿಯಿಲ್ಲ. ದಂಡಿಯ ದೃಷ್ಟಾಂತಾರ್ಥವನ್ನು ಭಾವಿಸಿದರೆ, ಅಲ್ಲಿ ಪ್ರಸಾದರೂಪ ಗುಣವಿದೆಯೆಂಬುದು ಸ್ಫುಟ ವಾಗುತ್ತಿದೆ. 'ಶರದಮಲಾಂಬರದೊಳ್ ಹಿಮಕರನೆಸೆದತ್ತು' ಎಂಬಲ್ಲಿ ಶಬ್ದ ಪ್ರಸಾದ ವಿರುವುದೇನೋ ನಿಜ ; ಆದರೆ ಅರ್ಥ ಪ್ರಸಾದವೂ ಇರಬೇಕಲ್ಲವೆ ? ಆ ಅರ್ಥ ಪ್ರಸಾದವು 'ಹಿಮಕರನೆಸೆದತ್ತು' ಎಂಬ ಕ್ರಿಯಾಪದದ ನಪುಂಸಕತ್ವದಿಂದಲೇ ಹೊಳೆಯುತ್ತಿದೆ. 'ಶರದಮಲಾಂಬರದೊಳ್ ಹಿಮಕರನೆಸೆದಂ' ಎಂದಿರುತ್ತಿದ್ದರೆ, ಬರಿಯ ವಾಚ್ಯಾರ್ಥ

ಮಾತ್ರವೇ ಹೊಳೆಯುವುದರಿಂದ ಅರ್ಥಪ್ರಸಾದವೇನೂ ದೊರಕುತ್ತಿದ್ದಿಲ್ಲ. 'ಎಸೆದತ್ತು' ಎಂಬ ಕ್ರಿಯಾನಪ್ಪಿನ ಬಲದಿಂದ ಆ 'ಹಿಮಕರನ್' ಎಂಬ ಚಂದ್ರರೂಪಾರ್ಥವು ಆದೊಂದು ಅನರ್ಘ್ಯ ರತ್ನಸ್ವರೂಪಕ್ಕೆ ಮಾರ್ಪಟ್ಟಿದೆ. 'ಶರದಮಲಾಂಬರದೊಳ್' ಎಂಬ ಅಧಿಕರಣ ಕಾರಕದಲ್ಲಿರುವ 'ಅಂಬರ' ಪದಕ್ಕೆ ಶ್ಲೇಷಬಲದಿಂದ 'ನಿರ್ಮಲವಾದ ಮೇಲ್ಕಾಪಿನ (ವಿತಾನದ) ಬಟ್ಟೆ' ಎಂಬ ಅರ್ಥವೂ ಇದೆ. ಆದರಿಂದ ಆ 'ಶರದಮಲಾಂಬರ'ದಲ್ಲಿ ಎಸೆವ ಹಿಮಕರನೆಂದರೆ 'ಪ್ರಪಂಚ ಮಂಡಪದ ವಿತಾನವೆನ್ನಿಸಿದ ಆಕಾಶದಲ್ಲಿ ದೀಪ್ತಿಗೊಂಡ ಆದೊಂದು ತಂಪಾದ ರತ್ನದೀವಿಗೆ' ಎಂಬೆಣಿಕೆ ಕವಿಯಾಶಯವಾಗಿದ್ದಿರಬೇಕು. ಅದೇ ಆ ಅರ್ಥಪ್ರಸಾದ. ಆ ಭಾವವನ್ನೇ ಕವಿ 'ಎಸೆದತ್ತು' ಎಂಬ ಕ್ರಿಯಾನಪ್ಪಿನಿಂದ ಪ್ರಕಾಶಗೊಳಿಸಿದ್ದಾನೆ. ಅಲ್ಲವಾದರೆ, ಲಿಂಗಭೇದವೆಂಬ ದೋಷವೂ ಇಲ್ಲಿ ನುಸುಳುತ್ತಿತ್ತಲ್ಲವೆ ?

ಇವನ್ನು ಔತ್ತರೇಯರು ಹೇಗೆ ವ್ಯಕ್ತಪಡಿಸುತ್ತಿದ್ದರೆಂಬುದನ್ನೀಕ್ಷಿಸಿರಿ :

> ಕರಮೊಪ್ಪಿತ್ತುಷ್ಣೇತರ
> ಕಿರಣಂ ವರ್ಷಾಂತಸಮಯಜಳಧರಪಥದೊಳ್
>
> —(ii, 76-ಉತ್ತರಾರ್ಧ)

ತಾತ್ಪರ್ಯಾರ್ಥವೇನೋ ಅಲ್ಲಿಯೂ ಇಲ್ಲಿಯೂ ಒಂದೇ. ಆದರೆ ಆ ತಾತ್ಪರ್ಯವು ಅದೇ ರೀತಿಯಲ್ಲಿ ಈ ಪದರಚನೆಯ ಮೂಲಕವಾಗಿ ಹೊಮ್ಮುವುದೆ ? ಸ್ವಭಾವೋಕ್ತಿ ವಕ್ರೋಕ್ತಿಗಳೆಂಬ ಶಬ್ದಸ್ವಭಾವಗಳು ಇವೆರಡರಲ್ಲಿ ಹೇಗೆ ಹೊಳೆದು ತೋರುತ್ತಿವೆ ಎಂಬುದನ್ನೀಕ್ಷಿಸಿರಿ—

| ದಾಕ್ಷಿಣಾತ್ಯ ಪ್ರಸನ್ನ | ಔತ್ತರೇಯ ಪ್ರಸನ್ನ |
|---|---|
| ೧. ಶರದಮಲಾಂಬರದೊಳ್ (ಅಧಿಕರಣ ಕಾರಕ) | ೧. ಕರಮೊಪ್ಪಿತ್ತು (ಕ್ರಿಯಾಪದ) |
| ೨. ಹಿಮಕರನ್ (ಕರ್ತೃ) | ೨. ಉಷ್ಣೇತರ ಕಿರಣಂ (ಕರ್ತೃ) |
| ೩. ಎಸೆದತ್ತು (ಕ್ರಿಯಾಪದ) | ೩. ವರ್ಷಾಂತಸಮಯ ಜಳಧರಪಥದೊಳ್ (ಅಧಿಕರಣ ಕಾರಕ) |

ಪದವಿರಚನಾಸ್ಥಾನ ಕ್ರಮದ ಸ್ವಾಭಾವಿಕತ್ವವೂ ವಕ್ರತೆಯೂ ಇಲ್ಲಿ ಸ್ಫುಟವಾಗಿವೆ. ಹಿಂದೆ ವಿವರಿಸಿದಂತೆ, 'ದಾಕ್ಷಿಣಾತ್ಯಮಾರ್ಗದ' ಪ್ರಸನ್ನದೊಳಗೆ, 'ಹಿಮಕರ'ನೆಂದರೆ, ವಿತಾನದಲ್ಲಿ ತೂಗುಹಾಕಿದ ಆದೊಂದು ತಣ್ಜೊಡರು ಎಂಬ ಭಾವವು ಆ ಪದರಚನಾಶಕ್ತಿಯಲ್ಲೇ ಪ್ರಸಾದವಾಗಿ ಸೂಸಿದರೆ, ಇಲ್ಲಿ ಅಂಥ ಅರ್ಥಕ್ಕೆ ಆಸ್ಪದವಿಲ್ಲ. 'ಶರದಮಲಾಂಬರದೊಳ್' ಎಂಬಲ್ಲಿ ಅಧಿಕರಣವನ್ನು ಒಂದೇ ಒಂದು ಬೆಳ್ಮುಗಿಲ ಮುರಿಯೂ ಮಾಸಿಸಲಿಲ್ಲ ಎಂಬುದು ಸ್ಫುಟವಾದರೆ, ಇಲ್ಲಿ 'ವರ್ಷಾಂತ ಸಮಯ ಜಳಧರ ಪಥ'ವು 'ಬೆಳ್ಮುಗಿಲುಗಳಿಂದ ಬೆರಸಿದ ಬಾಂದಳ' ಎಂಬ ಅರ್ಥವನ್ನು ಮಾತ್ರ ಸೂಚಿಸುತ್ತಿದೆ. 'ಜಳಧರಪಥ'ದಿಂದ 'ವಿತಾನ'ವೆಂಬ ಅರ್ಥವು ಭಾಸವಾಗಲಾರದಷ್ಟೆ. 'ಉಷ್ಣೇತರ ಕಿರಣಂ' ಎಂಬ ಕರ್ತೃಪದವೂ 'ತಣ್ಜೊಡರು' ಎಂಬ ಭಾವವನ್ನೊಪ್ಪಿಸಲು ಅಸಮರ್ಥವಾಗಿದೆ. ಹೀಗಾಗಿ, ಔತ್ತರೇಯರ ಈ

'ಪ್ರಸನ್ನ'ದಿಂದ ಉದ್ದಿಷ್ಟಾರ್ಥವು 'ಲೋಕ ಪ್ರತೀತಿ'ಗೊಳ್ಳುತ್ತಿದೆಯಾದರೂ ದಾಕ್ಷಿಣಾತ್ಯರ ಪರಂತೆ 'ಲೋಕ ಪ್ರತೀತಿ'ಯಿಂದ 'ಸುಭಗ'ವೆನ್ನಿಸಲಾರದು.

## ಉದಾರ

ಮಿಗೆ ವಸ್ತುಗತಸ್ಥಿತಿಯಂ
ಬಗೆದಗ್ಗಳವಾಗೆ ಪೇಳ್ದೊಡಕ್ಕುಮುದಾರಂ
ಬಗೆವೊಡೆ ಕಾವ್ಯದ ಪದವಿಯ
ನೆಗಱ್ತೆಗದು ಮೂಲಮದಱ ಪಾಂಗಿಂತಕ್ಕುಂ —(ii, 77)

—'ಪ್ರಕೃತ ವಸ್ತುವಿನ ನಿಜಸ್ವಭಾವವನ್ನು ಸರಿಯಾಗಿ ಭಾವಿಸಿಕೊಂಡು ಅದನ್ನು ಅಗ್ಗಳ(ಅತಿಶಯ)ವಾಗಿ ವರ್ಣಿಸಿದರೆ 'ಉದಾರ'ವೆನ್ನಿಸುವುದು. ಕಾವ್ಯ ಪದವಿಯ ಮಹಿಮೆಗೆ ಈ ಗುಣವು ಅತ್ಯವಶ್ಯವೆನ್ನಿಸಿದೆ.'

ಉತ್ಕರ್ಷವಾನ್ ಗುಣಃ ಕಶ್ಚಿದುಕ್ತೇ ಯಸ್ಮಿನ್ ಪ್ರತೀಯತೇ
ತದುದಾರಾಹ್ವಯಂ ತೇನ ಸನಾಥಾ ಕಾವ್ಯಪದ್ಧತಿಃ—('ಕಾವ್ಯಾದರ್ಶ'–i, 76)

ಎಂದು ದಂಡಿಯು ಗುಣವಿದನ್ನು ಲಕ್ಷಿಸಿದ್ದಾನೆ. ಲಕ್ಷಣಗಳೆರಡೂ ಏಕತಾನದಲ್ಲಿವೆಯಾದರೂ ನಮ್ಮ ಗ್ರಂಥಕಾರನದು ಒಂದಿಷ್ಟು ಸ್ಫುಟತರವಾಗಿದೆ. "ಯಾವುದರಿಂದ ಉತ್ಕೃಷ್ಟವಾದ ಗುಣವೊಂದು ಪ್ರತೀತವಾಗುವುದೋ ಅದು 'ಉದಾರ'—ಎಂದು ದಂಡಿಯು ಕೊಟ್ಟ ಲಕ್ಷಣವು ಸಾಮಾನ್ಯವಾದುದರಿಂದ ಸ್ಫುಟಾರ್ಥವಾಗುವುದಕ್ಕೆ ಟಿಪ್ಪಣಿಯ ಆವಶ್ಯಕತೆಯುಂಟು. 'ವಸ್ತುಗತ ಸ್ಥಿತಿಯನ್ನು ಬಗೆದು ಅದನ್ನು ಅಗ್ಗಳವಾಗಿ ಹೇಳುವುದೇ ಉದಾರವು' ಎಂಬ ಮಾತಿದು ದಂಡಿಯುದನ್ನು ಟಿಪ್ಪಣಿಸಿದಂತಿದೆ. 'ಉದಾರ'ವೆಂದರೆ ಗತ್ಯರ್ಥಕವಾದ 'ಅರ'ಧಾತುವಿನಿಂದುದಿಸಿ 'ಉತ್' ಎಂಬ ಉಪಸರ್ಗ ಸಹಿತವಾದ ಪದ. ಇದಕ್ಕೆ ಉದ್ದಿಷ್ಟ ವ್ಯಕ್ತಿಯ ಮನೋವಾಕ್ಕಾಯಗಳ ವಿಸ್ತೃತಿ ಎಂಬುದೇ ತಾತ್ಪರ್ಯಾರ್ಥ. ಅಂಥ ವಾಗರ್ಥಗುಣಗಳು ವ್ಯಕ್ತಿಗೆ ಹೇಗೋ ಹಾಗೆ 'ಕಾವ್ಯ ಪದವಿಯ ನೆಗಱ್ತೆ'ಗೂ ಕಾರಣಗಳಾಗುತ್ತಿವೆ. ದೃಷ್ಟಾಂತವನ್ನು ನೋಡಿ.

ಪುರುಷೋತ್ತಮರಾರ್ ನಿನ್ನ
ನ್ನರುದಾ[ರರ]ರಾತಿಸಮಿತಿಯಂ[1] ಕೊಂದಿರ್ದುಂ

---

1 ಡಾ|| ಪಾಠಕರ ಪ್ರತಿಯಲ್ಲೂ ಮದರಾಸ್ ಪ್ರತಿಯಲ್ಲೂ '....ಉದಾರಾರಾತಿ ಸಮಿತಿಯಂ' ಎಂದೇ ಇದೆ. ಇದೇ ಸರಿಯಾದರೆ, 'ಉದಾರ' ಪದವು 'ಅರಾತಿಸಮಿತಿಗೆ' ವಿಶೇಷಣವಾಗುವುದು. ಇದು 'ಉದಾರ' ಗುಣ ಲಕ್ಷಣಾವಸರ. ಗ್ರಂಥಾಶ್ರಯದಾತನಾದ ನೃಪತುಂಗನಿಗೆ 'ಉದಾರ' ಎಂಬ ಬಿರುದು ಶಾಸನಾದಿಗಳಲ್ಲಿ ಪ್ರಸಿದ್ಧವಿದೆ. ಹಾಗಿರುವಲ್ಲಿ, 'ವಧಾರ್ಹ'ರಾದ ವೈರಿಗಳಿಗೆ ವಿಶೇಷಣವಾಗಿ ಕವಿ ಅದನ್ನಿರಿಸಲೊಲ್ಲನು ಎಂಬ ಭಾವನೆಗನುಸಾರಿ 'ಉದಾರರರಾತಿಸಮಿತಿಯಂ' ಎಂದು ಮಾರ್ಪಡಿಸಿಕೊಂಡಿದ್ದೇವೆ. ಅರ್ಥಸಂದರ್ಭವನ್ನೆಣಿಸಿದಲ್ಲಿಯೂ ಈ ಮಾರ್ಪಾಡು ಅನುಕೂಲಿಸುತ್ತಿದೆ.

ಸುರಸುಂದರಿ ಲೀಲಾಲಸ
ಪರಿರಂಭಾರಂಭಸುರತಸುಖದೊಳ್ ನಿಲಿಪರ್ —(ii, 78)

—'ವೈರಿಗಳನ್ನು ಕೊಂದರೂ ಅವರನ್ನು ಸುರಸುಂದರಿಯರ ಲೀಲಾಮಯವಾದ ಸುಖದಲ್ಲಿ ನೆಲೆಗೊಳಿಸುವ ನಿನ್ನಂಥ ಉದಾರರಾದ ಪುರುಷೋತ್ತಮರು ಬೇರೆ ಯಾರಿದ್ದಾರೆ?—ಯಾರೂ ಇಲ್ಲ' 'ಇದು ಪದ್ಯಾರ್ಥ. ವೆಂಗಿರಾಜಾದಿಗಳನ್ನು ನಿರ್ನಾಮವೆಸಗಿದ' 'ಪುರುಷೋತ್ತಮ', 'ಉದಾರ' ಮೊದಲಾದ ಬಿರುದುಗಳುಳ್ಳ, ಅಮೋಘವರ್ಷನ ಮಹಿಮೆಯೇ ಈ ಪದ್ಯದಲ್ಲಿ ವರ್ಣಿತವಾಗಿರುವಂತಿದೆ. ಹಾಗೆ ತನ್ನಿಂದ ಹತರಾದವರನ್ನು 'ಸುರಸುಂದರಿ'ಯರ 'ಲೀಲಾಲಸ ಪರಿರಂಭ' ಸುಖದಲ್ಲಿರಿಸುವುದೆಂಬ 'ವಿರೋಧಾಭಾಸ'ವಿದು ಉದಾರತಾ ಗುಣರೂಪದಿಂದ ಜನಿಸಿದ ಅರ್ಥಾಲಂಕಾರ ಭೇದ. ಇಲ್ಲಿಯ 'ವಸ್ತುಗತಸ್ಥಿತಿ' ಎಂದರೆ ನೃಪತುಂಗನು ತನ್ನ ಕಡು ಹಗೆಗಳನ್ನು ನಿರ್ಮೂಲವೆಸಗಿದನೆಂಬುದು. ಅದನ್ನು ರಾಜಭಕ್ತನಾದ ಕವಿ 'ಅಗ್ಗಳಮಾಗೆ' ಬಗೆದನು—ಎಂದರೆ, ಅತಿಶಯವಾಗಿ ಪರಾಂಬರಿಸಿದನು. ಹಾಗೆ ಪರಾಂಬರಿಸಿ ವೈರಿ ನಿರ್ಮೂಲನರೂಪ ವಸ್ತುವನ್ನು ಶಾಶ್ವತ ಸುಖದಾನ ರೂಪವನ್ನಾಗಿ ಮಾರ್ಪಡಿಸಿ ಬಣ್ಣಿಸಿದನು. ಇದರಿಂದ ಆ ಹಗೆಗಳು ಕಡೆವರೆಗೂ ನೃಪತುಂಗನೊಡನೆ ನಡೆದ ಹೋರಾಟದಲ್ಲಿ ವೈರಿಯನ್ನು ಬಲಿಯಿತ್ತ ಕಡುಗಲಿಗಳೆಂಬುದೂ ವ್ಯಕ್ತವಾಗುತ್ತಿದೆ. ಇಲ್ಲಿ ನೃಪತುಂಗನೆಸಗಿದ ವೈರಿ ಹನನವೆಂಬ ಕ್ರೂರವೃತ್ತಿಯನ್ನು ಕವಿ 'ಸುರಸುಂದರಿ ಲೀಲಾಲಸ ಪರಿರಂಭಾರಂಭಸುರತಸುಖದೊಳ್ ನಿಲಿಪರ್' ಎಂಬ ವರ್ಣನಾಕ್ರಮದಿಂದ ಉದಾರ ವೃತ್ತಿಯನ್ನಾಗಿ ಮಾರ್ಪಡಿಸಿದ್ದಾನೆಂಬುದೇನೋ ನಿಜ; ಆದರೆ ಇದರಿಂದ ನೃಪತುಂಗರೂಪ ವಸ್ತುಗತಸ್ಥಿತಿ ಪೂರ್ಣವಾಗಿ ಮಾರ್ಪಟ್ಟಿತಲ್ಲವೆ? ಅದರೊಡನೆ ಸ್ವಭಾವಾಖ್ಯಾನದ ಸ್ಥಳದಲ್ಲಿ ವಕ್ರಾಖ್ಯಾನವು ತಲೆದೋರಿತಲ್ಲವೆ? ಎಂಬ ಪ್ರಶ್ನೆ ತಲೆದೋರಬಹುದು. ಹೌದು; ಇಲ್ಲಿ ಒಂದಿಷ್ಟು ಅರ್ಥವಕ್ರತೆ ಭಾಸವಾದಂತಾಗುವುದು ನಿಜ. ಆದರೆ, ಇನ್ನಷ್ಟು ಪರಾಂಬರಿಸಿದಲ್ಲಿ, ಇದು ವಕ್ರಭಣಿತಿಯ ಸಂತತಿಗೆ ಸೇರಿದುದಲ್ಲವೆಂದು ಗೊತ್ತಾಗದಿರದು. ರಾಜಭಕ್ತನಾದ, ಬಹುಶಃ ಆ ರಾಷ್ಟ್ರಕೂಟ—ವೆಂಗೀಶಾದಿಗಳೊಳಗೆ ನಡೆದ ಹೋರಾಟದಲ್ಲಿ ಕೈದೋರಿದವನೂ ಆದ, ನಮ್ಮ ಕವಿಯ ದೃಷ್ಟಿಯಲ್ಲಿ ವೆಂಗಿರಾಜಾದಿಗಳು ವೀರಪುರುಷರಾದರೂ ಲೋಕ ಹಿತಚಿಂತಕರಲ್ಲ. ಅಂಥವರಿಗೂ ನೃಪತುಂಗನು ಐಹಿಕಕ್ಕಿಂತಲೂ ಮೇಲ್ತರದ ಪಾರಲೌಕಿಕ ದೃಷ್ಟಿಯಿಂದ ಅನುಗ್ರಹಿಸಿದನೆಂಬುದು ಉದಾರತೆಯ ಸ್ವಭಾವಾಖ್ಯಾನವೇ ಆಗುವುದಲ್ಲವೆ? ಅದರಿಂದ ಈ ವರ್ಣನೆ ಬರಿಯ ವಕ್ರೋಕ್ತಿ ವಿಲಸನವೆಂದು ಭಾವಿಸಬೇಕಾಗಿಲ್ಲ.[1]

ಹೀಗೆ ವಚನ ವಿರಚನಾಕ್ರಮದಿಂದ—ಪದಾರ್ಥಮೂಲಕವಾಗಿ ಅಲ್ಲ—ವರ್ಣ್ಯವಸ್ತುವಿ

[1] ಹೀಗೆ, 'ಅಗ್ಗಳಮಾಗೆ ಬಗೆ'ವ 'ಉದಾರ' ಗುಣದಿಂದಲೇ ನಾಲ್ಕು ಅರ್ಥಾಲಂಕಾರ ಭೇದಗಳೊಳಗೆ ಪ್ರಮುಖವಾದ 'ಅತಿಶಯೋಕ್ತಿ' ತಲೆದೋರಿರಬೇಕು. ಮಾತ್ರವಲ್ಲ; ಈ 'ಉದಾರ'ದಿಂದಲೇ 'ಮನದ ಪೆಂಪುಮಂ ಕೈಮಿಗೆ ವಿಭವದ ಪೆಂಪುಮಂ ಪೇಟಿಲ್ಪಗೆವ' (iii, 173) ಉದಾತ್ತಾಲಂಕಾರವೂ ಉಂಟಾಗಿರಬೇಕು

ನಲ್ಲಿ ಉತ್ಕರ್ಷವಾದ ಸದ್ಗುಣವು ಪ್ರತೀತಿಗೊಳ್ಳುವಂತೆ ವರ್ಣಿಸುವುದು ದಾಕ್ಷಿಣಾತ್ಯರ 'ಉದಾರ' ಗುಣ ಲಕ್ಷಣವಾದರೆ, ತದ್ವಿಪರ್ಯಯವಾಗಿ ಔತ್ತರೇಯರು ಶ್ಲಾಘ್ಯ ವಿಶೇಷಣಗಳಿಂದ ಕೂಡಿ ವರ್ಣಿಸುವುದೇ 'ಉದಾರ'ವೆನ್ನುತ್ತಾರೆ—'ಉರುವಿಶೇಷಣಯುತ ಮಪ್ಪುದನೊಲ್ವರ್' —(ii, 79)

'ಹೇಮಾಂಗದ—ನೀಲಾಂಬುಜ—ವಿಚಿತ್ರ ಚಿತ್ರ' ಎಂಬ ಪದಗಳನ್ನು ಗ್ರಂಥಕಾರನು ಔತ್ತರೇಯೋದಾರಕ್ಕೆ ಉದಾಹರಣಗಳನ್ನಾಗಿ ಕೊಟ್ಟಿದ್ದಾನೆ. 'ಅಂಗದ' ಎಂದರೆ 'ತೋಳ್ಬಂದಿ.' 'ಹೇಮ' ಎಂಬ ವಿಶೇಷಣದಿಂದ ಅದಕ್ಕೆ 'ಸ್ವರ್ಣರಚಿತವಾದ ತೋಳಸರಿಗೆ' ಎಂದು ಅರ್ಥವಾಗುತ್ತಿದೆ. 'ನೀಲ ಅಂಬುಜ' ಎಂದರೆ 'ಕನ್ನೈದಿಲೆ'; 'ವಿಚಿತ್ರ ಚಿತ್ರ' ಎಂದರೆ ಆಶ್ಚರ್ಯಕರವಾದ ಚಿತ್ರ. ಹೀಗೆ ವಿಶೇಷಣ ಬಲದಿಂದ ವಿಶೇಷ್ಯದ ಗುಣವು ಸ್ಫುಟವಾಗುವಂತಿದ್ದರೆ ಅದು ಔತ್ತರೇಯರ 'ಉದಾರ'ದ ಲಕ್ಷಣ.[1]

## ಪ್ರಮಿತ ಗ್ರಾಮ್ಯ

ದಂಡಿಯು 'ಪ್ರಮಿತ ಗ್ರಾಮ್ಯ' ಎಂಬ ಗುಣವನ್ನು ಹೇಳುವುದೇ ಇಲ್ಲ; ಅದಕ್ಕೆ ಬದಲಾಗಿ 'ಅರ್ಥವ್ಯಕ್ತಿ' ಎಂಬ ಗುಣವನ್ನು ನಿರ್ದೇಶಿಸುತ್ತಾನೆ. 'ಪ್ರಸನ್ನ'ದಿಂದಲೇ ಅರ್ಥದ ಸ್ಫುಟತೆಯುಂಡೊಡವೆರೆದ, ಆ 'ಅರ್ಥವ್ಯಕ್ತಿ' ಗತಾರ್ಥವಾಗಿರುವಲ್ಲಿ, ಅದನ್ನು ಇನ್ನೊಮ್ಮೆ ಹೇಳಿದರೆ ಪುನರುಕ್ತವೇ ಆದೀತೆಂದು ನಮ್ಮ ಗ್ರಂಥಕಾರನ ಭಾವನೆಯಾಗಿರಬಹುದು. ಹಾಗಿದ್ದರೆ, 'ಅರ್ಥವ್ಯಕ್ತಿ' ಎಂಬುದನ್ನುಳಿದು ಒಂಬತ್ತು ಗುಣಗಳು ಮಾತ್ರವೇ ಕಾವ್ಯಗುಣಗಳು ಎನ್ನಬಹುದಿತ್ತಲ್ಲವೆ? ದಂಡಿ ಮಾತ್ರವೇ ಅಲ್ಲ, ಇತರ ಸಂಸ್ಕೃತಾಲಂಕಾರಿಕರಾರೂ ಉಪಯೋಗಿಸದ ಈ 'ಪ್ರಮಿತ ಗ್ರಾಮ್ಯ' ಎಂಬುದನ್ನು ಗುಣವನ್ನಾಗಿ ಸ್ವೀಕರಿಸಿದುದೇಕೆ?–ಎಂಬ ಪ್ರಶ್ನೆ ತಲೆದೋರಬಹುದು. ಇದಕ್ಕೆ ಹೀಗೆ ಸಮಾಧಾನ ಕೊಡಬಹುದು—

ಬಹುಕಾಲಕ್ಕೆ ಹಿಂದೆಯೇ ದೇಶಭಾಷಾತ್ವವನ್ನುಳಿದ ಸಂಸ್ಕೃತ ಸಾಹಿತ್ಯದೊಳಗೆ ಪದಗಳ ದೇಸಿತನವು ಅಂದೇ ನಿರ್ನಾಮವಾಗಿದ್ದಿರಬೇಕಷ್ಟೆ; ಅದರೊಡನೆ ಅರ್ಥಗಳ ದೇಸಿತನವೂ—ಎಂದರೆ ನುಡಿಗಟ್ಟುಗಳಲ್ಲಿ ನೆಲೆಗೊಂಡು ಹರಿದುಬಂದ ಅರ್ಥಗಳ ದೇಶ್ಯತೆಯೂ—ಮಾಸಿ ಹೋಗಲಾರಂಭಿಸಿತು. ಅಂತಹ ಸಂಸ್ಕೃತ ನುಡಿಗಟ್ಟು, ಗಾದೆ ಮೊದಲಾದವುಗಳ ಅರ್ಥಗಳನ್ನುಳಿಸಿಕೊಳ್ಳುವ ಗುಣವನ್ನೇ ದಂಡ್ಯಾದಿಗಳು 'ಅರ್ಥವ್ಯಕ್ತಿ' ಎಂಬ ಹೆಸರಿನಿಂದ ಕರೆದುದಾಗಿರಬೇಕು. ಆದರೆ ಕನ್ನಡವೇ ಮೊದಲಾದ ದೇಶೀಯ ಭಾಷಾಸಾಹಿತ್ಯಗಳಲ್ಲಿ ಹಾಗಲ್ಲ: 'ದೇಸಿ ಬೇಱು ಬೇಱುಪ್ಪುದಱಿಂ'ದ ದೋಷಗಳು ನುಸುಳಿಕೊಳ್ಳಲು ಹೇಗೆ ಅವಕಾಶವಿದೆಯೋ ಹಾಗೆಯೇ ದೇಸಿಯಾದ ಜೀವದ್ಗುಣಗಳು ಚೈತನ್ಯವೇರಿ ಸಾಹಿತ್ಯಕ್ಕೆ ಕಳೆಯೇರಿಸುವುದಕ್ಕೂ ಸಾಕಷ್ಟು ಅಸ್ಪದವಿದೆ. 'ದೇಸಿ'ಗಳು (ದೇಶ್ಯಗಳು, ಎಂದರೆ ದೇಶದಲ್ಲಿ ಜನಿಸಿದವುಗಳು) ಮತ್ತು 'ಗ್ರಾಮ್ಯ'ಗಳು (ಗ್ರಾಮದಲ್ಲಿ ಹುಟ್ಟಿದವುಗಳು)

[1] ಈ ಔತ್ತರೇಯೋದಾರತೆಯಿಂದಲೇ ಮುಂದೆ ಸಾಭಿಪ್ರಾಯ ವಿಶೇಷಣಯುತವಾದ ಪರಿಕರ ಎಂಬ ಅರ್ಥಾಲಂಕಾರವೂ ಹುಟ್ಟಿರಬೇಕೆಂದು ತೋರುತ್ತದೆ.

ಸಾಮಾನ್ಯಾರ್ಥಕ ಪದಗಳು. ಆ ದೇಸಿಯೊಳಗೆ (ಗ್ರಾಮ್ಯದೊಳಗೆ) ಸರ್ವಸಾಮಾನ್ಯವಾದ ಅನೇಕಾನೇಕ ದೋಷಗಳು ನೆಲೆಗೊಳ್ಳಲು ಎಡೆಯಿರುವುದರಿಂದ, ಅದನ್ನು ಶುದ್ಧಿಸಿಕೊಂಡೇ ಸಾಹಿತ್ಯದಲ್ಲಿ ಪ್ರಯೋಗಿಸಬೇಕಾಯಿತು. ಹಾಗೆ ಆರಿಸಿಕೊಂಡ ಅಥವಾ ಪ್ರಮಿತವಾದ, ಎಂದರೆ ಪ್ರಮಾಣದೊಳಗಿರಿಸಿದ ಇಲ್ಲವೆ ಹವಣಾಗಿಸಿದ, ದೇಸಿಯನ್ನೇ ನಮ್ಮ ಗ್ರಂಥಕಾರನು 'ಪ್ರಮಿತ ಗ್ರಾಮ್ಯ' ಎಂಬ ಹೆಸರಿನ ಗುಣವನ್ನಾಗಿ ಮಾರ್ಪಡಿಸಿಕೊಂಡಿದ್ದಾನೆ. ಮೊದಲು 'ಗ್ರಾಮ್ಯ'ದ ಸ್ವರೂಪವನ್ನು ನೋಡೋಣ—

ಗೋಪಾಳ ಬಾಳ ಲಲನಾ
ಚಾಪಳ ವಾಚಾಳ ಕಿತವ ಬಾಹ್ಲೀಕಾದಿ
ವ್ಯಾಪಾರಂಗಳ್ ಗ್ರಾಮ್ಯಾ
ಳಾಪಂಗಳ್ ಮಾರ್ಗಯುಗಳ ಪರಿಹಾರ್ಯಂಗಳ್ —(ii, 80)

—"ಗೋವಳರು, ಸ್ತ್ರೀಕಾಮುಕರು, ಬಾಯ್ಬಡಿಕರು, ದ್ಯೂತಾಸಕ್ತರು, ಬಾಹ್ಲೀಕರು, ಮೊದಲಾದ ಅನಾಗರಿಕರ ವ್ಯಾಪಾರಗಳೇ 'ಗ್ರಾಮ್ಯಾಳಾಪ'ಗಳು. ಅವು ಮಾರ್ಗದ್ವಯದ ಕಾವ್ಯಗಳಲ್ಲೂ ತ್ಯಾಜ್ಯಗಳೇ ಸರಿ."

ಈ ಗ್ರಾಮ್ಯಾಲಾಪಕ್ಕೆ ಗ್ರಂಥಕಾರನು ಒಂದು ದೃಷ್ಟಾಂತವನ್ನು ಕೊಡುತ್ತಾನೆ. ಅದರೊಳಗೆ, ನೆಲೆಗೊಳ್ಳಲಿರುವ ತನ್ನ ಗ್ರಂಥ ಮರ್ಯಾದೆಗನುಸಾರವಾಗಿ, ಬಹುಮಟ್ಟಿಗೆ ಗ್ರಾಮ್ಯ ಪದಗಳನ್ನುಳಿದು ಗ್ರಾಮ್ಯಾರ್ಥದಿಂದ ತುಂಬಿದ ಪದಗಳನ್ನೇ ಪ್ರಯೋಗಿಸಿದ್ದಾನೆಂಬುದನ್ನು ಗಮನಿಸಬೇಕು.

ನೆನೆದಿರುಳುಂ ಪಗಲುಂ ನಿ
ನ್ನನೆ ಪೀನವೊಱಲ್ದು ಮಱುಗಿ ಕಾತರಿಸುತ್ತುಂ
ಮನದೊಳ್ ಸೈರಿಸಲಾಱೆಂ
ನಿನಗಿನಿಸುಂ ಕರುಣಮಿಲ್ಲ ಮರವಾನಿಸನೈ —(ii, 81)

ಪದ್ಯವಿದು 'ಕಾವ್ಯಾದರ್ಶ'ದಿಂದಲೇ ಎತ್ತಿಕೊಂಡುದು. ಆ ಮೂಲ ಶ್ಲೋಕವನ್ನೂ ನೋಡಿ—

ಕನ್ಯೇ ಕಾಮಯಮಾನಂ ಮಾಂ ತ್ವಂ ನ ಕಾಮಯಸೇ ಕಥಂ
ಇತಿ ಗ್ರಾಮ್ಯೋಽಯಮರ್ಥಾತ್ಮಾ ವೈರಸ್ಯಾಯೈವ ಕಲ್ಪತೇ
—'ಕಾವ್ಯಾದರ್ಶ' (i, 63)

—'ಕನ್ನೆ, ಕಾಮಿಸುವ ನನ್ನನ್ನು ನೀನೇಕೆ ಕಾಮಿಸುವುದಿಲ್ಲ?' ಇಂತಹ ಆರ್ಥಿಕ ಗ್ರಾಮ್ಯವು ವಿರಸವಾಗುವುದು. ಇವುಗಳೊಳಗೆ ದಂಡಿಯದು ಗ್ರಾಮೀಣನೊಬ್ಬನು ಕನ್ನಿಕೆಯೊಬ್ಬಳನ್ನು ಕುರಿತಾಡುವ ಮಾತಾದರೆ, ನಮ್ಮ ಗ್ರಂಥಕಾರನದು ಪ್ರಿಯಾನುರಕ್ತೆಯಾಗಿ ಹಂಬಲಿಸುತ್ತಾ ತನ್ನ ಪ್ರಣಯವನ್ನು ಸೂಚಿಸಿದರೂ ತನ್ನಿತ್ತ ಸರಿಯದ, ಅಲ್ಲವೆ ಸರಿಯಲು ಎಡೆದೊರೆಯದ, ಆ ಪ್ರಣಯಿಯನ್ನು ಒಮ್ಮೆ ಕಂಡಲ್ಲಿ ಆಡುವ ಮಾತು. ದಂಡಿಯು

ದೃಷ್ಟಾಂತವು ಆರ್ಥಿಕ ಗ್ರಾಮ್ಯ ಮಾತ್ರವನ್ನೇ ತೋರುವುದಾದರೆ, ನಮ್ಮ ಗ್ರಂಥಕಾರನದರಲ್ಲಿ, ಗಾವಿಲಿತಿಯ ಮಾತು ಎಷ್ಟು ಅಂದವಾಗಿರಲು ಸಾಧ್ಯವೋ ಅಷ್ಟು ಅಂದವಾಗಿದೆ. ಆದರೇನು? ಅದು ಗ್ರಾಮ್ಯತೆಯನ್ನೇ ಹೊಳೆಯಿಸಿದೆಯಲ್ಲದೆ ಮಾಸಿಸಲಿಲ್ಲ. ಎಂಥ ಹಳ್ಳಿಗಾಡಿನವರಾದರೂ ಪುರುಷರಿಗಿಂತ ಹೆಚ್ಚಾಗಿ ಮಾನಿನಿಯರನ್ನೇ ಮಾನದ ಸಂಕಲೆಯಿಂದ ಬಲಿದಿರುವುದು ಸಾಮಾನ್ಯವಾಗಿ ಪ್ರಕೃತಿಯಲ್ಲವೆ? ಆ ದೃಷ್ಟಿಯಿಂದ ನೋಡಿದರೆ ದಂಡಿಯ ದೃಷ್ಟಾಂತವು ಹೆಚ್ಚು ಪ್ರಾಕೃತಿಕವಾಗಿ ತೋರುವುದಲ್ಲವೆ? ಆದರೆ, ನಮ್ಮ ಗ್ರಂಥಕಾರನು ಬಣ್ಣಿಸಿದಾಕೆಯ ಮದನಾವಸ್ಥೆ ಸಾಮಾನ್ಯವಲ್ಲ, ವಿಶೇಷವಾಗಿತ್ತೆಂಬುದು ಪದ್ಯದಿಂದಲೇ ಸೂಚಿತವಾಗುತ್ತಿದೆ. ಪ್ರಕೃತಿಯೇ ವಿಕೃತಿಗೊಂಡಿರುವಲ್ಲಿ ಆಕೆಯ ಮಾನಿನೀತ್ವವೂ ಒಂದಿಷ್ಟು ವಿಕಾರಚ್ಛಾಯೆಯನ್ನು ಹೊಂದಿದ್ದಿರಬೇಕು. ಅದರಿಂದಲೇ ಪದ್ಯದ ಆದಿಯ ಮೂರು ಪಾದಗಳಲ್ಲಿ ಆಕೆಯ ಆ ವರೆಗಿನ ದೃಕ್, ಮನಸ್ಸಂಗ, ಸಂಕಲ್ಪ, ಜಾಗರ, ಕೃಶತೆ, ಅರತಿ—ಎಂಬ ಮದನಾವಸ್ಥೆಗಳನ್ನು ವಿವರಿಸಿದ ಕವಿ, ಮಾನದ ಪರದೆಯನ್ನೆತ್ತಿಕೊಂಡ ಆ ದೃಶ್ಯವನ್ನು ಗ್ರಾಮ್ಯ ಸಾಹಿತ್ಯದ, ಅಥವಾ ದೇಸಿಗಬ್ಬದ, ದೃಷ್ಟಿಯಿಂದ 'ನಿನಗಿನಿಸುಂ ಕರುಣಮಿಲ್ಲ ಮರವಾನಿಸನ್ನೆ' ಎಂದು ಅಂದವಾಗಿಯೇ ನಿರೂಪಿಸಿದ್ದಾನೆ. ದಂಡಿಯ 'ಕನ್ಯೇ ಕಾಮಯಮಾನಂ ಮಾಂ ತ್ವಂ ನ ಕಾಮಯಸೇ ಕಥಂ'—ಎಂಬುದು ಗ್ರಾಮ್ಯಾರ್ಥ ಸೂಚನೆಯಲ್ಲದೆ, ಗ್ರಾಮ್ಯ ಕಾವ್ಯ ಸ್ವರೂಪ ನಿರೂಪಣವಲ್ಲ. ಆಕೆಯ ಅವಸ್ಥಾವರ್ಣನೆಯನ್ನೂ ಅದರ ಮೇಲೆ ತನ್ನ ಮನದನ್ನನನ್ನು ಒಂದು 'ಮರವಾನಿಸ'ನ ಬೊಂಬೆಯನ್ನಾಗಿ ಮಾರ್ಪಡಿಸಿ ಆಲಂಕಾರಿಕವಾಗಿ ನಿಲೆಗೊಳಿಸಿದ ವರ್ಣನೆಯನ್ನೂ ನೋಡಿದರೆ, ನಮ್ಮ ಗ್ರಂಥಕಾರನದು ಅಂದವಾದ ಗ್ರಾಮ್ಯಕಾವ್ಯವೇ ಆಗಿದೆ—ಎನ್ನಬೇಕು. ಇಲ್ಲಿ ಅರ್ಥವು ಅಂದವಾಗಿದ್ದರೂ, ಆಕೆ ಅಪ್ರಮಿತವಾಗಿ ತನ್ನ ಮದನಾವಸ್ಥೆಯನ್ನೆಲ್ಲ ಆ ರೀತಿಯಲ್ಲಿ ಹೊರಗೆಡವಿದುದೇ ಗ್ರಾಮ್ಯವಾಗಲು ಕಾರಣ.

ಕಂದರ್ಪಂ ಚಲದೆನ್ನೊಳ್
ನಿಂದಂ ಮುನಿಸಿಲ್ಲ ನಿನ್ನೊಳಾತಂಗಿನಿಸುಂ

—ಉತ್ತರಾರ್ಧ (ii, 82)

ಎಂದು ಮಾರ್ಪಡಿಸಿಕೊಂಡರೆ ಅದೇ 'ಪ್ರಮಿತ ಗ್ರಾಮ್ಯ'ವೆನ್ನಿಸುವುದು. ಹಿಂದಿನ ಪದರಚನೆಯು ಅಂದವಾಗಿದ್ದರೂ, ಅದರಲ್ಲಿ ಆರ್ಥಿಕ ಗ್ರಾಮ್ಯತೆಯೂ ಇಲ್ಲಿ ಅದೇ ಗ್ರಾಮ್ಯಾರ್ಥರೂಪದೋಷವು 'ಪ್ರಮಿತತ್ವ'ವೆಂಬ ಅಚ್ಚಿನಲ್ಲಿ ಎರಕವಡೆದು ಗುಣವಾಗಿ ಪರಿಣಮಿಸಿದುದೂ ಹೊಳೆದು ತೋರುತ್ತವೆ. 'ಕಂದರ್ಪನು ನನ್ನಲ್ಲಿ ಹಠವಿಡಿದು ನಿಂದನು' ಎಂಬ ಕಿರುನುಡಿಯಲ್ಲಿ 'ನೆನೆದಿರುಳುಂ ಪಗಲುಂ ನಿನ್ನನೆ ಪೀನಮೊಱಲ್ದು ಕಾತರಿಸುತ್ತಂ ಮನಮೊಲ್ ಸೈರಿಸಲಾಱೆಂ' ಎಂಬ ದೀರ್ಘವಾಕ್ಯದ ಅರ್ಥವು 'ಪ್ರಮಿತ'ವಾಗಿ ಅಡಕವಾಗಿದೆ. 'ಆತನಿಗೆ ನನ್ನಲ್ಲಿ ಇನಿಸೂ ಮುನಿಸಿಲ್ಲ' ಎಂಬ ಚಿಕ್ಕ ವಚನದಲ್ಲಿ 'ನಿನಗಿನಿಸುಂ ಕರುಣಮಿಲ್ಲ ಮರವಾನಿಸನ್ನೆ' ಎಂಬ ದೀರ್ಘವಾಕ್ಯಾರ್ಥವು ತುಂಬಿದೆ. ದಾಕ್ಷಿಣಾತ್ಯದ ಗುಣವಾದರೂ ಈ 'ಪ್ರಮಿತ ಗ್ರಾಮ್ಯ'ದಲ್ಲಿ ಒಂದಿಷ್ಟು ಅರ್ಥವಕ್ರತೆ ನುಸುಳಿದಂತಿದೆಯಲ್ಲವೆ? ಗ್ರಂಥಕಾರನು 'ಗ್ರಾಮ್ಯಾಳಾಪಂಗಳ್ ಮಾರ್ಗಯುಗಳ ಪರಿಹಾರ್ಯಂಗಳ್' ಎನ್ನುತ್ತಾನೆ. ಆ ಮೇಲೆ ಕೊಟ್ಟ 'ನೆನೆದಿರುಳುಂ ಪಗಲುಂ. . . . . . .' ಎಂಬ ದೃಷ್ಟಾಂತವು ಮತ್ತಿನ

'ಎಂದಿಂತೀ ಗ್ರಾಮ್ಯೋಕ್ತಿಯೊಳ್...' ಎಂಬ ಪದ್ಯದಿಂದ, ಆರ್ಥಿಕ ಗ್ರಾಮ್ಯೋಕ್ತಿ ಎಂದು ತಿಳಿದು ಬರುತ್ತಿದೆ. ಆದರೆ ಅದು ಶಾಬ್ದಿಕ ಗ್ರಾಮ್ಯವಲ್ಲ. ಅದರಿಂದ ಅದು ಔತ್ತರೇಯ 'ಪ್ರಮಿತ ಗ್ರಾಮ್ಯ'ವೆಂದೂ ಮತ್ತಿನ 'ಕಂದರ್ಪಂ ಚಲದೆನ್ನೊಳ್' ಎಂಬುದು ದಾಕ್ಷಿಣಾತ್ಯರ 'ಪ್ರಮಿತ ಗ್ರಾಮ್ಯ' ಎಂದೂ ಭಾವಿಸಬಹುದು.

### ಓಜೋಗುಣ

ಓಜಃ ಸಮಾಸಭೂಯಸ್ತ್ವಮೇತದ್ಗದ್ಯಸ್ಯ ಜೀವಿತಂ
ಪದ್ಯೇऽಪ್ಯದಾಕ್ಷಿಣಾತ್ಯಾನಾಮಿದಮೇಕಂ ಪರಾಯಣಂ

—('ಕಾವ್ಯಾದರ್ಶ' i, 80)

—'ಸಮಾಸಪದಗಳೆ ಹೆಚ್ಚಾಗಿರುವುದು ಓಜೋಗುಣ ಲಕ್ಷಣ. ಇದು ಗದ್ಯಕ್ಕೆ ಜೀವಿತವೆನ್ನಿಸಿದೆ. ಔತ್ತರೇಯರು ಪದ್ಯದಲ್ಲೂ ಸಹ ಇದನ್ನೇ ಪ್ರಯೋಗಿಸುತ್ತಾರೆ'—ಎಂಬುದಿದು ದಂಡಿಯ ಓಜೋಗುಣ ನಿರೂಪಣೆ.

ನಮ್ಮ ಗ್ರಂಥಕಾರನು ಹೀಗೆನ್ನುತ್ತಾನೆ—

ಸಮುಚಿ ಸಮಾಸಪದಂಗಳ
ನಮರ್ದಿರೆ ಸಯ್ತಾಗಿ ಬಗೆದು ಪೇೞ್ದೊಡದಕ್ಕುಂ
ಕ್ರಮದೋಜೋಲಕ್ಷಣಮು
ತ್ತಮಮಿದು ಗದ್ಯಕ್ಕಲಂಕ್ರಿಯಾನುಸಮೇತಂ —(ii, 83)

—'ಸಮಾಸಪದಗಳನ್ನು ಆರಿಸಿ ನೇರಾಗಿ (ಸಯ್ತಾಗಿ) ಪ್ರಯೋಗಿಸಿದರೆ, ಓಜೋಗುಣವೆನ್ನಿಸುವುದು. ಇದು ಗದ್ಯಕ್ಕೆ ಅಲಂಕಾರಾತ್ಮಕವಾಗಿದೆ.' 'ಸಯ್ತಾಗಿ ಪೇೞ್ದೊಡೆ' ಎಂದುದರಿಂದ ಈ ಓಜಸ್ಸನ್ನು ಗದ್ಯದಲ್ಲೇ ಉಪಯೋಗಿಸುವುದು ದಾಕ್ಷಿಣಾತ್ಯ ಪದ್ಧತಿ—ಎಂಬುದು ಸೂಚಿತವಾಗುತ್ತಿದೆ.

ಮಿಗೆ ಪದ್ಯದೊಳಂ ಗುಣಮಂ
ತಗುಳ್ಕುಗುಂ ಸಮುಹಿತಪ್ರಯೋಗಾನುಗತಂ
ಸೊಗಯಿಸುವಂತಿರೆ ಬಗೆದಿದ
ನಗಾಧಮನರಿಡುಗೆ ಕೃತಿಯೊಳೋಜೋಗುಣಮಂ —(ii, 84)

—'ಸಮುಹಿತರ, ಎಂದರೆ ಮಹಿಮಾನ್ವಿತರಾದ ಮಹಾಕವಿಗಳ, ಪ್ರಯೋಗಕ್ರಮಾನ್ವಿತವಾದ ಓಜೋಗುಣವು ಗದ್ಯದಲ್ಲಿ ಮಾತ್ರವಲ್ಲದೆ ಪದ್ಯದಲ್ಲಿಯೂ ಗುಣವನ್ನೇ ತಗುಲಿಸುವುದು. ಇದನ್ನು—ಸಮಾಸಭೂಯಿಷ್ಠವಾದ ಓಜೋ ಬಂಧಗುಣವನ್ನು—ಮೇಲೆಂದಂತೆ ಸಮುಹಿತ ಪ್ರಯೋಗಾನುಗತವಾಗಿ ಅಗಾಧಮನರಾದ ಉತ್ತಮ ಕವಿಗಳು ಮಾತ್ರವೇ ಬಗೆದು ಪ್ರಯೋಗಿಸತಕ್ಕುದು.'

ಹೀಗೆಂದುದರಿಂದ, ಓಜೋಬಂಧಯುತವಾದ ಪದ್ಯವನ್ನು ರಚಿಸುವುದು ಅತಿ ಕಷ್ಟದಿಂದಾದರೂ ಸಾಧ್ಯವಿದೆ ಎಂದಂತಾಯಿತು. ಸಮಾಸ ಭೂಯಿಷ್ಠತೆಯಿಂದ ಅರ್ಥವೇ

ವ್ಯಕ್ತವಾಗದೆ ಹೋಗುವ ಅದೊಂದು ದೋಷಕ್ಕೆ ಎಡೆಯೊದಗುವ ಸಂಭವವಿದೆ ಎಂಬುದರಿಂದ, ಅದು ಕಷ್ಟ. ಆದರೂ ಆ ಬಂಧವನ್ನು ಸಂದರ್ಭವರಿತು ಬಲಿದಲ್ಲಿ ಅರ್ಥವ್ಯಕ್ತಿಯೊಡನೆ ಸಂಬಂಧವಡೆದ ಆಯಾ ವ್ಯಕ್ತಿ ವಿಷಯಗಳ ಹುರುಪು ಬಿರುಕೆಗಳು ಅಚ್ಚುಕಟ್ಟಾಗುವವು ಎಂಬುದರಿಂದ, ಆ ಕಷ್ಟವನ್ನೂ ಸಾಧಿಸಬೇಕೆಂಬ ಆಸೆ. ಆದರಿಂದಲೇ ಗ್ರಂಥಕಾರನು ಪದ್ಯ'ಕೃತಿಯೊಳೋಜೋಗುಣಮಂ' 'ಅಗಾಧಮನರಿಡುಗೆ' ಎಂದು ಎಚ್ಚರಿಸುತ್ತಾನೆ. ಇಂತಹ ಕಷ್ಟಸಾಧ್ಯವಾದ ಓಜಸ್ಸಿನ ಲಕ್ಷಣವನ್ನು, ಇತರ ಗುಣಗಳನ್ನು ಹೇಗೋ ಹಾಗೆ, 'ಅಲ್ಪಾಕ್ಷರ ಸೂತ್ರ'ದಿಂದ ಲಕ್ಷಿಸಿದರೆ ಸಾಲದೆಂದು ಗ್ರಂಥಕಾರನಿಗೇ ತೋರಿರಬೇಕು. ಅದರಿಂದಲೇ ಮತ್ತಷ್ಟು ವಿಸ್ತರವಾಗಿ ಆ ಬಂಧಕ್ರಮವನ್ನು ನಿರೂಪಿಸುತ್ತಾನೆ:

ಕಾರಕಮುಂ ಕ್ರಿಯೆಯುಮನಱಿ
ದೋರಂತಿರೆ ಮುಂ ತಗುಳ್ಚಿ ಮುಕ್ತಕಪದದೊಳ್
ಸಾರಂ ಸಮಾಸಪದದು
ಚ್ಚಾರಣೆಯಂ ನೀಳ್ದು ನಿಲೆ ತಗುಳ್ಚುಗೆ ಕೃತಿಯೊಳ್ —(ii, 85)
ಮೊದಲೊಳ್ ಸಮಾಸ ಪದಮುಮ
ನೊದವಿಸಿ ಪೇೞ್ದದಱ ತುದಿಯೊಳಸಮಾಸಪದಾ
ಸ್ಪದವಾಗಿ ನಿಱಿಸೆ ಕರ್ಬಿನ
ತುದಿಯಂತಿರೆ ವಿರಸಮಕ್ಕುಮದು ತೊದಳುಂಟೇ —(ii, 86)

—'ಮುಕ್ತಕ ಪದರೂಪವಾಗಿ, ಎಂದರೆ ಸಮಾಸರಹಿತವಾಗಿ, ಕ್ರಮವಾಗಿ ಕಾರಕವನ್ನೂ ಕ್ರಿಯೆಯನ್ನೂ ಮೊದಲು ಸೂಚಿಸಬೇಕು. ಆ ಮೇಲೆ ಸಾರವತ್ತಾದ (ವಿಶೇಷ್ಯರೂಪಕಾರಕದ) ದೀರ್ಘ ಸಮಾಸಯುತ ವಿಶೇಷಣವನ್ನು ಕೊನೆಗೆ ಕೂಡಿಸಲಿ.

—'ಹಾಗೆಸಗದೆ, ಮೊದಲು ಸಮಸ್ತ ಪದವಾದ ಕಾರಕ ವಿಶೇಷಣಗಳನ್ನು ನೀಳವಾಗಿರಿಸಿ ಕೊನೆಗೆ ಅಸಮಸ್ತಗಳಾದ ಕಾರಕ ಕ್ರಿಯಾಪದಗಳನ್ನಿರಿಸಿದರೆ ಕಬ್ಬಿನ ತುದಿಯಂತೆ ವಿರಸವಾಗುವುದರಲ್ಲಿ ಸಂದೇಹವಿಲ್ಲ.'

(ಇವುಗಳಲ್ಲಿ ಮೊದಲಿನದು ದಾಕ್ಷಿಣಾತ್ಯರ ಪದ್ಧತಿ, ಮತ್ತಿನದು ಔತ್ತರೇಯ ಪದ್ಧತಿ—ಎಂಬುದು ಹೊಳೆಯುತ್ತದೆ)

ಇವೆರಡು ಪದ್ಯಗಳಲ್ಲಿ ಗ್ರಂಥಕಾರನು ಓಜೋಬಂಧಲಕ್ಷಣಗಳನ್ನು ವಿಶಿಷ್ಟವಾಗಿ ವಿವರಿಸಿದ್ದಾನೆ. ವಿಶೇಷ್ಯಕಾರಕ ಕ್ರಿಯಾಪದಗಳನ್ನು ಅಸಮಸ್ತಗಳನ್ನಾಗಿ ಮೊದಲಿರಿಸಿ, ವಿಶೇಷಣ ಕಾರಕವನ್ನು ಮಾತ್ರವೇ ಸಮಸ್ತವನ್ನಾಗಿ ಕಡೆಗಿರಿಸಬೇಕು. ಸಮಾಸ ಬಾಹುಳ್ಯವು ಹಾಗೆ ವಿಶೇಷಣದಲ್ಲಿ ಮಾತ್ರವೇ ತೋರುವುದು 'ಸಾರ'ವತ್ತಾದ ಓಜೋಗುಣ ಲಕ್ಷಣವೆಂದೂ, ಅದಕ್ಕೆ ವಿಪರ್ಯಯವಾಗಿ ಸಮಸ್ತ ವಿಶೇಷಣವನ್ನು ಮೊದಲಿರಿಸಿ ಅಸಮಸ್ತ ಕಾರಕವನ್ನೂ ಕ್ರಿಯೆಯನ್ನೂ ಕಡೆಗೊಳಿಸಿದರೆ 'ಕರ್ಬಿನ ತುದಿಯಂತಿರೆ ವಿರಸ'ವಾದ ಅಥವಾ 'ಅಸಾರ'ವಾದ ಓಜೋಬಂಧವಾಗುವುದೆಂದೂ ಗ್ರಂಥಕಾರನೆಣಿಕೆ. ಮುಂದೆ ಪದ್ಯರೂಪವಾಗಿ

ಕೊಡುವ ಓಜೋಗುಣ ಲಕ್ಷ್ಯಗಳೆರಡೂ ಔತ್ತರೇಯ ಪದ್ಧತಿಗನುವಾಗಿವೆ. ಅವುಗಳೊಳಗೆ 'ವಿರಸವಾದ ಓಜಸ್ಸು', 'ಸಾರ'ವಾದ ಓಜಸ್ಸು—ಎಂಬ ಭೇದಗಳೆರಡು ವ್ಯಕ್ತವಾಗುತ್ತವೆ. ಆ ಲಕ್ಷ್ಯಗಳನ್ನೀಕ್ಷಿಸಿರಿ :

ಪರಮಾನುಭಾವಭಾಸುರ
ಸುರರಾಜೋಪಮಿತವಿವಿಧವಿಭವೋದಯನಂ
ನರಪತಿಯಂ ಕಪಿಪ್ಪತನಾ
ಪರಿವೃತನಂ ಶರಧಿತಟದೊಳಣುವಂ ಕಂಡಂ —(ii, 87)

ಈ ಪದ್ಯದ ಪೂರ್ವಾರ್ಧದಲ್ಲಿ ಆದ್ಯಂತವಾಗಿ ಮಾನದಂಡದಂತೆ ಸಮಸ್ತ ವಿಶೇಷಣ ಪದವೊಂದೇ ನಿಂತುಕೊಂಡಿದೆ; ಆಮೇಲೆ ವಿಶೇಷ್ಯವಾದ 'ನರಪತಿಯಂ' ಎಂಬ ಕರ್ಮಕಾರಕವು ತಲೆಯೆತ್ತಿದೆ; ತದನಂತರ, ಹಿಂದಿನ ವಿಶೇಷಣಪದದ ಒಡಹುಟ್ಟಿದ ಪಿಳ್ಳೆಯಂತಿರುವ 'ಕಪಿಪ್ಪತನಾ ಪರಿವೃತನಂ' ಎಂಬ ಅವಳಿನುಡಿಯೊಂದು ತೋರುತ್ತಿದೆ; ಮತ್ತೆ 'ಶರಧಿತಟದೊಳ್', ಎಂಬ ಅಧಿಕರಣವೂ 'ಅಣುವಂ ಕಂಡಂ' ಎಂಬ ಬಲು ಚಿಕ್ಕ ಕರ್ತೃಕ್ರಿಯಾಪದಗಳೂ ಚಿಗುರಿವೆ. ಇಂತಹ ರಚನೆಯಲ್ಲಿ 'ಓಜಸ್ವಿತಾಗುಣ'ವೇನೋ 'ಒಂದುವುದು'; ಆದರೆ 'ಸುಂದರವಾಗದು'. ಆದುದರಿಂದಲೇ ಇದು 'ವಿರಸ'ವಾದ ಓಜಸ್ಸು. 'ವ್ಯತ್ಯಯದಿಂ ಇಡುವೊಡೆ', ಎಂದರೆ ಪೂರ್ವೋತ್ತರಾರ್ಧಗಳನ್ನು ಕ್ರಮವಾಗಿ ಉತ್ತರ ಪೂರ್ವಾರ್ಧಗಳನ್ನಾಗಿ ಮಾರ್ಪಡಿಸಿಕೊಂಡರೆ, ಅದು 'ಸುಕರತರ'ವಾಗುವುದು. ಆ ವ್ಯತ್ಯಯ ರೂಪವೆಂದರೆ ಹೀಗೆ :

ನರಪತಿಯಂ ಕಪಿಪ್ಪತನಾ
ಪರಿವೃತನಂ ಶರಧಿತಟದೊಳಣುವಂ ಕಂಡಂ
ಪರಮಾನುಭಾವಭಾಸುರ
ಸುರರಾಜೋಪಮಿತವಿವಿಧವಿಭವೋದಯನಂ —(ii, 89)

ಹೀಗೆ ಪದ್ಯದೊಳಗೆ ಬರುವ ಓಜೋಗುಣ ಬಂಧಕ್ರಮಗಳೆರಡೂ ಔತ್ತರೇಯ ಮಾರ್ಗದವುಗಳು. ಆದರೂ ಈ ಮತ್ತಿನದೇ ಸಾರವತ್ತಾದುದು—ಎಂಬುದಕ್ಕೆ ಆಲಂಕಾರಿಕ ಮಾರ್ಗದಲ್ಲಿ ದೃಷ್ಟಾಂತವಿತ್ತ ಗ್ರಂಥಕಾರನ ಮಾತೇನೋ ಆಕರ್ಷಕವಾಗಿದೆ. ಆದರೆ ವಿಮರ್ಶಕರಿಗೆ ಅದು ಸಕಾರಣವೆಂದು ತೋರುವುದೆ? ನಮ್ಮೆಣಿಕೆಯಂತೆ ಹಿಂದಿನ ಲಕ್ಷ್ಯವು ವಿಶೇಷಣ, ವಿಶೇಷ್ಯಬದ್ಧ ಕರ್ಮಕಾರಕ, ಅಧಿಕರಣ, ಕರ್ತೃ, ಕ್ರಿಯಾಪದಗಳ ರಚನೆಯಲ್ಲಿ ಒಂದಿಷ್ಟು ಸ್ವಭಾವಾಖ್ಯಾನವೂ ಇದೆ. ಅದು ದಾಕ್ಷಿಣಾತ್ಯ ಪದ್ಧತಿ. ಈ ವ್ಯತ್ಯಯಬಂಧದಲ್ಲಿ ಕರ್ಮಕಾರಕ ವಿಶೇಷ್ಯ, ವಿಶೇಷಣ, ಅಧಿಕರಣ, ಕರ್ತೃ, ಕ್ರಿಯಾ, ಸಮಾಸಯುತ ಕರ್ಮಕಾರಕ ವಿಶೇಷಣ—ಎಂಬ ರಚನಾಕ್ರಮದಿಂದ ಉತ್ತರಮಾರ್ಗದ ಜೀವಿತವಾದ ವಕ್ರರಚನೆ ಸಂಪೂರ್ಣವಾಗಿದೆ. ಆದರಿಂದಲೇ ಗ್ರಂಥಕಾರನು 'ವ್ಯತ್ಯಯದಿನಿಡುವೊಡದು ಸುಕರತರಂ' ಎಂದಿದ್ದಾನೆ. ದಂಡಿಯ 'ಪದ್ಯೇऽಪ್ಯದಾಕ್ಷಿಣಾತ್ಯಾನಾಮಿದಮೇಕಂ ಪರಾಯಣಂ' ಎಂಬ ಮಾತಿನಲ್ಲಿ ಆ ಔತ್ತರೇಯ ಮಾರ್ಗದಲ್ಲೇ ಸಾಮಾನ್ಯವಾಗಿ, ಪದ್ಯದಲ್ಲಿ

ಓಜೋಬಂಧವನ್ನು ಬೆರಸುವ ಪದ್ಧತಿಯಲ್ಲಿ ವಿಶೇಷವಾಗಿ, ಅಸ್ವಾರಸ್ಯವು ತೋರುತ್ತಿದೆ. ಆದರೆ ನಮ್ಮ ಗ್ರಂಥಕಾರನಿಗೆ ಅಖಂಡ ಕನ್ನಡದಲ್ಲಿ ಬೆರಸಿದ ಮಾರ್ಗದ್ವಯದೊಳಗೆ ದಾಕ್ಷಿಣಾತ್ಯದಲ್ಲಿ ಪ್ರೇಮವು ಅಧಿಕವಾದರೂ ಔತ್ತರೇಯದಲ್ಲಿಯೂ ವಿಶ್ವಾಸವಿರಲೇಬೇಕಾಯಿತು. ಅವನದು 'ಕಾವ್ಯಾದರ್ಶ'ವಾದರೆ ಇವನದು 'ಕವಿರಾಜಮಾರ್ಗ'ವಲ್ಲವೆ? ಅದರಿಂದಲೆ 'ಸಮಹಿತ ಪ್ರಯೋಗಾನುಗತ'ವಾದರೆ ಓಜೋಬಂಧವು 'ಪದ್ಯದೊಳಂ ಗುಣಮಂ ತಗುಳ್ಚುಗುಂ' ಎನ್ನುತ್ತಾನೆ. ಆ 'ಸಮಹಿತ ಪ್ರಯೋಗ' ಕ್ರಮವೇ ಹಿಂದೆ ಸೂಚಿತವಾದುದು.

'ಸಮಜಾ ಸಮಾಸಪದಂಗಳಂ' ಗದ್ಯದಲ್ಲಿ ಮಾತ್ರವೇ 'ಸಯ್ತಾಗಿ ಅಮರ್ದಿರೆ' ಓಜೋಬಂಧವನ್ನು ಬೆರಸುವುದು ದಾಕ್ಷಿಣಾತ್ಯರ ಪದ್ಧತಿಯಷ್ಟೆ. ಔತ್ತರೇಯರು ಆ ಬಂಧವನ್ನು ಕೊಂಕಾಗಿ 'ಅಮರ್ದಿರೆ' ಬೆರಸಬೇಕು ಎಂಬುದೇನೋ ನ್ಯಾಯ; 'ಕಾರಕಮುಂ ಕ್ರಿಯೆಯುಮಂ ಮುಂ ತಗುಳ್ಚ'ಬೇಕೆಂಬುದು ವಕ್ರಬಂಧದ ಸ್ವಭಾವಕ್ಕೆ ಅನುಗುಣವಾದುದೆಂಬುದೇನೋ ನಿಜ; ಆದರೆ ಅವುಗಳನ್ನು 'ಮುಕ್ತಕ ಪದದೊಳ್' ನಿರೂಪಿಸುವುದೇಕೆ? ಹಾಗೆ, ಬಿಡುನುಡಿಗಳನ್ನಿಡುವುದು ಹಿಂದೆಂದ 'ಸಮಜಾ ಸಮಾಸಪದಂಗಳಂ' ಎಂಬ ಓಜೋಬಂಧದ ಪ್ರಮುಖ ಲಕ್ಷಣಕ್ಕೇ ವಿರೋಧವಲ್ಲವೆ?—ಎಂಬ ಆಕ್ಷೇಪವು ತಲೆದೋರಬಹುದು. ಅಂತಹ ಓಜೋಬಂಧ ಪರಾಯಣರಾದ ಔತ್ತರೇಯರು—ಬಹುಶಃ ಮುಂದೊಂದು ಕಡೆಯಲ್ಲಿ ಸೂಚಿತರಾಗುವ ಉತ್ತರೋತ್ತರ ಮಾರ್ಗೀಯರು—ಈ ರೀತಿಯಲ್ಲಿ ರಚಿಸುತ್ತಿದ್ದರೆಂದು ಮುಂದಿನ ದೃಷ್ಟಾಂತದಿಂದ ತೋರುತ್ತಿದೆ.

ಪರಿದೆಯ್ದಿ ತಾಗಿದಂ ಭಾ  
ಸುರತರರಘುಕುಲಲಲಾಮ ಲಕ್ಷ್ಮೀಧರನೊಳ್  
ಪರಿಕೋಪ ವಿಧೃತ ವಿಸ್ಫುರ  
ದುರುರಕ್ತ ಕಠೋರನಯನಯುಗದಶವದನಂ —(ii, 91)

ಇಲ್ಲಿ ಒಂದನೆಯ ಪಾದದ ಹತ್ತು ಮಾತ್ರೆಗಳಲ್ಲಿ 'ಪರಿದು ಎಯ್ದಿ ತಾಗಿದಂ' ಎಂಬ ಕ್ರಿಯಾಪದವು ಅಡಕವಾಗಿದೆ. ಅದೇ ಪಾದದ ಮತ್ತಿನ ಎರಡು ಮಾತ್ರೆಗಳೂ ದ್ವಿತೀಯ ಪಾದದ ಇಪ್ಪತ್ತು ಮಾತ್ರೆಗಳೂ ಸೇರಿ 'ಭಾಸುರ....ಲಕ್ಷ್ಮೀಧರನೊಳ್' ಎಂಬ ಇಪ್ಪತ್ತೆರಡು ಮಾತ್ರೆಗಳ ಅಧಿಕರಣಕಾರಕಪದವಾಗಿ ಏರ್ಪಟ್ಟಿದೆ. ಇದರೊಳಗೆ ವಿಶೇಷಣ ವಿಶೇಷ್ಯಗಳಿರಡೂ ಸೇರಿಬಿಟ್ಟಿವೆ. ಅದಾದರೂ ಹಾಗಿರಲಿ; ಆಮೇಲಿನ ಉತ್ತರಾರ್ಧದ ಮೂವತ್ತೆರಡು ಮಾತ್ರೆಗಳೂ ಸೇರಿ ಕರ್ತೃಪದವು ರೂಪಿತವಾಗಿದೆ. ಇದರೊಳಗೆ 'ಪರಿಕೋಪ' ಎಂಬ ಪದದಿಂದ ಮೊದಲ್ಗೊಂಡು 'ಯುಗ' ಎಂಬ ವರೆಗಿನ ಇಪ್ಪತ್ತಾರು ಮಾತ್ರೆಗಳ ಎಂಟು ಪದಗಳು ಬಹುವ್ರೀಹಿ ಸಮಾಸದಿಂದ ಬದ್ಧವಾದ ಒಂದೇ ವಿಶೇಷಣಪದವಾಗಿ ರೂಪುಗೊಂಡಿವೆ. ಆ ಪದವು ಕರ್ಮಧಾರಯ ಸಮಾಸದಿಂದ ಮುಂದಿನ 'ದಶವದನಂ' ಎಂಬ ಪದದೊಡನೆ ವಿಶೇಷ್ಯವಾಗಿದೆ. ಹೀಗೆ, ವಚನರಚನೆಯಲ್ಲಿ ಕ್ರಿಯೆ ಆದಿಯಲ್ಲಾಗಿ, ಕಾರಕ ವಿಶೇಷ್ಯವು ಅಂತ್ಯದಲ್ಲಾಗಿ, ವಕ್ರರಚನೆ ಸಂಪೂರ್ಣವಾಗಿದೆ.

ಈ ರೀತಿಯಲ್ಲಿ ವಿಶೇಷ್ಯಕಾರಕವು 'ಸಮಾಸದೊಳ್ ಬೆರಸಿರೆ, ಕಾವ್ಯಬಂಧಂ ಎಂದುಂ ಬಂಧುರಮಾಗದು' ; ಆದುದರಿಂದ ಸಮಾಸದಲ್ಲಿ ಬೆರೆದ ಆ 'ವಿಶೇಷ್ಯಾಂತರ' ಪದವನ್ನು ವ್ಯಸ್ತವಾಗಿಯೇ ಹೇಳತಕ್ಕುದು (iii, 88). ಸಮಸ್ತತೆಯಿಂದ ಕಾವ್ಯ ಬಂಧವು 'ಬಂಧುರ ಮಾಗದು' ಎಂಬುದಕ್ಕೆ ಗ್ರಂಥಕಾರನು ಕಾರಣವನ್ನು ಹೀಗೆ ವಿವರಿಸುತ್ತಾನೆ.

[1]ಇಂತು ವಿಶೇಷ್ಯಂ ಕ್ರಿಯೆಯಂ
ಸಂತಂ ನೋೞ್ಪುದಱಿನಕ್ಕುಮದು ಸಾಪೇಕ್ಷಂ
ಚಿಂತಿಸೆ ಸಮಾಸಮುಂ ಪೇ
ೞ್ವಂತಪ್ಪ ಪದಂ ಸಮರ್ಥವಲ್ತಪ್ಪುದಱಿಂ —(ii, 92)

ವಿಶೇಷ್ಯ ಕರ್ತೃಪದವು ಯಾವಾಗಲೂ ಕ್ರಿಯಾಪದವನ್ನೆ ನಿರೀಕ್ಷಿಸುತ್ತಿರುವುದು, ಎಂದರೆ ವಾಕ್ಯದೊಳಗಣ ಕರ್ತೃಪದ ಕ್ರಿಯಾಪದಗಳು ಮನೆಯೊಡೆಯರಾದ ಪತಿಪತ್ನಿಯರಂತೆ ಅನ್ಯೋನ್ಯ ಪ್ರವಣಗಳಾಗಿರತಕ್ಕುದು. ಅವರ ಏಕಾಗ್ರವಾದ ಪರಸ್ಪರ ಪ್ರವಣತೆಗೆ ಒಂದಿಷ್ಟು ಕವಲೊದಗಿದರೆ ಮನೆಯೇ ಕೆಟ್ಟು ಹೋಗುವುದಲ್ಲವೆ ? ಮನೆಯೊಳಗಿನ ಇತರ ಪರಿಜನವು ಆಯೆರಡು ವ್ಯಕ್ತಿಗಳಿಗೆ ನೆರವಾಗಿದ್ದರೆ, ಅವರು ಅನ್ಯೋನ್ಯವಾಗಿ 'ಸಂತಂ ನೋೞ್ಪುದ'ಕ್ಕೆ ಹೇಗೆ ಸಹಾಯವಾಗುವುದೋ ಹಾಗೆ ವಾಕ್ಯದೊಳಗಣ ಕಾರಕ ವಿಶೇಷಣಾದಿಗಳಾದ ಅನುಯಾಯಿ ಪದಗಳು ಕ್ರಮವಾಗಿ ಕರ್ತೃ ಕ್ರಿಯಾ ಪದಗಳನ್ನು ಹಿಂಬಾಲಿಸದಿದ್ದರೆ ವಾಕ್ಯ ಸಮಾಜವು ಸಡಿಲಾಗುವುದು.

---

[1] ಈ ಎರಡು ಸೂತ್ರಗಳಲ್ಲಿರುವ 'ಸಾಪೇಕ್ಷ' ಮತ್ತು 'ಸಮರ್ಥ' ಎಂಬ ಪದಗಳ ಅರ್ಥವನ್ನು ಅವಧರಿಸಬೇಕು. 'ಸಾಪೇಕ್ಷಂ' (ಅಪೇಕ್ಷಯಾ ಸಹ ವರ್ತತೇ ಇತಿ ಸಾಪೇಕ್ಷಃ)—ಎಂದರೆ 'ನೋಡಿಕೊಂಡೇ' ಇರುವ, ಇಲ್ಲವೆ ಪ್ರವಣವಾಗಿರುವ, ಪದಾರ್ಥ ಎಂದು ಭಾವ. ವಿಶೇಷ್ಯವು ಕ್ರಿಯೆಯನ್ನು ಸಾವಧಾನತೆಯಿಂದ ನೋಡುತ್ತಿದೆ, ಅಥವಾ ಕ್ರಿಯಾಪದ ವಿಷಯದಲ್ಲಿ ಪ್ರವಣವಾಗಿದೆ—ಎಂದು ಮೇಲೆ ವಿಗ್ರಹವಾಕ್ಯಾನುಸಾರವಾಗಿ ವಿವರಿಸಿದುದನ್ನೇ ಗ್ರಂಥಕಾರನು ರೂಪಾಂತರವಾಗಿ ವಿವರಿಸಿ, ಅದರಿಂದಲೇ ಅದು ಕ್ರಿಯೆಯಲ್ಲಿ ಪ್ರವಣವಾಗಿರುವುದೆಂದೂ ಹೇಳಿದ್ದಾನೆ.

ಇನ್ನು 'ಸಮರ್ಥ' ಪದವನ್ನು ವಿವೇಚಿಸುವ. 'ಸಮರ್ಥಃ ಪದವಿಧಿಃ (ಪದವಿಧಿ ಎಂದರೆ ಸಮಾಸವು ಸ್ವತಂತ್ರವಾಗಿರುವುದು) ಎಂಬುದು ಪಾಣಿನೀಯನಿಯಮ. ಸಮಾಸದೊಳಗಿನ ಭಿನ್ನ ಭಿನ್ನ ಪದಗಳ ಅರ್ಥಗಳಿಗೆ ಅನುವಾಗಿಯೆ ಸಮಾಸವು ರೂಪಿತವಾಗುತ್ತಿದೆ—ಎಂಬುದು 'ಅರ್ಥವತ್ ಸಮಾಸಃ' ಎಂಬ ಸೂತ್ರದಿಂದಲೂ ಸೂಚಿತವಾಗುತ್ತಿದೆ. ವಿಶೇಷ್ಯಪದವು ಹಿಂದಿನ ವಿಶೇಷಣಪದದೊಡನೆ ಇಲ್ಲವೆ ಪದಗಳೊಡನೆ ಸಮಾಸ ಬದ್ಧವಾಗಬಾರದು ಎಂಬ ವಿಶಿಷ್ಟ ನಿಯಮವೇನೂ ಇಲ್ಲ. ಅದೂ ಪದವಿಧಿಯಲ್ಲಿ (ಸಮಾಸದಲ್ಲಿ) ಅಂಗವಾಗಿರುವುದರಿಂದ ಸಮರ್ಥವೇ ಸರಿ. ಆದರೆ ಅಲ್ಲಿ ಸಮರ್ಥತೆಯಿಂದ ಬದ್ಧವಾದ ವಿಶೇಷ್ಯವು ಮುಂದಿನ ಕ್ರಿಯೆಯಲ್ಲಿ ಸಾಪೇಕ್ಷತೆಯಿಂದ ವರ್ತಿಸುವುದು ಹೇಗೆ ? ಅದರಿಂದಲೇ 'ಸಮಾಸಮುಂ ಪೇೞ್ವಂತಪ್ಪ ಪದಂ ಸಮರ್ಥವಲ್ತು' ಎನ್ನಬೇಕಾಯಿತು. ಸಮಾಸವು (ಪದವಿಧಿಯು) ಸಮರ್ಥವೆಂಬುದರಲ್ಲಿ ಸಂದೇಹವಿಲ್ಲ ; ಆದರೆ, ಆ ಸಮಾಸಘಟಕಗಳಾದ ಪದಗಳು ಬೇರೆ ಕಾರ್ಯಗಳಲ್ಲಿಯೂ ಸಮರ್ಥ (ಸ್ವತಂತ್ರ)ಗಳೆನ್ನಿಸುವವೆ ?

ಈ ಸೂತ್ರದ ಹಿನ್ನೆಲೆಯಲ್ಲಿ 'ಪರಿಪೆಯ್ದಿ ತಾಗಿದಂ' ಎಂದು ಮೊದಲಾಗುವ ಲಕ್ಷ್ಯವನ್ನು ಪರಿಶೀಲಿಸಬೇಕು. 'ತಾಗಿದಂ' ಎಂಬ ಕ್ರಿಯಾಪದದೊಡನೆ ಸಂಗಮಿಸಲು 'ದಶವದನಂ' ಎಂಬ ವಿಶೇಷ್ಯರೂಪವಾದ ಕರ್ತೃಪದವು ಪ್ರವಣವಾಗಿದೆ. ಇಂಥ ಕರ್ತೃ ಕ್ರಿಯೆಗಳೆರಡೂ 'ಸಾಪೇಕ್ಷ'ಗಳು—ಪರಸ್ಪರ ಅಪೇಕ್ಷಿಸುವವುಗಳು. ಸಾಪೇಕ್ಷವಾಗಿ ಕ್ರಿಯೆಯತ್ತ ಮುಂಬರಿಯುವ 'ದಶವದನಂ' ಎಂಬ ಪದವು ಹಿಂದಿನ ಸಮಾಸವೆಂಬ ಸಂಕಲೆಯಿಂದ ಬದ್ಧವಾಗಿದೆ. ಗೃಹಸ್ಥನು ಇತರ ಪರಿಜನದ ಅಭಿಪ್ರಾಯದ ಸಂಬದ್ಧವಾಗಿದ್ದುಕೊಂಡೇ ಗರತಿಗೆ ಅನುಕೂಲವಾಗಬೇಕೆಂದಾದರೆ, ಮನೆ ಕೆಟ್ಟು ಹೋಗುವುದಲ್ಲವೆ ? ಹಾಗೆ, ಕರ್ತೃವಾದ 'ದಶವದನ' ಪದವು 'ಪರಿಕೋಪ ವಿಧೃತ ವಿಸ್ಫುರದುರು ರಕ್ತಕಠೋರ ನಯನ ಯುಗ'ತ್ವದಿಂದ ಕೂಡಿಕೊಂಡೇ 'ತಾಗಿದಂ' ಎಂಬ ಕ್ರಿಯೆಯೊಡನೆ ಅನ್ವಯಿಸಬೇಕೆಂದಾದರೆ ಆ ಕರ್ತೃ ಕ್ರಿಯಾರ್ಥಗಳ ಕೂಟವು ಸಡಿಲಾಗಿ ವಿರಸವಾಗಿ ಹೋಗಬಹುದು. ಅದಕ್ಕಿಂತ ಹಿಂದಿನ 'ಭಾಸುರ ರಘುಕುಲ ಲಲಾಮ ಲಕ್ಷ್ಮೀಧರನೊಳ್' ಎಂಬ ಕಾರಕ ಕ್ರಿಯಾ ಸಂಬಂಧಗಳನ್ನು ಪರಾಂಬರಿಸಿರಿ. ಇಲ್ಲಿ ದ್ವಿತೀಯೆಗೆ ಪಲ್ಲಟವಾಗಿ ಸಪ್ತಮಿಯು ಪ್ರಯುಕ್ತವಾಗಿದೆ. 'ಪರಿಕೋಪ ವಿಧೃತ ವಿಸ್ಫುರದುರು ರಕ್ತ ಕಠೋರ ನಯನ ಯುಗ ದಶವದನಂ ಭಾಸುರತರ ರಘುಕುಲ ಲಲಾಮನಂ ತಾಗಿದಂ'-ಎಂಬುದು ಕರ್ತೃ ಕರ್ಮ ಕ್ರಿಯೆಗಳ ಕ್ರಮವಾದ ಸಂಬಂಧ. 'ಲಕ್ಷ್ಮೀಧರನಂ' ಎಂಬ ಕರ್ಮಕಾರವು ಕ್ರಿಯಾ ಸಂಬಂಧವಡೆಯಬೇಕಾದರೆ 'ಭಾಸುರ ರಘುಕುಲ ಲಲಾಮ'ತ್ವದಿಂದ ಕೂಡಿಕೊಂಡೇ ಇರಬೇಕೆ ? ವಿಶೇಷ್ಯ ರೂಪವಾದ ಕರ್ತೃವಾಗಲಿ, ವಿಶೇಷ್ಯರೂಪದ ಕರ್ತೃವೇ ಆಗಲಿ, ಬೇರೆ ಕಾರಕಗಳೇ ಆಗಲಿ, ವಿಶೇಷಣದೊಡನೆ ಸಮಾಸಗೊಂಡಿದ್ದರೆ ಎಡರಾಗುತ್ತದೆ. ಈ ಭಾವವನ್ನೇ ಗ್ರಂಥಕಾರನು 'ಸಮಾಸಮುಂ ಪೇಟ್ಟಿಂತಪ್ಪ ಪದಂ ಸಮರ್ಥಮಲ್ತು' ಎಂದು ಸೂಕ್ಷ್ಮವಾಗಿ ನಿರೂಪಿಸಿದ್ದಾನೆ.

ಆದರೂ ಏನು ? ಓಜಃ ಪರಾಯಣರಾದ ಔತ್ತರೇಯರು ಈ ಅಭಿಪ್ರಾಯವನ್ನು ಒಪ್ಪುತ್ತಿರಲಿಲ್ಲವೆಂದು ತೋರುತ್ತಿದೆ. ಆದುದರಿಂದಲೇ—

ಸಮನಿಸೆ ಸಾಪೇಕ್ಷಮುಮಾ
ಸಮಾಸಮುಂ ಪೆಱುಗುಮೆಲ್ಲಿಯಾನುಂ ಗಮಕಂ
ಕ್ರಮಮುದಱೊಳೆಲ್ಲಮೆನಲಿನಿ
ತು ಮಾರ್ಗದೊಳ್ ಸಮಱುಗಿಂತು ಕವಿವೃಷಭರ್ಕಳ್ —(ii, 93)

—"ಕರ್ತೃಕಾರಕ ಕ್ರಿಯೆಗಳೊಳಗೆ ಸಾಪೇಕ್ಷತೆ ಇದ್ದರೂ ಏನು ? ಸಾಪೇಕ್ಷತೆ, ಸಮಾಸಯುಕ್ತತೆ—ಎರಡೂ ಒಂದೆಡೆಯೇ ಪ್ರಯುಕ್ತವಾದಲ್ಲಿ ಉಪಾಯವೇನು ? ಅದನ್ನು 'ಗಮಕಂ ಪೆಱುಗುಂ' ಎಂದು ಅಂಗೀಕರಿಸಬೇಕು"—ಎನ್ನುತ್ತಾನೆ.[1] ನೆಲೆಗೊಂಡ ಹಿಂದಿನ

[1] ಸಂಸ್ಕೃತ ವ್ಯಾಕರಣ ಮಾರ್ಗದಲ್ಲಿ 'ಗಮಕತ್ವಾತ್ ಸಾಧುಃ' ಎಂಬ ಉಪಸೂತ್ರವೊಂದಿದೆ (ಗಮಯತೀತಿ ಗಮಕಂ ; ತತ್ತ್ವಂ ಗಮಕತ್ವಂ—ಎಂಬುದು ಗಮಕಪದದ ನಿಷ್ಪತ್ತಿ). ಶಾಸ್ತ್ರ

ಮಹಾಕವಿ ಪ್ರಯೋಗಗಳನ್ನು 'ಗಮಕಂ' ಎಂದಾದರೂ ಮಾರ್ಗದೊಳಗೆ ಕೂಡಿ ಬಿಡುವುದು ಸರಿಯಲ್ಲ. ಅದರಿಂದಲೇ, ಆ ಗಮಕವು 'ಕ್ರಮಮಂ ಅದಱಿಕೊಳೆಲ್ಲಂ', ಎಂದರೆ ಮೊದಲು ಅಸಾಧು ಪ್ರಯೋಗವನ್ನೆಸಗಿ ಆ ಮೇಲೆ ಗಮಕತೆಯನ್ನೊಡ್ಡಿದರೆ ಅದರೊಳಗೆ ಎಲ್ಲವೂ ಕ್ರಮವೇ ಆಗುವುದಲ್ಲವೆ ?—ಎಂದು ನಯವಾಗಿ ಟೀಕಿಸುತ್ತಾನೆ. ಆದುದರಿಂದ 'ಇನಿತು ಮಾರ್ಗದೊಳ್ ಸಮಱಿಗೆ ಇಂತು ಕವಿನೃಪಭರ್ಕಳ್' ಎಂದು ನಿರೂಪಿಸಿ ಲಕ್ಷ್ಯವನ್ನು ಕೊಡುತ್ತಾನೆ :

ಪರಿದೆಯ್ದಿ ತಾಗಿದಂ ಭಾ
ಸುರತರರಘುಕುಲಲಲಾಮನೊಳ್ ಲಕ್ಷ್ಮಣನೊಳ್
ಪರಿಕೋಪವಶಭ್ರಮಹೋ
ದ್ಧುರರಕ್ತಕಠೋರಲೋಚನಂ ದಶವದನಂ —(ii, 94)

ಇಲ್ಲಿ ವಿಶೇಷಣದೊಳಗೆ ಮಾತ್ರವೇ ಸಮಸ್ತತೆಯಿದೆ. ವಿಶೇಷ್ಯವು ಸಾಪೇಕ್ಷವಾಗಿಯೂ ಸಮಾಸರಹಿತವಾಗಿಯೂ ಹಿಂದೆ ವಿವೇಚಿಸಿದ ಯಾವ ಬಗೆಯ ಬಂಧಣಿಕೆಗೆ ಒಳಗಾಗದೆಯೂ ಇರುವುದು ವ್ಯಕ್ತವಾಗಿದೆ. ದೃಷ್ಟಾಂತವಿದು ಉಭಯಮಾರ್ಗೀಯರಿಗೂ ಸಮ್ಮತವಾಗಬಹುದೆಂಬ ಗ್ರಂಥಕಾರನ ಅಭಿಪ್ರಾಯವು 'ಇನಿತು ಮಾರ್ಗದೊಳ್ ಸಮಱಿಗಿಂತು' ಎಂಬ ಮಾತಿನಲ್ಲಿ ಮಿನುಗುತ್ತಿದೆ.

ಹೀಗೆ ಗ್ರಂಥಕಾರನು 'ಮಾರ್ಗದ್ವಿತಯ ಗತಾಂತರಮಂ ಪೇೞ್ವೆ'ದೇನೋ ಸರಿಯೆ ; ಆದರೆ ಮಾರ್ಗದ್ವಯಮಾತ್ರ ನಿರೂಪಣೆಯಿಂದ ಅದರೊಳಗಿನ 'ಅಂತರ್ಭೇದವನ್ನೆಲ್ಲ ವಿವೇಚಿಸಿದಂತಾಯಿತೆ ? ಜಾತ್ಯಂತರವೆನ್ನಿಸಿದ ಅಂತರ್ಭೇದಗಳು ಅನಂತವಾಗಿವೆ. ಕಬ್ಬಿನ ರಸ, ಬೆಲ್ಲದ ಪಾನಕ, ಹಾಲು—ಇತ್ಯಾದಿಗಳೊಳಗಿನ ಮಾಧುರ್ಯಭೇದಗಳನ್ನೇನೋ ಸೂಚಿಸಬಹುದು. ಆದರೆ ಹಾಲು ಹಾಲುಗಳೊಳಗಿನ, ಬೆಲ್ಲ ಬೆಲ್ಲಗಳೊಳಗಿನ ಸವಿಗಳೊಳಗೆ ಅಂತರ್ಭೇದಗಳೆಷ್ಟೋ ಇವೆಯಲ್ಲವೆ ? ಆಯಾ ಭೇದಗಳೊಳಗಿನ ನವನರಗಳನ್ನು ಹಿಡಿದು, ಪರೀಕ್ಷಿಸಿ, ಇದಿಂತು, ಅದಿಂತು ಎಂದು ನಿರೂಪಿಸಲು ಹೇಗೆ ಸಾಧ್ಯ ? ದಂಡ್ಯಾಚಾರ್ಯನಂತಹ ಸಾಹಿತ್ಯ ಋಷಿ 'ತದ್ಭೇದಾಸ್ತು ನ ಶಕ್ಯಂತೇ ವಕ್ತುಂ ಪ್ರತಿಕವಿಸ್ಥಿತಾಃ' ಎಂದು ಸಿದ್ಧಾಂತಿಸಿದರೆ,ನಮ್ಮ ಗ್ರಂಥಕಾರನು 'ಅನಂತಮಂತರ್ಭೇದಂ' ಎಂದಷ್ಟೇ ಹೇಳಿಬಿಟ್ಟಿದ್ದಾನೆ.

* * *

ದೇಹಕ್ಕೆ ಅನವಸ್ಥೆ ರೋಗಗಳು ಹೇಗೋ ಹಾಗೆ ಕಾವ್ಯ ಶರೀರಕ್ಕೆ ದೋಷಗಳು. ಸುವ್ಯವಸ್ಥೆ ಆರೋಗ್ಯ ಭಾಗ್ಯಗಳು ಹೇಗೋ ಹಾಗೆ ಗುಣಗಳು. ಶರೀರದ ಸುವ್ಯವಸ್ಥಾದಿಗಳಂತೆ ಪದಪಾದ ರಚನೆಗಳ ಬಾಹ್ಯ ರೂಪವಾದರೆ, ಅಂತರಂಗದ ಸುವ್ಯವಸ್ಥೆ ಆರೋಗ್ಯ ಭಾಗ್ಯಗಳಂತೆ

---

ಸಮ್ಮತವಲ್ಲದಿದ್ದರೂ ಪದ್ಧತಿ(ದೇಸಿ)ಯನ್ನೊಂದಿ ನೆಲೆಗೊಂಡು ಅರ್ಥಗಮಕಗಳಾದ ಕೆಲಕೆಲವು ಶಬ್ದರೂಪಾದಿಗಳನ್ನು ತಳ್ಳಿಬಿಡಲಾಗುವುದಿಲ್ಲ, ಅಂಗೀಕರಿಸಬೇಕಾಗುವುದು—ಎಂಬುದು ಆ ಉಪಸೂತ್ರದ ಅರ್ಥ.

ಅರ್ಥಭಾವಾದಿಗಳು ಅಣಿಗೊಳ್ಳಬೇಕು. ನಮ್ಮ ಗ್ರಂಥಕಾರನು ನಿರೂಪಿಸಿದ ಗುಣಗಳನ್ನು ಬೇರೆ ಬೇರೆ ಲಾಕ್ಷಣಿಕರು ಭಿನ್ನ ಭಿನ್ನ ಕ್ರಮನಾಮಗಳಿಂದ ವಿಸ್ತರಿಸಿದ್ದಾರೆ. ಹೇಗಿದ್ದರೂ ಎಲ್ಲರ ಅಭಿಪ್ರಾಯವೂ ಏಕಾಗ್ರವಾಗಿಯೇ ಪರಿಣಾಮಗೊಂಡಿದೆ—ಎಂಬಲ್ಲಿ ಸಂದೇಹವಿಲ್ಲ. ಆ ಗುಣಗಳಿಂದ ಕಾವ್ಯವರ್ಗದೊಳಗಿನ ಪ್ರಮುಖ ಭೇದಗಳೆರಡನ್ನು ಕಾಣಿಸುವುದೇ ನಮ್ಮ ಗ್ರಂಥಕಾರನ ನೆಡುಗುರಿ. ಆ ಹತ್ತು ಗುಣಗಳಲ್ಲಿ ಐದು ಶಾಬ್ದಿಕ ಗುಣಗಳು, ಐದು ಅರ್ಥ ಗುಣಗಳು—ಎಂಬ ಎರಡು ಒಳಗವಲುಗಳಿವೆಯೆಂಬುದು ಅವವುಗಳ ಲಕ್ಷಣೋದಾಹರಣ ಗಳಲ್ಲಿ ಕಣ್ಣಿಟ್ಟರೆ ಹೊಳೆದು ತೋರುವುದು. ಆ ಗುಣಭೇದಗಳನ್ನು ಹೀಗೆ ಚಿತ್ರಿಸ ಬಹುದು—

## ಕಾವ್ಯ ಗುಣಗಳು

| ಶಾಬ್ದಿಕ ಗುಣಗಳು | ಆರ್ಥಿಕ ಗುಣಗಳು |
|---|---|
| ಸಮ | ಮಧುರ |
| ನಿಬಿಡ | ಸಮಾಹಿತ |
| ಸುಕುಮಾರ | ಪ್ರಸನ್ನ |
| ಕಾಂತ | ಉದಾರ |
| ಓಜಸ್ವಿ | ಪ್ರಮಿತಗ್ರಾಮ್ಯ |

ಶಬ್ದಾರ್ಥಗಳು ಹೇಗೆ ಪರಸ್ಪರ ಸಂಬದ್ಧಗಳೋ ತದ್ಗತಗುಣಗಳೂ ಹಾಗೆಯೇ ಸಂಬದ್ಧ ಗಳು. ಆದರಿಂದ ಅವುಗಳನ್ನು ಸಂಪೂರ್ಣವಾಗಿ ಬೇರ್ಪಡಿಸಿ 'ಇದು ಇಂತಹದು, ಅದು ಅಂತಹದು' ಎಂದು ತೋರಿಸಿದರೆ ಅಚ್ಚುಕಟ್ಟಾಗಿ ಗುರಿಗೊಳ್ಳದೆಂಬುದು ನಿಜ. ಆದರೂ ಯಾವ ಗುಣಗಳಿಗೆ ಹೆಚ್ಚಿನ ಶಬ್ದ ಸಂಬಂಧ, ಯಾವವುಗಳಿಗೆ ವಿಶೇಷವಾಗಿ ಅರ್ಥ ಸಂಬಂಧ ಎಂಬುದನ್ನು ಮನಗಂಡು, ಅವುಗಳ ದಿಗ್ದರ್ಶನಕ್ಕಾಗಿ ಮೇಲಿನಂತೆ ವಿಭಾಗಿಸಿ ತೋರಿಸಿದ್ದೇವೆ. ಕೆಲಮಂದಿ ಲಾಕ್ಷಣಿಕರು ಮೇಲೆ ವಿಭಾಗಿಸಿದ ಸಮಾದಿ ಗುಣಗಳಲ್ಲಿ ಆರ್ಥಿಕತೆಯನ್ನೂ ಮಧುರಾದಿಗಳಲ್ಲಿ ಶಾಬ್ದಿಕತೆಯನ್ನೂ ಲಕ್ಷಣ ಲಕ್ಷ್ಯಪೂರ್ವಕವಾಗಿ ಕಾಣಿಸಿದ್ದಾರೆ. ಅಂತಹ ಭಿನ್ನಾಭಿಪ್ರಾಯ ಭಿನ್ನವಾದಗಳು ಸ್ವಾಭಾವಿಕವೇ ಸರಿ. ಅದರಿಂದ ಗ್ರಂಥಕಾರನ ಹೇಳಿಕೆಗೆ ಭಂಗವೇನೂ ಇಲ್ಲ. ವಾದದಿಂದ ಪ್ರತಿವಾದಿಗಳನ್ನು ಜಯಿಸುವುದು ತಾರ್ಕಿಕರ ಗುರಿಯಾಗಿರಬಹುದು; ಆದರೆ ಕಾವ್ಯಪುರುಷನ ಜೀವನದ ತಿರುಳು ಹುರುಳುಗಳನ್ನರಿತು ಮಾರ್ಗಗಳ ಭೇದವನ್ನು ಕಾಣಿಸಿ ಕನ್ನಡ ಕಾವ್ಯ ಸಂಸ್ಕೃತಿಯು ಹೊಲಬಾಗುವಂತೆ ಮಾಡುವುದಷ್ಟೇ 'ಕವಿರಾಜಮಾರ್ಗ'ಕಾರನ ಉದ್ದೇಶ.

# ಮಾರ್ಗ ವಿಭಾಗ (ಮುಂದುವರಿದುದು II)

## ರಸಗತ ಮಾರ್ಗಭೇದ

ಮಾರ್ಗಭೇದಗಳ ದೃಷ್ಟಾಂತಗಳನ್ನು ನೋಡಿ ಮನನ ಮಾಡಿಕೊಳ್ಳುವುದಕ್ಕೆ ಮೊದಲು ಇನ್ನೊಂದು ಸಂಗತಿಯನ್ನೂ ಭಾವಿಸಿಕೊಳ್ಳಬೇಕು. ಗುಣಗಳ ಲಕ್ಷಣ ಲಕ್ಷ್ಯ ವಿವೇಚನೆಯ ಅನಂತರ ಗ್ರಂಥಕಾರನು ವೀರಾದಿ ಶಾಂತಪರ್ಯಂತದ ಯಾವ ಯಾವ ರಸಗಳ ಪೋಷಣ ಪ್ರಕಾಶನಗಳಿಗೆ ಕ್ರಮವಾಗಿ ಯಾವ ಯಾವ ಗುಣಗಳನ್ನೇ ಉಪಯೋಗಿಸತಕ್ಕುದೆಂಬು ದನ್ನು ನಿರೂಪಿಸುತ್ತಾನೆ. ಆ ವಿವೇಚನೆಯನ್ನು ಮಾರ್ಗಭೇದ ಲಕ್ಷ್ಯಗಳಿಗಿಂತಲೇ ಹಿಂದೆ ಮಂಡಿಸಿದ್ದಾನೆ. ಇವು ದಂಡ್ಯಾದಿಗಳ ಲಕ್ಷಣ ಗ್ರಂಥಗಳಲ್ಲಿ ತೋರದಿರುವ ರಸಗತ ಮಾರ್ಗ ಭೇದವನ್ನು ವಿವರಿಸುತ್ತವೆ.

ಹಣ್ಣಿನಿಂದ ರಸವು ತಾನಾಗಿ ಸುರಿವಂತಾಗಬೇಕಾದರೆ, ಅದರ ಹೊರಗಿನ ಸಿಪ್ಪೆಯೂ ಒಳಗಿನ ತಿರುಳೂ ಪಕ್ವಾವಸ್ಥೆಗೆ ಬರಬೇಕಷ್ಟೆ. ಅದರಂತೆ ಕಾವ್ಯದ ರಸವು ಸೂಸಬೇಕಾದರೆ, ಹೊರಗಿನ ಪದರಚನೆಯೂ ಒಳಗಿನ ಹುರುಳೂ ಪರಸ್ಪರವಾಗಿ ನೇರ್ಪಡಬೇಕು. ಹಾಗೆ ನೇರ್ಪಡಿಸುವುದೆಂದರೆ—ಯಾವ ಮಾರ್ಗದ ಕವಿಯೇ ಆಗಲಿ—ಅವನ ಕರ ಪ್ರತಿಭೆಗಳ ಜಾಣ್ಮೆಯನ್ನೊಂದಿಕೊಂಡಿದೆ. ಆದರೂ ಆಲಂಕಾರಿಕನಾದ ಮೇಲೆ ಅಭ್ಯಾಸೇಚ್ಛುಗಳಾ ದವರಿಗೆ ಅದರ ಹೊಲಬನ್ನು ಮೇಲಿಂದ ಮೇಲಾದರೂ ತೋರಿಸಬೇಕಷ್ಟೆ. ಅದರಿಂದ ಹೀಗೆ ಸೂಚಿಸುತ್ತಾನೆ :

> ಬಗೆದು ಮಾರ್ಗದ್ವಿತಯಗತಿಗಳಂ
> ಪ್ರಗುಣ ಗುಣೋದಯರ್ಕಳ್ ವಿತರ್ಕದಿಂ
> ಸೊಗಯಿಸುವಂತು ವಚನರಚನೆಯಿಂ
> ನೆಗಳ್ದುರೆ ಬೆರಸಿ ಪೇೞ್ಗೆ ರಸವಿಶೇಷದೊಳ್ —ಮದರಾಸು ಪ್ರತಿ (ii, 98)

—'ಉತ್ತಮ ಕಾವ್ಯಗುಣೋದಯೇಚ್ಛುಗಳು ಊಹೆಯಿಂದ ಪದಾರ್ಥ ಗುಣಗಳ ಗತಿಯನ್ನು ಭಾವಿಸಿಕೊಂಡು ಆಯಾ ಸಂದರ್ಭಗಳ ರಸವಿಶೇಷಗಳಿಗೆ ತಕ್ಕುದಾದ ವಚನ ವಿರಚನೆಯನ್ನು ಉಪಯೋಗಿಸಲಿ.'

ಆ ರೀತಿಯಲ್ಲಿ ಪ್ರಯೋಗಿಸಿದ ಉಚಿತ ಶಬ್ದಗುಣದಿಂದ ಉಚಿತಾರ್ಥಗುಣವೂ ಅದರಿಂದ ಉಚಿತರಸವೂ ಸ್ವಾಭಾವಿಕವಾಗಿ ಹೊಮ್ಮುವುದೆಂದು ಪದ್ಯದ ತಾತ್ಪರ್ಯ. ಹಾಗೆ

'ರಸವಿಶೇಷ'ಕ್ಕನುವಾಗಿ ಸೊಗಯಿಸುವ 'ವಚನ ವಿರಚನೆ' ಅಥವಾ ರಸಾನುಕೂಲ ಪದ ರಚನೆ ಎಂದರೆ ಹೀಗೆ—

ವೀರರಸಂ ಸ್ಫುಟೋಕ್ತಿಯಿನುದಾರತಮಂ ಕರುಣಾರಸಂ ಮೃದೂ
ಚ್ಚಾರಣೆಯಿಂದಮದ್ಭುತರಸಂ ನಿಬಿಡೋಕ್ತಿಗಳಿಂದಮುಕ್ತಿ ಶೃಂ
ಗಾರರಸಂ ಸಮಂತು ಸುಕುಮಾರತರೋಕ್ತಿಗಳಿಂ ಪ್ರಸನ್ನ ಗಂ
ಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತ[ದಂ][1]

ಉತ್ಸವದಿಂದೆ ಹಾಸ್ಯರಸಮಾ ಮಧುರೋಕ್ತಿಗಳಿಂದಮುಕ್ತಿ ಬೀ
ಭತ್ಸರಸಾಂತರಂ ಶಿಥಿಲಬಂಧನದಿಂ ಸತತಂ ಭಯಾನಕೋ
ದ್ಯತ್ಸುರಸಂ ಕರಂ ವಿಷಮಬಂಧನದಿಂ ನೃಪತುಂಗದೇವ ಮಾ
ರ್ಗೋತ್ಸವಮೂರ್ಜಿತೋಕ್ತಿಗಳಿನಕ್ಕ ತಿರೌದ್ರರಸಂ ರಸಾವಹಂ —(ii, 97–98)

ಈ ಪದ್ಯಗಳು ಇಂಥಿಂಥ ವಿಶಿಷ್ಟ ಬಂಧರೂಪಗುಣದಿಂದ ಇಂಥಿಂಥ ರಸವನ್ನು ಒಸರಿಸುವಂತೆ ಕಾವ್ಯರಚನೆಯನ್ನೆಸಗತಕ್ಕುದು ಎಂಬುದನ್ನು ನಿರೂಪಿಸುತ್ತವೆ. ಅವುಗಳನ್ನು ಒಂದಿಷ್ಟು ವಿವರಿಸುವುದು ಉಚಿತವೆಂದು ತೋರುತ್ತದೆ.

## ೧. 'ವೀರರಸಂ ಸ್ಫುಟೋಕ್ತಿಯಿಂ (ಪ್ರಕಟಮಕ್ಕೆ)'—

ದಾಕ್ಷಿಣಾತ್ಯರ 'ಸಮಬಂಧ'ದೊಳಗೆ 'ಮೃದೂಕ್ತಿ ಸ್ಫುಟೋಕ್ತಿ'ಗಳೆಂಬ ಎರಡು ಭೇದಗಳೆಂಬುದು ಹಿಂದೆ ವಿವೃತವಾಗಿದೆ. ಆ ಸ್ಫುಟೋಕ್ತಿ ಎಂದರೆ ಭ, ಧ,—ಮೊದಲಾದ ವರ್ಗ ಚತುರ್ಥಾಕ್ಷರಗಳಿಂದಲೇ ಹೆಚ್ಚಾಗಿ ಕೂಡಿದ ಮಾತೆಂಬುದು ಹಿಂದೆ ಸೂಚಿತವಾಗಿದೆ. ಹಾಗೆ ಸಮತೆಗೊಂಡ ಸ್ಫುಟಾಕ್ಷರಗಳಿಂದ ಬದ್ಧವಾದ ಸ್ಫುಟೋಕ್ತಿಗಳು ಕ್ರಮವಾಗಿ ವೀರಾರ್ಥ, ವೀರಭಾವ, ವೀರರಸಗಳನ್ನು ಹೊಮ್ಮಿಸಲು ಸಮರ್ಥಗಳು. ವೀರರಸಕ್ಕೆ ಆಸರೆಯಾದುದೆಂದರೆ ಮನುಷ್ಯ ಹೃದಯದಲ್ಲಿ ನೆಲೆಗೊಂಡ ಸ್ಥಾಯಿ ಭಾವವಾದ ಉತ್ಸಾಹವಲ್ಲವೆ? ಆ ಉತ್ಸಾಹವೆಂದರೆ ಅತಿ ಸ್ಫುಟವಾದ, ಸರಳವಾದ ಪ್ರಕೃತಿಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಅದರಿಂದ ಹೊಸಲಾಗುವ ವೀರರಸವು ಹರಿಯುವ ದಾರಿಯಾದ ಪದವಾಕ್ಯಗಳೂ ಸ್ಫುಟಾಕ್ಷರ ಬದ್ಧಗಳಾಗಿರುವುದು ಅವಶ್ಯ; ಅದು ವಿಷಮ ಬಂಧಾದಿಗಳಲ್ಲಿ ಹರಿದರೆ ಹುಳಿತ ಹಂಡೆಯಲ್ಲಿ ತುಂಬಿದ ಹಾಲಿನಂತಾಗಬಹುದೆಂದರೆ ತಪ್ಪಾಗದು.

## ೨. 'ಉದಾರತಮಂ ಕರುಣಾರಸಂ ಮೃದೂಚ್ಚಾರಣೆಯಿಂದಂ (ಪ್ರಕಟಮಕ್ಕೆ)'—

ಕರುಣಾರಸವೆಂದರೆ, ದ್ರವೀಕರಿಸಿ ಎತ್ತೆತ್ತಲೂ ಹರಿಯುವ ಹೃದಯದ ಉದಾರತೆಯ ಪರಮಾವಧಿಯನ್ನು ಸೂಚಿಸುವುದು. ಆ ಕರುಣಾರಸದ ಮೂಲದಲ್ಲಿ ಸ್ಥಾಯಿಯಾದ

[1] ಎರಡು ಪ್ರತಿಗಳಲ್ಲೂ 'ಪ್ರಶಾಂತದಿಂ' ಎಂಬ ಪಾಠವೇ ಇದೆ. ಅರ್ಥವನ್ನು ಭಾವಿಸಿದರೆ, 'ಪ್ರಶಾಂತದಂ' ಅಥವಾ 'ಪ್ರಶಾಂತಕಂ' ಎಂದಿರಬೇಕೆಂದು ತೋರುವುದು.

ಶೋಕಭಾವವೂ ಅದನ್ನೊಂದಿದ ರಸವೂ ಮೃದುವೆಂಬುದು ತಾನಾಗಿ ಸಿದ್ಧವಾಗುತ್ತಿದೆ. ಆದರಿಂದ, ಸಮಬಂಧಭೇದದೊಳಗೊಂದಾದ ಮೃದುಪದರಚನೆಯೇ ಅದರ ಉದ್ಗಮ ಸ್ಥಾನವಾಗತಕ್ಕುದು. ಹಾಗಿಲ್ಲದೆ ಕಠಿನಪದಬಂಧಗಳಿಂದ ಕರುಣಾರಸವನ್ನುಕ್ಕಿಸಲು ಪ್ರಯತ್ನಿಸಿದರೆ, ಅದು ಪಾಯಸದ ರಸದಂತಾಗದು ; ಚಕ್ಕುಲಿಯನ್ನು ಜಗಿದು ಒಳಗೊಳ್ಳ ಬೇಕಾದ ರಸವಾದೀತು. 'ಉದಾರತಮಂ ಕರುಣಾರಸಂ' ಎಂಬ ಮಾತಿನಿಂದ 'ಉದಾರ ಗುಣ'ವೆಂಬುದು ಬರಿಯ ಆರ್ಥಿಕ ಗುಣವೆಂಬುದೂ 'ಮೃದು'ವೇ ಅದಕ್ಕೆ ಸಂಬಂಧಿಸಿದ ಪದಗುಣವೆಂಬುದೂ ಸೂಚಿತವಾಗುವುದು. ಈ ಅಭಿಪ್ರಾಯದಿಂದಲೇ ಗ್ರಂಥಕಾರನು ಹಿಂದೆ ಪದೋದಾರಗುಣಕ್ಕೆ ಭಿನ್ನ ದೃಷ್ಟಾಂತವನ್ನು ನಿರೂಪಿಸದೆ ಬಿಟ್ಟುದು—ಎಂದು ತೋರುವುದು.

### ೩. 'ಅದ್ಭುತ ರಸಂ ನಿಬಿಡೋಕ್ತಿಗಳಿಂದಮಲ್ತೆ'—

ಬೆರಗನ್ನುಂಟುಮಾಡುವ ವಿಷಯಗಳಿಂದ ಅಂತರಂಗದಲ್ಲಿ ತಲೆದೋರುವ ಆಶ್ಚರ್ಯ ಭಾವನೆಯೇ ಬಳೆದು ಅದ್ಭುತರಸವೆನ್ನಿಸುವುದು. ಅಂತಹ ಆಶ್ಚರ್ಯವಿಷಯಗಳು ಇಂದ್ರಿಯಗೋಚರಗಳಾದೊಡನೆ ಅವನ್ನು ತಿಳಿದುಕೊಳ್ಳಬೇಕೆಂಬ ಎಣಿಕೆಯಿಂದ, ಸ್ವಾಭಾವಿಕವಾಗಿ ಚೆದರಿಕೊಂಡಿರುವ ಅಂತರಂಗ ಭಾವನೆಗಳೆಲ್ಲ ನಿಬಿಡೀಕೃತ (ಶ್ಲಿಷ್ಟ) ಗಳಾಗುವುದು ಸ್ವಭಾವವಷ್ಟೆ. 'ನಿಬಿಡ' ಎಂದರೆ ಒಂದನ್ನು ಇನ್ನೊಂದು ತಬ್ಬಿಕೊಂಡು, ಅಥವಾ ಒತ್ತಿಕೊಂಡು, ಕೂಡುವುದು. ಹಾಗೆ ಹೃದಯನಿಬಿಡೀಕರಣವನ್ನೆಸಗುವ ಅರ್ಥವನ್ನು ಸೂಚಿಸುವ ಉದ್ಯೋಗಕ್ಕೆ ನಿಬಿಡೋಕ್ತಿಯೇ ಸಮರ್ಥವಾಗಿರುವುದು ಪ್ರಕೃತಿ ಗೊಪ್ಪುವ ಮಾತು.

### ೪. 'ಶೃಂಗಾರರಸಂ ಸಮಂತು ಸುಕುಮಾರತರೋಕ್ತಿಗಳಿಂ (ಪ್ರಕಟಮಕ್ಕೆ)'—

ಅನುಕೂಲ ವಿಷಯಗಳಿಂದ ಇಂದ್ರಿಯಗಳು ಅಂತರಂಗವನ್ನು 'ರತಿ'ಯುತವಾಗಿ ಅಥವಾ 'ಅನುರಾಗ'ಯುತವಾಗಿ ಮಾಡುತ್ತವೆ. 'ಅನುರಾಗ' ಅಥವಾ 'ರತಿ' ಎಂದರೆ, ಉಭಯ ಹೃದಯಗಳನ್ನು ಒಡಗೂಡಿಸುವ ಹಾರ್ದಿಕವಾದ ಸ್ನೇಹ. ಬಾಹ್ಯಸ್ನೇಹವು ಸುಕುಮಾರ ವಾದರೆ, ಆಂತರಂಗಿಕವಾದ ಈ ಸ್ನೇಹವು ಸುಕುಮಾರತಮವಾಗಿ ಭಾವನಾ ಮಾತ್ರ ಗ್ರಾಹ್ಯ ವಾಗಿರುವುದು. ಅದನ್ನು ಸೂಚಿಸುವ ಸೊಲ್ಲು 'ಸುಕುಮಾರತರ'ವಾಗಿರಬೇಕೆಂಬುದು ಸಕಾರಣವಾಗಿದೆ.

### ೫. 'ಪ್ರಸನ್ನ ಗಂಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತ[ದಂ]'—

'ಪ್ರಸನ್ನ ಗಂಭೀರ' ಎಂದರೆ ಅತಿ ನಿರ್ಮಲವಾಗಿ, ಸ್ವಚ್ಛವಾಗಿ, ಬಲು ಆಳದಿಂದ ಹೊಳೆಯು ವಂತಹದು. ಶಮ (ಶಾಂತ) ಭಾವರೂಪದ ಅರ್ಥವು ಅರ್ಹನಾದ ವ್ಯಕ್ತಿಯ ಹೃದಯ

ತಳದಲ್ಲಿ ನೆಲಸಿರುತ್ತದೆ. ಇಂದ್ರಿಯಗ್ರಾಹ್ಯದ ಯಾವ ತೊಡಕೂ ಇಲ್ಲದೆ ನಿಸ್ಪೃಷ್ಟವಾದುದರಿಂದಲೇ ಅದಕ್ಕೆ ಅಷ್ಟು ನಿರ್ಮಲತೆ; ಹೃದಯದ ನೆಲೆಯ ನಿಲವಿನ ವರೆಗೆ ವ್ಯಾಪಿಸಿದುದರಿಂದಲೇ ಅದಕ್ಕೆ ಅಷ್ಟು ಗಂಭೀರತೆ; ಅಂತಹ ಭಾವವನ್ನು ಸೂಚಿಸಲು ಅಂತಹ ಪದರಚನೆಯೇ ಅವಶ್ಯವಾದುದರಿಂದ 'ಪ್ರಸನ್ನ ಗಂಭೀರತರೋಕ್ತಿ'ಯಿಂದ ಶಾಂತವು ಪ್ರಕಟವಾಗುವುದು—ಎನ್ನಬೇಕಾಯಿತು.

## ೬. 'ಉತ್ಸವದಿಂದ ಹಾಸ್ಯರಸಮಾ ಮಧುರೋಕ್ತಿಗಳಿಂದಂ (ಪ್ರಕಟಮಕ್ಕೆ)'—

ರಸವಿದು ಮನಸ್ಸಿನ ಬೇಸರಿಕೆಯನ್ನು ಹೋಗಲಾಡಿಸಿ ಉಲ್ಲಾಸವನ್ನುಂಟುಮಾಡುವುದು ಅಥವಾ ಉತ್ಸವಕಾರಿಯಾಗುವುದು. 'ಮಧುರ ರಸ'ದ ಆಸವಾದಿಗಳನ್ನು ಸೇವಿಸಿ ಹೇಗೆ ಅಂಥ ಆಲಸಿಕೆಯನ್ನು ನೀಗಿಬಿಡುತ್ತಾನೋ ಹಾಗೆ ರಸಿಕನಾದವನು 'ಕಿವಿಗಿನಿದಾಗಿರ್ಪ ವಚನವಿರಚನೆ'ಯನ್ನು ಆಲಿಸುವುದುಂಟು. ಅದು ಹಾಸಭಾವವನ್ನು ಉದ್ರೇಕಿಸುವುದು. ಅಂಥ ಮಧುರಭಾವವಾದ ಹಾಸವನ್ನೊಳಕೊಂಡು ಶ್ರಾವಕನ ಕಿವಿಗೊಪ್ಪಿಸಲು ಮಧುರೋಕ್ತಿಯೇ ತಕ್ಕುದು.

## ೭. 'ಬೀಭತ್ಸರಸಾಂತರಂ ಶಿಥಿಲಬಂಧನದಿಂ (ಪ್ರಕಟಮಕ್ಕೆ)'[1]—

'ಜುಗುಪ್ಸೆ' ಅಥವಾ ಕೊಕ್ಕರಿಕೆ (ಅಸಹ್ಯತೆ) ಬೀಭತ್ಸರಸದ ಮೂಲ ರೂಪವಾದ ಭಾವ. 'ರತಿ' ಮೊದಲಾದ ಭಾವರೂಪಾರ್ಥಗಳಿಂದ ಪರಿಣತಿ ಪಡೆದ ಮಾನಸಿಕಾವಸ್ಥೆಯು ಶೃಂಗಾರಾದಿ ನಾಮಗಳನ್ನು ಹೊಂದುವುದಷ್ಟೇ ಅಲ್ಲ; ಅವುಗಳಿಗೆ 'ರಸ' ಎಂಬ ಹೆಸರೂ ಪ್ರಾಪ್ತವಾಗುವುದು. ಆದರೆ ಇಂತಹ 'ಕೊಕ್ಕರಿಕೆ (ಕುಜು+ಕರ+ಇಕೆ=ಕುಂದುವಿಕೆ ಎಂಬ ಭಾವದ ಪರಿಣತಾವಸ್ಥೆಗೂ 'ಬೀಭತ್ಸ ರಸ' ಎಂಬ ಹೆಸರನ್ನಿಡಬಹುದೆ? ಹೌದು, ಇಡಬಹುದಷ್ಟೇ ಅಲ್ಲ; ಮಹಾಕವಿಗಳ ಜಾಣ್ಮೆಯ ಫಲವಾಗಿ, ಅವು ರಸ್ಯಮಾನಗಳಾಗಿ ರಸಗಳೆನ್ನಿಸುತ್ತವೆ. ಅದ್ಭುತ ರಸಭಾವವಾದ ಆಶ್ಚರ್ಯವು ಹೇಗೆ ಅಂತರಂಗವನ್ನು ನಿಬಿಡೀಕೃತವನ್ನಾಗಿ ಮಾಡುವುದೋ ಹಾಗೆ ಈ ಕೊಕ್ಕರಿಕೆಯು ಅಂತರಂಗವನ್ನು ಸಡಿಲಾಗಿ ಮಾಡುವುದು. ಹಾಗೆ ಹೃದಯವನ್ನು ಶಿಥಿಲೀಕರಿಸುವ ಭಾವ(ಅರ್ಥ)ದಿಂದ ಏಳ್ಗೆ ಪಡೆಯುವ ಬೀಭತ್ಸವನ್ನು ಶಿಥಿಲಬಂಧನದಿಂದಲೇ ವಿಸ್ತರಿಸತಕ್ಕುದು. ಈ ಶಿಥಿಲಬಂಧವು ಉತ್ತರ ಮಾರ್ಗೀಯ ಗುಣ.

---

1 ಈ ಸ್ಥಾಯಿಭಾವವೇ ಸಾಹಿತ್ಯದೊಳಗೆ ವಿಷಯದೊಡನೆ ಪ್ರಾಧಾನ್ಯವಡೆದರೆ ಅರ್ಥವೆನ್ನಿಸುತ್ತಿದೆ. ಆ ಅರ್ಥದ ಸಾರವಾಗಿ ಹರಿದರೆ, ಅದೇ 'ರಸ' ಎನ್ನಿಸುವುದು. ಇದೀಗ ಭಾವ, ಅರ್ಥ, ರಸಗಳೊಳಗಿನ ಅಂತರಂಗಿಕ ಭೇದವೆಂದು ನಮ್ಮೆಣಿಕೆ.

**೮. 'ಸತತಂ ಭಯಾನಕೋದ್ಯತ್ಸುಸರಂ ಕರಂ ವಿಷಮ
ಬಂಧನದಿಂ (ಪ್ರಕಟಮಕ್ಕೆ)'—**

'ಭಯ' ಎಂಬ ಸ್ಥಾಯಿಭಾವ(ಅರ್ಥ)ದಿಂದ ಏಳ್ಗೆವಡೆದ ಮಾನಸಿಕಾವಸ್ಥೆಯನ್ನೇ ಭಯಾನಕ ರಸವೆನ್ನುವುದು. ಭಯಭಾವವು ಅನುಭಾವಕನ ಅಂತರವನ್ನು ತಬ್ಬಿಬ್ಬಾಗಿಸುವುದು ಅಲ್ಲವೆ ವಿಷಮವಾಗಿಸುವುದು ಪ್ರಕೃತಿ. ಅದರಿಂದ ಭಯಾನಕ ರಸವನ್ನು ವಿಸ್ತರಿಸುವಲ್ಲಿ ವಿಷಮ ಬಂಧನವೇ ತಕ್ಕುದೆಂಬುದು ನಿಸ್ಸಂಶಯವಾದ ಮಾತು.

**೯. 'ನೃಪತುಂಗ ಮಾರ್ಗೋತ್ಸವಂ ಊರ್ಜಿತೋಕ್ತಿಗಳಿನಕ್ಕತಿ
ರೌದ್ರರಸಂ—**

ಸಮಾಸ ಬಹುಳವಾದ ಓಜೋಬಂಧವನ್ನೆ 'ಊರ್ಜಿತೋಕ್ತಿ' ಎಂದುದು. ರೋಷಭಾವದಿಂದ ವೃದ್ಧಿಗೊಳ್ಳುವ ರಸವೇ ರೌದ್ರರಸ. ಆ ರೋಷಭಾವನೆಯೊದಗಿದ ವ್ಯಕ್ತಿಯ ಅಂತರಂಗವು ಊರ್ಜಿತವಾಗುವುದು, ಎಂದರೆ ಬೇರೂರಿದಂತೆ ನೆಲೆಗೊಳ್ಳುವುದು. ಅಂತಹ ದೃಢಭಾವನೆಯ ಪರಿಣತಿಯಾದ ರೌದ್ರರಸದ ಪ್ರತಿಪಾದನೆಗೆ ಊರ್ಜಿತೋಕ್ತಿಯೇ ತಕ್ಕುದು.

ಉಕ್ತಿಕ್ರಮಭೇದಗಳೊಡನೆ ವರ್ಣನೀಯವಾದ ರಸಗಳನ್ನು ಹೀಗೆ ಸಂಗ್ರಹವಾಗಿ ಚಿತ್ರಿಸಬಹುದು—

೧. **ವೀರರಸ**—ದಾಕ್ಷಿಣಾತ್ಯವಾದ ಸಮಬಂಧದ ಸ್ಫುಟೋಕ್ತಿಯಿಂದ ವರ್ಣಿತವಾಗಬೇಕು.
೨. **ಕರುಣಾರಸ**—ಆ ಸಮಬಂಧದ ಮೃದೂಚ್ಚಾರಣೆಯಿಂದ ವಿಸ್ತೃತವಾಗಬೇಕು.
೩. **ಅದ್ಭುತರಸ**—ನಿಬಿಡೋಕ್ತಿಗಳಿಂದ ನಿರೂಪಿತವಾಗಬೇಕು (ಹಿಂದೆ 'ಸ್ಫುಟೋಕ್ತಿಯಿಂ', 'ಮೃದೂಚ್ಚಾರಣೆಯಿಂ'—ಎಂದು ಏಕವಚನದಲ್ಲಿದೆ. ಇಲ್ಲಿ 'ನಿಬಿಡೋಕ್ತಿಗಳಿಂ' ಎಂದು ಬಹುವಚನವಿದೆ. ಆದರಿಂದ, 'ದಕ್ಷಿಣೋತ್ತರಗಳೆಂಬ ಎರಡು ನಿಬಿಡೋಕ್ತಿಗಳಿಂದ'—ಎಂಬುದೇ ಗ್ರಂಥಕಾರನ ಅಭಿಪ್ರಾಯವಾಗಿರಬಹುದೆಂದು ತೋರುತ್ತದೆ.
೪. **ಶೃಂಗಾರರಸ**—'ಸುಕುಮಾರತರೋಕ್ತಿ'ಗಳಿಂದ ನಿರೂಪಿತವಾಗಬೇಕು. (ಇಲ್ಲಿಯೂ ಬಹುತ್ವದಿಂದಾಗಿ ಉಭಯೋಕ್ತಿಗಳು ಸೂಚಿತವಾಗುತ್ತಿವೆ).
೫. **ಶಾಂತರಸ**—ದಾಕ್ಷಿಣಾತ್ಯರ 'ಪ್ರಸನ್ನ ಗಂಭೀರತರೋಕ್ತಿಯಿಂದ ಸೂಚಿತವಾಗಬೇಕು.
೬. **ಹಾಸ್ಯರಸ**—'ಮಧುರೋಕ್ತಿ'ಗಳಿಂದ ಪ್ರತಿಪಾದಿತವಾಗಬೇಕು. (ಇಲ್ಲಿ ಉಭಯ ಮಧುರೋಕ್ತಿಗಳು ಸೂಚಿತವಾಗಿವೆ).
೭. **ರೌದ್ರ ರಸ**—ಊರ್ಜಿತೋಕ್ತಿ'ಗಳಿಂದ ವರ್ಣಿತವಾಗಬೇಕು. (ಇಲ್ಲಿಯೂ ಉಭಯ ಮಾರ್ಗೋಕ್ತಿಗಳು ಸೂಚಿತವಾಗಿವೆ).

೮. **ಬೀಭತ್ಸ ರಸ**—ಔತ್ತರೇಯರ 'ಶಿಥಿಲ ಬಂಧನ'ದಿಂದ ಹೊಮ್ಮುವುದು.

೯. **ಭಯಾನಕ ರಸ**—'ಊರ್ಜಿತೋಕ್ತಿ'ಗಳಿಂದ ವರ್ಣಿತವಾಗಬೇಕು. (ಇಲ್ಲಿಯೂ ಉಭಯ ಮಾರ್ಗೋಕ್ತಿಗಳು ಸೂಚಿತವಾಗಿವೆ). ಗ್ರಂಥಕಾರನು 'ರೌದ್ರರಸಂ ನೃಪತುಂಗದೇವ ಮಾರ್ಗೋತ್ಸವಂ' ಎಂದು ಹೇಳಿ ಆತನ 'ಅಪ್ರತಿಹತ ವಿಕ್ರಮತ್ವ'ದಿಂದೊಡಗೂಡಿದ ಸಮಾಸೀಕರಣದ ಓಜೋಗುಣ ರಸನಿರೂಪಣ ಕ್ರಮವನ್ನೂ ನಿರೂಪಿಸಿದ್ದಾನೆ.

ಇಲ್ಲಿ, ವೀರ, ಕರುಣ ಮತ್ತು ಶಾಂತರಸಗಳು ಕ್ರಮವಾಗಿ 'ಸ್ಫುಟೋಕ್ತಿ', 'ಮೃದೂಚ್ಚಾರಣೆ' ಮತ್ತು 'ಪ್ರಸನ್ನ ಗಂಭೀರತರೋಕ್ತಿ'ಗಳೆಂಬ ದಾಕ್ಷಿಣಾತ್ಯ ಮಾರ್ಗದಿಂದಲೂ, ಬೀಭತ್ಸ ಭಯಾನಕಗಳೆಂಬ ಎರಡು ರಸಗಳು 'ಶಿಥಿಲ ಬಂಧನ', 'ವಿಷಮ ಬಂಧನ'ಗಳೆಂಬ ಔತ್ತರೇಯ ಮಾರ್ಗದಿಂದಲೂ, ಅದ್ಭುತ, ಶೃಂಗಾರ, ಹಾಸ್ಯ ರಸಗಳು ಕ್ರಮವಾಗಿ 'ನಿಬಿಡ', 'ಸುಕುಮಾರ' ಮತ್ತು 'ಮಧುರೋಕ್ತಿ'ಗಳೆಂಬ ಉಭಯ ಮಾರ್ಗಗಳಿಂದಲೂ ಪ್ರತಿಪಾದ್ಯಗಳೆಂದು ಸೂಚಿತವಾಗಿದೆ ; ಅಲ್ಲದೆ, ಕೊನೆಯ 'ನೃಪತುಂಗ ಮಾರ್ಗೋತ್ಸವ'ವಾದ ರೌದ್ರ ರಸವು ಉಭಯೋರ್ಜಿತೋಕ್ತಿಗಳಿಂದ ವರ್ಣಿತವಾಗತಕ್ಕುದೆಂದೂ ಸ್ಫುಟವಾಗಿದೆ.

ಈ ವರೆಗಿನ ಗುಣನಿರೂಪಣ ಕ್ರಮದಿಂದ ಅದೊಂದು ಬಗೆಯ ಆಕ್ಷೇಪವು ತಲೆದೋರಲೂ ಬಹುದು. ವಚನ ವಿರಚನಾರೂಪವಾದ ಬಂಧಾರ್ಥಗುಣಗಳಲ್ಲಿ ದಾಕ್ಷಿಣಾತ್ಯರ ಗುಣಗಳಷ್ಟು ಔತ್ತರೇಯಗುಣಗಳು ಸಂಪೂರ್ಣವೂ ಅಲ್ಲ, ಮನೋಹರವೂ ಅಲ್ಲ ಎಂದಂತಾಯಿತು. ಅದರಿಂದ ಸಾಹಿತ್ಯಮಾರ್ಗದ ಆ ಭಾಗದಲ್ಲಿ ಉತ್ತರಮಾರ್ಗವು ನ್ಯೂನವೆಂದಂತಾಗುತ್ತದೆ. ಆದರೆ ರಸನಿರೂಪಣ ಕ್ರಮವನ್ನು ನೋಡಿದರೆ, ದಕ್ಷಿಣ ಮಾರ್ಗವೂ ಒಂದಿಷ್ಟು ನ್ಯೂನತೆಗೊಂಡಿದೆ—ಎಂಬುದೂ ತೋರುತ್ತಿದೆ. ಸಾಹಿತ್ಯದಲ್ಲಿ ನವರಸಗಳಿವೆ ಎಂಬುದನ್ನು ಉಭಯ ಮಾರ್ಗೀಯರೂ ಒಪ್ಪುತ್ತಾರಲ್ಲವೆ ? ಆದರೆ, ವೀರ, ಕರುಣ, ಅದ್ಭುತ, ಶೃಂಗಾರ, ಶಾಂತ, ಹಾಸ್ಯ—ಈ ಆರು ರಸಗಳನ್ನು ಹೊಮ್ಮಿಸಲು ತಕ್ಕುವಾದ 'ಸ್ಫುಟ', 'ಮೃದು', 'ನಿಬಿಡ', 'ಸುಕುಮಾರ', 'ಪ್ರಸನ್ನ', ಮತ್ತು 'ಮಧುರ' ಎಂಬ 'ಉಕ್ತಿ'ಗಳು ಅಥವಾ 'ಬಂಧ'ಗಳು ದಕ್ಷಿಣ ಮಾರ್ಗದಲ್ಲಿವೆ. ಬೀಭತ್ಸ ರಸಕ್ಕೆ ಅನುವಾದ 'ಶಿಥಿಲ ಬಂಧನ'ವೂ ಭಯಾನಕಕ್ಕೊಪ್ಪುವ 'ವಿಷಮ ಬಂಧನ'ವೂ ಔತ್ತರೇಯ ಗುಣಗಳು. 'ಅತಿ ರೌದ್ರರಸ'ವನ್ನು ಹರಿಯಿಸುವ 'ಊರ್ಜಿತೋಕ್ತಿ'ಯಾದರೂ ದಾಕ್ಷಿಣಾತ್ಯರ 'ಗದ್ಯ'ಕ್ಕೆ ಮಾತ್ರವೇ ಒಪ್ಪುವುದು ; ಸಾಹಿತ್ಯದ ಇನ್ನೊಂದು ಭಾಗವಾದ ಪದ್ಯಕ್ಕಲ್ಲ—ಇದೇ ಆ ಆಕ್ಷೇಪ. ಇಂಥ ಗುರಿಗೊಂಡು ನಾಟುವ ಆಕ್ಷೇಪಗಳಿಗೆ 'ಹೌದು' ಎಂದು ಒಪ್ಪುವುದೇ ಸಮಾಧಾನಕರವಾದ ಉತ್ತರ. ನಿದಾನವನ್ನರಿತ ವೈದ್ಯನು ರೋಗವನ್ನು ಪರೀಕ್ಷಿಸಿ, ಇದು ವಿಶಿಷ್ಟವಾದ ಇಂಥ ರೋಗ ; ಇಂಥ ಚಿಕಿತ್ಸೆಯನ್ನು ಹೀಗೆ ಮಾಡತಕ್ಕುದು—ಎಂದ ಮೇಲೆ, ಆ ರೋಗವನ್ನು ಒಪ್ಪಿಕೊಂಡು ಆ ಚಿಕಿತ್ಸೆಯನ್ನು ಮಾಡಿಸಿ

ಕೊಳ್ಳುವುದೇ ಆರೋಗ್ಯ ರಕ್ಷಣೆಯ ಮಾರ್ಗವಲ್ಲವೆ ? ಅದರಂತೆ, ದಾಕ್ಷಿಣಾತ್ಯರೂ ತಮ್ಮ ನ್ಯೂನತೆಯನ್ನು ಒಪ್ಪಿಕೊಂಡು, ಉತ್ತರ ಮಾರ್ಗದ ಕೆಲವು ಬಂಧಗಳನ್ನು ಸಂದರ್ಭಾನುಸಾರವಾಗಿ ಆರಿಸಿಕೊಳ್ಳಲೇಬೇಕು. ಮತ್ತಿನವರಾದ ಪಂಪ, ರನ್ನ, ಜನ್ನ, ರಾಘವಾಂಕ, ಗದುಗಿನ ನಾರಣಪ್ಪ ಮೊದಲಾದವರಲ್ಲಿ ಆ ಎಲ್ಲ ಬಂಧಗಳನ್ನೂ ಕಾಣಬಹುದಾದುದರಿಂದ, ಅವರು ಆ ಹಿತಸೂಚನೆಯನ್ನು ಅಂಗೀಕರಿಸುತ್ತಾ ಬಂದಿದ್ದರೆಂಬುದು ನಿರ್ಧಾರವಾಗುತ್ತಿದೆ. ಯಾವ ಮಾರ್ಗವಾದರೇನು—ಮಾರ್ಗಗಳೊಳಗಿನ ಅತ್ಯುತ್ತಮ ಭಾಗಗಳೇ ನಮಗೆ ಬೇಕಾದವುಗಳು. ಅವುಗಳನ್ನೆಲ್ಲ ಕೂಡಿಸಿಕೊಂಡಾಗ ಇನ್ನೊಂದು ಮಾರ್ಗವೇ ತಲೆದೋರಿದರೂ ಅದು ದೋಷವಲ್ಲ. ಅದು ಉತ್ತಮದ ಮೇಲಿನ ಉತ್ತಮ. ಅಭಿಪ್ರಾಯವಿದು ನಮ್ಮದು ಮಾತ್ರವಲ್ಲ ; ಮೇಲಿನ ಆಕ್ಷೇಪಕ್ಕೆ ಗ್ರಂಥಕಾರನೇ ಕೊಟ್ಟ ಉತ್ತರವಿದು ಎಂದು ಭಾವಿಸಿದರೂ ತಪ್ಪಾಗದು—

> ಮಾತುಗಳಾವುವಾನುಮುಪವರ್ಣಿತ ಮಾರ್ಗಯುತಪ್ರಯೋಗಸಂ
> ಜಾತವಿಭಾಗದಿಂ ನೆಗಟ್ದ ಕನ್ನಡದೊಳ್ ಗುಣಮಂ ತಗುಳ್ಚುಗುಂ
> ನೀತಿನಿರಂತರಾನುಗತವೃತ್ತಿ ವಿಕಲ್ಪಿತಮಂ ತದೀಯ ನಿ
> ರ್ಣೀತಿಯನೀ ತೆಱತ್ತು ತಱಿಸಲ್ಗೆ ಬುಧೋತ್ತಮರುಕ್ತಿ ಪೂರ್ವಕಂ —(ii, 99)

—"ಮಾತುಗಳು ಯಾವ ಮಾರ್ಗದವುಗಳಾದರೂ ದೋಷವೇನು ? ಎರಡು ಮಾರ್ಗಗಳೂ ಮಾರ್ಗಗಳೇ ಸರಿ. ಆ ಎರಡು ಮಾರ್ಗಗಳಿಂದ ಕೂಡಿದ ಪ್ರಸಿದ್ಧವಾದ ಕನ್ನಡವೆಂಬುದು ಒಂದೇ. ಆ ಕನ್ನಡದೊಳಗೆ ಎರಡೂ ಮಾರ್ಗಗಳ ಬಂಧಗಳು ಗುಣವನ್ನೇ ಉಂಟುಮಾಡುವುವು. ಆದರಿಂದ 'ನೀತಿನಿರಂತರ'ನಿಂದ ಅನುಗತವಾದ ಉಕ್ತಿ (ಬಂಧ) ಭೇದಗಳನ್ನೂ, ಸಂದರ್ಭಾನುಸಾರವಾಗಿ ಅವುಗಳನ್ನು ಪ್ರಯೋಗಿಸುವ ಸಿದ್ಧಾಂತಗಳನ್ನೂ ಬುಧೋತ್ತಮರು 'ಉಕ್ತಿಪೂರ್ವಕ'ವಾಗಿ ಅನುಸರಿಸಲಿ !"



# ಮಾರ್ಗ ವಿಭಾಗ (ಮುಂದುವರಿದುದು III)

## 'ನೆಗಟ್ದಿ ಕನ್ನಡ'ದೊಳಗಿನ ಮಾರ್ಗಭೇದ

ದಕ್ಷಿಣೋತ್ತರ ಮಾರ್ಗಗಳ ಕುರಿತು ಬಹುಕಾಲಕ್ಕೆ ಹಿಂದೆ ವಿದ್ವಾಂಸರೊಳಗೆ ನಡೆದ ವಾದ ವಿವಾದಗಳ ಸಾರವನ್ನು ಆದಿಯಲ್ಲೇ ಸೂಚಿಸಿದ್ದೇವಷ್ಟೆ. 'ಮಾತುಗಳಾವುವಾನುಂ ಉಪ ವರ್ಣಿತ ಮಾರ್ಗಯುತ ಪ್ರಯೋಗ ಸಂಜಾತ ವಿಭಾಗದಿಂ ನೆಗಟ್ದಿ ಕನ್ನಡದೊಳ್ ಗುಣಮುಂ ತಗುಳ್ಕುಗುಂ'—ಎಂಬ ಪದ್ಯಾರ್ಥವನ್ನು ಆ ಉಭಯ ಪಕ್ಷಗಳವರೂ ತಂತಮ್ಮ ವಾದಗಳಿಗೆ ಸಾಧನವನ್ನಾಗಿ ಮಾರ್ಪಡಿಸಿಕೊಳ್ಳಲೂ ಬಹುದು. ಆದರೆ ಅದು ದಾಕ್ಷಿಣಾತ್ಯ ಔತ್ತರೇಯ ಮಾರ್ಗ ಭಿನ್ನಗಳಾದ ಕನ್ನಡಗಳೊಳಗೆ ರಸಾನುಕೂಲ ವಚನಗಳು ಯಾವು ವಾದರೇನು ?—ಎಂಬ ಅರ್ಥವನ್ನು ಮಾತ್ರವೇ ಸೂಚಿಸುವುವಲ್ಲದೆ, ಬೇರೇನೂ ಅಲ್ಲ. ದೇಸಿಯಾದ ಕನ್ನಡ ನುಡಿಯೊಳಗೂ ಈ ಮಾರ್ಗಭೇದವಿದೆ ಎಂಬುದನ್ನು ಗ್ರಂಥಕಾರನು 'ಈ ತೆಱತ್ತು ತಱಿಸಲ್ಗೆ ಬುಧೋತ್ತಮರ್ ಉಕ್ತಿಪೂರ್ವಕಂ'—ಎಂದು ದೃಷ್ಟಾಂತ ಪೂರ್ವಕವಾಗಿ ತೋರಿಸಿದ್ದಾನೆ.

ಹಾಗೆ ಗ್ರಂಥಕಾರನು ಕೊಟ್ಟಿರುವ ದೃಷ್ಟಾಂತಗಳು ಒಂಬತ್ತು ಪದ್ಯಗಳಿಂದ ಕೂಡಿವೆ. ಮೊದಲನೆಯ ಪದ್ಯದ ಪೂರ್ವಾರ್ಧ ಉತ್ತರಾರ್ಧಗಳಲ್ಲಿ ಕ್ರಮವಾಗಿ ಉತ್ತರ ಮಾರ್ಗ ವನ್ನೂ ದಕ್ಷಿಣ ಮಾರ್ಗವನ್ನೂ ನಿದರ್ಶಿಸಿದ್ದಾನೆ. ಮತ್ತಿನ ಪದ್ಯಗಳಲ್ಲಿ ಇದರೊಳಗಿನ ಕೆಲವು ಕ್ರಿಯಾಪದಗಳಿಗೆ, ವ್ಯಾಕರಣ ಮಾರ್ಗಾನುಸಾರವಾಗಿ ಒದಗುವಂತೆ ತೋರುವ, ಆದೇಶ ರೂಪಗಳನ್ನು ಬೇರೆಡೆಗಳಲ್ಲಿ ಕೊಟ್ಟು ಪ್ರಯೋಗಿಸಬಾರದು ಎನ್ನುತ್ತಾನೆ. ಮತ್ತಿನ ಸಮಗ್ರ ಪದ್ಯವು ದಕ್ಷಿಣಮಾರ್ಗಕ್ಕೆ ಲಕ್ಷ್ಯವಾಗಿದೆ. ಅನಂತರದ ಪದ್ಯವು ಹಿಂದಿನ ಲಕ್ಷ್ಯವನ್ನೇ ಬದಲಿಸಿ ಉತ್ತರ ಮಾರ್ಗಾನುಸಾರವಾಗಿ ತೋರಿಸುವುದು. ಆ ಮೇಲಿನದು, ಅದನ್ನೆ ಉತ್ತರೋತ್ತರ ಮಾರ್ಗೀಯವನ್ನಾಗಿ ಮಾರ್ಪಡಿಸಿ ಕಾಣಿಸುವುದು. ಅನಂತರ, ಹಿಂದಣ ಪದ್ಯಗಳ ಕೆಲಕೆಲವು ಕ್ರಿಯಾಪದ ರೂಪಗಳನ್ನು ಗ್ರಂಥಕಾರನು ನಿರ್ಧರಿ ಸಿದ್ದಾನೆ. ಒಂಬತ್ತು ಪದ್ಯಗಳೊಳಗೆ, ಆರು ಪದ್ಯಗಳು ಹೀಗೆ ಸಾಗುತ್ತವೆ. ಈ ಆರು ಪದ್ಯಗಳಲ್ಲಿ ನಾಲ್ಕು ಪದ್ಯಗಳು ಉದಾಹರಣಗಳಾದರೆ ಎರಡು ಪದ್ಯಗಳು ವಿಮರ್ಶಾತ್ಮಕ ವಾದವುಗಳು. ಆ ನಾಲ್ಕು ಪದ್ಯಗಳೊಳಗೊಂದರಲ್ಲಿ 'ಉತ್ತರೋತ್ತರಂ' ಎಂದು ತೋರು ವುದರಿಂದ, ದಕ್ಷಿಣೋತ್ತರಗಳೆಂಬ ಎರಡು ಮಾರ್ಗಗಳಲ್ಲದೆ, 'ಉತ್ತರೋತ್ತರ' ಎಂಬ

ಮೂರನೆಯ ಮಾರ್ಗವನ್ನೂ ಸೂಚಿಸಿದಂತೆ ಭಾಸವಾಗಬಹುದು. ಆದರೂ ಅದನ್ನು ಉತ್ತರಮಾರ್ಗಕ್ಕೆ ಕೂಡಿಸಿ ಕಾಣಿಸಿದುದರಿಂದಲೂ, ವಿವೇಚನೆಯದಾದ ಪದ್ಯದಲ್ಲಿ 'ಮಾರ್ಗ ಯುಗ್ಮದೊಳ್' ಎನ್ನುವುದರಿಂದಲೂ, ಅದೊಂದು ಭಿನ್ನಮಾರ್ಗವೆಂದು ಕಾಣಿಸಲು ಎಡೆ ಇಲ್ಲ. ಗ್ರಂಥಕಾರನು ಎರಡು ಪದ್ಯಗಳಲ್ಲಿ ಕೆಲವು ಕ್ರಿಯಾಪದ ರೂಪಗಳನ್ನು ವಿವೇಚಿಸಿದುದರಿಂದಲೂ, ದೃಷ್ಟಾಂತಪದ್ಯಗಳು ಆಯಾ ಮಾರ್ಗಗಳ ಬಂಧಗುಣಗಳನ್ನೇ ಪ್ರದರ್ಶಿಸಿದುದರಿಂದಲೂ, ಅಲ್ಲಿ ಅರ್ಥಗುಣಗಳಿಗೆ ವಿಶೇಷವಾದ ಸ್ಥಾನವಿಲ್ಲದುದರಿಂದಲೂ ಆ ವರೆಗೆ ಉದಾಹೃತವಾದವುಗಳು ಬಂಧಗುಣಾನುಸಾರವಾದ, ಎಂದರೆ ಶಾಬ್ದಿಕವಾದ, ಮಾರ್ಗಭೇದ ಲಕ್ಷ್ಯಗಳು—ಎಂದು ಭಾವಿಸಿಕೊಳ್ಳಬೇಕು. ಮೊದಲು ಈ ಉದಾಹರಣ ಪದ್ಯಗಳನ್ನು ಪರಿಶೀಲಿಸುವ.

**'ಉತ್ತರಮಾರ್ಗ ವಾಚಕಂ'—**

> ನೋಡುವೆನಾ ಮಹೀಪತಿಯನರ್ಥಿಗಣಾರ್ಥಿತ ಕಲ್ಪವೃಕ್ಷನಂ
> ಬೇಡುವೆನರ್ಥಸಂಚಯಮನೆಂಬುದಿದುತ್ತರಮಾರ್ಗವಾಚಕಂ
>
> —(ii, 100) ಪೂರ್ವಾರ್ಧ

ಇದು ಉತ್ತರಮಾರ್ಗಕ್ಕೆ ಉದಾಹರಣವಾದುದರಿಂದ, ತತ್ಸಂಬದ್ಧ ವಿಶೇಷ ಲಕ್ಷಣವನ್ನೂ ತದನುಸಾರಿಯಾದ ಗುಣಾಲಂಕೃತಿಗಳನ್ನೂ ಪರಾಂಬರಿಸಿಕೊಳ್ಳಬೇಕು. ಆದರೊಡನೆ ದಕ್ಷಿಣಮಾರ್ಗದ ವಿಶೇಷ ಲಕ್ಷಣಗುಣಾಲಂಕಾರಗಳು ಇದರೊಳಗೆ ದೂರವಾಗಿವೆಯೋ ಇಲ್ಲವೋ—ಎಂಬುದನ್ನೂ ಪ್ರತೀಕ್ಷಿಸಿಕೊಳ್ಳಬೇಕು.

ಇದು ನೃಪತುಂಗ ಚಕ್ರವರ್ತಿಯ ದರ್ಶನಲಾಭವನ್ನೊಂದಿ ಇಷ್ಟಾರ್ಥವನ್ನು ಬೇಡಬೇಕೆಂದು ಮನಸ್ಸಿನಲ್ಲೇ ಭಾವಿಸಿಕೊಳ್ಳುವ, ಅಥವಾ ಗೆಳೆಯನೊಬ್ಬನಲ್ಲಿ ಹೇಳಿಕೊಳ್ಳುವ, ಉತ್ತರಮಾರ್ಗೀಯನೊಬ್ಬನ ವಚನರಚನೆ. ಇಲ್ಲಿ ಎರಡು ವಾಕ್ಯಗಳಿವೆ. ಎರಡರಲ್ಲೂ ಕರ್ತೃಪದವು ತೋರುವುದೇ ಇಲ್ಲ. 'ನಾನ್' ಎಂಬ ಕರ್ತೃಪದವನ್ನು ಹೊಳೆಯಿಸುವ 'ನೋಡುವೆಂ', 'ಬೇಡುವೆಂ' ಎಂಬ ವಾಕ್ಯಾಂತ ಕ್ರಿಯಾಪದಗಳು ಆದಿಯಲ್ಲಿದ್ದು ವಾಕ್ಯವನ್ನು ಪ್ರಾರಂಭಿಸುವಂತಿದೆ. ಮೊದಲನೆಯ ವಾಕ್ಯದಲ್ಲಿ, ಆ ಮೇಲೆ, 'ಆ ಮಹೀಪತಿಯಂ' ಎಂಬ ಕರ್ಮಕಾರಕವು ಸೇರಿದೆ. ಅದೂ ಸಾಮಾನ್ಯ ರೂಪದಲ್ಲಿದೆಯೇ ಹೊರತು, ಇಂಥವನು ಎಂದು ಹೆಸರೆತ್ತಿ ವಿಶೇಷವಾಗಿ ತಿಳಿಸುವಂತಿಲ್ಲ. ತದನಂತರ ಅದಕ್ಕೆ ವಿಶೇಷಣವಾದ 'ಅರ್ಥಿಗಣಾರ್ಥಿತ ಕಲ್ಪವೃಕ್ಷನಂ' ಎಂಬ ಪದಯೋಜನೆಯಿದೆ. ಸ್ವಾಭಾವಿಕವಾಗಿ ವಿಶೇಷಣವು ವಿಶೇಷ್ಯವನ್ನು ಹಿಂಬಾಲಿಸಿಕೊಂಡಿರಬೇಕಲ್ಲದೆ ಮುಂಬಾಲಿಸಿಕೊಂಡಲ್ಲ. ಎರಡನೆಯ ಪಾದದ ಆದಿಯಲ್ಲಿ ದ್ವಿತೀಯ ವಾಕ್ಯವು, ಹಿಂದೆ ಸೂಚಿಸಿದಂತೆ, 'ಬೇಡುವೆಂ' ಎಂಬ ಉತ್ತಮಪುರುಷ ಕ್ರಿಯಾಪದದಿಂದಲೇ ಪ್ರಾರಂಭಿಸುವುದು. 'ಬೇಡುವೆಂ' ಎಂಬುದು ದ್ವಿಕರ್ಮಕ ಕ್ರಿಯಾಪದವಷ್ಟೆ. ದ್ವಿತೀಯ ವಾಕ್ಯದಲ್ಲಿ 'ಅರ್ಥ ಸಂಚಯಮಂ' ಎಂಬ ಪ್ರಧಾನ ಕರ್ಮಕಾರಕ ಮಾತ್ರವೇ ಇರುವುದಲ್ಲದೆ, ಅಪ್ರಧಾನ ಕರ್ಮವಿಲ್ಲ. ವಾಕ್ಯವು ಪೂರ್ಣವಾಗಬೇಕಾದರೆ, ಮೊದಲನೆಯ ವಾಕ್ಯದೊಳಗೆ ಕರ್ಮವಾಗಿದ್ದ 'ಮಹೀ

ಪತಿಯುಂ' ಎಂಬ ಪದವನ್ನು ಇಲ್ಲಿ ಅಪ್ರಧಾನ ಕರ್ಮಪದವಾಗಿ ಉದ್ಧರಿಸಿಕೊಳ್ಳಲೇ ಬೇಕು. ಮಾತ್ರವಲ್ಲ; ಹಿಂದಿನ 'ನೋಡುವೆಂ' ಎಂಬ ಕ್ರಿಯಾಪದಬದ್ಧವಾದ ವಾಕ್ಯದ 'ಮಹೀಪತಿಯುಂ' ಎಂಬ ಕರ್ಮಪದಕ್ಕೆ ಅಲ್ಲಿ 'ಅರ್ಥಿಗಣಾರ್ಥಿತ ಕಲ್ಪವೃಕ್ಷನಂ' ಎಂಬ ವಿಶೇಷಣದ ಆವಶ್ಯಕತೆಯೇ ಇಲ್ಲ; ಅದರ ಆರ್ಥಿಕವಾದ ಆವಶ್ಯಕತೆಯಿರುವುದು 'ಬೇಡುವೆಂ' ಎಂಬ ಕ್ರಿಯಾಪದಬದ್ಧ ವಾಕ್ಯದಲ್ಲಿ. ಹೀಗೆ ವಾಕ್ಯಗಳೆರಡಿದ್ದರೂ, ಅವು ಅನ್ಯೋನ್ಯವಾಗಿ ಬೆರೆದುಕೊಂಡು ಒಂದೇ ಮನೆಯ ಎರಡು ಬೀಡಾರಗಳಂತಿವೆ ಎನ್ನಬೇಕು. ಇಲ್ಲಿ ವಿಶೇಷವಾಗಿ ಬಂಧವು ಎಷ್ಟುಮಟ್ಟಿಗೆ ಕೊಂಕಾಗಿ ಸುರುಸುತ್ತಿದೆ ಎಂಬುದನ್ನು ಭಾವಿಸಬೇಕು.

ಇದರ ಬಂಧಗುಣವನ್ನೆಣಿಸಿದಲ್ಲಿ, 'ಅರ್ಥಿಗಣಾರ್ಥಿತ ಕಲ್ಪವೃಕ್ಷನಂ ಬೇಡುವೆನರ್ಥ ಸಂಚಯುವುಂ' ಎಂಬ ಭಾಗದೊಳಗೆ ದಾಕ್ಷಿಣಾತ್ಯರ 'ಸುಕುಮಾರತರಾಕ್ಷರ' ಪ್ರಯೋಗಕ್ಕೆ 'ವಿಪರ್ಯಯ' ರೂಪವಾದ ಔತ್ತರೇಯ 'ಪರುಷಾಕ್ಷರ' ಪ್ರಯೋಗವೇ ಹೆಚ್ಚಾಗಿ ಎದ್ದು ಕಾಣುತ್ತಿದೆ. 'ತ್ರಿದಶಾಧೀಶ್ವರ ಭೂತ್ಯತ್ಯುದಾರಿ ವಿವಿಧಾರ್ಥ ವಿಭವನೀ ಭೂಪೇಂದ್ರಂ' ಎಂದು ಔತ್ತರೇಯು 'ಸುಕುಮಾರ'ಕ್ಕೆ ಕೊಟ್ಟ ಉದಾಹರಣೆಯ ಅಕ್ಷರಗಳೂ ಪ್ರಕೃತಕ್ಕೆ ಒಪ್ಪುತ್ತವೆ. ಮಾತ್ರವಲ್ಲ; ಔತ್ತರೇಯುರ ದೃಷ್ಟಿಯಲ್ಲಿ ಇದು 'ಸುಕುಮಾರ ಬಂಧ'ವೇ ಆದುದರಿಂದ, ಅರ್ಥಿಗಳ ವಚನಕ್ಕೂ ಇದು ತಕ್ಕುದೇ ಸರಿ.

ಇನ್ನು, 'ಅರ್ಥಿಗಣಾರ್ಥಿತ ಕಲ್ಪವೃಕ್ಷನಂ' ಎಂಬ ಆರ್ಥಿಕವಾದ ವಿಶೇಷಣರೂಪ ಕಾಲಂಕೃತಿಯನ್ನೀಕ್ಷಿಸಿರಿ. ರೂಪಕವೆಂಬುದೇ ವಕ್ರಾಲಂಕಾರ ಭೇದ; ಅದರೊಳಗಣ ಏಕದೇಶೀಯ ರೂಪಕಭೇದಗಳು ಉತ್ತರಮಾರ್ಗಕ್ಕೇ ಮೀಸಲಾದುವುಗಳು.[1] ಅಂತೂ, ಇದು ಪ್ರಮುಖವಾಗಿ ಬಂಧಗತವಾದ ಉತ್ತರ ಮಾರ್ಗ.

**'ದಕ್ಷಿಣಮಾರ್ಗ ವಿಚಕ್ಷಣೋದಿತಂ'—**

> ನೀಡುಮುದಾತ್ತ ಚಾರುಗುಣನಂ ಮನದೊಳ್ ನೆಱೆ ನೋಟ್ಪೆನಟ್ಟಿಯೊಳ್
> ಕೂಡಿರವೇೞ್ಪೆನೆಂಬುದಿದು ದಕ್ಷಿಣಮಾರ್ಗ ವಿಚಕ್ಷಣೋದಿತಂ
>
> —(ii, 100) ಉತ್ತರಾರ್ಧ

ಹಿಂದಿನ ಪದ್ಯಾಂಶವನ್ನೆ ದಕ್ಷಿಣ ಮಾರ್ಗಕ್ಕೆ ಮಾರ್ಪಡಿಸಿ ತೋರಿಸಿದ ದೃಷ್ಟಾಂತವಿದು. ಬಂಧಗತವಾದ ಕೊಂಕುಗಳೆಲ್ಲವೂ ಮಾರಿ ಸ್ಫೈತಾಗಿರುವುದನ್ನು ಇಲ್ಲಿ ಕಾಣಬಹುದು. ಇಲ್ಲಿಯೂ ವಾಕ್ಯಗಳೆರಡಿವೆ. ವಿಶೇಷಣವಾದ 'ನೀಡುಂ' ಎಂಬ ಅವ್ಯಯುವು ಆದಿಯಲ್ಲೇ ಕೂಡಿ ಮತ್ತಿನ ಕರ್ಮಪದವನ್ನು ನೇರ್ಪಡಿಸುತ್ತಿದೆ. ಹಿಂದೆ, ಕರ್ಮಪದಕ್ಕೆ ಮುಂದೆ ಮುಂದೆ ವಿಶೇಷಣವನ್ನು ಕೂಡಿಸಿದುದರಿಂದಲೂ ಕ್ರಿಯಾಪದವನ್ನು ಆದಿಯಲ್ಲೇ ತಂದೊಡ್ಡಿದುದರಿಂದಲೂ ಸಂಭವಿಸಿದೆ ಸ್ಥಾನ ವಕ್ರತೆಗಳು ಇಲ್ಲಿಲ್ಲ. ಹಿಂದಿನ ವಿಶೇಷಣಗತ ವಕ್ರ

[1] ಈ ವಿಷಯುವನ್ನು ಮುಂದೆ ಅರ್ಥಾಲಂಕಾರ ವಿವೇಚನೆಯ ಸಂದರ್ಭದಲ್ಲಿ ವಿಶದಪಡಿಸಲಾಗುವುದು.

ರೂಪಕದಲ್ಲಿ ಹೊಳೆಯುವ ಅರ್ಥವನ್ನು ‘ಮನದೊಳ್ ಚಾರುಗುಣನಂ’ ಎಂಬ ಕರ್ಮ ಕಾರಕವೇ ಸೈತಾಗಿ ವಿಶದೀಕರಿಸುತ್ತದೆ. ‘ಮನದೊಳ್’ ಎಂಬುದು, ಬಹುವ್ರೀಹಿ ಸಮಾಸ ಬದ್ಧವಾದ ಮತ್ತು ನೃಪತುಂಗ ಮಹೀಪತಿಯನ್ನು ಸೂಚಿಸುವ, ಆ ಕರ್ಮಕಾರಕದಲ್ಲಿ ಕಾಣುವ ‘ಉದಾತ್ತ ಚಾರುಗುಣ’ದ ‘ಅಂತರಂಗಿಕ ಅಧಿಕರಣ’ವನ್ನು ಸೂಚಿಸುವ ಕಾರಕ ಪದ. ಅದರಿಂದಲೇ, ಮೇಲೆ ‘ಮನದೊಳ್’ ಎಂಬ ಪದವನ್ನು ಹಿಂದಕ್ಕೆ ಅನ್ವಯಗೊಳಿ ಸಿರುತ್ತೇವೆ. ಪದ್ಯಾನುಸಾರವಾಗಿ ಮುಂದೆ ಇರಿಸಬೇಕಾದರೂ ಅದು ಬಂಧಗತ ವಕ್ರವೆಂದು ಎಣಿಸಬಾರದು. ಮುಂದೆ ‘ನೆಱೆ ನೋಟಿಪ್ಪಂ’ ಎಂಬ ಕ್ರಿಯಾಪದವೇ ಇರುವುದರಿಂದ, ಅದು ಆ ಕ್ರಿಯಾಪದ ಸಂಬದ್ಧವಲ್ಲವೆಂಬುದು ವ್ಯಕ್ತವಾಗುವುದು. ಆ ಮೇಲಿನ—‘ನೀಡುಂ ಮನದೊಳ್ ಉದಾತ್ತ ಚಾರುಗುಣನಂ (ಮಹೀಪತಿಯುಂ)’ ನೋಡಿದ ಮೇಲಿನ—ಕಾರ್ಯಭಾವನೆಯನ್ನು, ‘ಅಟ್ಟಿಯೊಳ್ ಕೂಡಿ ಇರವೇಟಿಪ್ಪಂ’ ಎಂಬ ಎರಡನೆಯ ವಾಕ್ಯವು ಸೂಚಿಸುತ್ತಿದೆ. ‘ಕನಿಕರವನ್ನಿರಿಸಬೇಕೆಂದು ನಿವೇದಿಸಿಕೊಳ್ಳುವೆನು’—ಎಂಬುದು ಆ ವಾಕ್ಯಾರ್ಥ. ಪದ್ಯದ ಪೂರ್ವಾರ್ಧದಲ್ಲಿರುವ ‘ಬೇಡುವೆಂ ಅರ್ಥ ಸಂಚಯಮಂ’ ಎಂಬುದು ಶಿಷ್ಟಪದ್ಧತಿಗೆ ಒಪ್ಪದ ಮಾತೆಂದೂ ಉತ್ತರಾರ್ಧವು ಸಂದರ್ಭಕ್ಕೂ ಆಯಾ ವ್ಯಕ್ತಿಗಳ ಸ್ಥಾನಕ್ಕೂ ನಮ್ರತಾಪೂರ್ವಕವಾಗಿ ಹೇಗೆ ಒಪ್ಪುತ್ತಿದೆಯೆಂಬುದೂ, ಆದರೆ ಇಲ್ಲಿ ಕೊಂಕಿನ ಸುಳಿವೇ ಇಲ್ಲವೆಂಬುದೂ ತಾನಾಗಿ ಗೊತ್ತಾಗುತ್ತಿದೆ. ಅಸ್ಪಷ್ಟ ಶೈಥಿಲ್ಯ ವೆನಿಸಿ ನಿಬಿಡವಾಗಿ ಹೆಣೆಯುವ, ‘ನಿಬಿಡ(ಶ್ಲಿಷ್ಟ)’ವೆಂಬ ದಾಕ್ಷಿಣಾತ್ಯರ ಬಂಧಗುಣವು ‘ನೀಡುಮುದಾತ್ತಚಾರುಗುಣನಂ ಮನದೊಳ್ ನೆಱೆ ನೋಟಿಪ್ಪನಟ್ಟಿಯೊಳ್ ಕೂಡಿರ ವೇಟಿಪ್ಪಂ’ ಎಂಬಲ್ಲಿ ಸ್ಫುಟವಾಗುವುದು. ಇಲ್ಲಿ ಆರ್ಥಿಕವಾಗಿ ನೋಡಿದರೂ ಅಂದವಾದ ಸ್ವಭಾವಾಖ್ಯಾನವು ಮಾತ್ರವೇ ತೋರುವುದು.

ಮೇಲಿನ ದೃಷ್ಟಾಂತಗಳೊಳಗೆ ಮೇಲಿಂದ ಮೇಲೆ ಹೊಳೆದು ತೋರುವುದೆಂದರೆ, ಉತ್ತರಮಾರ್ಗದ ‘ನೋಡುವೆಂ’, ‘ಬೇಡುವೆಂ’ ಎಂಬ ಕ್ರಿಯಾಪದರೂಪಗಳಿಗೆ ಬದಲಾಗಿ ದಕ್ಷಿಣಮಾರ್ಗೋದಾಹರಣದಲ್ಲಿ ಕಾಣುವ ‘ನೋಟಿಪ್ಪಂ’, ‘ಬೇಟಿಪ್ಪಂ’ ಎಂಬ ಆದಿಷ್ಟ ‘ಟ’ಕಾರದಿಂದೊಡವೆರೆದ ಕ್ರಿಯಾರೂಪಗಳು. ಅದರಿಂದ, ಈ ಮಾರ್ಗಭೇದ ವೆಂಬುದು ಒಂದೆರಡು ಕ್ರಿಯಾಪದರೂಪಗಳ ನಿಷ್ಕೃಷ್ಟಭೇದ ಮಾತ್ರಕ್ಕೆ ಪರಿಮಿತ ವಾಗಿದೆ ಎಂದು ಕೆಲವರೆಣಿಕೆ.[1] ಆದರೆ ಪದರೂಪಮಾತ್ರದ ಭೇದವು ಮಾರ್ಗದೊಳಗಿನ ರೂಪಾಂತರವನ್ನು ಸೂಚಿಸಲು ಸಮರ್ಥವಾಗುವಂತಿಲ್ಲ. ವಕ್ರೋಕ್ತಿ ಸ್ವಭಾವಾಖ್ಯಾನ ಗಳೆಂಬ ಆ ಭೇದ ಜೀವಾಳದ ಭಣಿತಿ ಭೇದವೂ ಇಲ್ಲಿ ವ್ಯಕ್ತವಾಗಿದೆ.

ಅದಿರಲಿ ; ತೆಲುಗಿನಲ್ಲಿ ‘ಟ’ಕಾರವಿಲ್ಲವಾಗಿ ತೋರಿದುದರಿಂದ ಮತ್ತು ‘ಕವಿರಾಜ ಮಾರ್ಗ’ಕಾರನು ಉತ್ತರ ಮಾರ್ಗ ದೃಷ್ಟಾಂತಗಳಲ್ಲಿ ‘ಟ’ ಕಾರಯುತ ಕ್ರಿಯಾಪದಗಳನ್ನು ಪ್ರಯೋಗಿಸದುದರಿಂದ, ದಿವಂಗತ ಆರ್. ರಘುನಾಥರಾಯರು ತೆಲುಗಿನ ಸಂಬಂಧದಿಂದ

[1] ಕನ್ನಡ ಕೈಪಿಡಿ (೧೯೩೬), ಪು. ೩೬೩—೩೬೫

ಕನ್ನಡದ ಉತ್ತರಮಾರ್ಗವು ತಲೆದೋರಿತೆಂದು ತರ್ಕಿಸಿದ್ದಾರೆ.[1] ಈ ತರ್ಕ ನಿರಸನಕ್ಕಾಗಿ ದಿವಂಗತ ನರಸಿಂಹಾಚಾರ್ಯರು ಕ್ರಿ.ಶ. ೯೨೭ ರಿಂದ ೯೩೪ರ ವರೆಗೆ ಮೂಡಣ ಚಾಳುಕ್ಯ ರಾಜನಾಗಿದ್ದ ಯುದ್ಧಮಲ್ಲನ ವಿಜಯವಾಡ ಶಾಸನದ ತೆಲುಗು ಪದ್ಯದಲ್ಲಿ 'ೞ' ಕಾರವಿದೆ ಎಂದಿದ್ದಾರೆ.[2] ಇಲ್ಲಿ ಇನ್ನೂ ಒಂದು ವಿಚಾರವನ್ನು ಗಮನಿಸಬೇಕು. ದಕ್ಷಿಣೋತ್ತರ ಮಾರ್ಗಗಳಿಗೆ ಉದಾಹರಣಗಳೆಂದು ಗ್ರಂಥಕಾರನಿತ್ತ ಏಳು ಪದ್ಯಗಳೊಳಗೆ ಮೇಲೆ ಉದ್ಧರಿಸಿರುವ ಪದ್ಯದ ಉತ್ತರಾರ್ಧದ ದಕ್ಷಿಣಮಾರ್ಗದೃಷ್ಟಾಂತದಲ್ಲಿ ಮಾತ್ರ 'ೞ' ಕಾರವಿದೆಯೆಂಬುದು ನಿಜ. ಆದರೆ ಉಳಿದ ಉತ್ತರ ಮಾರ್ಗೋದಾಹರಣಗಳಲ್ಲಿ ಮಾತ್ರವೇ ಅಲ್ಲ; ಉಳಿದ ದಕ್ಷಿಣಮಾರ್ಗೋದಾಹರಣಗಳಲ್ಲಿಯೂ 'ೞ'ಕಾರವಿಲ್ಲ. ಇದರಿಂದ, 'ೞ' ಕಾರವು ಆಗಿನ ಕನ್ನಡದ ಉತ್ತರಮಾರ್ಗದಲ್ಲಿ ಮಾತ್ರ ಇಲ್ಲದುದೆಂದು ಭಾವಿಸಲಾಗುವುದೆ? ಮಾರ್ಗಭೇದಗಳಿಗೆ ಈ ಏಳು ಪದ್ಯಗಳು ಮಾತ್ರವೇ ದೃಷ್ಟಾಂತಗಳಲ್ಲ. ಹಿಂದಿನ ಗುಣವಿಭಾಗವಲ್ಲಿಯೂ ದೃಷ್ಟಾಂತಗಳಿವೆ. ಅಲ್ಲಿಯ ಉಭಯೋದಾಹರಣಗಳಲ್ಲಿಯೂ 'ೞ'ಕಾರಯುತ ಪದಗಳು ಕಡಮೆಯೇ. ದಕ್ಷಿಣ ಮಾರ್ಗೋದಾಹರಣದಲ್ಲಂತೂ 'ೞ'ಕಾರವು ಇಲ್ಲವೇ ಇಲ್ಲ. ಆದರೆ ಉತ್ತರಮಾರ್ಗದ ಕಾಂತ ಗುಣೋದಾಹರಣವೊಂದರಲ್ಲಿ ಮಾತ್ರ 'ೞ'ಕಾರವಿರುವುದನ್ನು ಲಕ್ಷಿಸಬೇಕು—

ವಿಲಸಿತ ಭವದಭ್ಯಾಗಮ
ಜಲಧಾರೆಗಳೇನುಮುೞಿಯದಂತು ಮದಂತ
ಮರ್ಗಲಮುಂ ಕರ್ಚಿದೊಡಾನೀ
ನೆಲಕೆಲ್ಲಂ ಪಾವನೀಯ ಚರಿತನೆ ಆದೆಂ —(ii, 67)

'ಉೞಿಯದ'[3] ಎಂಬುದಿದು ಕ್ರಿಯಾಪದ ರೂಪವಲ್ಲಿಯೇ ತೋರುವುದರಿಂದ ಕನ್ನಡದ ಉತ್ತರಮಾರ್ಗದಲ್ಲಿ 'ೞ'ಕಾರವಿದ್ದಿಲ್ಲವೆಂಬುದು ನಿರಾಧಾರವೆನ್ನಿಸುತ್ತಿದೆ. ತೆಲುಗಿನಲ್ಲಿ ಆ ಕಾಲದಲ್ಲಿ 'ೞ'ಕಾರವಿದ್ದಿರಲಿ, ಇಲ್ಲದಿರಲಿ—ಅದು ಕನ್ನಡಕ್ಕೇನೂ ಸಂಬಂಧಿಸಿದುದಲ್ಲ. ಆದರೆ ಈ ಉತ್ತರಮಾರ್ಗ ದೃಷ್ಟಾಂತದಲ್ಲಿ 'ೞ'ಕಾರವು ಕಾಣಿಸುವುದರಿಂದಲೂ, 'ಸೂಡುವೆಂ', 'ಕೂಡುವೆಂ' ಮೊದಲಾದುವುಗಳಿಗೆ 'ಸೂೞ್ಪಂ, ಕೂೞ್ಪಂ' ಮೊದಲಾದ ರೂಪಗಳನ್ನು ಕೊಡಕೂಡದೆಂದು ಹೇಳಿದುದರಿಂದಲೂ ಉತ್ತರಮಾರ್ಗದಲ್ಲಿ ಆದಿಷ್ಟ 'ೞ'ಕಾರವಿದ್ದಿರಲಾರದು—ಎಂಬ ಸಂಶಯಕ್ಕೆ ಎಡೆಯಾಗುತ್ತಿದೆ.

'ನೋಡುವೆಂ', 'ಬೇಡುವೆಂ' ಎಂಬ ಕ್ರಿಯಾಪದಗಳ 'ಡ'ಕಾರಕ್ಕೆ ದಕ್ಷಿಣ ಮಾರ್ಗದಲ್ಲಿ

---

[1] ಆರ್. ರಘುನಾಥರಾವ್, 'ವ್ಯಾಕರಣೋಪನ್ಯಾಸ ಮಂಜರಿ', ಚತುರ್ಥೋಪನ್ಯಾಸ ಕನ್ನಡದ ದಕ್ಷಿಣೋತ್ತರ ಮಾರ್ಗಗಳ ವಿಚಾರ), ಪುಟ ೪೫.

[2] R. Narasimhachar, *History of Kannada Language*, p. 124.

[3] 'ಕವಿರಾಜಮಾರ್ಗ'ದ ಎರಡು ಪ್ರತಿಗಳಲ್ಲೂ 'ಉೞಿಯದ' ಎಂದು 'ೞ'ಕಾರಯುಕ್ತವಾಗಿಯೇ ಇದೆ. ರಘುನಾಥರಾಯರು ಅದನ್ನು ತಮ್ಮ ಆ ಉಪನ್ಯಾಸದಲ್ಲಿ (ಪು. ೪೦) ಳಯುಕ್ತವಾಗುವಂತೆ ಮಾರ್ಪಡಿಸಿದ್ದಾರೆ. ಅದಕ್ಕೆ ಆಧಾರವೇನೋ ತಿಳಿಯಲಿಲ್ಲ.

'ಟ'ಕಾರಾದೇಶವಾಗುವುದಷ್ಟೆ. ಆದರೆ ಇಂತಹ 'ಟ'ಕಾರಾದೇಶವು ಸರ್ವಸಾಮಾನ್ಯವಾಗಿ ಒಪಗುವುದೆಂದು ಭಾವಿಸಲಾಗದೆಂಬುದಾಗಿ ಮುಂದಿನ ಪದ್ಯದಲ್ಲಿ ಸೂಚಿಸುತ್ತಾನೆ—

ಸೂಡುವೆನೆಂಬುದಲ್ಲದಣಮಾಗದು ಸೂಟಿಪ್ಪೆನವೋಘಮೆಂಬುದುಂ
ಕೂಡುವೆನೆಂಬುದಲ್ಲದಿನಿಸಾವುದುಮಾಗದು ಕೂಟಿಪ್ಪೆನೆಂಬುದುಂ
ಕಾಡುವೆನೆಂಬುದಲ್ಲದೆ ಸುಮಾರ್ಗದೊಳಾಗದು ಕಾಟಿಪ್ಪೆನೆಂಬುದುಂ
ತೋಡುವೆನೆಂಬುದಲ್ಲದಿರಲಾಗದು ನಿಕ್ಕುವ ತೋಟಿಪ್ಪೆನೆಂಬುದುಂ —(ii, 101)

ಹಿಂದಿನ 'ನೋಡುವೆಂ', 'ಬೇಡುವೆಂ' ಎಂಬವುಗಳಿಗೊದಗುವ 'ನೋಟಿಪ್ಪಂ','ಬೇಟಿಪ್ಪಂ' ಎಂಬ ರೂಪಾಂತರಗಳನ್ನು ಅನುಸರಿಸಿ 'ಸೂಡುವೆಂ', 'ಕೂಡುವೆಂ', 'ಕಾಡುವೆಂ', 'ತೋಡುವೆಂ' ಎಂಬವುಗಳಿಗೆ ಕ್ರಮವಾಗಿ 'ಸೂಟಿಪ್ಪಂ', 'ಕೂಟಿಪ್ಪಂ', 'ಕಾಟಿಪ್ಪಂ' 'ತೋಟಿಪ್ಪಂ' ಎಂದು ಯಾವ ಸುಮಾರ್ಗದೊಳಗೂ ಆದಿಷ್ಟ ರೂಪಗಳನ್ನಿಯಬಾರದು— ಎಂದು ಎಚ್ಚರಿಸುವ ಮಾತಿದು. ಈ ಎಚ್ಚರಿಕೆಯ ಮಾತಿನಿಂದ, 'ಡ'ಕಾರಕ್ಕೊದಗುವ 'ಟ'ಕಾರಾದೇಶ ಮಾತ್ರವೇ ಮಾರ್ಗದ್ವಯಭೇದಕ ರೇಖೆಯೆಂದು ಭ್ರಮಿಸಲಾಗದು; 'ಸೂಡುವೆಂ' ಮೊದಲಾದುವನ್ನು ಉಭಯ ಮಾರ್ಗಗಳಲ್ಲೂ ಅದೇ ರೂಪದಲ್ಲಿ ಪ್ರಯೋಗಿಸಬೇಕು; ಆ ಭೇದಕ್ಕೆ ಹಿಂದೆ ನಿರೂಪಿಸಿದ ಪದಯೋಜನಾಕ್ರಮವೇ ಪ್ರಮುಖ ಕಾರಣವಾದರೆ, ಈ ವಿಶಿಷ್ಟ ಅಕ್ಷರಭೇದವು ಆ ಭೇದದೊಳಗಿನ ಒಂದಂಗ ಮಾತ್ರ— ಎಂದೂ ಧ್ವನಿತವಾಗುತ್ತಿದೆ.

ಹಿಂದೆ ವಿವರಿಸಿದ ಪದ್ಯದಲ್ಲಿ ಗ್ರಂಥಕಾರನು ಉತ್ತರ ದಕ್ಷಿಣ ಮಾರ್ಗಗಳನ್ನು ಪರಿಚ್ಛೇದಿಸಿದರೆ, ಮುಂದಿನ ಇಡಿಯ ಪದ್ಯದಲ್ಲಿ ದಕ್ಷಿಣ ಮಾರ್ಗಬಂಧದ ಬೇರೊಂದು ವಿಶಿಷ್ಟತೆಯನ್ನು ಕಾಣಿಸುತ್ತಾನೆ.

'ದಕ್ಷಿಣಮಾರ್ಗ ವಿಶೇಷ ಭಾಷಿತಂ'—

ಬರಿಸುವೆನಿಂದು ನಂದನವನಾಂತರದಲ್ಲಿಗೆ ಕಾಂತನಂ ಸಮಂ
ತಿರಿಸುವೆನಂತನಂತಸುಖಸಂಗತಮಂಗಳಕಾರಣಂಗಳಂ
ತರಿಸುವೆನಾಂ ಮನೋನಯನವಲ್ಲಭನೊಳ್ ಮನದೊಂದಲಂಪಿನಿಂ
ನೆರೆವೆನವೋಘಮೆಂಬುದಿದು ದಕ್ಷಿಣಮಾರ್ಗವಿಶೇಷ ಭಾಷಿತಂ —(ii, 102)

ನಾಯಿಕೆಯೊಬ್ಬಳು ತನ್ನ ಪ್ರಿಯವಲ್ಲಭನ ವಿಷಯವಾಗಿ ಅಂತರಂಗದಲ್ಲೆ ಭಾವಿಸುವ, ಅಥವಾ ತನ್ನ ಕೆಳದಿಯೊಡನೆ ಹೇಳುವ, ಮಾತಿದು. ಇಲ್ಲಿ 'ಬರಿಸುವೆಂ' ಎಂದು ಕ್ರಿಯಾಪದವನ್ನು ಆದಿಯಲ್ಲಿರಿಸಿದುದು ದಕ್ಷಿಣಮಾರ್ಗ ವಿರೋಧ ಲಕ್ಷಣವಲ್ಲವೆ ?—ಅಲ್ಲ. ಅದರಲ್ಲೇ 'ಆಂ' ಎಂಬ ಕರ್ತೃಪದವು ಸೂಚಿತವಾಗುವುದರಿಂದ, ಆ ಪದ್ಧತಿಯು ವಕ್ರತೆಗೇ ವಿಾಸಲಾದುದು ಎನ್ನಲಾಗುವುದಿಲ್ಲ. ಮಾತ್ರವಲ್ಲ—ವೃತ್ತಾನುಕೂಲ್ಯವನ್ನು ನೋಡಿಕೊಳ್ಳಬೇಕಾದುದೊಂದು ; 'ಇಂದು ನಂದನವನಾಂತರದಲ್ಲಿಗೆ ಕಾಂತನಂ ಬರಿಸುವೆಂ, (ಬರಿಸಿದ ಕಾಂತನಂ) ಸಮಂತು ಇರಿಸುವೆಂ', ಎಂಬುದಾಗಿ ಎರಡು ಕ್ರಿಯಾಪದಗಳಿಗೂ 'ಕಾಂತನಂ' ಎಂಬ ಕರ್ಮಕಾರಕವೇ ಸಂಬಂಧಿಸಿರುವುದಿನ್ನೊಂದು—ಇವೆರಡು ಕಾರಣ

ಗಳಿಂದ ಹಾಗೆ ಕ್ರಿಯಾಪದವನ್ನು ಆದಿಯಲ್ಲಿ ಇರಿಸಬೇಕಾಯಿತಲ್ಲದೆ ಅದು ಉತ್ತರ ಮಾರ್ಗಾನುಸರಣೆಯಲ್ಲ. ಆ ಮೇಲೆ 'ಅನಂತಸುಖಸಂಗತಮಂಗಳಕಾರಣಂಗಳಂ ತರಿಸುವೆಂ' ಎಂಬುದನ್ನೀಕ್ಷಿಸಿರಿ: ಮತ್ತೆ[1] ಆಂ ಮನೋನಯನ ವಲ್ಲಭನೊಳ್ ಮನದೊಂದ ಲಂಪಿನಿಂ ನೆರೆವೆಂ' ಎಂಬ ರಚನಾಕ್ರಮವನ್ನೂ ಭಾವಿಸಿರಿ. 'ದಕ್ಷಿಣಮಾರ್ಗವಿಶೇಷ ಭಾಷಿತ'ದ ಕ್ರಮವಿದು.

ಇಲ್ಲಿ ಉಪಮಾದಿ ಅಲಂಕಾರವಾವುದನ್ನೂ ಬೆರಸದೆ, ಆ ನಾಯಿಕೆಯ ತ್ರಿಕರಣಗಳ ಕೂಟವನ್ನು ಹಾಗೆಯೇ ಹೊರಗೆ ಚಿತ್ರಿಸಿದಂತೆ ತೋರುವುದರಿಂದ, ಈ ಪದ್ಯದ ವಚನ ಕ್ರಮವು ದಾಕ್ಷಿಣಾತ್ಯರಿಗೊಪ್ಪುವ ಸ್ವಭಾವಾಖ್ಯಾನ ಪದ್ಧತಿಯಲ್ಲಿಯೇ ಇದೆ. ಅಲ್ಲದೆ, ಇದು ಅವರ 'ಸುಕುಮಾರ ಬಂಧ'ವಾಗಿಯೂ ತೋರುತ್ತಿದೆ. ದಾಕ್ಷಿಣಾತ್ಯ 'ಸುಕುಮಾರ ಬಂಧಕ್ಕೆ' ಕೊಟ್ಟ ಉದಾಹರಣ ಪದ್ಯವಾದ—

ತೊಳಪೆಳವೆಱೆಯುಂ ಮೊರೆವಳಿ
ಕುಳಂಗಳುಂ ಮೆಲ್ಲನೆಸಪ ಮಳಯಾನಿಳನುಂ

---

[1] ಉತ್ತಮಪುರುಷ ಸರ್ವನಾಮರೂಪವು ಕನ್ನಡದಲ್ಲಿ 'ಆಂ', 'ನಾಂ' ಎಂದು ಎರಡು ರೂಪವಾಗಿದೆ. ಇವುಗಳಲ್ಲಿ ರೂಪಭೇದವಷ್ಟೇ ಅಲ್ಲ; ಅರ್ಥಭೇದವೂ ಒಂದಿಷ್ಟಿದೆ. ಆ ಭೇದವು ಅವುಗಳ ಬಹುವಚನದಿಂದ ಸ್ಫುಟವಾಗುತ್ತಿದೆ. ದೃಷ್ಟಾಂತಕ್ಕೆ, 'ಕವಿರಾಜಮಾರ್ಗ'ದ ಪ್ರಥಮ ಪರಿಚ್ಛೇದದ ಈ ಪದ್ಯ ಭಾಗಗಳನ್ನು ನೋಡಬಹುದು—

..............................ನಮಗೀ
ಗತರ್ಕಿತೋಪಸ್ಥಿತ ಪ್ರತಾಪೋದಯಮಂ —(i, 2)
....................................

.....................................................
ನೆರಮುಕ್ಕಾ ಪರಮಕವೀ
ಶ್ವರರ್ ಎಮಗೀ ಕೃತಿಯೊಳಕೃತಕಾಚಾರಪರರ್ —(i, 4)

'ನಮಗೆ' ಎಂಬ ಉತ್ತಮಪುರುಷಾರ್ಥದಲ್ಲಿ ಮಧ್ಯಮಪುರುಷಾರ್ಥವೂ ಅಡಕವಾಗಿದೆ, 'ಎಮಗೆ' ಎಂಬುದಲ್ಲಿ ಮಧ್ಯಮಪುರುಷಾರ್ಥವಿಲ್ಲ. ಔತ್ತರೇಯರು ಆ ಬಗೆಯ ಭೇದವೇನೂ ಇಲ್ಲದೆ ಬರಿಯ ಉತ್ತಮಪುರುಷಾರ್ಥದಲ್ಲೇ ಆವೆರಡು ರೂಪಗಳನ್ನು ಬಳಸುತ್ತಿದ್ದಿರಬೇಕು; ದಾಕ್ಷಿಣಾತ್ಯರಾದರೋ ಆಯಾ ಭಿನ್ನಾರ್ಥಗಳಲ್ಲಿಯೇ ಆ ರೂಪಗಳನ್ನು ಪ್ರಯೋಗಿಸುತ್ತಿದ್ದಿರಬೇಕು. ಅದರಿಂದಲೇ ಮತ್ತಿನವನಾದ ಭಟ್ಟಾಕಳಂಕನು 'ಎನ್ ಪಕ್ಷಪಾತಿನೋ ದಾಕ್ಷಿಣಾತ್ಯಾಃ ಕವಿಜನ ಇತಿ' ಎಂದು ಹೇಳಿ, ಈ ದಕ್ಷಿಣೋತ್ತರ ಮಾರ್ಗಭೇದವನ್ನು ನೃಪತುಂಗ ಗ್ರಂಥದಲ್ಲಿ ನಿರೀಕ್ಷಿಸತಕ್ಕುದೆಂದಿಷ್ಟೇ ಹೇಳುತ್ತಾನೆ. ನೃಪತುಂಗ(ದೇವಾನುಮತವಾದ ಈ) ಗ್ರಂಥದಲ್ಲಿ 'ಆಂ' 'ನಾಂ' ಎಂಬ ರೂಪಗಳ ಪ್ರಯೋಗ ಸಂದರ್ಭಗಳ ವಿಮರ್ಶೆ ತೋರುವುದಿಲ್ಲ. ಆದರೂ ಭಟ್ಟಾಕಳಂಕನು ಕೊಟ್ಟ ದಕ್ಷಿಣಮಾರ್ಗದೃಷ್ಟಾಂತ ಪದಗಳಲ್ಲಿ ಮಾತ್ರವೇ 'ಆಂ' ಎಂಬುದು ತೋರುವುದರಿಂದ, ಸ್ವತಃ ದಾಕ್ಷಿಣಾತ್ಯನಾದ ಅವನ ಮಾತು ವಾಸ್ತವವೆಂದೇ ಭಾವಿಸಬೇಕು. ಈಗಲೂ ಕೆಲವು ಅಚ್ಚಗನ್ನಡ ಪಂಗಡಗಳವರು ಈ 'ಆಂ'—'ನಾಂ' ಎಂಬ ರೂಪಗಳನ್ನು ತಮ್ಮ ಆಡುಮಾತಿನಲ್ಲಿ ಬಳಸುತ್ತಾರೆ.

ಮುಳಿಸಂ ಕಟಿಲ್ಚಿ ಕಳೆದುವು
ಕಳಿಕಾಂಕುರ ಚೂತತತಿಗಳುಂ ಕಾಮಿಗಳಾ —(ii, 69)

ಎಂಬ ಪದ್ಯವನ್ನು ಮೇಲಿನ ಪದ್ಯದೊಡನೆ ಹೋಲಿಸಿ ನೋಡಬಹುದು.

ಇದಲ್ಲದೆ, 'ಬರಿಸುವೆಂ', 'ಇರಿಸುವೆಂ', 'ತರಿಸುವೆಂ' ಎಂಬ ಕ್ರಿಯಾಪದ ರೂಪಗಳನ್ನು ನೋಡಿರಿ. ಇವು ಕ್ರಮವಾಗಿ 'ಬರು', 'ಇರು', 'ತರು' ಎಂಬ ಮೂಲಧಾತುಗಳಿಗೆ 'ಇಸು' ಪ್ರತ್ಯಯವನ್ನು ಸೇರಿಸಿದಾಗ ಉಂಟಾಗುವ 'ಬರಿಸು', 'ಇರಿಸು', 'ತರಿಸು', ಎಂಬ ದ್ವಿತೀಯಧಾತುಗಳಿಂದ ಜನಿಸಿದ ರೂಪಗಳು. ಇವುಗಳಲ್ಲಿ, 'ಬರು', 'ಇರು' ಎಂಬವುಗಳು ಸ್ವಾಭಾವಿಕವಾಗಿಯೇ ಅಕರ್ಮಕ ಧಾತುಗಳು. 'ಇಸು' ಪ್ರತ್ಯಯವು ಸೇರಿದ ಮೇಲೆ ಅವು ಸಕರ್ಮಕ ಧಾತುಗಳಾಗುತ್ತವೆ. ಕೊನೆಯ 'ತರು' ಧಾತುವೇನೋ ಸಕರ್ಮಕವೇ ಆಗಿದೆ. ಆದರೂ 'ತನ್ನ ಕೆಳದಿಯರು ತರುವಂತೆ ಮಾಡುವೆನು' ಎಂಬ ಅರ್ಥದಲ್ಲಿ 'ತರಿಸುವೆಂ' ಎಂದು ಪ್ರಯೋಗಿಸಿ, ಆ ರಾಜಪ್ರಿಯೆ ತನ್ನ ಸಖೀಜನದ ಅನುಕೂಲ ವರ್ತನೆಯನ್ನು ಸೂಚಿಸುವ ಮಾತದು. ಹೀಗೆ, ದಕ್ಷಿಣ ಮಾರ್ಗದಲ್ಲಿ 'ಇಸು' ಪ್ರತ್ಯಯಯುತವಾದ ಧಾತುಗಳು ರೂಪಿತವಾದರೆ, ಉತ್ತರಮಾರ್ಗದಲ್ಲಿ ಅವುಗಳ ಆದಿಷ್ಟ ರೂಪಗಳೇ ಪ್ರಯುಕ್ತವಾಗುತ್ತವೆ ಎಂಬುದು ಮುಂದಿನ ಪದ್ಯದಲ್ಲಿ ವ್ಯಕ್ತವಾಗುತ್ತಿದೆ.

'ಉತ್ತರಮಾರ್ಗ ವರ್ತಿಗಳ್'—

ಬರಿಪೆನಮೋಘಮಿಂದುಪವನಾಂತರದಲ್ಲಿಗೆ ಕಾಂತನಂ ತಗು
ಳ್ದಿರಿಪೆನನಾರತಂ ಸುರತರಾಗನಿರೂಪಣಕಾರಣಂಗಳಂ
ತರಿಪೆನನಾಕುಳಂ ಮನದಲಂಪಿನೊಳಾ ಮದನೋಪಮಾನನೊಳ್
ನೆರೆವೆನಭಂಗದೆಂಬ ವಚನಂಗಳಿವುತ್ತರಮಾರ್ಗವರ್ತಿಗಳ್ —(ii, 103)

ಹಿಂದಿನದನ್ನೇ ಉತ್ತರಮಾರ್ಗಕ್ಕೊಪ್ಪುವಂತೆ ತಿದ್ದಿ ನಿರೂಪಿಸಿದ ದೃಷ್ಟಾಂತವಿದು. ಇಲ್ಲಿ ಉತ್ತಮಪುರುಷವಾದ 'ಅಂ' ಎಂಬುದು ಎಲ್ಲೂ ಇಲ್ಲ. 'ಬರಿಪೆಂ' ಎಂಬ ಕ್ರಿಯಾ ಪದವಿದು ಹಿಂದಿನ ಪದ್ಯದಲ್ಲಿರುವ 'ಬರಿಸುವೆಂ' ಎಂಬುದಕ್ಕೆ ಪ್ರತ್ಯಯಾಂತರವು ಸೇರಿ ರೂಪಿತವಾದುದು. ಹಾಗೆಯೇ 'ಇರಿಪೆಂ', 'ತರಿಪೆಂ' ಎಂಬವುಗಳೂ 'ಇರಿಸುವೆಂ', 'ತರಿಸುವೆಂ' ಎಂಬವುಗಳ ರೂಪಾಂತರಗಳು.[1] ಅಲ್ಲಿ ಆದಿಪಾದದ ಮೊದಲನೆಯ ವಾಕ್ಯವು

[1] ಹಿಂದಿನದರಲ್ಲಿ 'ಬರು', 'ಇರು', 'ತರು' ಎಂಬ ಧಾತುಗಳನ್ನು 'ಇಸು' ಪ್ರತ್ಯಯದೊಡಗೂಡಿಸಿ 'ಬರಿಸು', 'ಇರಿಸು', 'ತರಿಸು' ಧಾತುಗಳನ್ನಾಗಿ ಮಾಡಿಕೊಂಡರೆ, ಇಲ್ಲಿಯ ಕ್ರಮ ವಿನ್ನೊಂದು. ಆ 'ಇಸು' ಪ್ರತ್ಯಯಕ್ಕೆ 'ಪು' ಎಂಬ ಪ್ರತ್ಯಯದ ಆದೇಶವಾಗಿದೆ. ಆ ಆದೇಶದಿಂದ ಧಾತುರೂಪಗಳು, 'ಬರಿಪು', 'ಇರಿಪು', ತರಿಪು' ಎಂದಾಗುತ್ತವೆ. ಅನಮೇಲೆ ಕ್ರಮವಾಗಿ ಉತ್ತಮಪುರುಷೈಕ ವಚನದ 'ಎನ್' ಪ್ರತ್ಯಯವು ಸೇರಿದಲ್ಲಿ, 'ಬರಿಪೆಂ', ಇರಿಪೆಂ', 'ತರಿಪೆಂ' ಎಂದಾಗುವುವು. 'ಇಸು'ವಿಗೆ 'ಪು' ಆದೇಶವಾಗುವುದು ಎಂದು ಮುಂದಿನ ವ್ಯಾಕರಣಗಳಲ್ಲಿಯೂ ತೋರುತ್ತಿದೆ. ಅದರಂತೆ 'ಡ'ಕಾರಕ್ಕೆ 'ಟ'ಕಾರವೂ ಕೆಲವೆಡೆ ಆದೇಶವಾಗುವು ದೆಂದೂ ಹೇಳಿದೆ. ಆದರೆ, ಇವು ಮಾರ್ಗಭೇದಲಕ್ಷಣದ ಒಂದೊಂದು ಅಂಗವೆಂಬುದು ಬೇರೆಲ್ಲಿಯೂ ತೋರುವುದಿಲ್ಲ.

ನೇರಾಗಿ ಹರಿದರೆ, ಇಲ್ಲಿ 'ಬರಿಪೆಂ' ಎಂಬ ಕ್ರಿಯಾಪದದ ಮೇಲೆ, ಹಿಂದಿನವರಲ್ಲಿರುವಂತೆ ಕ್ರಿಯೆಯ ಕಾಲದೇಶಾದಿಗಳನ್ನು ಸೂಚಿಸದೆ, 'ಅಮೋಘಂ' ಎಂಬ ಕ್ರಿಯಾವಿಶೇಷಣ ವನ್ನೇ ಕೂಡಿಸಿದ್ದಾನೆ. ಈ ಪದವು ಹಿಂದಿನ ಪದ್ಯದ ನಾಲ್ಕನೆಯ ಪಾದಾದಿಯಲ್ಲಿ ಬರುವ ನಾಲ್ಕನೆಯ ವಾಕ್ಯದೊಳಗೆ 'ನೆರೆವೆನಮೋಘಮೆಂಬುದಿದು' ಎಂಬಲ್ಲಿದೆ. 'ಅಮೋಘಂ' ಎಂದರೆ 'ಸಫಲವಾಗಿ' ಎಂದರ್ಥ. ಆ ಕ್ರಿಯಾವಿಶೇಷಣವು ಇಲ್ಲಿರುವಂತೆ 'ಬರಿಪೆಂ' ಎಂಬ ಸುಖಸಾಧನ ಕ್ರಿಯೆಯೊಡನಲ್ಲ—ಹಿಂದಿನವರಂತೆ ಸಾಧನಕ್ರಿಯೆಗಳನ್ನೆಲ್ಲ ಸೂಚಿ ಸಿದ ಮೇಲೆ ಬರುವ ಸುಖನಿರೂಪಕ ಕ್ರಿಯೆಯಾದ 'ನೆರೆವೆಂ' ಎಂಬುದರೊಡನೆ ಬರುವುದೇ ಸಾಹಜಿಕವಾಗಿದೆ. ಆದಿಯ 'ಬರಿಪೆಂ' ಎಂಬುವರೊಡಗೂಡಿದ 'ಅಮೋಘಂ' ಪದವು 'ಮೋಘ'ವಾಗಲೂ ಬಹುದು; ಹಾಗಾದರೆ ಮಾತದು ಔತ್ತರೇಯ ಸಾಧಾರಣವಾದ ಆತ್ಮಾಭಿಮಾನದ ವಕ್ರತೆಯನ್ನಷ್ಟನ್ನೇ ಸೂಚಿಸುತ್ತಿದೆ. ಅದರಂತೆ, 'ಸಮಂತಿರಿಸುವೆನಂತು' ಎಂದಿರುವುದಕ್ಕೆ ಬದಲಾಗಿ ಇಲ್ಲಿರುವ 'ತಗುಳ್ದಿರಿಪೆನ್ ಅನಾರತಂ' ಎಂಬ ಪ್ರಯೋ ಗಾರ್ಥದೊಳಗಿನ ಆಡಂಬರವನ್ನು ಅವಗಾಹಿಸಿರಿ. 'ಸಮಂತು' (ಸಮರುವಂತೆ, ಎಂದರೆ ಒಂದಕ್ಕೊಂದು ಅನುಕೂಲವಾಗುವಂತೆ) ಎಂಬುದು ಸರಳತೆಯನ್ನು ಸೂಚಿಸಿದರೆ, 'ತಗುಳ್ದು' (ತಗಲಿಸಿ) ಎಂಬುದು ಅಷ್ಟು ಉಚಿತವಾಗಿ ಕಾಣುವುದಿಲ್ಲ. ಮೊದಲಿನದು ವಲ್ಲಭನಲ್ಲಿ ಆಕೆ ಇರಿಸಬೇಕಾದ ಪೂಜ್ಯ ಪ್ರೇಮವನ್ನು ಕಾಣಿಸುವುದು; ಮತ್ತಿನದು, ಅಧಿಕಾರದ ಔದ್ಧತ್ಯವನ್ನೇ ಹೊಳೆಯಿಸುವುದು. ಆ ಮೇಲೆ, ದಾಕ್ಷಿಣಾತ್ಯರ 'ಅನಂತ ಸುಖಸಂಗತ ಮಂಗಳಕಾರಣಂಗಳಂ' ಎಂಬುವರ ಬದಲಾಗಿ, ಇಲ್ಲಿ 'ಸುರತರಾ ನಿರೂಪಣಕಾರಣಂಗಳಂ ತರಿಪೆಂ' ಎಂಬ ವಾಕ್ಯವಿದೆ. ದಕ್ಷಿಣಮಾರ್ಗದ ಆ ಕರ್ಮ ಕಾರಕವು ಅಗಾಧವಾಗಿ ಅಗ್ರಾಮ್ಯ ಪ್ರಸನ್ನಯುತವಾಗಿದ್ದರೆ, ಉತ್ತರಮಾರ್ಗದ ಈ ಕರ್ಮಕಾರಕವು ಗಾಢವಾಗಿ ಗ್ರಾಮ್ಯಕ್ಕೆ ಸಮೀಪವಾಗಿದೆಯಲ್ಲವೆ? ಹಾಗೆಯೇ, ಹಿಂದಿನ 'ಮನೋನಯನವಲ್ಲಭನೊಳ್' ಎಂಬ ಪದವು ಹೃದಯೇಂದ್ರಿಯಬದ್ಧವಾದ ಸಹಜ ಪ್ರೇಮವನ್ನು ಸರಳವಾಗಿ ನಿರೂಪಿಸಿದರೆ, 'ಮದನೋಪಮಾನನೊಳ್' ಎಂಬ ಅಧಿಕರಣ ಕಾರಕವು ಉಪಮಾಲಂಕಾರ ಯುಕ್ತವಾಗಿದ್ದು ಪ್ರಿಯನ ಬಾಹ್ಯಸೌಂದರ್ಯ ಮಾತ್ರ ವನ್ನು ಸೂಚಿಸುವುದು. ಮೊದಲಿನದು ಆರ್ಥಿಕವಾದ ಸ್ಥಿತಾದರೆ, ಮತ್ತಿನದು ಕೊಂಕಾಗಿದೆ ಎಂಬುದನ್ನು ವಿಸ್ತರಿಸಿ ಹೇಳಬೇಕಾಗಿಲ್ಲ. ಅದರಂತೆ, 'ನೆರೆವೆನಮೋಘಂ' ಎಂಬಲ್ಲಿ ತೋರುವ ಪ್ರೇಮಫಲಲಾಭ ನಿಶ್ಚಯವು 'ನೆರೆವೆನಭಂಗದೆ' ಎಂಬಲ್ಲಿ ತೋರುವುದಿಲ್ಲ.

ಪದ್ಯವಿದು ಔತ್ತರೇಯರ 'ಸಮಾಹಿತ' ಗುಣಾನ್ವಿತವಾಗಿರುವಂತೆ ತೋರುವುದು.

ಇದೇ ಪದ್ಯದ ಭಾವವನ್ನು 'ಉತ್ತರೋತ್ತರ' ಮಾರ್ಗದವರು ಹೇಗೆ ನಿರೂಪಿಸುತ್ತಿದ್ದ ರೆಂಬುದನ್ನು ಅವಧರಿಸಬೇಕು.

**'ಉತ್ತರೋತ್ತರಂ'—**

ಅನುಪಮನಂ ಬರಿಪ್ಪೆನನುರಾಗದೆ ನಲ್ಲನನಿಂದು ಮಿಕ್ಕ ನಂ
ದನವನದಲ್ಲಿಗಲ್ಲಿಗೆ ತರಿಪ್ಪೆನನಂಗಸುಖೋಚಿತಂಗಳಾ

ನನುನಯದಿಂದಿರಿಪ್ಪೆನನಿತಂ ಸುರತಾಸವಸೇವನಾಸನಾ
ತನಸುಖ [ದಾದ[1]]ರಿಪ್ಪೆನನುರಾಗದಿನೆಂಬುದಿದುತ್ತರೋತ್ತರಂ —(ii, 104)

ಹಿಂದಿನ ಪದ್ಯವನ್ನೇ ಪುತ್ತೆ ಮಾರ್ಪಡಿಸಿದ ರೂಪವಿದು. ಇಲ್ಲಿ ಕೊಂಕು ಮತ್ತಷ್ಟು ಕಳೆಯೇರಿದುದನ್ನು ಕಾಣಬಹುದು. ‘ಅನುಪಮನಂ ಬರಿಪ್ಪೆಂ ಅನುರಾಗವೆ ನಲ್ಲನಂ ಇಂದು ಮಿಕ್ಕ ನಂದನಪನದಲ್ಲಿಗೆ’ ಎಂಬ ಏಕವಾಕ್ಯವಿದು ಹೇಗೆ ಅತಿ ವಕ್ರವಾಗಿದೆ ಎಂಬುದನ್ನು ಗಮನಿಸಿರಿ. ‘ಅನುಪಮನಂ ನಲ್ಲನಂ’ ಎಂಬ ವಿಶೇಷಣ ವಿಶೇಷ್ಯಗಳೆರಡೂ ಸಂಸ್ಕೃತಭಾಷಾ ಕ್ರಮವಿಡಿದು ಏಕವಿಭಕ್ತಿಕಗಳಾಗಿವೆಯಲ್ಲದೆ ಕನ್ನಡದೇಸಿಗನುವಾಗಿ ‘ಅನುಪಮನಾದ ನಲ್ಲನಂ’ ಎಂದಲ್ಲ. ‘ಇಂದು ಮಿಕ್ಕ ನಂದನವನದಲ್ಲಿಗೆ ಅನುಪಮನಂ ನಲ್ಲನಂ ಅನುರಾಗದೆ ಬರಿಪ್ಪೆಂ’—ಎಂದು ವಾಕ್ಯಾನ್ವಯವಷ್ಟೆ. ‘ಅನುಪಮನಂ’ ಎಂಬ ವಿಶೇಷಣವು ಈ ಮೂಲೆಯಲ್ಲಾದರೆ, ‘ನಲ್ಲನಂ’ ಎಂಬ ವಿಶೇಷ್ಯವು ನಡುವೆ ತುರುಕಿ ಬಿಟ್ಟಂತಿದೆ—ಇದು ಕೊಂಕಿನೊಳಗಿನ ಕೊಂಕು ಬೇರೆ; ‘ಅನುರಾಗದೆ’ ಎಂಬ ಕರಣ ಕಾರಕವು ಎಲ್ಲಿಯೋ ಸೇರಿದರೆ, ‘ನಂದನವನದಲ್ಲಿಗೆ’ ಎಂಬ ಅಧಿಕರಣ ಕಾರಕವು ಇನ್ನೊಂದೆಡೆಗೆ ಅಂಟಿಹೋಗಿದೆ. ‘ಇಂದು’ ಎಂಬ ಕಾಲವಾಚಕವು ಅಂತ್ಯಾತ್ಪೂರ್ವದಲ್ಲಾದರೆ, ‘ಬರಿಪ್ಪೆಂ’ ಎಂಬ ಕ್ರಿಯಾಪದವು ದ್ವಿತೀಯ ಸ್ಥಾನದಲ್ಲಿದೆ. ಇನ್ನು, ಮುಂದಿನ ‘ಅಲ್ಲಿಗೆ ತರಿಪ್ಪೆನ್ ಅನಂಗ ಸುಖೋಚಿತಂಗಳಾನ್,[2] ಅನುನಯದಿಂದ ಇರಿಪ್ಪೆನ್ ಅನಿತಂ’[3] ಎಂಬ ವಾಕ್ಯರಚನೆಯನ್ನು ಭಾವಿಸಬೇಕು. ಹಿಂದಿನ ವಾಕ್ಯದಲ್ಲಿರುವ ‘ನಂದನವನದಲ್ಲಿಗೆ’ ಎಂಬ ಅಧಿಕರಣವನ್ನೇ ದಾಕ್ಷಿಣಾತ್ಯರಂತೆ ಔತ್ತರೇಯರೂ ಅಧ್ಯಾಹರಿಸಿಕೊಳ್ಳಲೂಬಹುದಾಗಿ ತೋರುತ್ತಿದೆ. ಆದರೆ ಈ ‘ಉತ್ತರೋತ್ತರ’ ಮಾರ್ಗೀಯರು ಅದನ್ನತ್ತಲೇ ಬಿಟ್ಟು ಅದೇ ಅಧಿಕರಣವನ್ನು ‘ಅಲ್ಲಿಗೆ’ ಎಂದು ಮುಂದಿನ ವಾಕ್ಯಕ್ಕೆ ಜೋಡಿಸಿಕೊಂಡುದನ್ನೀಕ್ಷಿಸಿರಿ. ಹೀಗೆ ಅಧಿಕರಣವು ಆದಿಯಲ್ಲಿ, ಆಧೇಯವಾದ ‘ಅನಂಗ ಸುಖೋಚಿತಂಗಳಾನ್’ ಎಂಬ ದೀರ್ಘೋಕ್ತಿಯ ಕರ್ಮಕಾರಕವು ಕಡೆಯಲ್ಲಿ, ‘ತರಿಪ್ಪೆಂ’ ಎಂಬ ಕ್ರಿಯಾಪದವು ಮಧ್ಯದಲ್ಲಿ ನಿವಿಷ್ಟವಾಗಿರುವ ಮೂಗೊಂಕಿನ ಅಂದವನ್ನವಗಾಹಿಸಿರಿ. ಹಾಗೆಯೇ ‘ಅನುನಯದಿಂದ’ ಎಂಬ ಕರಣವೂ, ‘ಇರಿಪ್ಪೆಂ’ ಎಂಬ ಕ್ರಿಯಾಪದವೂ, ‘ಅನಿತಂ’ ಎಂಬ ಕರ್ಮವೂ ಅದೊಂದು ಬಗೆಯಾಗಿ ಕೂಡಿವೆ. ಮುಂದಿನ ವಾಕ್ಯವಾದ ‘ಸುರತಾಸವ ಸೇವನಾಸನಾತನಸುಖ[ದಾದ]ರಿಪ್ಪೆಂ’ ಎಂಬುದೂ ಹಿಂದಿನದಕ್ಕೆ ಅನುವಾಗಿಯೇ

---

[1] ‘ಕವಿರಾಜಮಾರ್ಗ’ದ ಎರಡು ಪ್ರತಿಗಳಲ್ಲಿಯೂ ‘ಸುಖದಿಂದಿರಿಪ್ಪೆಂ’ ಎಂದಿದೆ. ಹಾಗಿದ್ದರೆ, ಇದೇ ಪದ್ಯದ ಹಿಂದಿನ ವಾಕ್ಯದ ‘ಇರಿಪ್ಪೆಂ’ ಎಂಬ ಕ್ರಿಯೆಯೇ ಪುನರುಕ್ತವಾದಂತಾಗುವುದು. ಅದರಿಂದ ‘ಸುಖದಾದರಿಪ್ಪೆಂ’ ಎಂದು ಮಾರ್ಪಡಿಸಿಕೊಂಡಿದ್ದೇವೆ.

[2] ಇಲ್ಲಿಯ ದೀರ್ಘೋಕ್ತಿಯನ್ನು ಗಮನಿಸಬೇಕು. ದ್ವಿತೀಯಾ ವಿಭಕ್ತಿ ಪ್ರತ್ಯಯಗಳ ದೀರ್ಘ ರೂಪವು ಈ ಉತ್ತರೋತ್ತರ ಮಾರ್ಗದಿಂದಲೇ ನೆಗೆದುದಾಗಿರಬಹುದೆ ?

[3] ಎರಡು ಪ್ರತಿಗಳಲ್ಲೂ ‘ಇರಿಪ್ಪೆನಿನಿತುಂ’ ಎಂದೇ ಇದೆ. ಅರ್ಥಾನುಸಾರವಾಗಿ ‘ಇರಿಪ್ಪೆನನಿತಂ’ ಎಂಬುದು ಉಚಿತವಾಗಿ ತೋರುತ್ತದೆ.

ಇದೆ ಎಂಬುದನ್ನು ವಿಸ್ತರಿಸಬೇಕಾಗಿಲ್ಲ. ಉತ್ತರೋತ್ತರಮಾರ್ಗ ಭಣಿತಿಯಾದರೂ ಏನು ?—ಈ ಸುರುಸುತ್ತಿದ ಕುರುಗೊಂಕು ಸೊಲ್ಲಿನ ಕಟ್ಟಿನಲ್ಲಿ ಅದೊಂದು ಆಕರ್ಷಕತೆ ಯಿದೆ ಎಂದು ನನಗಂತೂ ತೋರುತ್ತಿದೆ. ಆದರೆ ಈ ಮೂರು ಮಾರ್ಗಗಳೊಳಗೆ ಆ ಸುಖಸಾಧನ ಸಾಹಿತ್ಯವು ಹೇಗೆ ನಿರೂಪಿತವಾಗಿದೆ ಎಂಬುದನ್ನವಧಾನಿಸಿರಿ—

ದಕ್ಷಿಣಮಾರ್ಗ—ಅಂತನಂತಸುಖಸಂಗತಮುಂಗಳ ಕಾರಣಂಗಳಂ
ಉತ್ತರಮಾರ್ಗ—ಸುರತರಾಗ ನಿರೂಪಣ ಕಾರಣಂಗಳಂ
ಉತ್ತರೋತ್ತರಮಾರ್ಗ—ಅನಂಗ ಸುಖೋಚಿತಂಗಳಾನ್ ಸುರತಾಸವ ಸೇವನಾಸುಖದೆ

ಇಲ್ಲಿ ಅಗ್ರಾಮ್ಯ ವಚನರಚನೆ ಕ್ರಮವಾಗಿ ಶಿಥಿಲವಾಗುತ್ತಾ ಹೋದುದು ಸ್ಫುಟ ವಾಗುತ್ತಿದೆ. ಉತ್ತರೋತ್ತರಮಾರ್ಗದಲ್ಲಂತೂ, ಆ 'ಸುರತಾಸವಸೇವನೆ'ಯಿಂದ 'ಸನಾತನ ಸುಖ'ದ ಅನುಭವವಾಗುವಂತೆ ವರ್ಣಿತವಾಗಿದೆ. ವಾತ್ಸ್ಯಾಯನ ಸೂತ್ರದಿಂದ ಆ ಕವಿಗಳು ಬದ್ಧರಾದುದರಿಂದಲೆ ಹಾಗಾಗಿರಬೇಕೆನ್ನಲೆ !

ಇಲ್ಲಿ ಗಮನಿಸತಕ್ಕ ಇನ್ನೊಂದು ವಿಷಯವೂ ಇದೆ. ದಕ್ಷಿಣಮಾರ್ಗ, ಉತ್ತರ ಮಾರ್ಗ, ಉತ್ತರೋತ್ತರ ಮಾರ್ಗಗಳಲ್ಲಿ ಆಖ್ಯಾತರೂಪಕ ಪ್ರತ್ಯಯವು ಹೇಗೆ ಮಾರ್ಪಡುತ್ತಾ ಬಂದಿದೆಯೆಂಬುದನ್ನು ಭಾವಿಸಿಕೊಳ್ಳಬೇಕು. ದಾಕ್ಷಿಣಾತ್ಯರ 'ಇಸು' ಪ್ರತ್ಯಯಕ್ಕೆ ಔತ್ತರೇಯರಲ್ಲಿ 'ಪು' ಆದೇಶವಾಗುವುದು ; ಪುನಃ, ಇದಕ್ಕೆ ಉತ್ತರೋತ್ತರ ಮಾರ್ಗದಲ್ಲಿ 'ಪ್ಪು' ಆದೇಶವಾಗುವುದು—ಉದಾ : 'ಬರಿಸುವೆಂ' (ದಕ್ಷಿಣಮಾರ್ಗ), 'ಬರಿಪೆಂ' (ಉತ್ತರಮಾರ್ಗ), 'ಬರಿಪ್ಪೆಂ' (ಉತ್ತರೋತ್ತರ ಮಾರ್ಗ).[1]

ಮುಂದಿನ ಪದ್ಯದಲ್ಲಿ 'ಇಸು' ಪ್ರತ್ಯಯಕ್ಕೆ ಹೇಗೋ ಹಾಗೆ 'ಸು' ಪ್ರತ್ಯಯಕ್ಕೂ 'ಪು', 'ಪ್ಪು' ಪ್ರತ್ಯಯಗಳು ಆದೇಶಗಳಾಗುವುವೆಂದು ಭ್ರಮಿಸಲಾಗದು ಎಂದು ಸೂಚಿತವಾಗಿದೆ

ಪರಸುವೆನೆನ್ನದಾಂ ಪರಪೆನೆಂಬುದಿದಾಗದು ಚಿತ್ತನಾಥನೊಳ್
ಬೆರಸುವೆನೆನ್ನದಾಂ ಬೆರಪೆನೆಂಬುದಿದಾಗದು ಮಾರ್ಗಯುಗ್ಮದೊಳ್
ನಿರತಿಶಯಾನುಭಾವಭವನಪ್ಪ ಮಹಾನೃಪತುಂಗದೇವನಾ
ಪರದೊಳೆ ಪೇೞ್ದ ಮಾರ್ಗಗತಿಯಿಂ ತಱಿಸಲ್ಗಿದನಿಂತೆ ಕಬ್ಬಿಗರ್ —(ii, 105)

ದಕ್ಷಿಣಮಾರ್ಗದಲ್ಲಿ ತೋರುವ 'ಬರಿಸು', 'ಇರಿಸು' ಮೊದಲಾದ ಧಾತುಗಳೆಂದರೆ, 'ಬರು', 'ಇರು' ಮೊದಲಾದುವುಗಳಿಗೆ 'ಇಸು' ಸೇರಿಯೇ ರೂಪಿಸಿದ ದ್ವಿತೀಯ ಧಾತು

---

[1] ವ್ಯಾಕರಣ ಗ್ರಂಥಗಳಲ್ಲಿ 'ಇಸು', 'ಪು', 'ಪ್ಪು' ಪ್ರತ್ಯಯಗಳ ಉಲ್ಲೇಖವಿದೆಯಲ್ಲದೆ, ಅವುಗಳಲ್ಲಿ ಆಯಾ ಮಾರ್ಗಗಳ ವೈಶಿಷ್ಟ್ಯವೂ ಇದೆ ಎಂದು ನಿರುಕ್ತವಾಗಿಲ್ಲ. ಇದರಂತೆ, 'ಓಡಿದುದು', 'ಓಡಿತು', 'ಓಡಿತ್ತು', 'ಓಡಿದತ್ತು' ಮೊದಲಾಗಿ ಕ್ರಿಯಾಪ್ರತ್ಯಯ ಭೇದಗಳಿಂ ದಾಗುವ ರೂಪಭೇದಗಳು ಈ ಮಾರ್ಗಭೇದಕಗಳೇ ಆಗಿದ್ದಿರಬಹುದೆಂದು ತೋರಬಹುದು. ಮುತ್ತಿನ ಕವಿಗಳಾದ ಪಂಪ ರನ್ನಾದಿಗಳಲ್ಲಿ 'ಓಡಿದುದು', 'ಓಡಿತು'—ಇಂತಹ ರೂಪಗಳೇ ಹೆಚ್ಚಾದರೆ, ಅಗ್ಗಳ ರುದ್ರಭಟ್ಟಾದಿಗಳಲ್ಲಿ, 'ಓಡಿತ್ತು', 'ಓಡಿದತ್ತು', 'ಬಂದಪ್ಪಂ' ಮೊದಲಾದ ದ್ವಿತ್ವ ವಿಶಿಷ್ಟ ಪ್ರತ್ಯಯಗಳ ಕ್ರಿಯಾಪದ ಪ್ರಯೋಗಗಳೇ ಹೆಚ್ಚಾಗಿವೆ.

ಗಳಷ್ಟೆ. ಅವುಗಳಂತೆಯೇ ಜನಿಸಿದುವುಗಳೋ ಎಂದು ಭ್ರಮೆಯನ್ನುಂಟುಮಾಡುವ 'ಪರಸು', 'ಬೆರಸು' ಮೊದಲಾದ ಹಲವು ಧಾತುಗಳಿವೆ. ನಮ್ಮೆಣಿಕೆಯಂತೆ ಇವೂ 'ಇಸು' ಪ್ರತ್ಯಯ ಮಿಶ್ರಿತವಾದವುಗಳೇ ಆಗಿವೆ. ಆದರೆ ಆ ಕ್ರಮ ಬೇರೆ. 'ಪರಿ' ಧಾತು ಭಾವಾರ್ಥಕ 'ಕೆ'ಯಿಂದ ಕೂಡಿ ಅಕಾರಾದೇಶದೊಡನೆ 'ಪರಕೆ' ಎಂದು (ಹರಿಯುವಿಕೆ-ವಿಸ್ತರಿಸುವಿಕೆ, ಆಶೀರ್ವಾದ—ಎಂಬ ಅರ್ಥಯುಕ್ತವಾಗಿ) ರೂಪಿತವಾಗಿರಬೇಕು. ಆ ಮೇಲೆ 'ಪರಕೆ + ಇಸು' ಎಂದು ಪ್ರತ್ಯಯ ಸಹಿತವಾಗಿ, ಅಂತ್ಯಾದಿಗಳ 'ಕೆ', 'ಇ'ಗಳ ಲೋಪವಾಗಿ, 'ಪರಸು' ಎಂಬ ಧಾತುವಾಗಿರಬೇಕು. ಅದರಂತೆ, 'ಬೆರಕೆ ಇಸು' ಕೂಡಿ 'ಬೆರಸು' ಧಾತುವೂ ರೂಪಿಸಿರಬೇಕು. ಹೀಗೆ 'ಇಸು'ಕೂಡಿ ರೂಪಿಸಿದ 'ಪರಸು', 'ಬೆರಸು' ಮೊದಲಾದ ರೂಪಗಳು 'ಪರಪು', 'ಬೆರಪು' ಮುಂತಾದ ಮಾರ್ಗಾಂತರ ಸ್ವರೂಪಗಳನ್ನೊಂದಲಾರವು, ಎಂದು ಗ್ರಂಥಕಾರನೆಣಿಕೆಯಾಗಿರಬೇಕು.

ಈ ವರೆಗಿನ ಉದಾಹರಣಗಳಲ್ಲಿ ವಿಮರ್ಶಿಸಿದ ಈ ಭಾಗವೆಲ್ಲವೂ ಪ್ರಮುಖವಾಗಿ ಬಂಧಗತ ಮಾರ್ಗಭೇದಗಳು. ಮುಂದಿನ ಮೂರು ಪದ್ಯಗಳ ಪೂರ್ವೋತ್ತರ ಭಾಗಗಳಲ್ಲಿ ಕ್ರಮವಾಗಿ ದಕ್ಷಿಣೋತ್ತರ ಮಾರ್ಗಗಳಿಗೆ ಮೂರು ಮೂರು ದೃಷ್ಟಾಂತಗಳಿವೆ.[1] ಮುಂದಿನ ಮೂರು ದೃಷ್ಟಾಂತಗಳಲ್ಲಿ, ಮೊದಲಿನದು ಒಬ್ಬ 'ಮುನಿನಾಥನ' ಸಲಕ್ಷಣವಾದ ವರ್ಣನೆ; ಮತ್ತಿನದು ಅಂಥ 'ಮುನೀಂದ್ರನಾ' ಪದಯುಗಳದಲ್ಲಿ ಭವ್ಯನೊಬ್ಬನು 'ಮನೋಮುದದೆ' ಮಾಡಿದ ನಮಸ್ಕಾರದ ವಿವರಣೆ; ಮೂರನೆಯದು ಅಂಥ ಮುನಿನಾಥರ ಮತ್ತು ಭವ್ಯರ ಅಸ್ತಿತ್ವದಿಂದಾಗಿ ಮಾತೃಭೂಮಿ ಸಫಲವಾಗಿದೆ ಎಂಬ ಧಾರ್ಮಿಕ ವಿಷಯನಿರೂಪಣೆ. ಇವುಗಳಲ್ಲಿ ಕ್ರಮವಾಗಿ ವಚನರಚನಾ ಪದ್ಧತಿಗಳ ಭೇದ, ಆ ರಚನೆಗಳೊಳಗಿನ ಆರ್ಥಿಕ ಕ್ರಮಭೇದ, ಆ ಅರ್ಥಗಳೊಳಗಿನ ಅಲಂಕಾರ ನಿರೂಪಣ ಕ್ರಮ ಭೇದ—ಇವುಗಳ ಸ್ಥಿತು ಕೊಂಕುಗಳೊಡನೆ ದಕ್ಷಿಣೋತ್ತರ ಮಾರ್ಗಭೇದಗಳು ವ್ಯಕ್ತವಾಗುವಂತೆ ತೋರುವುದು. ಮೊದಲಿನ ಪದ್ಯವನ್ನು ನೋಡಿ—

**'ದಾಕ್ಷಿಣಾತ್ಯಕಂ'—**

ಮನದೊಳಗಾಗಳುಂ ನಿಜಸದಾ ಮುನಿಸಂ ಗತರಾಗಮೋಹನೊ
ಯ್ಯನೆ ಮುನಿನಾಥನೆಂಬ ವಚನಾಂತರಮಿಂತಿದು ದಾಕ್ಷಿಣಾತ್ಯಕಂ
—(ii, 106) ಪೂರ್ವಾರ್ಧ

ಈ ವಚನವು ಎಷ್ಟು ನೇರವಾಗಿ ಅನ್ವಯಿಸುತ್ತಿದೆ ಎಂಬುದು ಸಾಮಾನ್ಯರಿಗೂ ಗೊತ್ತಾಗಬಹುದು. 'ಮುನಿನಾಥ'ನೆನ್ನಿಸಬೇಕಾದರೆ, ಮನಸ್ಸಿನಲ್ಲಿ ಎಂದೂ ಮುಳಿಸನ್ನಿರಿಸದಿರುವುದೇ ಪ್ರಥಮ ಕರ್ತವ್ಯ. ಅದರಿಂದ ಆ ಮೌನವ್ರತವು ನೆಲಸುವುದು. ಮುಳಿಸನ್ನಿರಿಸದಿರುವುದೇ ಒಂದು ವ್ರತ ಇಲ್ಲವೆ ತಪಸ್ಸು ಎನ್ನಬಹುದು. ಹಾಗೆ ಅಕ್ರೋಧನತ್ವವು

[1] ಇಲ್ಲಿ ಉತ್ತರೋತ್ತರ ಮಾರ್ಗದ ವಿಷಯವೇ ಇಲ್ಲ. ಅದರಿಂದ ಅದು ಉತ್ತರಮಾರ್ಗದ ಅಂಗವೇ ಎಂಬುದು ಮತ್ತಷ್ಟು ಸ್ಥಿರವಾಗುತ್ತಿದೆ.

ಕ್ರಮೇಣ ನೆಲೆಗೊಂಡಲ್ಲಿ ಆತನು 'ಗತರಾಗ ಮೋಹಂ' ಎನ್ನಿಸುತ್ತಾನೆ. ಅಂತಹ ಅಕ್ರೋಧಸತ್ವ ಗತರಾಗ ಮೋಹತೆಗಳೆಂಬವೇನು ಥಕ್ಕನೆ ಸಾಧ್ಯವೆ? ಅಲ್ಲ. ಅದು ಬಹು ಕಾಲದ ಪ್ರಯತ್ನ ಫಲವೆಂಬುದು 'ಒಯ್ಯನೆ' ಎಂಬ ಅವ್ಯಯದಿಂದ ಸೂಚಿತವಾಗು ವುದು. ಹೀಗೆ, ಈ ಪದ್ಯಭಾಗದಲ್ಲಿ ಒಂದು ಪದವೂ ನಿರರ್ಥಕವಾಗಿಲ್ಲ—ಎಲ್ಲವೂ 'ಮುನಿನಾಥ'ನೆನಿಸಿದವನ ಸ್ವಭಾವಕ್ಕನುವಾಗಿ ಸ್ವೈತಾಗಿ ಅಣಿಗೊಂಡಿವೆ. ಇದು ದಕ್ಷಿಣ ಮಾರ್ಗದ 'ಕಾಂತ'ಗುಣವಾಗಿ ತೋರುತ್ತಿದೆ. ಇದನ್ನು ಆ 'ಕಾಂತ' ಗುಣ ದೃಷ್ಟಾಂತ ವಾದ—

ದಿನಕರ ಕರ ನಿಕರಂಗಳ್
ಘನವಿವರಪ್ರಸರಮಾಗಿಯುಂ ತಮ್ಮಂ ಕಂ
ಡನಿತಱೊಳೆ ತೆರಳ್ದನ್ನಾ
ಮುನೋಗತಧ್ವಾಂತಬಂಧಮುಳಱುತ್ತೆಲ್ಲಂ —(ii, 65)

ಎಂಬ ಪದ್ಯದೊಡನೆ ಹೋಲಿಸಿ ನೋಡಬಹುದು. ಇನ್ನು ಉತ್ತರಾರ್ಧವನ್ನು ನೋಡುವ.

**'ಉದೀಚ್ಯ ವಾಚಕಂ'—**

ಮನದೊಳಗಾಗಳುಂ ನಿಱಿಸದೊಯ್ಯನೆ ಮೋಹಮುಮಂತೆ ರಾಗಮುಂ
ಮುಳಿಸುಮುಮೊಲ್ಲದಂ ಮುನಿಪನೆಂಬುದಿದಕ್ಕುಮುದೀಚ್ಯವಾಚಕಂ
—(ii, 106) ಉತ್ತರಾರ್ಧ

ಪೂರ್ವಾರ್ಧದಲ್ಲಿ, ಮನಸ್ಸಿನಿಂದ 'ಮುಳಿಸಂ' ಕಳೆವುದೇ ಮುನಿನಾಥನೆನ್ನಿಸಲು ಪ್ರಥಮ ಕರ್ತವ್ಯವೆಂದು ತೋರಿದರೆ, ಇಲ್ಲಿ 'ಮೋಹಮುಂ' ಒಲ್ಲದಿರುವುದೇ ಆ ಸ್ಥಳವನ್ನಾಕ್ರಮಿಸಿದೆ. ಬಾಹ್ಯ ಪದಾರ್ಥಗಳಲ್ಲಿ ಪ್ರಾಣಿಗುಂಟಾಗುವ ಮನಃಪ್ರವಣತೆಯ ಕ್ರಮವಾದ ಭೇದಗಳೇ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅಂತಶ್ಶತ್ರುಗಳಷ್ಟೆ. ಅವುಗಳಲ್ಲಿ ಮೊದಲಿನದೇ ಕಾಮ ಇಲ್ಲವೆ ರಾಗ. ಧರ್ಮಾನುಸಾರವಾಗಿದ್ದರೆ, ಅದು ಅಂತಶ್ಶತ್ರುವಲ್ಲ—ಮಿತ್ರರೂಪದ ಕಾಮವೆಂಬ ಪುರುಷಾರ್ಥ. ಅದು ಕ್ರೋಧ ಲೋಭಾದಿ ಗಳಾಗಿ ಪರಿಣಮಿಸುವಂತೆಯೂ ಇಲ್ಲ. ಆದರೆ 'ಮುನಿನಾಥ'ನೆನಿಸುವವನು ವೈಯಕ್ತಿಕ ವಾದ ಆ ಮಿತ್ರರೂಪದ ಕಾಮ(ರಾಗ)ವನ್ನೂ ತೊರೆದಿರಬೇಕು. ಅದರಿಂದಲೇ, ಆ ಪೂರ್ವಾರ್ಧದಲ್ಲಿ 'ಗತರಾಗಮೋಹ'ನಾಗಿ, 'ಮನದೊಳ್ ಮುಳಿಸು' ಮೊದಲಾದವುಗಳಿಗೆ ಆಸರೆಯನ್ನೆ ಕೊಡದವನು—ಎಂದುದು. ಈ ಉತ್ತರಾರ್ಧದಲ್ಲಿ ಹಾಗೆನ್ನದೆ, ಮೊದಲು 'ಮನದೊಳಗೆ ಆಗಳುಂ ನಿಱಿಸದೆ ಮೋಹಮುಂ' ಎಂದೂ, ಆ ಮೇಲೆ 'ಅಂತೆ ರಾಗಮುಂ' ಎಂದೂ, ಕೊನೆಗೆ 'ಮುನಿಸುಮಂ ಒಲ್ಲದಂ' ಎಂದೂ ಹೇಳಿದ ವಿಪರ್ಯಯ ಕ್ರಮವನ್ನು ಅವಗಾಹಿಸಬೇಕು. ಈ ಶಬ್ದವಿಪರ್ಯಾಸವು, ಅಥವಾ ಬಂಧ ವಕ್ರತೆಯು, ಅರ್ಥ ವಿಪರ್ಯಾಸವನ್ನು ಹೊಳೆಯಿಸುವುದು.

ಇದು ಉತ್ತರಮಾರ್ಗದ 'ಸಮಾಹಿತ'ಬಂಧವಾಗಿ ತೋರುತ್ತಿದೆ. ಇಲ್ಲಿ 'ಒಂದಱ

ಮಾತುಗಳಂ ಪೆಱತೊಂದಱೊಳ್' ಆರೋಪಿಸುವ ದಕ್ಷಿಣಮಾರ್ಗ ಸಮಾಹಿತ ಲಕ್ಷಣ ವಿಲ್ಲ.

ಈ ಮಾರ್ಗದ್ವಯೋದಾಹರಣಗಳು ವಿಶೇಷವಾಗಿ ಬಂಧಗುಣಗಳನ್ನೇ ಮುಂದಿರಿಸಿ ಕಾಣಿಸಿವೆ. ಇನ್ನು ಮುಂದಿನ ದೃಷ್ಟಾಂತ ಪದ್ಯವನ್ನು ಲಕ್ಷಿಸಿರಿ :

**'ದಕ್ಷಿಣಾಯನಂ'—**

ತ್ರಿದಶಗಣೇಶಮೌಳಿಮಣಿಪೀಠನಿಷೇವಿಗಳೊಳ್ ಮುನೀಂದ್ರನಾ
ಪದಯುಗಳಂಗಳೊಳ್ ಮುದದೆ ಬಾಗುವೆನೆಂಬುದು ದಕ್ಷಿಣಾಯನಂ

—(ii, 107) ಪೂರ್ವಾರ್ಧ

ಹಿಂದಿನ ಪದ್ಯವು 'ಮುನಿನಾಥನ' ಸ್ವರೂಪ ಲಕ್ಷಣವಾದರೆ, ಇದು ಆ 'ಮುನೀಂದ್ರನಾ ಪದಯುಗಳಂಗಳೊಳ್ ಮುದದೆ ಬಾಗುವೆಂ' ಎಂದು ಕರ್ತವ್ಯಾರ್ಥವನ್ನು ಬಣ್ಣಿಸುವುದು. ಶಬ್ದಗುಣದ ಸೈತು ಇಲ್ಲಿ ಅತಿ ವಿಶದವಾಗಿದೆ; ಅರ್ಥಗುಣದ ಸೈತಿಗೆ ಬಲು ಪೋಷಕವೂ ಆಗಿದೆ. 'ತ್ರಿದಶ ಗಣೇಶ'ರ 'ಮೌಳಿಮಣಿ' ಎಂಬ ಪೀಠವನ್ನು ನಿಷೇವಿಸುವ 'ಮುನೀಂದ್ರನಾ ಪದಯುಗಳಂಗಳೊಳ್ ಮುದದೆ ಬಾಗುವೆಂ'—ಎಂದು ಅನ್ವಯವಷ್ಟೆ. 'ಮೌಳಿಮಣಿಪೀಠ' ಎಂಬ ರೂಪಕಾಲಂಕಾರದಿಂದ 'ನಿಷೇವಿಗಳೊಳ್' ಎಂಬ ಸಮಾಹಿತ ಗುಣಕ್ಕೆ ಮತ್ತಷ್ಟು ಹೊಳಪೇರಿದೆ. ನಿಷೇವಿತ್ವವು ವಿನಯಯುತವಾದ ಅಂತರಂಗ ಧರ್ಮವಲ್ಲದೆ ಬಾಹ್ಯಾಂಗ ಧರ್ಮವಲ್ಲ. ಇಲ್ಲಿ 'ತ್ರಿದಶಗಣೇಶ'ರು ನಮಸ್ಕರಿಸುವುದರಿಂದ, ಅವರ ಮೌಳಿಮಣಿಗಳು ಮುನೀಂದ್ರನ ಪಾದಪೀಠದಲ್ಲಿ ಸೇರಿವೆ; ಆ ಮಣಿವರ್ಗದ ಮೇಲೆ ಅವನ ಪದಯುಗವು, ಒಬ್ಬ ಚಕ್ರವರ್ತಿಯು ಪೂಜ್ಯ ಸಿಂಹಾಸನವನ್ನೇರಿದಂತೆ, ಬೆಳಗುತ್ತಿದೆ—ಎಂದು ಅರ್ಥವಾಗುವುದು. ಅದರಿಂದ, ಈ ಮುನೀಂದ್ರನು ದೇವಾಧಿಪತಿಗಳಿಗೂ ಪೂಜ್ಯನೆಂಬುದು ವಿದಿತವಾಗುವುದು. ಇಲ್ಲಿ ದಕ್ಷಿಣಾಯನಕ್ಕೊಪ್ಪುವ ಸರಳ ವಚನರಚನೆಗನುವಾಗಿ ಅನ್ವಯಾರ್ಥವು ಓದಿದೊಡನೆ ಹಾದುಹೋಗಿ ಗುರಿಗೊಳ್ಳುತ್ತಿದೆ.

ಈಗ ಪದ್ಯದ ಉತ್ತರಾರ್ಧವನ್ನು ಪರಿಶೀಲಿಸಿರಿ :

**'ಉತ್ತರಾಯಣಂ'—**

ವಿದಿತಸುರಾಧಿರಾಜಮುಕುಟಾಗ್ರಸಮರ್ಪಿತದೊಳ್ ಮುನೀಂದ್ರನಾ
ಪದಯುಗದೊಳ್ ಮನೋಮುದದೆ ಬಾಗುವೆನೆಂಬುದಿದುತ್ತರಾಯಣಂ

—(ii, 107) ಉತ್ತರಾರ್ಧ

ಹಿಂದೆ ಉದ್ಧರಿಸಿದ ಪೂರ್ವಾರ್ಧದ ಮಾರ್ಪಟ್ಟ ರೂಪವಿದು. ಪೂರ್ವೋತ್ತರಾರ್ಧಗಳ ತಾತ್ಪರ್ಯವು ಒಂದೇ ಆದರೂ, ಇಲ್ಲಿ ಹೊಳೆಯುವ ಅರ್ಥಗುಣ ವೈಶಿಷ್ಟ್ಯವನ್ನು ಒಂದಿಷ್ಟು ಪರಿಭಾವಿಸಿರಿ. ಹಿಂದಿರುವ 'ತ್ರಿದಶ ಗಣೇಶ' ಎಂಬುದು ಇಲ್ಲಿ 'ವಿದಿತ ಸುರಾಧಿರಾಜ' ಎಂದು ಮಾರ್ಪಟ್ಟಿರುವುದರಿಂದ, ದೇವಚಕ್ರವರ್ತಿಯಾದ ಇಂದ್ರನು—ಎಂದು ಅರ್ಥವಾಗುತ್ತಿದೆ. ಅದರಿಂದ, ತ್ರಿದಶಗಣೇಶರೊಳಗಿನ ಇತರರಿಂದ ಮಾತ್ರವಲ್ಲ, ಎಲ್ಲರಿಗೂ ಒಡೆಯನಾದ

ಇಂದ್ರನಿಂದಲೇ ವಂದಿಸಲ್ಪಟ್ಟವನು—ಎಂದು ಈ ಮುನೀಂದ್ರನ ಮಹತ್ತ್ವವು ಸೂಚಿತವಾಗಿದೆ. ಅಲ್ಲಿಯ 'ಮೌಳಿ ಮಣಿ ಪೀಠ ನಿಷೇವಿಗಳೊಳ್ ಮುನೀಂದ್ರನಾ ಪದಯುಗಳಂಗಳೊಳ್' ಎಂಬ ವಚನವು ಆ 'ತ್ರಿದಶಗಣೇಶಮೌಳಿ'ಯಲ್ಲಿ ಮುನೀಂದ್ರನಿಗಿರುವ ಪೂಜ್ಯಾಭಿಮಾನವನ್ನು ಹೊಳೆಯಿಸುವುದು. ಇಲ್ಲಿ ಹಾಗಿಲ್ಲ; 'ವಿದಿತ ಸುರಾಧಿರಾಜ ಮಕುಟಾಗ್ರಸಮರ್ಪಿತದೊಳ್ ಮುನೀಂದ್ರನಾ ಪದಯುಗದೊಳ್' ಎಂದಿದೆ. ಎಂದರೆ, 'ಪ್ರಸಿದ್ಧ ಸುರಾಧಿಪತಿಯ ಕಿರೀಟಾಗ್ರದಲ್ಲಿ ಮುನೀಂದ್ರನಿಂದ ಇಡಲ್ಪಟ್ಟ ಪದಯುಗದಲ್ಲಿ' ಎಂದಲ್ಲವೆ ಅರ್ಥ? ಪದ್ಯದ ಪೂರ್ವಾರ್ಧದಲ್ಲಿ ಹೊಳೆಯುವ ಗಂಭೀರವಾದ ಪೂಜ್ಯಭಾವನೆ ಇಲ್ಲಿ ವ್ಯಕ್ತವಾಗುವುದೆ?—ಇಲ್ಲ. ಮುನೀಂದ್ರನಿಗೆ ಆ ಸುರಾಧಿರಾಜ ಮಕುಟದಲ್ಲಿ ಅದೊಂದು ನಿಸ್ಸಾರಭಾವನೆಯಿರುವಂತೆ, ಅಥವಾ ಮುನೀಂದ್ರಪಾದ ಇಂದ್ರಮಕುಟಗಳೊಳಗೆ ಸಮತಾಭಾವನೆಯಿರುವಂತೆ, ತೋರುತ್ತಿದೆ. ಕಾಮಕ್ರೋಧಾದಿರಹಿತನಾದ ಮುನೀಂದ್ರನು ತಾನಾಗಿ ಸುರಾಧಿರಾಜ ಮಕುಟದಲ್ಲಿ ಕಾಲಿಟ್ಟಂತೆ ವರ್ಣಿಸಿದರೆ, ಆ ಮುನೀಂದ್ರನಲ್ಲಿ ಉದ್ಧತ ಪ್ರವೃತ್ತಿಯನ್ನೇ ಆರೋಪಿಸಿದಂತಾಗುವುದಿಲ್ಲವೆ? ಹಿಂದೆಯೇ ಹೇಳಿದಂತೆ, ಪದ್ಯದ ಪೂರ್ವೋತ್ತರ ಭಾಗಗಳೊಳಗೆ ವ್ಯಕ್ತವಾಗುವ ತಾತ್ಪರ್ಯವೇನೋ ಒಂದೇ ಆಗಿದೆ. ಆದರೆ ಅಲ್ಲಿ ಸ್ತೈತು, ಇಲ್ಲಿ ಕೊಂಕು; ಅಲ್ಲಿ ಉದಾತ್ತ ವೃತ್ತಿ, ಇಲ್ಲಿ ಉದ್ಧತ ಪ್ರವೃತ್ತಿ—ಎಂಬ ಅರ್ಥಭೇದವೂ ಸ್ಫುಟವಾಗಿಯೇ ಇದೆ.

ಇಲ್ಲಿ ರೂಪಕಾಲಂಕಾರ ಸಮಾಹಿತಾರ್ಥಗಳೆರಡೂ ಇಲ್ಲ. ಅದರಿಂದಲೇ ಇಲ್ಲಿ ಔತ್ತರೇಯ ಸಮಾಹಿತಾರ್ಥಗುಣವು ತೋರುತ್ತಿದೆ.

ಇನ್ನು ಕೊನೆಯದಾದ ಅಲಂಕಾರ ದೃಷ್ಟಾಂತ. ಅರ್ಥಾಲಂಕಾರಗಳನ್ನು ವಿಸ್ತರಿಸುವಲ್ಲಿ, ಗ್ರಂಥಕಾರನು ದಂಡ್ಯಾದಿಗಳನ್ನನುಸರಿಸಿ, 'ಜಾತಿ', 'ರೂಪಕ'—ಮೊದಲಾದುವನ್ನು ಪ್ರಾರಂಭಿಸುತ್ತಾನೆ. 'ಜಾತಿ' ಎಂದರೆ ಸ್ವಭಾವೋಕ್ತಿಯೇ ಎಂದು ಭಾವಿಸಬಹುದು. ಮತ್ತೆ ಹೇಳಿದ ಅರ್ಥಾಲಂಕಾರವೆಂದರೆ ರೂಪಕ. ಉಭಯ ಮಾರ್ಗಗಳ ಅರ್ಥಾಲಂಕಾರ ನಿರೂಪಣ ಕ್ರಮದ ಹೊಲಬನ್ನು ಸೂಚಿಸುವುದಷ್ಟೆ ಇಲ್ಲಿ ಉದ್ದೇಶ. ಅದಕ್ಕನುವಾಗಿಯೇ ಗ್ರಂಥಕಾರನು ಆದಿಯ 'ಜಾತಿ', 'ರೂಪಕ'ಗಳಿಂದ ಕೂಡಿದ ಆಯಾ ಮಾರ್ಗಗಳನ್ನು ಇಲ್ಲಿ ವಿವರಿಸಿದ್ದಾನೆ.

**'ದಕ್ಷಿಣಾಪಥಂ'—**

> ವಿಳಸಿತಸಸ್ಯಸಂಪದಭಿರಾಮಗುಣೋದಯೆ ತಾಳ್ದಿದಳ್ ಧರಾ
> ಲಳನೆ ವಿಶಾಳಲಕ್ಷ್ಮಿಯನನಾಕುಳಮೆಂಬುದು ದಕ್ಷಿಣಾಪಥಂ
> —(ii, 108) ಪೂರ್ವಾರ್ಧ

ಬಂಧಗುಣವು ಇಲ್ಲಿ ನೇರಾಗಿರುವುದರಿಂದ ಅದನ್ನು ವಿಸ್ತರಿಸಬೇಕಾಗಿಲ್ಲ; ಅರ್ಥಾಲಂಕಾರ ಕ್ರಮ ಮಾತ್ರವನ್ನೇ ವಿವೇಚಿಸಿದರೆ ಸಾಕಷ್ಟೆ. ಇಲ್ಲಿ, ಧರೆಯನ್ನು ಕವಿಯು 'ಲಲನೆ'ಯನ್ನಾಗಿ ರೂಪಿಸಿಕೊಂಡಿದ್ದಾನೆ; 'ವಿಳಸಿತಸಸ್ಯಸಂಪತ್ತು'ಗಳೆಂಬ 'ಅಭಿರಾಮಗುಣ'ಗಳ

'ಉದಯ'ವುಳ್ಳವಳು ಎಂಬ ರೂಪಕಾನ್ವಿತ ವಿಶೇಷಣದಿಂದ ಬಣ್ಣಿಸಿದ್ದಾನೆ. ಈ ವಿಶೇಷಣವು ವಿಶೇಷ್ಯಲಿಂಗಕ್ಕೆ ಅಧೀನವಾಗಿ ಸ್ತ್ರೀಲಿಂಗವಾಗಿದೆ. ಕೊನೆಗೆ 'ಧರಾಲಲನೆ' ಎಂಬ ಪದವನ್ನು ಆ 'ಲಲನೆ'ಗೆ ಸ್ವಾಭಾವಿಕವಾದ 'ತಾಳ್ದಿದಳ್' ಎಂಬ ಸ್ತ್ರೀತ್ವ ಸೂಚಕ ಕ್ರಿಯಾಪದದೊಡನೆ ಕೂಡಿಸಿದ್ದಾನೆ. 'ಧರಾಲಲನೆ' ಎಂಬ ಈ ರೂಪಕಾನ್ವಿತ ವಿಶೇಷ್ಯದಲ್ಲಿ ಹೊಳೆಯುವ ಧಾರಣಶೀಲಾನ್ವಿತವಾದ 'ಧರೆ(ಲಲನೆ) ವಿಶಾಳಲಕ್ಷ್ಮಿಯಂ ತಾಳ್ದಿದಳ್' (ಧರಿಸಿದಳು) ಎನ್ನುವುದೂ ಅರ್ಥಾನುಗುಣವೇ ಆಗಿದೆ. ಆದರಿಂದ ಜಾತಿ, ರೂಪಕಗಳೆಂಬ ಅರ್ಥಾಲಂಕಾರಗಳನ್ನು ಕವಿ ಇಲ್ಲಿ ದಾಕ್ಷಿಣಾತ್ಯ ಪದ್ಧತಿಯಿಂದ ನಿರೂಪಿಸಿದ್ದಾನೆಂದು ಭಾವಿಸಬೇಕು.

ಇಲ್ಲಿ, ದಕ್ಷಿಣ ಮಾರ್ಗದ 'ಸಮಬಂಧ'ದ ಮೃದುವರ್ಣಗಳೂ 'ಮಧುರಬಂಧ'ದ 'ಸ'—'ಳ'ಗಳೂ 'ಪ್ರಸನ್ನ'ಗುಣದ ಅರ್ಥಗಂಭೀರತೆಯೂ ತೋರುತ್ತದೆ.

ಇದೇ ವಿಷಯವನ್ನು ವಿಸ್ತರಿಸುವ ಉತ್ತರಮಾರ್ಗದ ಮೋಡಿಯನ್ನು ಗಮನಿಸಿರಿ :

**'ಉತ್ತರಾಪಥಂ'—**

> ಜಳನಿಧಿಮೇಖಳಾವಳಯಿತಾಂಗಿ ಕರಂ ಸೊಗಯಿಪ್ಪುದಾಯ್ತು ಭೂ
> ಳಳನೆ ವಿಶಾಳಲಕ್ಷ್ಮಿಯಿನನಾಕುಳಮೆಂಬುದಿದುತ್ತರಾಪಥಂ
>
> —(ii, 108) ಉತ್ತರಾರ್ಧ

ದಕ್ಷಿಣ ಮಾರ್ಗದ 'ವಿಳಸಿತ ಸಸ್ಯ ಸಂಪದಭಿರಾಮ ಗುಣೋದಯೆ' ಎಂಬ ವಿಶೇಷಣದ ಸಾರವನ್ನೂ ಇಲ್ಲಿ ಕಾಣುವ 'ಜಳನಿಧಿಮೇಖಳಾವಳಯಿತಾಂಗಿ' ಎಂಬ ವಿಶೇಷಣದ ಸಾರವನ್ನೂ ಸವಿದು ಹೋಲಿಸಿರಿ. ಮೊದಲನೆಯದರಲ್ಲಿ 'ಧರಾಲಳನೆ'ಯ ಅಂತರ್ಗತ ಸ್ವಭಾವವು ತೋರಿದರೆ, ಎರಡನೆಯದು ಆಕೆಯ ಬಾಹ್ಯರೂಪಾಲಂಕಾರದ ಆಡಂಬರವನ್ನೇ ವಿಶೇಷವಾಗಿ ಪ್ರದರ್ಶಿಸುವುದು. ಅಲ್ಲಿ ಹಾಗೆ 'ಧರಾಲಳನೆ'ಗೆ ಅಂತರಂಗ ಚೈತನ್ಯದಿಂದಲೆ 'ವಿಶಾಳಲಕ್ಷ್ಮಿಯಂ ಅನಾಕುಳ'ವಾಗಿ ತಾಳಿಕೊಳ್ಳಲು ಅಲಂಕಾರದೊಡನೆ ಶಕ್ತಿಯೂ ಪ್ರಾಪ್ತವಾಯಿತು. ಆದರೆ ಇಲ್ಲಿ ಅದಿಲ್ಲದ ಬಾಹ್ಯಾಲಂಕಾರ ಮಾತ್ರದಿಂದಾಗಿ ಈ 'ಭೂಲಳನೆ'ಗೆ ಹೊರಗಿನ 'ವಿಶಾಳಲಕ್ಷ್ಮಿಯಿಂ ಅನಾರತಂ ಸೊಗಯಿಪ್ಪುದು' ಎಂಬುದಷ್ಟೇ ಅವಸ್ಥೆಯಾಯಿತು ಎನ್ನಬಹುದಲ್ಲವೆ? ಅಲ್ಲಿ 'ವಿಳಸಿತ ಸಸ್ಯಸಂಪದಭಿರಾಮ ಗುಣೋದಯೆ' ಎಂಬ ವಿಶೇಷಣದಲ್ಲಿ ಸ್ವಭಾವೋಕ್ತಿ ಅಡಕವಾಗಿದ್ದರೆ, ಇಲ್ಲಿ 'ಜಳನಿಧಿಮೇಖಳಾವಳಯಿತಾಂಗಿ' ಎಂಬ ವಿಶೇಷಣದಲ್ಲಿ ಬಾಹ್ಯಾಡಂಬರದ ಇನ್ನೊಂದು ರೂಪಕಾಲಂಕಾರವನ್ನು ವಕ್ರವಾಗಿ ಹಿಡಿದು ಕಟ್ಟಿದೆ.

ಇದು ಉತ್ತರಮಾರ್ಗದ 'ಕಾಂತ ಬಂಧ'ದಂತೆ ನಮಗೆ ತೋರುವುದು.

ಇಲ್ಲಿ 'ಭೂಲಳನೆ ಸೊಗಯಿಪ್ಪುದಾಯ್ತು' ಎಂದು ಸ್ತ್ರೀಲಿಂಗದ ಕರ್ತೃಪದವು ನಪುಂಸಕ ಕ್ರಿಯಾಪದದೊಡನೆ ಅನ್ವಯವಾಗಿರುವುದು ಇನ್ನೊಂದು ಗಮನಾರ್ಹ ವಿಷಯ. ಹಿಂದೆ ನಿರೂಪಿಸಿದ ಕಾರಕದೋಷ ವಿಕಲ್ಪಗಳಲ್ಲಿ ಈ ಲಿಂಗದೋಷವು ಕಾಣುವುದಿಲ್ಲ.

ಆದರೂ ಉತ್ತರಮಾರ್ಗದಲ್ಲಿ ನೆಲೆಯೂರಿಬಿಟ್ಟ ಕಾರಣ, ಇದನ್ನು 'ಕವಿರಾಜಮಾರ್ಗ' ಕಾರನು 'ಮಾರ್ಗರೂಢ'ವೆಂದು ಸ್ವೀಕರಿಸಿದವನಾಗಿರಬೇಕು. 'ಶಬ್ದಮಣಿದರ್ಪಣ'ದ ದೃಷ್ಟಾಂತ ಪದ್ಯಗಳೊಳಗೆ ಪೊನ್ನನ 'ಭುವನೈಕ ರಾಮಾಭ್ಯುದಯ'ದೊಳಗಿನದು ಎಂದು ಭಾವಿಸಲ್ಪಟ್ಟ ಇದೊಂದು ಪದ್ಯವಿದೆಯಷ್ಟೆ—

ಉದಯಾಸ್ತೋನ್ನತ ಶೈಲಸೇತು ಹಿಮವತ್ ಕುತ್ಕೀಲ ಪರ್ಯಂತ ಸಂ
ಪದೆಯಂ ವಾರ್ಧಿತರತ್ತರಂಗ ನಿನದತ್ಕಾಂಚೀ ಕಲಾಪಾಂಚಿತಾ
ಸ್ಪದೆಯಂ ಸಾಧಿಸಿ ಕಬ್ಬಿಗಂಗೆ ನೆಲನಂ ನಿರ್ವ್ಯಾಜದಿಂದಂ ನಿಮಿ
ರ್ಚಿದ ಗೆಲ್ಲಂ ಭುವನೈಕರಾಮಮಹಿಪಂಗಕ್ಕುಂ ಪೆಱಂಗಕ್ಕುಮೇ[1]

ಅಲ್ಲಿ ಇದು ಸಂದರ್ಭಾಂತರಕ್ಕೆ ದೃಷ್ಟಾಂತವಾಗಿ ಉದ್ಧೃತವಾದುದೆಂಬುದು ನಿಜ. ಆದರೆ 'ನೆಲನೆಣ್' (ಭೂಲಲನೆ) ಎಂಬ ಸ್ತ್ರೀಲಿಂಗವೇ ಈ ಆರ್ಥಿಕ ರೂಪದಲ್ಲಿ ವ್ಯಕ್ತವಾಗಿರುವುದು. ಈ ಪದ್ಯವು ನಮ್ಮ ಗ್ರಂಥಕಾರನ ಉತ್ತರಾಪಥದ ಆಲಂಕಾರಿಕ ಮಾರ್ಗದ ಪದ್ಯಭಾಗವನ್ನೇ ಅನುಸರಿಸಿ ಹಜ್ಜೆಯಿಟ್ಟಿದೆ. ಅಗ್ಗಳ, ರುದ್ರಭಟ್ಟರ ಶೈಲಿಯಂತೆ ಪೊನ್ನನ ಶೈಲಿಯೂ ಪ್ರಮುಖವಾಗಿ ಉತ್ತರಮಾರ್ಗೀಯವಾಗಿದೆ.

ಇಲ್ಲಿ 'ಸೊಗಯಿಪ್ಪುದು' ಎಂಬ ಕ್ರಿಯಾಪದ ರೂಪವನ್ನೂ ಗಮನಿಸಿಕೊಳ್ಳಬೇಕು. ಇದು, ದಕ್ಷಿಣಮಾರ್ಗದ 'ಸೊಗಯಿಸು'ವುದು, ಉತ್ತರಮಾರ್ಗದ 'ಸೊಗಯಿಪುದು'— ಎಂಬ ಕ್ರಮಾನುಸಾರವಾಗಿ ನೋಡಿದಲ್ಲಿ, ಈ 'ಸೊಗಯಿಪ್ಪುದು' ಉತ್ತರೋತ್ತರ ಮಾರ್ಗದ ಪದಬಂಧಕ್ಕೊಳಗಾದುದೆಂಬುದು ಸ್ಫುಟವಾಗುವುದು. ಆದರೂ ಗ್ರಂಥಕಾರನು ಈ ಉತ್ತರೋತ್ತರವನ್ನು ಉತ್ತರಮಾರ್ಗದ ಅಂಗವಾಗಿಯೇ ಭಾವಿಸಿದ್ದಾನೆಂಬುದು.... 'ಎಂಬುದಿದುತ್ತರಾಪಥಂ' ಎಂಬ ಹೇಳಿಕೆಯಿಂದ ವ್ಯಕ್ತವಾಗುವುದು.

* * *

ಹೀಗೆ ಮಾರ್ಗಭೇದಗಳನ್ನು 'ಕವಿರಾಜಮಾರ್ಗ'ಕಾರನ ಕ್ರಮವಿಡಿದು ಪರಾಂಬರಿಸಿದೆವು. ಈ ಮಾರ್ಗಭೇದಗಳನ್ನು ಅವನು ಸಂಗ್ರಹವಾಗಿಯಾದರೂ ಸುವ್ಯಕ್ತವಾಗಿಯೇ ನಿರೂಪಿಸಿದ್ದಾನೆಂಬುದು ನಮ್ಮ ಈ ವರೆಗಿನ ವಿವೇಚನೆಯಿಂದ ವ್ಯಕ್ತವಾಗುವುದೆಂದು ಭಾವಿಸಿದ್ದೇವೆ. ಮಾರ್ಗಭೇದವೆಂಬುದು ಕೇವಲ ಕೆಲಕೆಲವು ಪದರೂಪಗಳಿಗೆ ಪರಿಮಿತವಾಗಿಲ್ಲವೆಂದೂ ಬಂಧಗತವಾಗಿ, ಅರ್ಥಗತವಾಗಿ, ರಸಗತವಾಗಿ ಅದು ಹೇಗೆ ಸ್ಫುಟವಾಗುತ್ತಿದೆಯೆಂದೂ ಯಥಾಮತಿಯಾಗಿ ವಿವರಿಸಿದೆವು. ಕನ್ನಡದೊಳಗಿನ ಮಾರ್ಗಭೇದವು ಸಂಸ್ಕೃತದಿಂದಾಗಲಿ ತಮಿಳು, ತೆಲುಗು ಭಾಷೆಗಳ ಕೂಟದಿಂದಾಗಲಿ ತಲೆದೋರಿದುದಲ್ಲ—ಅದೇ ಸ್ವತಂತ್ರವಾಗಿರಬಹುದೆಂದೂ ಒಂದುವೇಳೆ ಸಂಸ್ಕೃತದೊಳಗಿನ ವೈದರ್ಭ ಗೌಡಾದಿಭೇದಗಳೇ ಅಸ್ವತಂತ್ರಗಳಾಗಿದ್ದಿರಬಹುದೆಂದೂ ಸೂಚಿಸಿದೆವು. ಮುಂದೆ ವಿವರಿಸಲಿರುವ ಅರ್ಥಾಲಂಕಾರಗಳನ್ನೂ ಗ್ರಂಥಕಾರನು ಮಾರ್ಗಾನುಸಾರವಾಗಿಯೇ ನಿರೂಪಿಸಿದ್ದಾನೆ. ಇವುಗಳೆಲ್ಲ ಪರಾಂಬರಿಸಿದ ಮೇಲೆ, 'ಕವಿರಾಜಮಾರ್ಗ'ಕಾರನು ಸ್ಥಾಲೀಪುಲಾಕರೂಪವಾಗಿ

---

[1] ಕೇಶಿರಾಜನ 'ಶಬ್ದಮಣಿದರ್ಪಣ' (ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆ), ಪುಟ ೧೩೫.

ನಿದರ್ಶಿಸಿದ ಮಾರ್ಗಭೇದಗಳ ಹೆಣೆತಗಳನ್ನು ಅಲಕ್ಷಿಸುವುದು ನ್ಯಾಯವಲ್ಲವೆಂದು ವಿದ್ವಜ್ಜನರಿಗೆ ಮುಂದಟ್ಟಾದಲ್ಲಿ, ನಮ್ಮ ಈ ಪ್ರಯತ್ನವು ಸಾರ್ಥಕವೇ ಸರಿ.

ನಿಕ್ಕುವಮಿಂತು ಮಾರ್ಗಯುಗದೊಳ್
ತಕ್ಕುದನಱಿಯೆ ಪೇೞ್ದ ನಿನಿಸೊಂದುದ್ದೇಶಮಂ
ಮಿಕ್ಕ ಗುಣೋದಯರ್ ಕಱಿಯದೆಂತು ಸ
ಯ್ತಕ್ಕುಮಂತಾಗೆ ಬಗೆದು ಪೇೞ್ಗೆ ಕಬ್ಬದೊಳ್ —(ii, 109)

೧೫

# ಅಲಂಕಾರ ದರ್ಶನ

## ಅಲಂಕಾರ ಲಕ್ಷಣ

ದೋಷರಹಿತವಾದ ಗುಣಯುಕ್ತ ಶಬ್ದಾರ್ಥಗಳೆಂಬ ಉಭಯಮಾರ್ಗಗಳಿಂದ ಕೂಡಿದ ವಾಕ್ಯಸಮೂಹವೇ ಕಾವ್ಯ ಎಂದು ಹಿಂದೆ ನಿರೂಪಿತವಾಗಿದೆಯಷ್ಟೆ. ಇಲ್ಲಿ, ಬಾಹ್ಯದ ಅಂತಹ ಗುಣಯುತ ಶಬ್ದಭಾಗವು ಜೀವಚ್ಛರೀರವೆಂದೂ ಶಬ್ದವ್ಯಾಪಕವಾಗಿರುವ ಅರ್ಥ ಗುಣವನ್ನು ಚೈತನ್ಯವೆಂದೂ ಅವೆರಡರಿಂದ ಬೆರೆದ ವಾಕ್ಯಸಮುದಾಯವೇ ಕಾವ್ಯಪುರುಷ ನೆಂದೂ ವಿಸ್ತರಿಸಿ ಹೇಳಬಹುದು. ದೋಷವೆಂದರೆ, ಕಾವ್ಯವನ್ನು ಕುಗ್ಗಿಸುವ ನಾನಾ ಬಗೆಯ ರೋಗಗಳು; ಗುಣವೆಂದರೆ ಅದನ್ನು ಏಳ್ಗೆಗೊಳಿಸುವ ಆರೋಗ್ಯ ಭಾಗ್ಯ. 'ಗುಣ' ಎಂಬ ಪದವೇ ವೃದ್ಧಿಕಾರಕಾರ್ಥವಾದ 'ಗುಣ್' ಧಾತುಜನ್ಯವಾಗಿದೆ. ಅಂತಹ ಗುಣವನ್ನೇ ಕಾವ್ಯಧಾರಕಾರ್ಥದಿಂದ 'ಕಾವ್ಯಧರ್ಮ' ಎನ್ನುವುದು. ಅಂಥ ಪೂರ್ವೋಕ್ತ ಸಮ ನಿಬಿಡಾದಿ ಕಾವ್ಯಧರ್ಮ(ಗುಣ)ಗಳೇ ಮತ್ತಿಷ್ಟು ವೃದ್ಧಿಯಿಂದ ರೂಪಾಂತರಗೊಂಡರೆ 'ಅಲಂಕಾರ'ಗಳು ಎನ್ನಿಸುತ್ತವೆ. ದಂಡಿಯ 'ಕಾವ್ಯಶೋಭಾಕರಾನ್ ಧರ್ಮಾನ್ ಅಲಂ ಕಾರಾನ್ ಪ್ರಚಕ್ಷತೇ' ಎಂಬ ಹೇಳಿಕೆಯೂ ವಾಮನಾಚಾರ್ಯನ 'ಕಾವ್ಯ ಶೋಭಾಯಾ ಕರ್ತಾರೋ ಧರ್ಮಾ ಗುಣಾಃ, ತದತಿಶಯ ಹೇತವಸ್ತ್ವಲಂಕಾರಾಃ' ಎಂಬ ಸೂತ್ರಗಳೂ ಈ ಅಭಿಪ್ರಾಯವನ್ನೇ ಬಿಗಿವಿಡಿಯುತ್ತವೆ. ರುದ್ರಟ, ವಾಮನ ಮೊದಲಾದ ಹಲವಂದಿ ಲಾಕ್ಷಣಿಕರು 'ಕಾವ್ಯಾಲಂಕಾರ', 'ಕಾವ್ಯಾಲಂಕಾರ ಸೂತ್ರವೃತ್ತಿ' ಇತ್ಯಾದಿ ನಾಮಗಳ ಲಕ್ಷಣ ಗ್ರಂಥಗಳನ್ನು ಬರೆದಿದ್ದಾರಷ್ಟೆ. 'ಕಾವ್ಯಾಲಂಕಾರ' ಎಂಬ ಹೆಸರಿಗೆ 'ಕಾವ್ಯದ ಶಬ್ದಾರ್ಥಾಲಂಕಾರಗಳನ್ನು ಮಾತ್ರವೇ ವಿವರಿಸುವ ಗ್ರಂಥ' ಎಂದು ತಾತ್ಪರ್ಯವಲ್ಲ; ಅಲಂಕಾರ' ಪದದಲ್ಲಿ 'ಗುಣ'ವೂ ಮಿಳಿತವಾಗಿದೆ—ಎಂಬುದು ಆಯಾ ಗ್ರಂಥಗಳ ಪರಿ 'ಶೀಲನದಿಂದ ವ್ಯಕ್ತವಾಗುವುದು. 'ಅಲಂಕರೋತಿ ಇತಿ' (ಎಂದರೆ ಸೌಂದರ್ಯವನ್ನುಂಟು ಮಾಡುತ್ತಿದೆ ಎಂದು) 'ಅಲಂಕಾರ'ವೆಂಬ ಹೆಸರು. ಅಂತೂ ಕಾವ್ಯವನ್ನು ಗುಣನೆಗೊಳಿಸು ತ್ತಿದೆ ಎಂದು 'ಕಾವ್ಯಗುಣ'; ಕಾವ್ಯವನ್ನು ಧರಿಸುತ್ತಿದೆ ಎಂದು 'ಕಾವ್ಯ ಧರ್ಮ'; ಕಾವ್ಯ ವನ್ನು ಅಲಂಕರಿಸುತ್ತಿದೆ ಎಂದು 'ಕಾವ್ಯಾಲಂಕಾರ'—ಎಂಬ ಮೂರು ಹೆಸರುಗಳಾಗಿವೆ. ಇವುಗಳೊಳಗೆ, 'ಗುಣ', 'ಅಲಂಕಾರ' ಎಂದರೆ ಕಾವ್ಯದ ವಿಶಿಷ್ಟಗಳಾದ ಭಿನ್ನ ಭಿನ್ನಾಂಗ ಗಳೆಂಬ ಭಾವನೆ ನೆಲೆಯೂರಿದೆ. ಲಾಕ್ಷಣಿಕರು ಅವುಗಳಿಗೆ ಭಿನ್ನಭಿನ್ನ ಲಕ್ಷಣಗಳನ್ನು ಸೂಚಿಸಿ ಲಕ್ಷ್ಯಗಳನ್ನು ತೋರಿಸಿದ ಕಾರಣ, ಆ ಭಾವನೆ ಬರಿಯ ಭ್ರಮಾತ್ಮಕ

ವಲ್ಲ.[1] ಕಾವ್ಯಧರ್ಮವೆಂಬುದು ಎರಡಕ್ಕೂ ಸಾಮಾನ್ಯವಾದುದರಿಂದಲೂ ಭಿನ್ನ ಲಕ್ಷಣ ಲಕ್ಷ್ಯಗಳನ್ನು ನಿರೂಪಿಸದುದರಿಂದಲೂ ಉಭಯ ಸಾಮಾನ್ಯ ಪದವೆಂದು ಭಾವಿಸಲು ಆಸ್ಪದವಿದೆ. ಇದರಿಂದ, ಪ್ರಕೃತಿಯಿಂದ ಒಂದೇ ಆದರೂ ಗುಣಾಲಂಕಾರಗಳೊಳಗೆ ಏನೋ ಒಂದಿಷ್ಟು ಭೇದವಿದೆ ಎಂದು ಭಾವಿಸಬೇಕು. ಆ ಭೇದವೇನು ?

'ಗುಣ'ವೆಂದರೆ, ದೋಷರಹಿತವಾಗಿ ಶಬ್ದಾರ್ಥಗಳನ್ನು ಸಂಕಲನೆ (ಕೂಟ)ಗೊಳಿಸುವ ಕಾವ್ಯ ಧರ್ಮ ; 'ಅಲಂಕಾರ'ವೆಂದರೆ ಆ ಗುಣವನ್ನು ಅಲಂಕೃತಿ (ಸಾಕು ಮಾಡುವುದು) ಎಂದರೆ, ಸಂಪೂರ್ಣಾವಸ್ಥೆಗೇರಿಸುವುದು ಎಂಬ ತಾತ್ಪರ್ಯವಾಗಬಹುದು. 'ಅಲಂಕಾರ'ಕ್ಕೆ 'ಸೌಂದರ್ಯ' ಎಂಬ ಅರ್ಥವು ಈ ಕಾರಣದಿಂದಲೇ ಬಂದುದಾಗಿರಬೇಕಲ್ಲದೆ ಬೇರೆ ಅಲ್ಲ. ಆದರಿಂದ, 'ಗುಣ' 'ಅಲಂಕಾರ'ಗಳೆಂದರೆ, ಕಾವ್ಯಧರ್ಮದ ಅವಸ್ಥಾಭೇದಗಳೇ ಆಗಿರಬೇಕು. ಮೊದಲಿನದು ಅದರ ಪೂರ್ವಾವಸ್ಥೆ ; ಮತ್ತಿನದು ಪರಿಣತಾವಸ್ಥೆ. ಪರಿಣತಾವಸ್ಥೆ ಕೆಲವೆಡೆ ಮಿತಿಮೀರಿ ಹೋಗಿ ಕಾಂತಿವಿಹೀನವಾಗುವುದೂ ಇದೆ. ಆದರೆ ಪೂರ್ವಾವಸ್ಥೆಯು ಹುರುಪಿನೊಡನೆ ಕಾಂತಿ ವಿಶಿಷ್ಟವಾಗಿರುವುದು ಸ್ವಾಭಾವಿಕವಲ್ಲವೆ ? ಅದರಿಂದಲೆ, ಮಮ್ಮಟಾಚಾರ್ಯನು 'ಅದೋಷೌ ಶಬ್ದಾರ್ಥೌ ಸಗುಣೌ ಅನಲಂಕೃತೀ ಪುನಃ ಕ್ವಾಪಿ', ಎಂದರೆ 'ನಿರ್ದುಷ್ಟಗಳಾಗಿ ಗುಣಯುಕ್ತಗಳೆನ್ನಿಸಿದ ಶಬ್ದಾರ್ಥಗಳು ಕೆಲವೆಡೆ ಅಲಂಕಾರ ರಹಿತಗಳಾಗಿದ್ದರೂ ಕಾವ್ಯವೆನ್ನಿಸುವುವು'-ಎಂದು ಸಾರಿದ್ದಾನೆ. ಆದರಿಂದ, ಸಂದರ್ಭಾನುಸಾರವಾಗಿ ಉಪಯುಕ್ತವಾದ ಗುಣವೆಂಬುದು ಕಾವ್ಯಸಾಮಾನ್ಯಕ್ಕೆ ಅತ್ಯವಶ್ಯ ; ಅಲಂಕಾರವು ವಿಕಲ್ಪ—ಎಂದಂತಾಯಿತು. ಹೀಗೆ ಗುಣಾಲಂಕಾರಗಳು 'ಕಾವ್ಯಧರ್ಮ'ದ ಅವಸ್ಥಾಭೇದಗಳು ಎಂದು ಭಾವಿಸಬೇಕು.

ಈ ಗುಣಗಳೊಳಗೆ, ಶಾಬ್ದಿಕ ಗುಣಗಳು ಶಬ್ದಾಲಂಕಾರಗಳಾಗಿ ಅರಳಿ, ನಾನಾ ಚಿತ್ರ ಬಂಧಗಳಲ್ಲಿ ಹಬ್ಬಿ ಹೆಣೆದಿವೆ ; ಆರ್ಥಿಕ ಗುಣಗಳು ಅರ್ಥಾಲಂಕೃತಿಗಳಾಗಿ ವಿಸ್ತರಿಸಿವೆ.

---

[1] ಆದರೆ, ನಮ್ಮ ಈ ಗ್ರಂಥಕಾರನೆ 'ಸಮಾಹಿತ (ಸಮಾಧಿ)' ಗುಣವನ್ನು ವಿವರಿಸುವಾಗ 'ಅಕ್ಕುಂ ವಿನಿಶ್ಚಿತಕ್ರಮಸಮಾಹಿತಾಲಂಕಾರಂ' (ii, 73) ಎಂದೂ, ಓಜೋಲಕ್ಷಣ ವಿಭೇದ ಸಂದರ್ಭದಲ್ಲಿ 'ಉತ್ತಮಮಿದು ಗದ್ಯಕ್ಕಲಂಕ್ರಿಯಾ[ತ್ಮ] ಸಮೇತಂ' (ii, 83) ಎಂದೂ ಹೇಳಿದ್ದಾನೆ. ಇವೆರಡರೊಳಗೆ ಮತ್ತಿನದು 'ಅಲಂಕ್ರಿಯಾ[ತ್ಮ]' ಎಂದಿರುವುದರಿಂದ 'ಅಲಂಕಾರ'ಕ್ಕೆ ಇದು ಆತ್ಮ, ಎಂದರೆ ತದ್ಭಿನ್ನವಾದುದು'—ಎಂಬ ತಾತ್ಪರ್ಯವೆಂದು ಭಾವಿಸಲೂ ಬಹುದು. ಆದರೆ, ಹಿಂದಿನಪದರಲ್ಲಿ 'ಇಂತು ಪೇೞ್ದೊಡಕ್ಕುಂ...ಸಮಾಹಿತಾಲಂಕಾರಂ' ಎಂದು ಸ್ಫುಟವಾಗಿಯೇ ಇದೆ.

# ಅಲಂಕಾರ ದರ್ಶನ (ಮುಂದುವರಿದುದು-I)

ಶಬ್ದಾಲಂಕಾರ ಸಂಗ್ರಹ

## ಶಬ್ದಾಲಂಕಾರದ ದೋಷ ವಿಕಲ್ಪಗಳು

ಹಲವು ಬಗೆಯ ಪದಗಳು ದೇಸಿಯ ಬಳಕೆಯ ಅಚ್ಚುಕಟ್ಟನ್ನುಳಿಯದೆ, ದೋಷಗ್ರಹಣ ದಿಂದ ಕಂದಿಹೋಗದೆ, ಮಾರ್ಗದಲ್ಲಡಿಯಿಡುವುದು ಹೇಗೆ—ಎಂಬುದನ್ನು ಗ್ರಂಥಕಾರನು ಆದಿಯಲ್ಲೆ ಕಾಣಿಸಿದನು. ಆ ಮೇಲೆ, ಅವುಗಳು ತಕ್ಕಂತೆ ಕಾವ್ಯಪ್ರಯುಕ್ತಗಳಾದಲ್ಲಿ ಗುಣಗಳಾಗಿ ಹೊಳೆವುವೆಂದೂ ಆ ಗುಣಗಳಿಗೆ ಕ್ರಮವಾಗಿ 'ಸಮ', 'ನಿಬಿಡ', 'ಕಾಂತ', 'ಸುಕುಮಾರ', 'ಓಜಸ್ವಿ'—ಮೊದಲಾದ ಹೆಸರುಗಳೆಂದೂ ಹೇಳಿ, ಅವುಗಳನ್ನು ಆಯಾ ಲಕ್ಷಣ ಲಕ್ಷ್ಯಗಳೊಡನೆ ವಿಸ್ತರಿಸಿದನು. ಬಂಧಾಂತರಗಳಲ್ಲೊಂದಿ ಸಮ ನಿಬಿಡಾದಿ ಭಿನ್ನಾಭಿಧಾನಗೊಳ್ಳುವ ಅಕ್ಷರವಿಶೇಷಗಳೇ ಹೇಗೆ ಸ್ಥಾನಾಂತರಗಳಲ್ಲಿ ಹೆಣೆದು ಅಲಂಕಾರ ಗಳೆನ್ನಿಸುತ್ತವೆ ಎಂಬುದನ್ನೂ ಸೂಚಿಸಿದ್ದಾನೆ. ಗುಣಗಳಿಗಿಂತ ಹಿಂದೆ ಗುಣ ವಿಘಾತಕ ದೋಷಗಳನ್ನು ಎಚ್ಚರಿಕೆಗಾಗಿ ಕಾಣಿಸಿದಂತೆ, ಅಲಂಕಾರ ನಿರೂಪಣಕ್ಕೆ ಮೊದಲು ಅವು ಗಳಿಗೇ ಮಾಸಲಾಗಿ ಮುತ್ತುವ ದೋಷಗಳಲ್ಲಿಯೂ ಕಣ್ಣಿಡುವುದು ಆವಶ್ಯಕ. ಇಲ್ಲಿ ಗ್ರಂಥಕಾರನು ಮುನ್ನುಡಿಯಾಗಿ ನಿಷೇಧಿಸುವ ಮಾತಿನಲ್ಲಿ ಮನವಿಡಿರಿ—

ಇಲ್ಲಿಗಿದು ತಕ್ಕುದಿಲ್ಲಿಗೆ<br>
ಪೊಲ್ಲದಿದೆಂದಱಿದು ಸಮಱಿ ಬಲ್ಲಂತೆಲ್ಲಂ<br>
ನೆಲ್ಲುಂ ಮೊಸರುಂಗುಡಿದಂ<br>
ತಲ್ಲದೆ ತಲ್ಲಣಿಸದಲಸದಿಡು ಮೃದುಪದಮಂ —(ii, 4)

ಕೆಲವರಲ್ಲಿ ಮೊಸರಿನಂತೆ ಅಂದವಾದ, ಸವಿಯಾದ ಭಾವನೆಯಿರುತ್ತಿದೆ. ಅದು ತಕ್ಕುದಾದ ಮೆದುನುಡಿಗಳಲ್ಲಿ ಕಲವರಿಕೆಗೊಂಡರೆ ಉಣಿಸಿಗೆ ಸೊಗಸು, ಮೈಗೆ ಆರೋಗ್ಯಕಾರಕ; ಬದಲಾಗಿ, ಮೊಸರನ್ನು ನೆಲ್ಲಿನೊಡನೆ ಬೆರಸಿದರೆ ಏನಾದಂತಾಯಿತು ? ಸರಿಯಾದ ಬಗೆ ಯನ್ನು ವಿಷಮ ಪರುಷಾಕ್ಷರಗಳೊಡನೆ ಕೂಡಿದಂತಾಯಿತು. ಗ್ರಂಥಕಾರನ ಈ ಲಕ್ಷಣ ವಾಕ್ಯವೆ ಉತ್ತಮಕಾವ್ಯದ ಲಕ್ಷ್ಯಕ್ಕೆ ಉದಾಹರಣೆಯಲ್ಲವೆ ? ಅದೇ ರೀತಿಯ ಮುಂದಿನ ಮಾತನ್ನೋದಿರಿ—

ಗಱಿಯಿಸಿದರ್ಥಂ ಸಲೆ ಪಾಂ<br>
ಗಱಿಯದೆಯುಂ ಶಬ್ದಮೊಂದದಿರ್ದೊಡೆ ಮುತ್ತುಂ

ಮೆಟಿಸುಂ ಕೋದಂತಕ್ಕುಂ
ಕಟುಳ್ಬಿ ಕಳೆಗೊಂದಿ ಮುಂದೆ ಬಾರದ ಪದಮಂ —(ii, 5)

'ಮೆಟಿಸು' ಎಂದರೆ 'ಒಳ್ಳೆ ಮೆಣಸು' ಅಲ್ಲವೆ 'ಕರಿ ಮೆಣಸು.' ಅದು ಹಣ್ಣಾದಲ್ಲಿ, ಫಕ್ಕನೆ ಮೇಲಿನ ತೊಗಲು ತೊಲಗಿಹೋಗಿ ತಕ್ಕಮಟ್ಟಿಗೆ ಬಿಳಿದಾಗಿ ತೋರುತ್ತದೆ. ಬೇಕಾದಷ್ಟು ಮುತ್ತು ಒದಗಲಿಲ್ಲವೆಂದು ಅಂಥ ಮೆಣಸಿನ ಕಾಳನ್ನು ಮುತ್ತಿನ ಹಾರದಲ್ಲಿ ಪೋಣಿಸಿಬಿಡುವುದೆ ? ಅರ್ಥಾನುಕೂಲವಾಗಿ ಒದಗಿದ ಕೆಲವು ಪದಗಳೊಡನೆ ಅನುಕೂಲ ವಾಗದ, ನಿರರ್ಥಕವಾದ ಪದಗಳನ್ನು ಕಟ್ಟಿದರೆ ಆ ರೀತಿಯು ಹಾರಬಂಧದಂತಾಗುವುದು. ಅದರಿಂದ ಅರ್ಥಾನುಕೂಲವಾಗಿ 'ಒಂದಿ ಮುಂದೆ ಬಾರದ ಪದಮಂ ಕಟುಳ್ಬಿ ಕಳೆಗೆ'— ಎನ್ನುತ್ತಾನೆ. ತಕ್ಕ ಪದಗಳನ್ನು ಆಯ್ದುಕೊಳ್ಳುವಷ್ಟು ಸ್ವೈರಣೆಗೊಳ್ಳಿರಿ; ಆಯಲಾರ ದಿದ್ದರೆ, 'ಕವರ್ದವರುಮೊಳರೆ ಕವಿಯಲ್ಲದರಂ' ಎಂಬ ಹಿಂದಿನ ಸೂಚನೆಗನುವಾಗಿ ಅಂಥ ಕಾವ್ಯರಚನಾ ಶ್ರಮವನ್ನೆ ಬಿಟ್ಟುಬಿಡಿರಿ—ಎಂದು ತಾತ್ಪರ್ಯ. ಮೊದಲಿನ ಪದ್ಯದಲ್ಲಿ ಅರ್ಥಾನುಗತವಾದ ಪದಗಳೇ ಒದಗದ, ಮತ್ತಿನದರಲ್ಲಿ ಅಂಥ ಕೆಲವು ಪದಗಳು ಮಾತ್ರ ಕೈಗೂಡುವ, ಕವಿಗಳೆಂಬವರಿಗೆ ಎಚ್ಚರಿಕೆಯ ಮಾತುಗಳನ್ನು ಸೂಚಿಸಿದ್ದಾನೆ.

ಶಬ್ದಾಲಂಕಾರಗಳೊಳಗೆ ಪ್ರಮುಖವಾಗಿ ತೋರುವ ದೋಷಗಳನ್ನು ಗ್ರಂಥಕಾರನು ಹೀಗೆ ಸಂಗ್ರಹಿಸಿದ್ದಾನೆ—

(i) ಲಘ್ವಕ್ಷರಾಂತವಾದ ಕನ್ನಡ ಪದದ ಮುಂದೆ 'ಒತ್ತಿ ಬರ್ಪ ಪದಮಂ', ಎಂದರೆ ಒತ್ತಕ್ಕರದಾದಿಯಲ್ಲಿರುವ ಪದವನ್ನು, ಇರಿಸುವುದು. ಇದು 'ಕೂಸಿನ ತಲೆಯೊಳ್ ಬಿಣ್ಪೊಱೆಯು ನಿಟ್ಟವೋಲ್ ಅಸುಖಕರಂ.'—(ii, 6)

ಇದರ ಉದಾಹರಣವನ್ನು ನೋಡಿ :

ಬರಿಸಿ ಕ್ಷಿತಿಪತಿಯಂ ಸ
ಯ್ತಿರಿಸಿ ಪ್ರಿಯಕುಶಲವಾರ್ತೆಯಂ ಬೆಸಗೊಂಡು
ಸ್ಥಿರಮಿರ್ದು ಪ್ರಭು ನುಡಿಯೆ
ಪ್ರರೂಢಮುದನಾದನಾತನೆಂಬುದು ದೂಷ್ಯಂ —(ii, 7)

ಇಲ್ಲಿ ಕ್ರಮವಾಗಿ ಹಿಂದಣ ಕನ್ನಡನುಡಿಗಳ ತುದಿಯ ಹ್ರಸ್ವಾಕ್ಷರಗಳ ಮುಂದಿನ ಸಮ ಸಂಸ್ಕೃತ ಪದಗಳ ಆದಿಯ ಕ್ಷಿ, ಪ್ರಿ, ಸ್ಥಿ, ಪ್ರ, ಪ್ರ—ಎಂಬ ಒತ್ತಕ್ಕರಗಳನ್ನು ನೋಡಿ. ಓದುವಲ್ಲಿ, ಹಾಡುವಲ್ಲಿ ಇದರಿಂದ ಬಲುತೊಡಕಾಗುವುದನ್ನು ಬಲ್ಲವರಿಗಲ್ಲವಾದರೂ, ಆ ಬಳಕೆಯಿಲ್ಲದವರಿಗೆ ಓದಿ ಕಾಣಿಸಿ ವಿವರಿಸುವುದೊಳ್ಳೆಯದು. ಬಹುಶಃ ಉತ್ತರಮಾರ್ಗ ಪ್ರಾಂತಗಳಲ್ಲಿ ಈ ಬಗೆಯ ದೇಸಿ ನೆಲೆಗೊಂಡಿದ್ದುದೋ ಏನೊ ? ಅಂಥ ರಚನೆಯನ್ನು ತಿದ್ದಿದ ಬಗೆಯನ್ನು ನೋಡಿ—

ಕ್ಷಿತಿಪತಿಯಂ ಬರಿಸಿ ಜಗ
ನ್ನುತನಂ ಸಂತೈಸಿ ಕುಶಲವಾರ್ತಾಂತರಮಂ

ಮಿತವಚನಂ ಬೆಸಗೊಂಡತಿ
ವಿತೀರ್ಣಮುದನಾದನಾತನೆಂಬುದು ಮಾರ್ಗಂ —(ii, 8)

(ii) ಒಂದು ಕ್ರಿಯಾವಿಶೇಷಣವನ್ನು ಹೇಳಿ ಆ ಕ್ರಿಯಾವಿಶೇಷಣದೊಡನೆ ಇನ್ನೊಂದನ್ನೂ, ಎಂದರೆ ವಿಶೇಷ್ಯದ ವಿಶೇಷಣವನ್ನೂ, ಅದೇ ರೂಪದಲ್ಲಿ ಸೇರಿಸಲಾಗದು. ಅದು ಒಂದೇ ರೂಪವಾಗಿರುವುದರಿಂದ, 'ಎರಡಕ್ಕೆ ಬಿಟ್ಟ ಕಱುವಂ ಪೋಲ್ಕುಂ (ii, 9). ಇದಕ್ಕೆ ಕೊಟ್ಟಿರುವ ದೃಷ್ಟಾಂತ ಹೀಗಿದೆ—

ಪರಿವಾರವಾರವನಿತಾ
ಪರಿವೃತನರಮನೆಯೊಳರಸನಂಬರತಳದೊಳ್
ವರತಾರಾಪರಿಗತ ಶಶ
ಧರನಂತೊಪ್ಪಿರೆ ವಿನೋದದಿಂದುರುಮುದದಿಂ —(ii, 10)

ಇಲ್ಲಿ 'ಅಂಬರದೊಳ್ ವರತಾರಾಪರಿಗತ ಶಶಧರನಂತೆ, ಅರಮನೆಯೊಳ್ ಪರಿವಾರ ವಾರ ವನಿತಾಪರಿವೃತಂ ಅರಸಂ ವಿನೋದದಿಂ ಉರುಮುದದಿಂದ ಒಪ್ಪಿರೆ'—ಎಂಬುದು ಅನ್ವಯ. 'ವಿನೋದದಿಂದೆ' ಮತ್ತು 'ಉರುಮುದದಿಂ' ಎಂಬ ಕರಣಕಾರಕ ನಿಬದ್ಧಗಳಾದ ಪದಗಳೆರಡೂ 'ಒಪ್ಪಿರೆ' ಎಂಬ ಕ್ರಿಯೆಯನ್ನೇ ವಿಶೇಷಿಸುತ್ತಿವೆ ಎಂಬುದು ಸ್ಪಷ್ಟವಿದೆ. ಆದರೆ ಆ ಕರಣಕಾರಕಗಳೆರಡನ್ನೂ ಭಾವಿಸಿರಿ. 'ವಿನೋದದಿಂ' ಎಂಬುದು ಮೇಲೆ ತೋರುವ 'ಒಪ್ಪಿರೆ' ಎಂಬ ಕ್ರಿಯೆಗೂ ವಿಶೇಷಣವಾಗುವಂತಿದ್ದರೆ, 'ಅತಿ ಮುದದಿಂ' ಎಂಬುದು ವಿಶೇಷ್ಯವಾದ 'ಅರಸಂ' ಎಂಬುದರ ಗುಣವಾಗಿ ಅದನ್ನೇ ಹೊದ್ದಿಕೆಗೊಳ್ಳು ವಂತಿದೆ. ಅದರಿಂದಲೇ ಅವೆರಡು ಪದಗಳು ಒಂದು ಕ್ರಿಯಾಪದ ರೂಪದ ಗೋವಿಗೆ ಬಿಟ್ಟ ಕಾರಕರೂಪದ ಕರಣವಿಭಕ್ತಿಕ ಪದಗಳೆಂಬ ಎರಡು ಕರುಗಳನ್ನು ಹೋಲುವುವು ಎಂದು ಗ್ರಂಥಕಾರನು ಸೂಚಿಸಿದ್ದಾನೆ. ಪದ್ಯವಿದನ್ನು ಅವನೇ ತಿದ್ದಿದುದನ್ನು ನೋಡಿರಿ—

ಪರಿವಾರವಾರವನಿತಾ
ಪರಿವೃತನರಮನೆಯೊಳರಸನಂಬರತಳದೊಳ್
ವರತಾರಾಪರಿಗತಶಶ
ಧರನಂತೊಪ್ಪಿರೆ ವಿನೋದದಿಂ ಜನಿತಮುದಂ[1]

—ಮದರಾಸು ಪ್ರತಿ (ii, 12)

ಇಲ್ಲಿ 'ಜನಿತಮುದಂ' ಎಂಬುದು 'ಅರಸಂ' ಎಂಬುದಕ್ಕೇ ವಿಶೇಷಣವೆಂದು ವ್ಯಕ್ತವಾಗುತ್ತಿದೆ.

(iii) 'ಇನ್', 'ಅಂತೆ', 'ಮತ್ತೆ'—ಮೊದಲಾದ ನಿರರ್ಥಕ ನಿಪಾತಗಳನ್ನು 'ನಿಱಿಸಲ್ಕೆ ಅಲ್ಲದೆಡೆಗಳೊಳ್ ಕಲ್ಲದಿರಿಂ' (ii, 12); ಅವುಗಳನ್ನು 'ಅಲ್ಲದೆಡೆ'ಗಳಲ್ಲಿಟ್ಟರೆ ದೋಷ ಎಂದು ಭಾವ.

---

[1] ಈ ಪದ್ಯವು ಡಾ. ಪಾಠಕರ ಪ್ರತಿಯಲ್ಲಿಲ್ಲ; ಮದರಾಸ್ ಪ್ರತಿಯಲ್ಲಿ ಮಾತ್ರವೇ ಇದೆ.

ಸಾಮಾನ್ಯವಾಗಿ ನೋಡಿದರೆ, ನಿಪಾತಗಳು ನಿರರ್ಥಕ ಪದಗಳು. ಹಾಗಿದ್ದರೂ ಅವುಗಳನ್ನು ಸಂದರ್ಭಾನುಸಾರವಾಗಿ ಪ್ರಯೋಗಿಸಿ ಸಾರ್ಥಕವಾಗಿ ಮಾಡಿಕೊಂಡರೆ ಮಾತ್ರವೇ ಉತ್ತಮ ಕವಿಗಳ ಕೈವಾಡದ ಬೆಳಕು ಬಿಂಬಿಸುವುದು. ನಿಪಾತಗಳನ್ನು 'ಪಾದಪೂರಣ'ಗಳು ಎನ್ನುತ್ತಾರೆ; ಎಂದರೆ, ಪದ್ಯಗಳ ಪಾದಗಳು ಪೂರ್ಣವಾಗಿ ತುಂಬದಲ್ಲಿ, ಆಯೆಡೆಯನ್ನು ತುಂಬಿಸುವವುಗಳು, ಅದರಿಂದ, ಆವಶ್ಯಕತೆಯಿದ್ದಲ್ಲಿ ಆ ಪೂರಕಪದಗಳನ್ನು ಪದ್ಯದ ಮಧ್ಯಾಂತಗಳಲ್ಲಿ ಬೇಕಾದರೆ ಸೇರಿಸಬಹುದೆಂದು ಸೂಚಿತವಾಗುತ್ತಿದೆ. ಕೆಲವರು ಯಾವ ವಿಶಿಷ್ಟತೆಯೂ ಇಲ್ಲದೆ, 'ಸಲೆ', 'ಮಿಗೆ', 'ಕೆನ್ನಂ' ಮೊದಲಾದುವನ್ನು ಪ್ರಾಸಾಕ್ಷರಗಳಾಗಿರಿಸುತ್ತಾರೆ. ಇಂಥ ಪ್ರಯೋಗವು ಹೀಗೆ ಬಳಸಿದ ಪಾದಪೂರಣಕ್ಕೆ ಬದಲಾಗಿ ಪಾದಮಾರಣವೆನ್ನಿಸದಿರುವುದೆ? ಮತ್ತಿನ ನಾಗವರ್ಮನು ಇವನ್ನು 'ವಾಕ್ಯಾಲಂಕೃತಿ ನೆಗಟ್ವಿಡೆಯೊಳ್ ಪೇೞ್ಗೆ ಪೇೞದಿರ್ಕುೞಿದೆಡೆಯೊಳ್' ಎನ್ನುತ್ತಾನೆ. ('ಕಾವ್ಯಾವಲೋಕನ', ಪದ್ಯ 485). ಇದಕ್ಕೆ ನಮ್ಮ ಗ್ರಂಥಕಾರನ ಉದಾಹರಣೆ ಹೀಗಿದೆ—

ನೃಪಕನ್ಯಕಾಸ್ವಯಂವರ
ವಿಪುಳಮಹೋತ್ಸವವಿವಾಹದೊಳ್ ಬಂದಿರ್ ಮು
ನ್ನಪವಾದವಾದುದೆನಗೇಂ
ಚಪಲಧ್ವಜನೋಕ್ತಿಯಿಂದಮಿಂ ಬಾರದಿರಿಂ

—ಮದರಾಸು ಪ್ರತಿ (ii, 14)

ಇದರಲ್ಲಿ 'ಮುನ್' ಎಂಬುದು ಪೂರ್ವಾರ್ಧದಲ್ಲಿಯೂ 'ಇನ್' ಎಂಬುದು ಉತ್ತರಾರ್ಧದಲ್ಲಿಯೂ ತೋರುತ್ತಿದೆ. ಯಾರು ಯಾರೊಡನೆ ಆಡಿದ ಮಾತಿದು ಎಂಬುದು ವ್ಯಕ್ತವಾಗಿಲ್ಲ. ಆದರೂ 'ರಾಜಪುತ್ರಿಯ ಸ್ವಯಂವರೋತ್ಸವ ಸಂದರ್ಭದಲ್ಲಿ ಮುನ್ನ ಬಂದಿರಿ; ಅದು ನನಗೆ ಅಪವಾದವಾಗಿ ಪರಿಣಮಿಸಿತು; (ಅದರಿಂದೇನು? ಆದರೆ) ಚಂಚಲ ಸ್ವಭಾವದ ದಾರಿಗರ ಹೇಳಿಕೆಗನುವಾಗಿ ಇನ್ನು ಬಾರದಿರತಕ್ಕುದು'—ಎಂಬರ್ಥದ ಈ ಮಾತಿನಲ್ಲಿ 'ಮೊದಲು ನೀವು ಬಂದುದರಿಂದ ನನಗೆ ಅಪವಾದವೊದಗಿತು; ಇನ್ನು ಹಾಗೆ ದಾರಿಹೋಕರ ಮಾತಿಗನುವಾಗಿ ಬರಬೇಡಿರಿ'—ಎಂಬಲ್ಲಿಯ 'ಮುನ್', 'ಇನ್' ಪದಗಳು ನಿರರ್ಥಕಪದಗಳಾಗಿ ತೋರುವುದಿಲ್ಲ. ಇದರಿಂದ ನಿರರ್ಥಕಪದ ಗುಂಫಿತವಾದ ಒಂದು ಪದ್ಯವು ಮೂಲ ಮಾತೃಕೆಯಲ್ಲಿದ್ದಿರಬೇಕೆಂದೂ, ಅದನ್ನು ತಿದ್ದಿದ ಉದಾಹರಣ ಮಾತ್ರವೇ ಹೀಗೆ ತೋರುವುದೆಂದೂ ಭಾವಿಸಬೇಕಾಗಿದೆ.

ಇನ್ನು ಕೆಲವು ವಿಕಲ್ಪ ಪ್ರಯೋಗ ಪದ್ಧತಿಯನ್ನು ವಿವರಿಸುತ್ತಾನೆ—

(i) (ಅ) ದ್ವಿತೀಯಾ ಷಷ್ಠೀ ವಿಭಕ್ತಿ ಪ್ರತ್ಯಯಗಳು ದೀರ್ಘವಾಗಿಯೂ ಬರುತ್ತವೆ. ಆದಿಸ್ವರ(ಹ್ರಸ್ವಸ್ವರ)ಯುತ ಪದಗಳು ಮುಂದೆ ಕೂಡಿದಲ್ಲಿಯೂ ಪಾದಾಂತದಲ್ಲಿಯೂ ದ್ವಿತೀಯಾ ವಿಭಕ್ತಿ ಪ್ರತ್ಯಯವು 'ಆನ್' ಎಂದು ದೀರ್ಘವೂ ಆಗಬಹುದು (ii, 15).

(ಆ) ಹಲವನ್ನೊಡಗೂಡಿ ಹೇಳುವಲ್ಲಿಯೂ ಪಾದಾಂತದಲ್ಲಿಯೂ ಷಷ್ಠೀ ವಿಭಕ್ತಿ ಪ್ರತ್ಯಯವು 'ಆ' ಎಂದು ದೀರ್ಘವಾಗಿ ಪರಿಣಮಿಸಲೂಬಹುದು (ii, 18).

(ii) ಸಂಬೋಧನೆ ದೀರ್ಘವಾಗಿಯೂ ಇರಬಹುದು. ಆದರೆ 'ಅದನೆ ಪಲವೆಡೆಗಳೊಳ್ ಎಂದುಂ ಬಲ್ಲವರ್ ಇಡದಿರ್ಕೆ'. 'ನೃಪತೀ', 'ಪರೋಪಕಾರೀ', 'ವಿಪುಳಗುಣೀ', 'ಶಶಧರಾಯುತ ಕೀರ್ತೀ', 'ವ್ಯಪಗತ ಭಯಾ', 'ದಯಾಲೂ'—ಈ ತೆರದಲ್ಲಿ ಎಡೆಬಿಡದೆ ಯಾವಾಗಲೂ ಪ್ರಯೋಗಿಸಿದಲ್ಲಿ, 'ಬಾಯುಟೀಡು ಊಳ್ವವೋಲ್ ಕರಂ ವಿರಸತರಂ' (ii, 21, 22).

(iii) ಸಂದರ್ಭವನ್ನರಿತು ಪ್ರಯೋಗಿಸಿದರೆ, ಪುನರುಕ್ತವು ದೋಷವಲ್ಲ. ಆಶಾಬದ್ಧರು, ಭೀತಿಗ್ರಸ್ತರು, ದುಃಖಿತರು, ವಿಯೋಗಾಕ್ರಾಂತರು, ಮೊದಲಾದವರು ಒಂದೇ ಪ್ರಬಲ ಭಾವನೆಯಿಂದ ಅಲುಗಾಡಿಸಲ್ಪಟ್ಟ ಅಂತರಂಗವುಳ್ಳವರು. 'ಕೊಡು, ಕೊಡು' 'ಪುಲಿಪುಲಿ', 'ಪರಿ ಪರಿ', 'ಪಿಂಗು ಪಿಂಗು', 'ನಿಲ್ ನಿಲ್' ಇತ್ಯಾದಿಯಾಗಿ ಪುನರುಕ್ತಿಪದಗಳನ್ನು ಆಡಬಹುದು (ii, 23, 24).

(vi) ಬಹು ವಿಶೇಷಣಗಳನ್ನು ಸಂದರ್ಭಕ್ಕೆ ತಕ್ಕಂತೆ ಯೋಜಿಸಿದಲ್ಲಿ ದೋಷವಾಗದು. ರೂಪಕಾಲಂಕಾರ, ವಿಶೇಷಾರ್ಥಗಳನ್ನು ಹೊಳೆಯಿಸಬೇಕಾದ ಆವಶ್ಯಕತೆಯೇ ಅಂಥ ಸಂದರ್ಭವೆಂಬುದು. ಮುಂದೆ ವಿಸ್ತರಿಸಲಿರುವ ಅರ್ಥಾಲಂಕಾರಗಳೊಳಗಿನ ರೂಪಕಾಲಂಕಾರವಲ್ಲಿ ಮೊದಲಿನದು ಸ್ಫುಟವಾಗುತ್ತಿದೆ. 'ಸುಭಟರ್ಕಳ್, ಕವಿಗಳ್, ಸುಪ್ರಭುಗಳ್' ಮುಂತಾಗಿ 'ನಾಡವರ್ಗಳ'ನ್ನು ವಿಶೇಷಿಸಿ ಹೇಳುವುದು ಮತ್ತಿನದಕ್ಕೆ ದೃಷ್ಟಾಂತ (ii, 25, 26).

ಹೀಗೆ ದೋಷಗಳನ್ನೂ ವಿಕಲ್ಪಗಳನ್ನೂ ಆಗಿನ ದೃಷ್ಟಿಗೆ ಸರಿಯಾಗಿ ವಿಸ್ತರಿಸಿದ ಮೇಲೆ ಗ್ರಂಥಕಾರನು ಶಬ್ದಾಲಂಕಾರ ನಿರೂಪಣಕ್ಕೆ ಪ್ರಾರಂಭಿಸುತ್ತಾನೆ.

## ಶಬ್ದಾಲಂಕಾರಗಳು

ಶಬ್ದಾಲಂಕಾರದೊಳಗೆ 'ವಿನುತಪ್ರಾಸ', 'ಶಾಂತಪ್ರಾಸ', 'ವರ್ಗಪ್ರಾಸ', 'ಸಮಾಪಪ್ರಾಸ', 'ಅನುಪ್ರಾಸ', 'ಅಂತಪ್ರಾಸ'—ಎಂದು ಆರು ಭೇದಗಳಿವೆ. ಆದರೆ ಎಲ್ಲವೂ 'ಪ್ರಾಸ' ಎಂಬ ಪದದಿಂದಲೇ ಕೊನೆಗೊಳ್ಳುವುದನ್ನು ಗ್ರಹಿಸಿ ನೋಡಬೇಕು. ಇದರಿಂದ, 'ಪ್ರಾಸ' ಎಂಬುದು ಎಲ್ಲದಕ್ಕೂ ಸಾಮಾನ್ಯವಾದ ಅದೊಂದು ಧರ್ಮವನ್ನು ಸೂಚಿಸುವ ಪದವೆಂಬುದು ಹೊಳೆದು ತೋರುತ್ತಿದೆ. 'ಪ್ರಾಸಕ್ಕೆ' ಆ ಹೆಸರು ಹೇಗೆ ಬಂದಿರಬೇಕು ಎಂಬುದನ್ನು ಒಂದಿಷ್ಟು ಪರಾಂಬರಿಸಬೇಕು.

'ಅಸ್' ಧಾತುಜನ್ಯವಾದ 'ಅಸ' ಎಂಬ ಪದವು 'ಪ್ರ' ಎಂಬ ಉಪಸರ್ಗದೊಡನೆ ಬೆರೆದು 'ಪ್ರಾಸ' ಎಂಬ ರೂಪವನ್ನೊಂದಿದೆ. 'ಅಸ್' ಧಾತುವಿಗೆ 'ಎಸೆ (ಇಸು)',

'ಮುಂದೆ ವಿಸ್ತರಿಸು' ಇತ್ಯಾದಿ ಅರ್ಥಗಳಿವೆ. ಈ ಎರಡನೆಯ ಅರ್ಥಕ್ಕನುವಾಗಿಯೇ ಪ್ರಕೃತದ 'ಪ್ರಾಸ' ಪದವು ರೂಪಿತವಾಗಿರಬೇಕು.[1] ಪ್ರಸಿದ್ಧವಾದ ದ್ವಿತೀಯಾಕ್ಷರ ಪ್ರಾಸವು ಪ್ರಥಮಾಕ್ಷರದ ಮುಂದೆಯೇ ಬಲುಮಟ್ಟಿಗೆ ಏಕರೂಪದಲ್ಲಿ ವಿಸ್ತರಿಸುವುದರಿಂದ ಅದಕ್ಕೇ 'ಪ್ರಾಸ'ವೆಂಬ ಹೆಸರು ರೂಢವಾದುದೆಂದು ಭಾವಿಸಬೇಕು. ಹಿಂದೆ ಹೆಸರಿಸಿದ ಪ್ರಾಸಗಳೊಳಗೆ ಆದಿಯ ನಾಲ್ಕೂ 'ದ್ವಿತೀಯಾಕ್ಷರ ಪ್ರಾಸ'ಗಳು ; ಮತ್ತಿನದು 'ಅನುಪ್ರಾಸ'; ಕಡೆಯದು 'ಅಂತಪ್ರಾಸ'. 'ಮುಂದೆಸೆವುದು' ಎಂಬ ಅರ್ಥದಿಂದ ತಲೆದೋರಿದ ಪದವಾದುದರಿಂದ, ದ್ವಿತೀಯಾಕ್ಷರದಿಂದಲೆ ಪ್ರಾಸಸ್ಥಾನವು ತಲೆದೋರಬೇಕಾಯಿತು. ಆ ಪ್ರಾಸವು ನಾಲ್ಕು ತೆರದಲ್ಲಿ ವಿಸ್ತರಿಸಿತು. 'ಅನುಪ್ರಾಸ'ವು ದ್ವಿತೀಯಾಕ್ಷರ ಮೊದಲುಗೊಂಡು,ಮುಂಬರಿಯುವ ತರಂಗಾವಳಿಯಂತೆ ಪಾದಾಂತದ ವರೆಗೂ ಹರಿಯಬಹುದು. ಈ ಆದಿಯ ನಾಲ್ಕು 'ಪ್ರಾಸ'ಗಳು ಎರಡನೆಯ ಅಕ್ಷರ ಸ್ಥಾನದಲ್ಲಿ ; ಮತ್ತಿನ 'ಅನುಪ್ರಾಸ'ವಾದರೂ ಆಯಾ ಹಿಂದಿನವುಗಳಿಂದ ಎರಡನೆಯ—ಎಂದರೆ ಮತ್ತಿನ ಅಕ್ಷರಗಳನ್ನೊಂದಿಯೇ ಬರುವುವು. ಹಾಗಿರುವಲ್ಲಿ 'ಅಂತಪ್ರಾಸ'ವೆಂದರೆ ಅದೇನು ಕಡೆಯ ಅಕ್ಷರವನ್ನೊಂದಿಯೇ ಇರಬೇಕಾಯಿತು ? ಎನ್ನಬಾರದು. ಹಿಂದಣ ನಿಯಮವನ್ನು ಚೆನ್ನಾಗಿ ಮಥಿಸಿ ನೋಡಿದಲ್ಲಿ ಇದೂ ಅಂತ್ಯಾತ್ಪೂರ್ವದ ಅಕ್ಷರದಿಂದ ಎರಡನೆಯ—ಎಂದರೆ ಕಡೆಯ—ಅಕ್ಷರವನ್ನೆ ಹೊದ್ದಿಕೊಂಡು ಬಂದಿರುವುದು ವಿಶದವಾಗಿರುವುದರಿಂದ ಲಕ್ಷಣಭಂಗ ಸಂದೇಹಕ್ಕೂ ಆಸ್ಪದವಿಲ್ಲ. ಇದರಿಂದ, ಪ್ರಾಸವೆಂದರೆ ಆಯಾ ದೃಷ್ಟಿಯಿಂದ ದ್ವಿತೀಯಾಕ್ಷರಗಳನ್ನೊಂದಿಯೇ ಬರುವುದ ಎಂಬುದು ಸಿದ್ಧವಾಗುತ್ತಿದೆ.

ಇಷ್ಟನ್ನು ಮನನ ಮಾಡಿಕೊಂಡ ಮೇಲೆ ಶಬ್ದಾಲಂಕಾರದೊಳಗಿನ 'ವಿನುತ' ಮುಂತಾದ ಪ್ರಾಸಗಳನ್ನು ಗಮನಿಸುವ :

**(ಅ) ವಿನುತಪ್ರಾಸ**

ಪಾದದೊಳೆರಡನೆಯಕ್ಕರ
ಮಾದರದಿಂದಾದುದಾವುದದನಱಿದನಿತಂ
ಪಾದದೊಳಿಡುವೊಡದಕ್ಕುಂ
ಭೇದೋಕ್ತಿ ಕ್ರಮವಿಚಾರಿತೋರುಪ್ರಾಸಂ (ii, 30)

ಇಲ್ಲಿ 'ಅದಕ್ಕುಂ...ಉರು ಪ್ರಾಸಂ' ಎಂದಲ್ಲವೆ ತೋರುವುದು ? ಹೌದು ; 'ಉರು ಪ್ರಾಸ'ವೆಂದರೆ 'ವಿನುತಪ್ರಾಸ' ಭಿನ್ನವಾದುದು ಎಂದು ಭಾವಿಸಬಾರದು. ಪ್ರಾಸಗಳೊಳಗೆಲ್ಲ ಶ್ರೇಷ್ಠವಾದ ಪ್ರಾಸ—ಎಂಬುದಷ್ಟೆ ಅದರ ತಾತ್ಪರ್ಯ. 'ಭೇದೋಕ್ತಿ ಕ್ರಮ ವಿಚಾರಿತ' ಎಂಬ ವಿಶೇಷಣದಿಂದೆ ಆ ಭಾವನೆ ನೆಲೆವಡೆಯುತ್ತಿದೆ. ಇನ್ನು, ಈ 'ವಿನುತಪ್ರಾಸ'ದ ಸ್ವರೂಪವನ್ನು ನೋಡುವ :

[1] 'ಪ್ರಾಸ'ಕ್ಕೆ 'ಆಯುಧ' ಎಂಬ ಅರ್ಥವೂ ಇದೆ. ಇಲ್ಲಿಗೆ ಅದು ಪ್ರಕೃತವಲ್ಲ.

ಮನೆಗಿಂದು ಬರ್ಕುಮೆಂದಾ
ನನೇಕತರವಸ್ತು ವಾಹನಾದಿಯನೊಸೆದಿಂ
ಬೆನೆ ಪಸರಿಸಿ ಕುಡಲಿರ್ದೆಂ
ಜನೇಶನಿಂದೇಕೆ ಕಳೆದುಪೋದನೊ ಪೇೞಿಂ —(ii, 31)

ಪೂರ್ವೋತ್ತರಾರ್ಧಗಳೆರಡರೊಳಗೂ ಇಲ್ಲಿ ಪ್ರಥಮ ದ್ವಿತೀಯ ಪಾದಗಳ ಪ್ರಾಸಾಕ್ಷರಗಳು ಕ್ರಮವಾಗಿ 'ನೆ', 'ನೇ' ಎಂದು ಏಕರೂಪಗಳಾಗಿಯೇ ಬಂದಿವೆ. ಅದಕ್ಕೆ ಬದಲಾಗಿ ಭಿನ್ನ ಭಿನ್ನ ಸ್ವರಯುತಗಳಾದ ವ್ಯಂಜನಾಕ್ಷರಗಳಾಗಿದ್ದಲ್ಲಿ 'ವಿನುತಪ್ರಾಸ' ಲಕ್ಷಣವು ಕೂಡಿದಂತಾಗಲಿಕ್ಕಿಲ್ಲವೆ—ಎಂದು ಸಂದೇಹಿಸಬೇಕಾಗಿಲ್ಲ. ಅಂತಹ ಪ್ರಾಸವರ್ಗವೇ ಕಾವ್ಯಗಳಲ್ಲಿ ಹೆಚ್ಚಾಗಿ ಕಂಡುಬರುವುದು. ಅಂತಹದಕ್ಕೆ ಬೇರೊಂದು ಲಕ್ಷಣವನ್ನು ಹೇಳಿದುದಾಗಲಿ ಬೇರೊಂದು ಹೆಸರಿಟ್ಟು ಕರೆದುದಾಗಲಿ ತೋರುವುದಿಲ್ಲ. ಹ್ರಸ್ವದೀರ್ಘ ಗಳಾದವುಗಳನ್ನು ನೋಡಿದರೆ, ಏಕವ್ಯಂಜನಯುತಗಳಾದ ಆ ಹ್ರಸ್ವದೀರ್ಘಗಳೆರಡೂ ಬಂದಲ್ಲಿ 'ವಿನುತ'ತ್ವಕ್ಕೆ ಭಂಗವಿಲ್ಲ ಎಂದು ಸೂಚಿತವಾಗುತ್ತಿದೆ. ಇದು ಊಹಾಮಾತ್ರ ವಲ್ಲ. ಗ್ರಂಥಕಾರನೇ ಮುಂದಿನ ವಿವೃತಿಯಲ್ಲಿ 'ವಿನುತ ಪ್ರಾಸಂ ಸಂಬಂಧಾಕ್ಷರದೊಳ್ ಎಲ್ಲ ಮಾತ್ರೆಗಳುಂ ತಟ್ಟು ಇಂಬಾಗಿ ಬೆರಸಿ ಶೋಭಾಡಂಬರಮಂ ಪಡೆಗುಂ' (ii, 32) ಎಂದು ಹೇಳಿದ್ದಾನೆ. 'ವಿನುತ' ಎಂಬುದಕ್ಕೆ ಸರ್ವರಿಂದಲೂ ಸ್ತುತವಾದ, ಎಂದರೆ ಶ್ರೇಷ್ಠವಾದ, ಎಂದಷ್ಟೇ ಅರ್ಥ. ಉಳಿದುವೆಲ್ಲ ಅಷ್ಟು ಸರ್ವಸಮ್ಮತಗಳಲ್ಲ ಎಂಬುದು ಅವುಗಳ ಪ್ರಯೋ ಗಾಲ್ಪತೆಯಿಂದಲೇ ಮಂದಟ್ಟಾಗುವುದು.

(ಆ) ಶಾಂತಪ್ರಾಸ

ಬೆರಸಿರೆ ಮುಂ ಸಂಯೋಗಾ
ಕ್ಷರಂಗಳೇಕಸ್ವರಂಗಳಿಂ ಸುಪ್ರಾಸಂ
ನೆರೆದು ವಿಪರ್ಯಾಸ ಕ್ರಮ
ದಿರೆ ಸತತಂ ಶಾಂತಪೂರ್ವಮಕ್ಕುಂ ಪ್ರಾಸಂ —(ii, 33)

ಎಂದರೆ, (ದ್ವಿತೀಯಾಕ್ಷರ ಸ್ಥಾನಗಳು) ಏಕರೀತಿಯ ಅಥವಾ ಹಲಬಗೆಯ ಸಂಯುಕ್ತಾಕ್ಷರ ಗಳಿಂದ ಕೂಡಿದ್ದರೆ 'ಶಾಂತಪ್ರಾಸ' ಎನ್ನಿಸುವುದು. ಇದರ ಉದಾಹರಣ ಹೀಗೆ—

ಪತ್ತಿ ಪ್ರಮಾದ ಫಲಕಮ
ನತ್ಯುಗ್ರಗ್ರಾಹನಿವಹ ಸಂಕ್ಷೋಭಿತದೊಳ್
ಮತ್ತೀ ರತ್ನಾಕರದೊಳ್
ಪುತ್ರಿಕೆಯೆನೆ ಬಟ್ಟಿಳಿಂತು ಬಾೞ್ದುದೆ ಚೋದ್ಯಂ —(ii, 34)

ಹಿಂದಿನ ೬ನೆಯ ಸೂತ್ರದಲ್ಲಿ ನಿರೂಪಿಸಿದ ಲಕ್ಷಣಾನುಸಾರವಾಗಿ 'ಬರಿಸಿ ಕ್ಷಿತಿಪತಿಯಂ' ಮೊದಲಾಗಿ ಲಘ್ವಕ್ಷರದ ಮೇಲೆ ಒತ್ತಕ್ಷರವನ್ನಿರಿಸುವುದು 'ದೂಷ್ಯಂ' ಎಂದವನು ಇಲ್ಲಿ 'ಪತ್ತಿ ಪ್ರಮಾದ...' ಎಂಬ ದೃಷ್ಟಾಂತವನ್ನೆತ್ತಿ ಹೇಳಿದನೆಂದರೆ ಸಮಂಜಸವಾಗಲಾರದು.

ಅದು 'ಪತ್ರೀ ಪ್ರಮಾದ'....ಎಂದೇ ಇದ್ದಿರಬೇಕು. 'ತ್ರಿ' ಎಂಬುದು ಒತ್ತಕ್ಷರವಾದರೂ 'ಲಘು' ಎಂಬುದನ್ನು ಹೇಳಬೇಕಾಗಿಲ್ಲವಷ್ಟೆ.

ಪದ್ಯವಿದರೊಳಗೆ, ತತ್ಪೂರ್ವದ ಹರ್ಷರಚಿತ 'ರತ್ನಾವಳೀ ನಾಟಿಕೆ'ಯ ಕಥಾಂಶವೇ ಹೊಳೆಯುತ್ತಿದೆ. ನಾಟಕವೇ ಆಗಿ ಅಲ್ಲವೆ ಶ್ರವ್ಯಕಾವ್ಯವಾಗಿ ಯಾವನೋ ಕನ್ನಡ ಕವಿಯಿಂದ ಭಾಷಾಂತರಿತವಾದ ಪ್ರಬಂಧವೇ ಈ ಪದ್ಯದ ಆಕರವೆಂಬಲ್ಲಿ ಸಂಶಯವಿಲ್ಲ. 'ಪ್ರಮಾದ ಫಲಕ' ಎಂದರೆ, ಪ್ರಯಾಣವೆಸಗುವ ಹಡಗಿಗೆ ಅಪಾಯವೊದಗಿದಲ್ಲಿ ಜೀವ ರಕ್ಷಣೆಗಾಗಿ ಜಾಣ್ಮೆಯಿಂದ ಸಿದ್ಧಪಡಿಸಿ ಇರಿಸಿಕೊಳ್ಳುತ್ತಿದ್ದ ಒಂದು ಬಗೆಯ ಹಲಗೆ. ಅಂಥ ಪ್ರಮಾದ ಫಲಕದ ನೆರವಿನಿಂದಲೆ ಸಿಂಹಳದಿಂದ ಸಮುದ್ರ ಪ್ರಯಾಣವೆಸಗುತ್ತಿದ್ದ ರತ್ನಾವಳಿ ಬದುಕಿ ದಡವನ್ನೊಂದಿಪುದಾಗಿ ಆ 'ನಾಟಿಕೆ'ಯಲ್ಲಿ ತೋರುತ್ತಿದೆ. ಈ ಪದ್ಯವು, ಆಕೆಯನ್ನು ದಡದಲ್ಲಿ ಕಂಡ ರಾಜಭಟರು ತಮ್ಮೊಳಗೆ ಆಡಿದ, ಅಥವಾ ಆಕೆಯನ್ನು ಕರೆದುಕೊಂಡು ವತ್ಸರಾಜನರಸಿಯಾದ ವಾಸವದತ್ತಾದೇವಿಯ ವಶಕ್ಕೊಪ್ಪಿಸಿದಾಗ ಆ ಮಹಾರಾಣಿ ಪ್ರಶ್ನಿಸಿದಲ್ಲಿ ಹೇಳಿದ, ಮಾತಾಗಿರಬೇಕು. ಅದಿರಲಿ ; ಈ ವಿಶಿಷ್ಟ ಪ್ರಾಸಕ್ಕೆ 'ಶಾಂತಪ್ರಾಸ' ಎಂಬ ಹೆಸರೊದಗಲು ಕಾರಣವೇನು ?—ಎಂಬ ಆಶ್ಚರ್ಯವೊದಗಬಹುದು. ವಿವೇಚಿಸಿದಲ್ಲಿ ಅಂಥ ಆಶ್ಚರ್ಯಕ್ಕೆ ಕಾರಣವೇ ತೋರುವುದಿಲ್ಲ. 'ಶಾಂತ' ಅಲ್ಲವೆ 'ಶಮ' ಎಂದರೆ ಎಂತಹ ಸುಖದುಃಖಗಳಲ್ಲಿಯೂ ಹಿಗ್ಗದ ಕುಗ್ಗದ ಅಂತರಂಗಿಕವಾದ ನಿಲುಗಡೆ. ಬೇಕಾದ ಅನುಕೂಲತೆಗಳಿರುವವರಿಗೆ, ಒದಗುವುದು. ಶಾಂತತೆಯಲ್ಲ—ಬರಿಯ ಸುಖ. ಗ್ರಂಥಕಾರನು ಅಂಥ 'ಶಾಂತ' ಪದವನ್ನು ಈ ಪ್ರಾಸಕ್ಕೆ ಲಾಕ್ಷಣಿಕಾರ್ಥದ ಹೆಸರನ್ನಾಗಿ ಮಾಡಿ ಗುರಿಗೊಳಿಸಿದ್ದಾನೆ. ಬೇರೆ ಬೇರೆ ಬಗೆಯ ದಡ್ಡಕ್ಕರಗಳಿಂದ ನಿಬಿಡವಾಗಿದ್ದರೂ ಅದೊಂದು ಮಾರ್ಗಾನುಸಾರವಾಗಿ ಹರಿವುದನ್ನು 'ಶಾಂತಪ್ರಾಸ' ಎಂದು ಕರೆಯುವುದರಲ್ಲಿ ಔಚಿತ್ಯವಿಲ್ಲವೆನ್ನಲು ಸಾಧ್ಯವೆ ?—ಅಲ್ಲ. ಅರ್ಥವನ್ನೆಣಿಸಿದರೂ, ಈ ಪದ್ಯರಚನೆಯಲ್ಲಿ ವರ್ಣಿತವಾದ ವ್ಯಕ್ತಿಯ ಅವಸ್ಥೆಯಲ್ಲಿ ವಿಶಿಷ್ಟವಾಗಿ ಶಾಂತತೆ ವ್ಯಕ್ತನಾಗಿದೆ. ಸಮುದ್ರದ ಸ್ವರೂಪವಾಗಲಿ 'ಅತ್ಯುಗ್ರಗ್ರಾಹನಿವಹ ಸಂಕ್ಷೋಭಿತದೊಳ್' ಎಂಬ ವಿಶೇಷಣಪದದ ಅಕ್ಷರ ಗುಂಫವಾಗಲಿ ಅಂಥದು. ಹಾಗೆ ಹಡಗೊಡೆದು ದಡವನ್ನೊಂದಿದವಳಾದರೂ ಆಕೆ 'ಪುತ್ರಿಕೆ'ಯಂತೆ ಅಚಲಳಾಗಿದ್ದಳೆಂಬುದೂ ಹಾಗೆಯೇ ಅಲ್ಲವೆ ? ಮಾರ್ಗೀಯ ಕವಿಗಳು ಪ್ರಾಸಾದಿ ಪದರಚನೆಗಳನ್ನೂ ಅರ್ಥ ಭಾವರಸಗಳನ್ನೂ ಅನ್ಯೋನ್ಯ ಸಂಬದ್ಧಗಳಾಗಿರುವಂತೆಯೇ ಅನುಗೊಳಿಸುತ್ತಿದ್ದರೆಂಬುದನ್ನು ಇಲ್ಲಿ ಊಹಿಸಿಕೊಳ್ಳಬಹುದು.

(ಇ) ವರ್ಗಪ್ರಾಸ

.....................

........ವರ್ಗದಕ್ಕರಂಗಳ್ ನಾಲ್ಕುಂ
ಸಂತಮಿರೆ ಪೇಟ್ದು ತಾಣದೊ
ಳಂತಕ್ಕುಂ ಪ್ರಾಕ್ತನೋಕ್ತ ವರ್ಗಪ್ರಾಸಂ —(ii, 35)

ಎಂದರೆ, ನಾಲ್ಕೂ ವರ್ಗಾಕ್ಷರಗಳು ಪರಿಪಾಡಿಯಾಗಿ ನಿಯತಸ್ಥಾನಗಳನ್ನೊಂದಿದಲ್ಲಿ 'ವರ್ಗ ಪ್ರಾಸ' ವೆನ್ನಿಸುವುದು. 'ಅಂತಕ್ಕುಂ ಪ್ರಾಕ್ತನೋಕ್ತ ವರ್ಗಪ್ರಾಸಂ' ಎಂದಿರುವುದನ್ನೂ, ಹಿಂದೆ 'ಅತಿಶಯಮದು ಕನ್ನಡಕ್ಕೆ ಸತತಂ ಪ್ರಾಸಂ' ಎಂದುದನ್ನೂ ಒಟ್ಟಿಗಿರಿಸಿ ಅವಧರಿಸ ಬೇಕು. ಇದರಿಂದ 'ಕವಿರಾಜಮಾರ್ಗ'ಕ್ಕಿಂತಲೂ ಎಷ್ಟೋ ಪ್ರಾಕ್ತನ ಕಾಲದಲ್ಲಿಯೇ ಈ 'ವರ್ಗಪ್ರಾಸ'ವು ರೂಢವಾಗಿತ್ತು ಎಂದಂತಾಯಿತು. ಕನ್ನಡಪ್ರಾಸದ ಚರಿತ್ರೆಯಲ್ಲಿ ಮೊತ್ತಮೊದಲು ತಲೆದೋರಿದುದು ಈ 'ವರ್ಗಪ್ರಾಸ'ವೇ ಆಗಿದ್ದಿರಬೇಕಲ್ಲವೆ? ಹಾಗೆ 'ವರ್ಗದಕ್ಕರಂಗಳ್ ನಾಲ್ಕುಂ' ಎಂಬುದರಿಂದ ಸಂಸ್ಕೃತಕ್ಕೇ ಮೀಸಲಾದ ಮಹಾಪ್ರಾಣಾ ಕ್ಷರಗಳು ದೇಸಿಗನ್ನಡದಲ್ಲಿ ಬೆರಸಿದ ಭಾಷಾ ಚರಿತ್ರದ ಕಾಲವನ್ನೂ ಗುರಿಗೊಂಡಂತಾ ಯಿತು. ಅಂತಹ 'ಪ್ರಾಕ್ತನ' ಸಮಯದ, ಪ್ರಾಯಶಃ 'ಚತ್ತಾಣ' ಇಲ್ಲವೆ 'ಬೆದಂಡೆ' ಜಾತಿಯ ಒಂದು ರಾಮಾಯಣ ಕಾವ್ಯದಿಂದಲೆ ಎತ್ತಿದ ದೃಷ್ಟಾಂತವಾಗಿರಬೇಕು ಮುಂದಿನ ದೃಷ್ಟಾಂತ ಪದ್ಯ :

ಸಕಲ ಜನ ವಿನುತನಂ ಶತ
ಮುಖಸದೃಶ ವಿಶಾಲ ವಿವಿಧ ವಿಭವೋದಯನಂ
ಪ್ರಗತಗುಣಗಣನನರಿಬಲ
ವಿಘಟನನಂ ಕಂಡನಣುವನಾ ರಾಘವನಂ —(ii, 36)

ಈ ಪ್ರಾಸದೊಡನೆ ಮುಂದಿನ 'ಸಮೀಪ ಪ್ರಾಸ'ವನ್ನೂ ಕೂಡಿ ಭಾವಿಸತಕ್ಕುದು :

(ಈ) ಸಮೀಪಪ್ರಾಸ

...........................
........ಕುಱುತು ಶಷಸ ವರ್ಣತ್ರಯಮಂ
ವಿದಿತ ಪ್ರಾಸ ವಿವಿಕ್ತಾ
ಸ್ಪದದೊಳ್ ನಿಲೆ ಪೇೞ್ದೊಡದು ಸಮೀಪಪ್ರಾಸಂ —(ii, 37)

ಎಂದರೆ ಶ, ಷ, ಸ ಗಳೆಂಬ ಅತಿ ಸಮೀಪಸಂಬಂಧದ ಮೂರು ಅಕ್ಷರಗಳನ್ನು ಪ್ರಾಸ ಸ್ಥಾನದಲ್ಲಿರಿಸಿ ಕಟ್ಟಿದಲ್ಲಿ, 'ಸಮೀಪಪ್ರಾಸ' ಎನ್ನಿಸುವುದು. ಹಿಂದೆ ಹೇಳಿದ ಮಹಾ ಪ್ರಾಣಾಕ್ಷರಗಳಂತೆಯೇ ಶ, ಷ ಎಂಬ ಅಕ್ಷರಗಳೂ ಅಚ್ಚಗನ್ನಡದಲ್ಲಿಲ್ಲ. ಆದರಿಂದ ಇದೂ ಆ ಪ್ರಾಕ್ತನೋಕ್ತ ಪ್ರಾಸವೇ ಎಂದು ಭಾವಿಸಬಹುದು. ಬಹುಶಃ ಅದೇ ರಾಮಾಯಣ ಪ್ರಬಂಧದಿಂದ ಎತ್ತಿದ ದೃಷ್ಟಾಂತವನ್ನೀಕ್ಷಿಸಬೇಕು :

ಶಶಧರ ಬಿಂಬಾನನೆಯಂ
ಝಷಕೇತನ ಕೇತನಾಭ ತನು ತನುವಂ ತಾಂ
ಬಿಸವಿಶದವರ್ಣೆಯಂ ಕಂ
ಡೊಸೆದಂ ಬನದೊಳಗೆ ಜನಕತನಯಳನಣುವಂ —(ii, 38)

ಇಲ್ಲಿ ಸಮೀಪಾಕ್ಷರಗಳಾದ ಶ, ಷ, ಸ ಎಂಬ ಅಕ್ಷರಗಳನ್ನು ಹೆಣೆದು ನಾಲ್ಕನೆಯ ಪಾದದಲ್ಲಿ ಕನ್ನಡದಲ್ಲಿ ಸ್ವತಂತ್ರವಾಗಿರುವ 'ಸ'ವನ್ನು ಕೂಡಿಸಿದೆ. ಆದರಿಂದ, ಹೀಗೆ

ಕ್ರಮವಡೆದಿದ್ದರೆ ಮಾತ್ರವೇ 'ಸಮಾಪ ಪ್ರಾಸ'ವಾಗುವುದು ಎಂಬ ಸೂಚನೆಯೆ ?—ಎನ್ನಬಹುದು. ಪ್ರಾಸಮಾರ್ಗಕ್ಕೆ ಸರಿಯಾಗಿ ಕೊಡುವ ಪದ್ಧತಿ ಹೀಗೆ—ಎಂದು ಕಾಣಿಸುವುದಕ್ಕಾಗಿ ಇಂಥ ಉದಾಹರಣವನ್ನೇ ಆರಿಸಿಕೊಂಡುದಾಗಿರಬೇಕು.

ದೋಸಮಿನಿತೆಂದು ಬಗೆದು
ದ್ಭಾಸಿಸಿ ತಱಸಂದು ಕನ್ನಡಂಗಳೊಳೆಂದುಂ
ವಾಸುಗಿಯುಮಱಯಲಾಱದೆ
ಬೇಸಱುಗುಂ ದೇಸಿ ಬೇಱೆವೇಱಪ್ಪುದಱುಂ —(i, 46)

ಎಂದು 'ಶ'ಕಾರವನ್ನುಳಿದೂ

ಅಸಹಾಯಸಾಹಸವಿನೋದಿ ವಿವಿಕ್ತಚಿತ್ರ
ಪ್ರಸವ ಪ್ರಕಾಶಿತ ಮಹೋದಯ ತತ್ತ್ವ ಸತ್ತ್ವ
ವ್ಯಸನ ವ್ಯಪೇತನಪನೀತಕಲಾಕಲಾಪಂ
ಶಶಿಖಂಡ ನಿರ್ಮಲಯಶೋವಿವಿಧಾವತಂಸಂ —(iii, 229)

ಎಂದು ವ್ಯುತ್ಕ್ರಮವಾಗಿಯೂ ಈ ಪ್ರಾಸವನ್ನು ಪ್ರಯೋಗಿಸಿದುದಕ್ಕೆ ಉದಾಹರಣಗಳು ಕಾಣುತ್ತಿವೆ. ಆದರೆ, ಈಯೆರಡು ಪದ್ಯಗಳೂ ಗ್ರಂಥಕಾರನ ಸ್ವತಂತ್ರಪದ್ಯಗಳು; ಹಿಂದಿನವೆರಡೂ ಪ್ರಾಕ್ತನ ಪ್ರಬಂಧದಿಂದೆತ್ತಿಕೊಂಡವುಗಳು. ಅದರಿಂದ, ಆದಿಯಲ್ಲಿ ಹಾಗೆ ಕ್ರಮವಿಡಿದೇ ಇದ್ದು, ಮತ್ತೆ ವ್ಯುತ್ಕ್ರಮವು ತಲೆದೋರಿರಬಹುದು ಎಂದು ವಾದಿಸಿದಲ್ಲಿ ನಾವೂ ಒಪ್ಪುತ್ತೇವೆ. ಇರಲಿ; ಮೇಲಿನ ಎರಡು ಪ್ರಾಸಕ್ರಮದಿಂದ ಒಂದು ಸಂಗತಿ ಹೊಳೆದು ತೋರುತ್ತಿದೆ: ವರ್ಗಾಕ್ಷರಗಳಾಗಲಿ ಸಮಾಪಾಕ್ಷರಗಳಾಗಲಿ ತಂತಮ್ಮೊಳಗೆ ಆಯಾ ಸಂಬಂಧವಿಡಿದು ಕೂಟವಡೆದವುಗಳಲ್ಲದೆ ಅಭಿನ್ನಾಕ್ಷರಗಳಲ್ಲ ಎಂಬುದನ್ನು ಒಪ್ಪಲೇಬೇಕು. ಪಾದದಲ್ಲಿ ಎರಡನೆಯ ಅಕ್ಷರವೇ, ಕಡೆಗೆ ವ್ಯಂಜನವಾದರೂ, ಎಲ್ಲ ಪ್ರಾಸಸ್ಥಾನಗಳಲ್ಲಿ ಬರಬೇಕು ಎಂಬುದು ಕನ್ನಡದ ನಿಯಮ. ಸಂಸ್ಕೃತದ ಛಂದಸ್ಸಿನಲ್ಲಾಗಲಿ ಪದ್ಯಗಳಲ್ಲಾಗಲಿ ಈ ಪ್ರಾಸನಿಯಮವೆಂಬುದು ಆದಿಯಿಂದಲೂ ಇಲ್ಲವಷ್ಟೆ. ಸಂಸ್ಕೃತಭಾಷಾ ಪ್ರವೇಶದ ಬಲು ಮೊದಲಿನ ಕಾಲದಲ್ಲಿ ಕನ್ನಡದ ಪ್ರಾಸಾಕ್ಷರ ನಿಯಮದಲ್ಲಿ ಒಂದಿಷ್ಟು ಬದಲಾವಣೆಯಾಗಲಾರಂಭಿಸಿತು. 'ವರ್ಗಪ್ರಾಸ' 'ಸಮಾಪ ಪ್ರಾಸ'ಗಳು ಮಾತ್ರವಲ್ಲ, ಭಿನ್ನಾಕ್ಷರ ಸಂಪರ್ಕದ 'ಶಾಂತ ಪ್ರಾಸ'ವೂ ಆ ಬದಲಾವಣೆಯ ಪರಿಣಾಮಗಳೇ. 'ವರ್ಗಪ್ರಾಸ'ವು ಬೇಗನೆ ಮಾಸಿ ಹೋದರೂ 'ಸಮಾಪ ಪ್ರಾಸ' 'ಶಾಂತ ಪ್ರಾಸ'ಗಳು ಕನ್ನಡದಲ್ಲಿ ನೆಲೆಗೊಂಡುವು.

(ಉ) ಅನುಪ್ರಾಸ

..............................
..................ಅನುಪ್ರಾಸಮುಮಂ
ಸಂದಿಸಿದೆಡೆಯಕ್ಕರಮೊಂ
ದೊಂದಱೊಳಳವಡಿಸಿ ಬಂದೊಡನುಗತಮಕ್ಕುಂ —(ii, 39)

'ಸಂದಿಸಿದ ಎಣೆಯಕ್ಕರ'ಗಳು ಒಂದೊಂದರೊಡನೆ ಕೂಡಿ ನಿಲ್ಲಲು, ಅದು 'ಅನುಪ್ರಾಸ' ವೆನ್ನಿಸುವುದು :

ಜನವಿನುತನನಘನನುಪಮ
ನನುನಯಪರನರಸನಿನಿಸು ನೆನೆನೆನೆದು ಮನೋ
ಜನಿತಮುದನನಿಲತನಯನ
ನನನೃತ ವಚನ ಪ್ರಪಂಚನಂತಿರೆ ನುಡಿದಂ —(ii, 40)

ಈ ದೃಷ್ಟಾಂತ ವಿಷಯದಲ್ಲಿ ಹೆಚ್ಚಿಗೆ ಹೇಳಬೇಕಾದುದೇನೂ ಇಲ್ಲ.

(ಊ) ಅಂತಪ್ರಾಸ

.....................ಪಾ
ದಾಂತದೊಳೊಂದಾವುದಾನುಮಿಟ್ಟಕ್ಕರಮಂ
ಮುಂತಣ ಪಾದಾಂತಂಗಳೊ
ಳಂ ತಡೆಯದೆ ಪೇೞ್ದೊಡಂತದಂತಪ್ರಾಸಂ —(ii, 41)

ಎಂದರೆ, ಪಾದಾಂತದಲ್ಲಿಟ್ಟ ಅಕ್ಷರವನ್ನೇ ಮುಂದಿನ ಎಲ್ಲ ಪಾದಾಂತಗಳಲ್ಲೂ ಇಟ್ಟರೆ 'ಅಂತಪ್ರಾಸ'ವಾಗುವುದು. ದೃಷ್ಟಾಂತವನ್ನು ನೋಡಿ :

ಅತಿವಿಶದಯಶೋವೃತ್ತಂ
ನತಸಕಳಾರಾತಿಜನವಿತಾನಂ ಮತ್ತಂ
ವಿತತ ಶ್ರೀ ಸಂಪತ್ತಂ
ಶತಮುಖಸದೃಶಾನುಭಾವ ಪದಮಂ ಪೆತ್ತಂ —(ii, 42)

ಇದು ನೃಪತುಂಗ ವರ್ಣನಾಪರವಾದ ಪದ್ಯವಾಗಿರುವಂತೆ ತೋರುತ್ತದೆ. ಇಲ್ಲಿಯೂ ಲಕ್ಷಣಾರ್ಥವು ವಿಶದವಾಗಿದೆ.

ಇನ್ನು ಶಬ್ದಾಲಂಕಾರಗಳನ್ನೆಲ್ಲ ಒಡನಿರಿಸಿ ಪರಾಂಬರಿಸುತ್ತಾನೆ :

ಪ್ರಾಸಾನುಪ್ರಾಸಾಂತ
ಪ್ರಾಸಂಗಳ್ ಮೂಱುಮತಿಶಯಂಗಳ್ ಪ್ರಾಸಾ
ಭಾಸಂಗಳುೞಿದ ಮೂಱುಂ
ಭಾಸುರ ನೃಪತುಂಗದೇವ ವಿದಿತ ಕ್ರಮದಿಂ —(ii, 43)

'ಅತಿಶಯಮದು ಕನ್ನಡಕ್ಕೆ ಸತತಂ ಪ್ರಾಸಂ'—ಎಂದು ಈ ಶಬ್ದಾಲಂಕಾರ ವಿವೇಚನೆಯ ಆದಿಯಲ್ಲೇ ಸೂಚಿತವಾಗಿದೆಯಷ್ಟೆ. 'ಅತಿಶಯ' ಎಂದರೆ ಸಂಸ್ಕೃತ ಛಂದೋಮಾರ್ಗಕ್ಕಿಂತಲೂ ಕನ್ನಡದಲ್ಲಿ ಈ ಪ್ರಾಸನಿಯಮವು ವಿಶೇಷವಾಗಿದೆ ಎಂಬ ಅರ್ಥ. ಈ ಪರಾಂಬರಿಕೆಯಲ್ಲಿ, ಆ 'ಪ್ರಾಸ'ದೊಡನೆ 'ಅನುಪ್ರಾಸ'ವನ್ನೂ 'ಅಂತ ಪ್ರಾಸ'ವನ್ನೂ ಸೇರಿಸಿ 'ಮೂಱುಂ ಅತಿಶಯಂಗಳ್' ಎನ್ನುತ್ತಾನೆ. ಈ ಮತ್ತಿನ ಎರಡು ಪ್ರಾಸಗಳು ಪ್ರತಿಯೊಂದು ಪದ್ಯದಲ್ಲೂ ಸೇರಲೇಬೇಕಾದುದಿಲ್ಲವಾದ ಕಾರಣ, 'ಅತಿಶಯಂ ಗಳ್' ಅಲ್ಲವೆಂಬುದನ್ನು ಒಪ್ಪಲೇಬೇಕು. ಆದರೆ ಇವುಗಳೂ ಸೇರಿದಲ್ಲಿ ಅಂದವಾಗಿದ್ದು

'ಅತಿಶಯಂಗಳ್' ಆಗುತ್ತಿವೆಯೆಂಬುದನ್ನೂ ಅಂಗೀಕರಿಸಲೇಬೇಕು. ಆದಿಯದು ದಕ್ಷಿಣ ಮಾರ್ಗೀಯರು ಸ್ವೀಕರಿಸಿದುದೆಂದೂ ಮತ್ತಿನವರೆಡು ಉತ್ತರ ಮಾರ್ಗೀಯರದಾಗಿ ಕನ್ನಡ ದಲ್ಲಿ ಸಂಗಮವಾದುದೆಂದೂ ಭಾವಿಸಬೇಕು.[1] ಹೀಗೆ ಕನ್ನಡದಲ್ಲಿ ಈ 'ಮೂಱುಂ ಅತಿಶಯಂಗಳ್'. ಆದರೆ ಹೀಗೆ 'ಅತಿಶಯ'ಗಳಲ್ಲದೆ, ಅಥವಾ 'ಪ್ರಾಸಾಭಾಸಂಗಳ್' ಎಂದು ಅವನೇ ಹೇಳುವ ಮೂರು ಪ್ರಾಸಂಗಳೆಂದರೆ 'ಶಾಂತಪ್ರಾಸ', 'ವರ್ಗಪ್ರಾಸ', 'ಸಮೀಪಪ್ರಾಸ'ಗಳೆಂಬುದು ಸಿದ್ಧವಾಗುತ್ತಿದೆ. ಇವುಗಳೊಳಗೆ 'ಶಾಂತಪ್ರಾಸ'ವು ಸಂಸ್ಕೃತ ದೇಶಿಗಳ ಮಿಶ್ರಮಾರ್ಗವೆಂಬುದನ್ನೂ, ಮತ್ತಿನವುಗಳು ಸಂಸ್ಕೃತದಿಂದಲೇ ಹರಿದು ಬಂದು ಕನ್ನಡದಲ್ಲಿ ಬೆರಸಿ ಮಾಸಲಾರಂಭಿಸಿದವುಗಳೆಂಬುದನ್ನೂ, ಆದುದರಿಂದಲೇ ಅವು 'ಪ್ರಾಸಾ ಭಾಸ'ಗಳೆಂಬುದನ್ನೂ ಗಮನಿಸಬೇಕು.

## ಚಿತ್ರಬಂಧಗಳು

ಸಮ ವಿಷಮಾದಿ ಬಂಧಗುಣ ಘಟಕಗಳಾದ ಅಕ್ಷರಗಳು ನಿಯಮಿತ ಸ್ಥಾನಗಳಲ್ಲಿ ನೆಲಸಿ ಪ್ರಾಸರೂಪ ಶಬ್ದಾಲಂಕಾರಗಳೆನಿಸಿದವು. 'ಆ ಪ್ರಾಸ' ಎಂಬ ಶಬ್ದಾಲಂಕಾರ ಸಾಮಾನ್ಯ ರೂಪವೇ ವಿಸ್ತರಿಸಿ ಹರಿದು ಅಲಂಕಾರದ ಎಲ್ಲೆಯನ್ನು ದಾಟಿತು ; ಆ ಮೇಲೆಯೂ ಹಬ್ಬಿ ನಾನಾ ಮುಖವಾಗಿ ಹರಡಿತು. ಅನೇಕ ಭೇದಗಳನ್ನೊಳಗೊಂಡ ಆ ಶಬ್ದಾಲಂಕಾರಕ್ಕೆ 'ದುಷ್ಕರ' ಎಂದೂ 'ಚಿತ್ರ ವಿಚಿತ್ರ ಭಿತ್ತಿ' ಎಂದೂ ಸಾಮಾನ್ಯವಾದ ಹೆಸರುಗಳು. ಹಾಗೆ ಅರ್ಥಗುಣಗಳಾದ 'ಪ್ರಸನ್ನ' 'ಉದಾರ' ಮೊದಲಾದ ಗುಣಗಳೇ ಅರಳಿ, ಉಪಮಾದಿ ಅರ್ಥಾಲಂಕಾರಗಳೆನ್ನಿಸಿ, ಅಲಂಕಾರಸೀಮೆಯನ್ನು ಮೀರಿ ಹರಿದು, ಲಕ್ಷ್ಯಾರ್ಥ, ವ್ಯಂಗ್ಯಾರ್ಥ ಪ್ರಪಂಚಗಳೆನ್ನಿಸಿ ಹರಿದಿವೆ, ಭಾವರಸಗಳಾಗಿ ಸುರಿದಿವೆ—ಎಂಬುದನ್ನು ಮುಂದೆ ವಿಸ್ತರಿಸಲಿದ್ದೇವೆ. ಆದರೆ, ಅರ್ಥಪ್ರವಾಹವದು ಲೋಕಾನಂದಕರವಾಗಿ ಪ್ರಪಂಚದ ಏಳಿಗೆಯಲ್ಲಿ ಸಂಗಮವಡೆದರೆ, ಶಬ್ದಾಲಂಕಾರದ ವೃದ್ಧಿ ಚಿತ್ರಬಂಧದಲ್ಲಿ ಹಬ್ಬಿ, ಅಲ್ಲಿಯೇ ಮಬ್ಬಾಯಿತು ; ಮಾತ್ರವಲ್ಲ, ಅದಕ್ಕೆ ಕ್ರಮವಾಗಿ ಆಧಾರಗಳಾದ ಬಂಧಗುಣ ಶಬ್ದಾ ಲಂಕಾರಗಳು ಅಳಿಯಲಾರದೆ ಉಳಿದರೂ, ಅವುಗಳಲ್ಲಿ ಸಾಮಾನ್ಯ ಜನಾದರವಿಲ್ಲವಾಗಿದೆ. ಆದರೆ, ಕಾವ್ಯಪುರುಷನಿಗೆ ಅರ್ಥಗುಣವು ಜ್ಞಾನೇಂದ್ರಿಯದಂತೆ ; ಶಬ್ದಗುಣವು ಕರ್ಮೇಂದ್ರಿಯದಂತೆ. ಅವುಗಳನ್ನೆಲ್ಲ ಒಟ್ಟೊಟ್ಟಿಗೆ ತಕ್ಕಂತೆ ಬಳೆಯಿಸುವುದು ಆವಶ್ಯಕ. ಬರಿಯ ಕರ್ಮೇಂದ್ರಿಯಗಳ ಬಾಹ್ಯಾಧಾರವಾದ ಶರೀರಮಾತ್ರವನ್ನೆ ಪೋಷಿಸಿದರೆ, ಸಮಾಜವು ಸುಸಂಸ್ಕೃತವಲ್ಲದ ಯೋಧರ ವರ್ಗದಂತಾದೀತು. ಅಂಥ ಅಸಂಸ್ಕೃತ

---

[1] ಈ ಕಡೆಯ ಎರಡು ಪ್ರಾಸಗಳ ವಿಶಿಷ್ಟ ಪ್ರಾಂತೀಯತೆ 'ಕವಿರಾಜಮಾರ್ಗ'ದಲ್ಲಿ ತೋರುವು ದಿಲ್ಲವೆಂಬುದು ನಿಜ. ಆದರೆ ದಂಡ್ಯಾಚಾರ್ಯನು ಶ್ಲೇಷಗುಣ ವಿವರಣ ಸಂದರ್ಭದಲ್ಲಿ ಔತ್ತರೇಯರು ಅನುಪ್ರಾಸ ಪ್ರಿಯರೆಂಬುದನ್ನು 'ಅನುಪ್ರಾಸಧಿಯಾಗೌಡೈಸ್ತದಿಷ್ಟಂ ಬಂಧ ಗೌರವಾತ್' (ಕಾವ್ಯಾದರ್ಶ, i, 44)—ಎಂದು ಸೂಚಿಸಿರುವುದರಿಂದ, ಆ ಭಾವನೆ ನಿರಾಧಾರ ವಲ್ಲ.

ಸಮಾಜದ ಪರಿಣತಿ ಹೇಗೋ ಹಾಗೆ 'ಚಿತ್ರಬಂಧ'ವೆಂಬುದು. ಇದರಿಂದ ಈ 'ಚಿತ್ರಬಂಧ'ವು ಪ್ರಯೋಜನಕಾರಿಯಲ್ಲವೆಂದಂತಾಯಿತು. ಆದರೂ, ಪದಬಂಧವನ್ನು, ವಿಶೇಷವಾಗಿ ಶಬ್ದಾಲಂಕಾರವನ್ನು, ಸಾಮಾನ್ಯವಾಗಿಯಾದರೂ ಪಳಗಿಸದಿರುವುದು ಮಾರ್ಗವಲ್ಲ. ಹಿಂದಿನ ಕಾಲದಲ್ಲಿ 'ಚಿತ್ರಬಂಧ'ಗಳ ಹೊಲಬು ಹೇಗಿದ್ದುದೆಂದು ತಿಳಿಯಲೆಳಸುವ ಕುತೂಹಲಿಗಳ ಇಷ್ಟಪೂರ್ತಿಗಾಗಿ ಅವುಗಳನ್ನು ಒಂದಿಷ್ಟು ಸಂಗ್ರಹವಾಗಿ ಸೂಚಿಸುತ್ತೇವೆ.

'ಪದಗತ ಪ್ರತ್ಯಾಗತ', 'ಪಾದಗತ ಪ್ರತ್ಯಾಗತ', 'ಗೂಢಚತುರ್ಥ', 'ಏಕಾಕ್ಷರಿ', 'ದ್ವ್ಯಕ್ಷರಿ', 'ಅತಾಲವ್ಯ', 'ನಿರೋಷ್ಠ್ಯ', 'ಸರ್ವತೋಭದ್ರ', 'ನಿರುತ್ತರ', 'ಗೋಮೂತ್ರಿಕ', 'ಯಮಕ', 'ಗೋಪಿತ ಕ್ರಿಯ', 'ಅರ್ಧಭ್ರಮ', 'ಚಕ್ರ', 'ಮುರಜ'—ಹೀಗೆ ಹದಿನೈದು ಬಗೆಯ ಬಂಧಭೇದಗಳು ಇಲ್ಲಿ ವಿಸ್ತೃತವಾಗಿವೆ. ಇವಲ್ಲದೆ ಗ್ರಂಥಾಂತರಗಳಲ್ಲಿ ನಾನಾ ರೀತಿಯ ಚಿತ್ರಬಂಧಗಳು ಲಕ್ಷಣ ಲಕ್ಷ್ಯಗಳೊಡನೆ ವಿವೃತವಾಗಿವೆ. ಇವುಗಳೊಳಗೆ 'ಗೋಮೂತ್ರಿಕ' ಮೊದಲಾದ ಆಯಾ ಚಿತ್ರಗಳನ್ನು ಬರೆದು ಅದರೊಳಗೆ ಬಂಧ ಶ್ಲೋಕದ ಅಕ್ಷರಗಳನ್ನು ಕ್ರಮವಾಗಿ ಬರೆದು ಓದುವಂತಿರಬೇಕು. ಇವುಗಳೊಳಗೆ ಒಂದಾದ 'ಚಕ್ರಬಂಧ'ವನ್ನು ಹಿಂದೆ 'ಕವಿರಾಜಮಾರ್ಗ'ದ ಕರ್ತೃತ್ವವಿಚಾರ ವಿವೇಚನಾವಸರದಲ್ಲಿ ವಿಸ್ತರವಾಗಿ ವಿವರಿಸಿದ್ದೇವೆ.[1] ಉಳಿದ ಹಲವು ಬಂಧಗಳು ಮಾತೃಕೆಯಲ್ಲೆ ತಪ್ಪುಬಿದ್ದು ಹಾಗೆ ಅಚ್ಚಾಗಿರುವುದರಿಂದ, ಅವುಗಳನ್ನು ವಿವೇಚಿಸಲು ಅಸಾಧ್ಯವಾಗಿದೆ. ಆದರೆ, ಕೆಲವನ್ನಾದರೂ ಇಲ್ಲಿ ಪರಿಶೀಲಿಸಬಹುದು.

'ಗತ ಪ್ರತ್ಯಾಗತ'ದೊಳಗೆ 'ಪದಗತ ಪ್ರತ್ಯಾಗತ', 'ಪಾದಗತ ಪ್ರತ್ಯಾಗತ', 'ಸಮಸ್ತಗತ ಪ್ರತ್ಯಾಗತ', 'ಅರ್ಧಗತ ಪ್ರತ್ಯಾಗತ'—ಎಂದು ನಾಲ್ಕು ಭೇದಗಳಿವೆ. ಆದಿಯ ಎರಡರ ಉದಾಹರಣಗಳಲ್ಲಿ ತಪ್ಪು ಬಲವತ್ತರವಾಗಿ ಹೆಣೆದಿರುವುದರಿಂದ, ಅವುಗಳ ವಿವೇಚನೆಗೆ ಆಸ್ಪದವಿಲ್ಲವಾಗಿದೆ. ಮತ್ತಿನ ಎರಡನ್ನು ನೋಡಿರಿ :

**ಸಮಸ್ತಗತ ಪ್ರತ್ಯಾಗತ**

ಒಂದನೆಯ ಪಾದವನ್ನೋದಿ ತುದಿಯ ಅಕ್ಷರದಿಂದ ಹಿಂದೆ ಓದಿದರೆ, ಎರಡನೆಯ ಪಾದವಾಗಿರಬೇಕು. ಹಾಗೆಂದರೆ, ಆ ಎರಡನೆಯ ಪಾದದ ತುದಿಯ ಅಕ್ಷರದಿಂದ ಹಿಂದಕ್ಕೋದಿದಲ್ಲಿ ಒಂದನೆಯ ಪಾದವೇ ಆಗುವುದು.

ಅದಕ್ಕೆ ದೃಷ್ಟಾಂತ—

ನಾದಭೇದನನಾದಾನಾ ನಾದಾನಾಮದನೋದನಾ
ನಾದನೋದಮನಾದಾನಾ ನಾದಾನಾನದಭೇದನಾ —(ii, 115)

ಓದಿ ನೋಡಿದಲ್ಲಿ ಮೇಲೆ ಹೇಳಿದ ಲಕ್ಷಣಕ್ಕೆ ಸರಿಯಾಗಿ ಈ ಪದ್ಯವಿರುವುದು ಗೊತ್ತಾಗುತ್ತದೆ. ಈ ಪದ್ಯದ ಅರ್ಥವೇನೆಂದು ವಿವೇಚಿಸಿ ವೃಥಾ ಕಷ್ಟಗೊಳ್ಳಲಾರೆವು. ಆದರೂ ಇದು ನೃಪತುಂಗನ ಅಲ್ಲವೆ ಒಬ್ಬ ಧನುರ್ವಿದ್ಯಾನಿಪುಣ ವೀರನ ವರ್ಣನೆಯಾಗಿರುವಂತೆ

[1] ಇದೇ ಗ್ರಂಥ, ಪುಟಗಳು ೭೫-೮೩.

ತೋರುತ್ತಿದೆ. 'ನಾದಭೇದನನ್ ನಾನಾದಾನ(ದಿಂದ) ಅಮದ (ಶಿಷ್ಟ)ರನ್ನು ನೋದನಾನ್ (ಪ್ರೋತ್ಸಾಹಿಸುವವನು) ಆದ ಆದಾನ (ಕರಗ್ರಹಣ) ಅನಾದಾನ (ಅಗ್ರಹಣ)ಗಳಿಂದ ನದಭೇದನಾ(ನ್) (ನದಿಯಲ್ಲಿ ಮಿಾಯುವವನು) ಆದನ್'—ಎಂದು ಅರ್ಥವಾಗಿರ ಬಹುದು.

**ಅರ್ಥಗತ ಪ್ರತ್ಯಾಗತ**

ನಾನಮಾನಮಸೇನಾಸೇ ಸೇನಾಃಸೇಮನಮಾನನಾ
ದೀನಮಾನಮನಾನಾದೀ ದೀನಾನಾಮನಮಾನದೀ —(ii, 116)

ಇದರ ಸ್ವರೂಪವು ವಿಶದವಾಗಿದೆ. ಹಿಂದಿನ 'ಪಾದಗತ ಪ್ರತ್ಯಾಗತ'ದ ಉದಾಹರಣಗಳಾದ ಎರಡು ಪದ್ಯಗಳ ಕಡೆಯ ಭಾಗವು 'ನಾನದೇಸಸೇ ದೇಸನಾ' ಎಂದಿವೆ. ಆ ವರೆಗಿನ ಅಂಶಗಳು ಮಾಸಿ ಹೋಗಿದ್ದರೂ ಈ ಭಾಗದಲ್ಲಿ ಲಕ್ಷ್ಯವು ಸೇರಿರುವುದನ್ನರಿಯಬೇಕು.

**ಗೂಢಚತುರ್ಥ**

ಘನಸ್ತನಿತಮುಂ ಕೇಕಿ
ಸ್ವನಮುಂ ನೀರಧಾರೆಯುಂ
ಮನಂ ಬೆರ್ಚಿರ್ಕುಮಿಂತೆತ್ತಂ
ಘನಮಿಂತು ಘನಸ್ತನಿ

—ಮುದರಾಸು ಪ್ರತಿ, (ii, 120)

ಈ ಪದ್ಯವು 'ಗೂಢಚತುರ್ಥ' ಎಂಬ ಚಿತ್ರಕಾವ್ಯಕ್ಕೆ ಉದಾಹರಣವಾಗುವುದನ್ನು ಸಿದ್ಧಾಂತಿಸಬೇಕಾದರೆ, ಇದರ ಸಂದರ್ಭವನ್ನೂ ಅರ್ಥತಾತ್ಪರ್ಯಗಳನ್ನೂ ಮನಗಾಣು ವುದು ಅವಶ್ಯ. ವಿಲಾಸಿ ಪುರುಷನೊಬ್ಬನು ಕಾರ್ಗಾಲದ ದುರ್ದಿನದಂದು ತನ್ನ ಬಳಿಯಿದ್ದ ಶ್ಯಾಮಲಾಂಗಿಯಾದ ಪ್ರಿಯೆಯನ್ನು ಕುರಿತು ಆಡುವ ಮಾತಿದು—

"'ಘನಸ್ತನಿತ'ವೂ (1. ಗುಡುಗೂ 2. ಶ್ಯಾಮವರ್ಣಸುಂದರವಾದ ಸ್ತನಗಳಿರು ವಿಕೆಯೂ) 'ಕೇಕಿಸ್ವನ'ವೂ (1. ಪ್ರಕೃತವಾದ ನವಿಲುಗಳ ಕೂಗೂ 2. ಉದ್ವೃದ್ಧವಾಗಿ ಹರಿಯುವ ಪ್ರೇಮ ಪ್ರವಾಹವೂ) ಇಂತು ಎತ್ತೆತ್ತಲೂ ಕ್ರಮವಾಗಿ ಬಾನು, ನೆಲ ಬಾನ್ನೆಲಗಳಲ್ಲಿ—ಎಂದರೆ ಕ್ರಮವಿಡಿದು ಹೃದಯಾಕಾಶ, ಹೃದಯಭೂಮಿಕೆ, ಚಿತ್ತ ವೃತ್ತಿಗಳಲ್ಲಿ—ವ್ಯಾಪಿಸಿ, ನನ್ನ ಮನಸ್ಸನ್ನು ಭಯಗೊಳಿಸುವುವು. 'ಎಲೆ ಘನಸ್ತನಿ'ಯೆ (ಶ್ಯಾಮಪಯೋಧರವಂತೆ ಸ್ತನವುಳ್ಳಾಕೆಯೆ), ಈ 'ಘನ'ವು (1. ಮುಗಿಲು 2. ಘನ ಕಾಲದ ಪರಿಣಾಮವು) ಎತ್ತೆತ್ತಲೂ ಹೀಗಾಗಿದೆ. ಇದು ನನಗೆ ಮಾತ್ರವಲ್ಲ, ಸಾಮಾನ್ಯವಾಗಿ ಎಲ್ಲರ ಹೃದಯದಲ್ಲೂ ಇದೇ ಪರಿಣಾಮವನ್ನೊದಗಿಸಬಲ್ಲುದು."

'ಘನಮಿಂತು ಘನಸ್ತನಿ' ಎಂಬುದು ಈ ಶ್ಲೋಕದ ಚತುರ್ಥಪಾದ. ಇದರೊಳಗಿನ 'ಘನಮಿಂತು' ಎಂಬ ಪದವು ಹಿಂದಣ ಮೂರು ಪಾದಗಳಲ್ಲಿ ತೋರುವ ಪ್ರಥಮಾರ್ಥ

ವಾದ 'ಮೊಳಗು, ಮಯೂರ ಧ್ವನಿ, ಜಲಧಾರೆ'ಗಳೊಡನೆ ತನ್ನ ವರ್ಷಾಕಾಲ ಸಂಬದ್ಧತೆಯನ್ನೇ ಹೆಚ್ಚಾಗಿ ಹರಡುತ್ತಿದೆ; ಆದರೆ ಅದೇ ಪಾದದ 'ಘನಸ್ತನಿ' ಎಂಬ ಸಂಬೋಧನ ಪದದಿಂದ ಉದ್ಬುದ್ಧವಾಗಿ, 'ಘನಸ್ತನಿತ್ವ', 'ಘನಕೇಕಿಸ್ವನ', 'ಘನನೀರಧಾರೆ' ಎಂಬ ಎರಡನೆಯ ಅರ್ಥವನ್ನು ಗೂಢವಾಗಿಯೇ ಆದರೂ ಮಿರುಗಿಸುತ್ತಿದೆ. ಗೂಢಾರ್ಥಕವಾದ ಈ 'ಘನಮಿಂತು ಘನಸ್ತನಿ' ಎಂಬ ವಚನವು ಚತುರ್ಥಪಾದದಷ್ಟೇ ಅಲ್ಲ; ಹಿಂದಿನ ಪಾದಗಳಲ್ಲಿ ವಿಸ್ಪೃತವಾದ 'ಘನಸ್ತನಿತ್ವ, ಕೇಕಿಸ್ವನ, ನೀರಧಾರೆ'ಗಳೂ ಮೂರಾದುದರಿಂದ, ಇದು ಚತುರ್ಥವಾಗುತ್ತಿದೆ. ಹೀಗೆಯೂ ಇದು ನಾಲ್ಕನೆಯದಾಗಿರುವುದರಿಂದ, ಇದು ಉಭಯ ದೃಷ್ಟಿಯಲ್ಲಿಯೂ ಗೂಢಚತುರ್ಥವೆನ್ನಿಸುತ್ತಿದೆ ಎಂದು ತೋರುವುದು.

ಈ ದುಷ್ಕರಭಾಗವನ್ನು ನಾಗವರ್ಮನೂ ವರ್ಣಿಸಿದ್ದಾನೆ. ಅವನ ಗ್ರಂಥದಲ್ಲಿ ತೋರುವ ಗೂಢಚತುರ್ಥದ ಸ್ವಭಾವವನ್ನು ನೋಡುವ—

ಆತನಲ್ಲದನಂ ಮೆಚ್ಚೆಂ
ಮಾತೇಂ ತಾಂ ಮಾರನಾದೊಡಂ
ಕೇತನಂ ರತಿರಾಗಕ್ಕೆ
ಕೇತನಂ ತಾರ ನಲ್ಲನಂ[1]

ಇದು ದೂತಿಯನ್ನು ಕುರಿತು ವಿರಹಕಾತರಳಾದೊಬ್ಬ ನಾಯಿಕೆಯು ನುಡಿದ ನುಡಿ. ಇಲ್ಲಿ, ಚತುರ್ಥಪಾದಗತವಾದ ಕಡೆಯ 'ತಾರ ನಲ್ಲನಂ' ಎಂಬುದು ಸ್ಫುಟಾರ್ಥಕವಾಗಿ ಕಂಡರೂ, 'ಕೇತನಂ' ಎಂಬ ಆದಿಯ ವಿಶೇಷಣವು ಅಸ್ಫುಟಾರ್ಥಕವಾಗಿಯೇ ಪರಿಣಮಿಸಿದೆ. 'ಕೇಶವ' ಪದದ ತದ್ಭವ ರೂಪವು 'ಕೇತವ' ಎಂದಿರಬೇಕಾದರೂ, ರೂಢವಾಗಿ 'ಕೇತ' ಎಂದು ಇಂದಿಗೂ ಬಳಕೆಯಲ್ಲಿದೆ. ಪ್ರಕೃತ ಪದ್ಯವು, ಅಂತಹ 'ಕೇತ' ಎಂಬ ನಲ್ಲನನ್ನು ದೂತಿಯ ಮೂಲಕವಾಗಿ ಬರಿಸಲಿಚ್ಛಿಸಿದ ನಾಯಿಕೆಯೊಬ್ಬಳ ಮಾತಾಗಿರಬೇಕು. ಆ 'ಕೇತ'ನೆಂಬ 'ನಲ್ಲ'ನೆಂದರೆ 'ರತಿರಾಗಕ್ಕೆ ಕೇತನಂ (ಧ್ವಜರೂಪನು)' ಎಂದು ತಾತ್ಪರ್ಯ. ಇದರಿಂದ ಅರ್ಥವು ವಿಶದವಾಗಿ, ಹಿಂದೆ ದೃಷ್ಟಾಂತಿಸಿದ 'ಕವಿರಾಜಮಾರ್ಗ'ದ ಲಕ್ಷ್ಯಕ್ಕೆ ಅನುವಾಗಿ ಇದೂ 'ಗೂಢಚತುರ್ಥ'ವಾಗುತ್ತಿದೆ. 'ಆತನಲ್ಲದನಂ ಮೆಚ್ಚೆಂ' ಎಂಬ ಮೊದಲನೆಯ ಪಾದದ, 'ಮಾತೇಂ ತಾಂ ಮಾರನಾದೊಡಂ' ಎಂಬ ಎರಡನೆಯ ಪಾದದ ಮತ್ತು 'ಕೇತನಂ ರತಿರಾಗಕ್ಕೆ' ಎಂಬ ಮೂರನೆಯ ಪಾದದ ಪದಗಳು ಮಾತ್ರವಲ್ಲ, ಅರ್ಥಗಳೂ ಹಿಂದಿನವರಂತೆಯೇ ವ್ಯಕ್ತವಾಗಿದ್ದು ಚತುರ್ಥಪಾದವು ಮಾತ್ರ, ಹಿಂದಿನವರಂತೆ, ಇಲ್ಲಿಯೂ ಗೂಢವಾಗಿವೆ. ಈ ಸಂದರ್ಭದಲ್ಲಿ ಸೂಚಿಸಬೇಕಾದ ಇನ್ನೊಂದು ವಿಷಯವಿದೆ. ಈ ಪದ್ಯದ ತೃತೀಯ ಪಾದಾಂತವಾದ 'ಕ್ಕೆ' ಎಂಬ ಹ್ರಸ್ವದ್ವಿತ್ವವು ಮೂಲ ಮಾತೃಕೆಯಲ್ಲಿ ದೀರ್ಘವಾಗಿದ್ದಿರಬೇಕೆಂದು ತೋರುತ್ತದೆ. ಹಾಗಿದ್ದಲ್ಲಿ, 'ರತಿರಾಗಕ್ಕೆ ಏಕೆ ?....ಏತನಂ....' ಎಂದು ಪದಚ್ಛೇದವಾಗಿ, 'ಏತನಂ'

[1] ನಾಗವರ್ಮನ 'ಕರ್ಣಾಟಕ ಕಾವ್ಯಾವಲೋಕನ' (ಮೈಸೂರು ಪ್ರಾಚ್ಯಗ್ರಂಥ ಭಂಡಾರದ ಪ್ರಕಟನೆ, ದ್ವಿತೀಯ ಮುದ್ರಣ), ಪದ್ಯ ೫೯೧.

ಎಂಬುದು 'ನಲ್ಲನಂ' ಎಂಬುದಕ್ಕೆ ವಿಶೇಷಣವಾಗುತ್ತಿದೆ; 'ಕೇತ' ಎಂದು ಆತನ ಹೆಸರೇ ಅಲ್ಲವಾಗುತ್ತಿದೆ. ಇದರಿಂದ ಆ 'ನಲ್ಲ'ನೆಂದರೆ 'ರತಿರಾಗಕ್ಕೆ ಕೇತನಂ' ಎಂದರೆ ಸೌಂದರ್ಯ ಸಮಾನ ಪ್ರೇಮಗುಣಾದಿಗಳಿಗೆ ಧ್ವಜ ಸ್ವರೂಪನು' ಎಂದು ಮಾತ್ರವೇ ಹೇಳುವುದು ಏಕೆ?—ಅವನು ತನ್ನ ಹೃದಯಾಂತರದೊಳಗಿನ 'ರತಿರಾಗ' ಜಲ(ರಸ)ವನ್ನು 'ಏತದಂತೆ ಮೇಲಕ್ಕೆ ಏರಿಸಿದವನೂ ಹೌದು'—ಎಂಬ ತಾತ್ಪರ್ಯವಾಗುವುದು. ಅದರಿಂದ, ಹಿಂದೆ ಸೂಚಿಸಿದ 'ಆತನಲ್ಲದನಂ ಮೆಚ್ಚೆಂ' ಎಂಬುದೂ ಸಮರ್ಥಿಸಲ್ಪಟ್ಟಂತಾಗುವುದು. ಈ ದೃಷ್ಟಿಯಿಂದ ಆ ಶ್ಲೋಕವನ್ನು ವಾಚಕರಿಗಾಗಿ ಹೀಗೆ ಮಾರ್ಪಡಿಸಿತೋರಿಸುತ್ತೇವೆ—

ಆತನಲ್ಲದನಂ ಮೆಚ್ಚೆಂ
ಮಾತೇಂ ತಾಂ ಮಾರನಾದೊಡಂ
ಕೇತನಂ ರತಿರಾಗಕ್ಕೇ
ಕೇತನಂ ತಾರ ನಲ್ಲನಂ—

ಈ ರೂಪದಿಂದ 'ಗೂಢಚತುರ್ಥ'ತೆ ಮತ್ತಷ್ಟು ಸಾರ್ಥಕವಾಗುವುದೆಂದು ನಮ್ಮೆಣಿಕೆ.

ಮುಂದಿನ ಏಕಾಕ್ಷರ, ದ್ವ್ಯಕ್ಷರ, ಅತಾಲವ್ಯ, ನಿರೋಷ್ಠ್ಯ, ಸರ್ವತೋಭದ್ರ, ಗೋಮೂತ್ರಿಕ, ಯಮಕ, ಅರ್ಧಭ್ರಮಣ, ಮುರಜ—ಎಂಬ ಬಂಧಗಳು ಒಂದಿಷ್ಟು ಸುಲಭಗಳಾದುದರಿಂದ, ಅವುಗಳನ್ನೆಲ್ಲ ಇಲ್ಲಿ ವಿಸ್ತರಿಸಬಯಸುವುದಿಲ್ಲ. ಆದರೆ 'ನಿರುತ್ತರ', 'ಕ್ರಿಯಾಗೋಪಕ (ಗೋಪಿತಕ್ರಿಯ)'—ಎಂಬವುಗಳಲ್ಲಿ ಹಿಂದಿನ ಗೂಢಚತುರ್ಥದಲ್ಲಿರುವಂತೆಯೇ ಒಂದಿಷ್ಟು ಸವಿಯಿರುವುದರಿಂದ, ಅವುಗಳನ್ನು ಸ್ವಲ್ಪಮಟ್ಟಿಗೆ ವಿವೇಚಿಸಬೇಕಾಗಿದೆ.

ನಿರುತ್ತರ

ಪೆಱನಾವಂ ಧರಾಚಕ್ರಕ್ಕೆಱೆಯಂ ಕೆಳೆಯಪ್ಪವಂ
ನೆಱೆಯಾರೆಣೆಯೆಂಬನ್ನಂ ಕುಱಿತಬ್ಧಿಗೆ ಬನ್ನಮುಂ —(ii, 125)

ಮಹಾರಾಜನೊಬ್ಬನ ವರ್ಣನೆಯಿದು. 'ಅಬ್ಧಿಗೆ ಬನ್ನಮುಂ ಕುಱಿತು (ಉದ್ದೇಶಿಸಿ ಅಥವಾ ಮಾಡಿ)' ಎಂಬಲ್ಲಿ, 'ಅಗ್ಗಳ'ವಾದ ಉದಾರಗುಣ ಅಥವಾ ಅತಿಶಯೋಕ್ತಿ ಎಂಬ ಗುಣಾಲಂಕಾರಗಳೊಳಗೆ ಒಂದಾದರೆ, ಇದು ನೃಪತುಂಗಪರವಾದ ಕಾವ್ಯವೊಂದರಿಂದ ಉದ್ಧರಿಸಿದ ಪದ್ಯವಿರಬಹುದು; ಹಾಗಲ್ಲದೆ, ಸ್ವಾಭಾವಿಕ ವರ್ಣನಾ ಮಾತ್ರವಾದರೆ, ಅವನ ತಂದೆಯಾದ ಗೋವಿಂದರಾಜನ ಪರವಾದ ಯಾವುದೋ ಕಾವ್ಯದಿಂದ ಉದ್ಧರಿಸಿದುದಾಗಿರಬಹುದು. ಅಂತಹ ಎರಡು ಬಗೆಯ ಕಾವ್ಯಗಳೂ ಹಿಂದೆಯೇ ರಚಿತವಾಗಿದ್ದುವು ಎಂಬುದನ್ನು ಈ ಮೊದಲೇ ಸೂಚಿಸಿದ್ದೇವೆ[1]. ಅದಂತಿರಲಿ; ಪ್ರಶ್ನೋತ್ತರಾದಿ

[1] ಇದೇ ಗ್ರಂಥ ಪುಟ ೨೯–೩೦, ೩೪–೩೫.

'ಹೇಳಿಕಾ' ಭೇದಗಳು ಇನ್ನೂ ಹಲವಿದ್ದವೆಂಬುದು ಇತರ ಲಕ್ಷಣ ಗ್ರಂಥಗಳಿಂದಲೂ 'ಕಾವ್ಯಾವಲೋಕನ'ದಿಂದಲೂ ತಿಳಿದುಬರುತ್ತಿದೆ. 'ನಿರುತ್ತರ'ವು ಆ 'ಪ್ರಶ್ನೋತ್ತರ'ದೊಳಗಿನದೇ ಭೇದವಾಗಿರಬೇಕು. ಒಂದು ಪದ್ಯದೊಳಗೆ ಅಂಥ ವಿನೋದ ಚಾತುರ್ಯದ್ಯೋತಕವಾದ ಪ್ರಶ್ನವೂ ಅಂಥವೇ ಉತ್ತರವೂ ಇದ್ದಲ್ಲಿ 'ಪ್ರಶ್ನೋತ್ತರ' ಎನ್ನಿಸುವುದಾಗಿ ತೋರುತ್ತಿದೆ. ಈ ಪದ್ಯದ ಅರ್ಥವು ಹೇಗಿರಬೇಕೆಂಬುದನ್ನು ಅವಗಾಹಿಸಿರಿ; 'ಅಬ್ಧಿಗೆ (ಗೆಯ್ದು) ಬನ್ನಮಂ ಕುಱುತು (ನೋಡಿದಲ್ಲಿ) ಧರಾಚಕ್ರಕ್ಕೆ ಕೆಳೆ ಅಪ್ಪನಂ ಎಱೆಯುಂ ಆವಂ ?'—ಎಂಬುದು ಪ್ರಶ್ನೆ. 'ಎಣೆ'ಯಾಗಿ 'ಪೆಱರ್ ನೆಱೆಯಾರ್' (ಒದಗರು) ಎಂಬುದರಿಂದ ಪ್ರಶ್ನೆಯದು ನಿರುತ್ತರವೆನ್ನಿಸುತ್ತಿದೆ. ಗೋವಿಂದರಾಜನು ಹಿಮಾಲಯದಿಂದ ಹಿಡಿದು ಕನ್ಯಾಕುಮಾರಿ ಪರ್ಯಂತದ ನಮ್ಮ ಭರತ ಭೂಚಕ್ರವನ್ನಾಳಿದುದಷ್ಟೇ ಅಲ್ಲ; 'ಅಬ್ಧಿಗೆ ಬನ್ನಮಂ' ಗೈದು, ಎಂದರೆ ಸಿಂಹಳಕ್ಕೂ ದಾಳಿಯಿಟ್ಟು, ಆ ದ್ವೀಪವನ್ನೂ ತನ್ನ ಅಂಕೆಗೆ ತಂದ ಕೆಲವೇ ಮಂದಿ ಭರತ ಚಕ್ರವರ್ತಿಗಳೊಳಗೆ ಒಬ್ಬನು ಎಂಬುದನ್ನು ಹಿಂದೆಯೇ ಸಿದ್ಧಾಂತಿಸಿದ್ದೇವೆ.[1] ಅದರಿಂದ ಪೂರ್ವಕಾಲದಲ್ಲಿ 'ಅಬ್ಧಿಗೆ ಬನ್ನಮಂ ಕುಱುತು ಧರಾಚಕ್ರಕ್ಕೆ ಎಱೆಯು'ನೂ ಕೆಳೆ'ಯಾದವನೂ ಆದ ಶ್ರೀರಾಮನಂತೆ ಆ ಕಾಲದಲ್ಲಿ ಗೋವಿಂದರಾಜನಿಗಿಂತ 'ಪೆಱರ್ ನೆಱೆಯಾರ್' ಎಂಬುದು ಆಗಿದ ಕಾಲಕ್ಕೆ ಸ್ವಭಾವೋಕ್ತಿಯೇ ಸರಿ. ಆದರೂ ಉತ್ತರವು ಸರಿಯಾಗಿ ವ್ಯಕ್ತವಾಗದುದರಿಂದ, ಇದು 'ನಿರುತ್ತರ'. ಇದರಂತೆ ಇತರ ಪ್ರಶ್ನೋತ್ತರಾದಿಗಳನ್ನು ಭಾವಿಸಿಕೊಳ್ಳಬಹುದು. ಇವುಗಳನ್ನು ನಾಗವರ್ಮನು 'ಕುಸುರಿಯ ನುಡಿ'—ಎಂದರೆ ಒಳಗಿನ ಅರ್ಥವನ್ನು ಅದೊಂದು ಕೌಶಲದಿಂದ ಸೂಚಿಸುವ ಮಾತು—ಎನ್ನುತ್ತಾನೆ ('ಕಾವ್ಯಾವಲೋಕನ', ಪ. ೫೯೪).

ಕ್ರಿಯಾಗೋಪಕ—

ಅರಸಿಯದಿವ್ಯಸೇನಾದರದಿರದೀಗಡೆ ನಿಂ
ನರಸಿಯನೆಯ್ದುವಿನಂ ಪರಿಜನಮುಂ ಕಳಿಪಿಂ —(ii, 139)

ರಾಣಿಯನ್ನು ಕರೆತರಲು ಸೇನಾಸಹಿತವಾಗಿ ಪರಿಜನವನ್ನು ಕಳುಹು ಎಂದು ರಾಜಕುಮಾರನೊಬ್ಬನೊಡನೆ ವಿವೇಕಿಯಾದ ಮಂತ್ರಿಯೋ ಪೂಜ್ಯನಾದ ಹಿರಿಯನೋ ಆದ ವ್ಯಕ್ತಿಯೊಬ್ಬನು ಆಡುವ ಮಾತಿದು. '(ರಾಜಕುಲ ಮಾನ್ಯತೆಗನುವಾದ) ಲೌಕಿಕ (ಅದಿವ್ಯ) ಸೇನೆಯು ಆದರ ಲಕ್ಷಣದಿಂದ ಕೂಡಿದ ಪರಿಜನವನ್ನು ಈಗಲೆ ನಿನ್ನ ಅರಸಿಯನ್ನೆಯ್ದುವಂತೆ ಇನ್ನು (ಇಂ) ಕಳಿಪು'—ಎಂದು ಅನ್ವಯ. 'ಕಳಿಪಿಂ' ಎಂದು ಮಧ್ಯಮಪುರುಷ ಬಹುವಚನದಂತೆ ತೋರುವುದರಿಂದ ಪ್ರಕೃತಾರ್ಥವಾದ 'ಕಳಿಪು' ಎಂಬ ಕ್ರಿಯಾಪದವು ಗುಪ್ತವಾಗಿ ಭಾಸವಾಗುತ್ತಿದೆ. ಜೇಕಾದರೆ, ನಾಗವರ್ಮನಿತ್ತ ಕ್ರಿಯಾಗೋಪಕ ದೃಷ್ಟಾಂತವನ್ನೂ ಭಾವಿಸಿರಿ.

---

[1] ಇದೇ ಗ್ರಂಥ ಪುಟ ೨೧.

ಪರಿವರ್ಜಿತದೋಷನನಾ
ದರದಿಂ ದೇವಾದಿದೇವನೆಂದಿರದರೆಬರ್
ದುರಘಾವಿಲಿಪ್ತರಂ ದೇ
ವರೆಂದು ಬಗೆ ಬೆದಱಿ ದೆಸೆಗೆ ದಿಙ್ಮೂಢತೆಯಿಂ[1]

" 'ಅರೆಬರ್' ಜಿತದೋಷನಾದ ಜಿನನನ್ನು ದೇವಾದಿದೇವನೆಂದು ಭಕ್ತಿಯಿಂದ ಇರದೆ (ದೃಢನುನಸ್ಕರಾಗದೆ), ದುರಘಾವಿಲಿಪ್ತರಾದ ಇತರ ಮತೀಯ ನಾನಾ ದೇವತೆಗಳನ್ನು 'ದೇವರ್ ಎಂದು' ವಿವೇಕಿಗಳ 'ಬಗೆ ಬೆದಱಿ' ದಿಙ್ಮೂಢತೆಯಿಂದ ದಿಕ್ಕು ದಿಕ್ಕಿಗೆ ಹರಿವರು".

ಜೈನ ಮಾರ್ಗವನ್ನುಳಿದು ಕೆಲ ಮೂಢರು ಆಗ ಇತರ ಮತಾನುಯಾಯಿಗಳಾಗುತ್ತಿದ್ದರು, ಎಂದು ಆ ನೀಚಕಾಲವನ್ನು ವರ್ಣಿಸುವ ಪದ್ಯವಿದು. ಇಲ್ಲಿ 'ಪರಿವರ್ ಜಿತದೋಷನಂ' ಎಂದು ಪರಿಚ್ಛೇದ; ಆದರೆ 'ಪರಿವರ್ಜಿತ ದೋಷನಂ' ಎಂದು ಸಮಸ್ತ ಪದವಾಗಿಯೇ ಭಾಸವಾಗುವುದರಿಂದ 'ಪರಿವರ್' ಎಂಬ ಕ್ರಿಯೆ ಗುಪ್ತವಾಗಿದೆ.

ಇನ್ನು, ಕೆಲವು 'ಹೇಳಿಕೆ'ಗಳನ್ನು ಅವಧರಿಸಬೇಕು.

## ೪. ಹೇಳಿಕಾ ಭೇದಗಳು

'ಹೇಲಾ', 'ಹೇಳಿಕಾ'—ಎಂಬ ಪದಗಳು ವಿನೋದಾರ್ಥಕ ಪದಗಳು. ಸುಕವಿಗಳ ಹೃದಯಗತ ವಿನೋದದಿಂದಾಗಿ ಉದ್ಭವಿಸುವವುಗಳಾದುದರಿಂದ ಇವುಗಳು 'ಹೇಳಿಕೆ'ಗಳು. ಈ 'ಹೇಳಿಕೆ'ಯೊಳಗೆ 'ಭಾವೆ (ಭಾವೆ)', 'ನುಸುಳ್'; ಅಸ್ಪಷ್ಟಾಕ್ಷರ) ಅಸ್ಪಷ್ಟಾರ್ಥ)', 'ವರ್ಣವ್ಯತ್ಯಯ (ಉಬ್ಬಿವು?)', 'ಬಿಂದುಚ್ಯುತಿ', 'ಒನರ್ಪಡಿ', 'ವರ್ಣಚ್ಯುತ', 'ಸಮಂತಿ' ಎಂಬ ಏಳು ಭೇದಗಳನ್ನು ಹೇಳುತ್ತಾನೆ. ನಾಗವರ್ಮನ ಭೇದಗಳೂ ಏಳೇ ಆದರೂ 'ನುಸುಳ್', 'ಒನರ್ಪಡಿ', 'ಭಾವೆ', 'ಅಸ್ಪಷ್ಟಾರ್ಥ', 'ಉಬ್ಬಿವು', 'ನಾಮಾಂತರಿತ', 'ಕುಸುರಿಯ ನುಡಿ'—ಎಂದು ರೂಪಿತಗಳಾಗಿವೆ. ಈ ಎರಡು ಗ್ರಂಥಸ್ಥ ಭೇದಗಳಲ್ಲಿ ಕೆಲವು ರೂಪಾಂತರಗಳಾದರೂ ಕೆಲವು ಏಕರೂಪಗಳಾಗಿರುವುದರಿಂದ, ಎಲ್ಲವೂ ಅಭಿನ್ನಗಳಾಗಿರಬಹುದೆಂದು ತೋರುತ್ತಿದೆ. ಅದರಿಂದ ಅವುಗಳನ್ನು ಹೋಲಿಸಿಕೊಂಡೇ ಪರಾಂಬರಿಸುವ—

### i. ಭಾವೆ

ಸುವಿಹಿತಮಪ್ಪ ಕರ್ಣಪೂರೋತ್ಪಲ [ಮು]ಂ[2]
ಧವಳ ವಿಲೋಚನೆಯ ಗುಣಸುಂದರ [ಮು]ಂ

---

[1] ನಾಗವರ್ಮನ 'ಕರ್ಣಾಟಕ ಕಾವ್ಯಾವಲೋಕನ' (ಮೈಸೂರು ಪ್ರಾಚ್ಯ ಗ್ರಂಥ ಭಂಡಾರದ ಪ್ರಕಟನೆ, ದ್ವಿತೀಯ ಮುದ್ರಣ), ಪದ್ಯ ೫೪೯.

[2] ಎರಡು ಪ್ರತಿಗಳಲ್ಲೂ 'ಮ' ಎಂದೇ ಇದೆ. 'ಮು' ಎಂದು ಮಾರ್ಪಡಿಸಿಕೊಂಡುದು ನಾವು.

ಕಿವಿವರಂ ನೀಳ್ದ ನಯನಯುಗದೊಳೊ
ಪ್ಪುವವಲಾನನಯವದೇಕೆ ಕಳೆಯಿಸವೆ!ಟ್ಟಿ ಪ್ರಿಯೆಯಂ —(ii, 143)

ಪ್ರಿಯೆಯನ್ನು ತ್ಯಜಿಸಿದ ಮೇಲೆ ಪಶ್ಚಾತ್ತಾಪಗೊಳ್ಳುತ್ತಾ ಆಕೆಯ ಗುಣ ಸೌಂದರ್ಯ ಗಳನ್ನು ನೆನೆದು ಮರುಗುವ ನಾಯಕನ ಮಾತಿದು. ಆ ಕಾಲದಲ್ಲಿ ಪ್ರಸಿದ್ಧವಾದ ಕನ್ನಡ ರಾಮಾಯಣ ಗ್ರಂಥವೊಂದು ಇದ್ದುದು 'ಕವಿರಾಜಮಾರ್ಗ'ದಲ್ಲಿರುವ ಹಲವು ದೃಷ್ಟಾಂತ ಪದ್ಯಗಳಿಂದ ಗೊತ್ತಾಗಿದೆಯಷ್ಟೆ. ಈ ಪದ್ಯವು ಬಹುಶಃ ಆ ರಾಮಾಯಣದೊಳಗಿನ ಶ್ರೀರಾಮನ ಸೀತಾಪರಿತ್ಯಾಗಾನಂತರದ ವಿಲಾಪರೂಪ ಪದ್ಯದೊಳಗೆ ಒಂದಾಗಿರ ಬೇಕೆಂದು ತೋರುತ್ತಿದೆ. 'ಕಿವಿವರೆಗೆ ನೀಳ್ದ ನಯನದ್ವಯದೊಳಗೆ ಅವಯವದೆ (ಎಂದರೆ ಆ ಅವಯವದಲ್ಲಿ (ಕಣ್ಣಿನಲ್ಲಿ) ಸ್ವಾಭಾವಿಕಾನುಗುಣವಾಗಿ) ಗುಣಸುಂದರವಾದ ಕರ್ಣ ಪೂರೋತ್ಪಲಗಳುಳ್ಳ—ಕಿವಿವರೆಗೆ ನೀಳ್ದ ನಯನವೇ ಕರ್ಣಪೂರೋತ್ಪಲವಾಗಿ ತೋರುವ—ಪ್ರಿಯೆಯನ್ನು ಏಕೆ ತ್ಯಜಿಸಿಬರುವಂತೆ ವಿಧಿಸಿದೆನೋ!'—ಎಂಬುದು ಪದ್ಯಾರ್ಥ. ಇಲ್ಲಿ ಭಾವಾರೂಪ ವಿಶಿಷ್ಟ ಸೌಂದರ್ಯವು ಪ್ರಕೃತ ನಾಯಿಕೆಯ ಕಣ್ಣಿ ನಲ್ಲಿರುವಂತೆ ವರ್ಣಿತವಾಗಿದೆ. ನಾಗವರ್ಮನು ವಿಸ್ತರಿಸಿದ 'ಭಾವ'ಯಾದರೂ ಹೀಗೆಯೇ ಇದೆ:

ನಾಗವರ್ಮನ ಭಾವ

ಈ ನವೀನ ಸಿತಾಂಭೋಜಾ
ನೂನ ಪೀತಾವತಂಸಕಂ
ತಾನದೇವುದೊ ಕರ್ಣಾಂತ
ವ್ಯಾನತಾಯತ ಲೋಚನೇ

—'ಕಾವ್ಯಾವಲೋಕನ', ಪ. ೫೯೭

'ಕರ್ಣಾಂತ ವಿಸ್ತೃತ ಲೋಚನೆಯೆ, ನಿನಗೆ ಈ ಕರ್ಣಾವತಂಸವು ಏಕೆ? (ಏವುದೊ?)' —ಎಂಬುದು ಪದ್ಯದ ಸಾರ. ಭಿನ್ನ ಸಂದರ್ಭದಲ್ಲಿ ವರ್ಣಿತವಾದರೂ ಮೇಲಿನ ಪದ್ಯದ ಸಾರವೇ ಇಲ್ಲಿಯೂ ಕಂಡುಬರುವುದು.

ii. ಸುಸಳ್

ತಿರಿವುದದೊಂದು ಚಕ್ರದೊಳೆ ನಿಂದು ದಿವಾ
ಕರನೆ ಮತ್ತರಿ[1]ದು ಕಳೆವೊಡಂತದನಾವೆಡೆಯಿಂ
ದರಮೆಯಾಗಿ ನೆಲಸಿ ಕೆಲಕಾಲದಿಂ
ಪೊರೆದಿರದೆಱಿದ ಬಱಿಕ ತಾ ನೆಲದೊಳ್ —(ii, 144)

[1] ಎರಡು ಪ್ರತಿಗಳಲ್ಲಿಯೂ 'ಮತ್ತಱಿಸು' ಎಂದಿದೆ. ಇದು 'ಮತ್ತರಿದು' ಎಂದು ರೇಫಯುಕ್ತ ವಾಗಿರಬೇಕೆಂದು ತೋರುತ್ತದೆ.

'ನುಸುಳ್' ಎಂಬ ಧಾತುವಿಗೆ 'ಸೂಕ್ಷ್ಮದ್ವಾರ ಪ್ರವೇಶ' ಎಂದು ಧಾತ್ವರ್ಥ. ಇಲ್ಲಿ ಅದು ಈ ವಿಶಿಷ್ಟವಾದ 'ಹೇಳಿಕೆ'ಯ ಹೆಸರಾಗಿ ಪ್ರಯುಕ್ತವಾಗಿರುವುದರಿಂದ, ನಾಮವಾಚಕ ವಾಗಿದೆ. ಪ್ರಪಂಚದಲ್ಲಿ ಎಲ್ಲೆಲ್ಲಿಯೂ ನುಸುಳಿಕೊಂಡಿರುವಂತೆ ನಿರೂಪಿಸಿದ ಪದಾರ್ಥದ ವರ್ಣನೆ ಈ ಪದ್ಯದಲ್ಲಿ ಭಾಸವಾಗಿರುವುದರಿಂದಲೇ 'ನುಸುಳ್' ಎಂದು ಕನ್ನಡದಲ್ಲಿ ಇದಕ್ಕೆ ಹೆಸರಾಗಿರಬೇಕೆಂದು ತೋರುತ್ತಿದೆ. ಈ ಪದ್ಯವು, ಪ್ರಕಟವಾದ ಪ್ರತಿಗಳೆರಡರಲ್ಲಿ ಸ್ವಲ್ಪ ಭಿನ್ನರೂಪವಾಗಿದೆ—ಅರ್ಥವು ಸ್ಫುಟವಾಗಿ ಹೊಳೆಯದಿದ್ದರೂ ಅದೊಂದು ತೆರದಲ್ಲಿ ಭಾಸ ವಾಗುತ್ತಿದೆ. 'ಅದೊಂದು ಚಕ್ರ (ಭೂ ಚಕ್ರ)ದಲ್ಲಿ ತಿರಿದಾಡುವ ಸರ್ವಸಾಕ್ಷಿಯೂ ಪ್ರತಾ ಪಿಯೂ ಆದ ಸೂರ್ಯನಿಗೂ ಅದನ್ನು ಕಳೆದು ಬಿಡಲು ಅಸಾಧ್ಯ; ಕೆಲಗಾಲ ಅಲ್ಪಸ್ವಲ್ಪ ವಾಗಿ ನೆಲದಲ್ಲಿ ನೆಲಸುವುದು. ನಾಶವಡೆದ ವ್ಯಕ್ತಿಯಲ್ಲಿ ನೆಲಸದು'. ಹೀಗೆ ಪ್ರಪಂಚದಲ್ಲಿ ನುಸುಳಿಕೊಂಡಿರುವುದೆಂದರೆ 'ಗಾಳಿ.' ಗಾಳಿ ಹೇಗೆ ಪ್ರಪಂಚದೊಳಗೆ ಅಸ್ಪಷ್ಟವಾಗಿಯಾ ದರೂ ನುಸುಳಿಕೊಂಡಿರುವುದೋ ಹಾಗೆ ಈ ಪದ್ಯದಲ್ಲಿ ಈ ಅರ್ಥವು ನುಸುಳಿದೆ. ಇದಕ್ಕೆ ನಾಗವರ್ಮನಿತ್ತ ಉದಾಹರಣೆಯನ್ನು ನೋಡಿ:

ನಾಗವರ್ಮನ 'ನುಸುಳ್'

ತಿರಿವುದು ಬೈಕಂಗೊಳ್ಳದು
ಮೊರೆವುದು ಮಱಿದುಂಬಿಯಲ್ತು ಕತ್ತರಿಗಾಳಂ
ಬೆರಸಿ ತನುಗೊಂದಿ ದೊರೆಕೊಂ
ಡಿರೆಯುಂ ಕೆಸಱಂಕಮಲ್ಲಿದಾವುದು ಪೇೞಿಂ

—'ಕಾವ್ಯಾವಲೋಕನ', ಪ. ೫೯೫

ಇಲ್ಲಿಯೂ, ಪ್ರಪಂಚದೊಳಗೆ ನುಸುಳಿಕೊಂಡಿರುವ ಮತ್ತು ಪದ್ಯದೊಳಗೆ ತದರ್ಥವಾಚಕ ವಾಗಿ ನುಸುಳಿರುವ ಗಾಳಿಯನ್ನು ವಿವರಿಸುವ 'ನುಸುಳ್' ಎಂಬ 'ಹೇಳಿಕೆಯೇ ಮಿರುಗು ವುದು. "ತಿರಿದಾಡುವುದು, ಆದರೆ ಭಿಕ್ಷೆಬೇಡುವುದಲ್ಲ; 'ಕತ್ತರಿ ಗಾಳಂ' (ಕಱ್ ತರಿ+ ಕಾಳ್+ಂ) ಎಂದರೆ ಕತ್ತರಿನಡೆದ ಕಾಳನ್ನು (ಪುಡಿಯನ್ನು) ತನ್ನ ತನುವಿಗೊಂದಿ, (ಧೂಳಿಯೊಡಗೂಡಿ) ದೊರೆಕೊಂಡಿದ್ದರೂ ಇದು 'ಕೆಸಱಂಕಂ' (ಕೆಸಱ್ ಎಂಬ ಗುರುತಿ ನಿಂದ ಕೂಡಿದ ವ್ಯಕ್ತಿ) ಅಲ್ಲ—ಯಾವುದು? ಹೇಳಿ". ಉತ್ತರವಾಗಿ 'ಗಾಳಿ' ಅಲ್ಲವೆ 'ಬಿರುಗಾಳಿ' ಎಂದರೆ ಸರಿಯಾಗುವುದು. ಹಾಗಿದ್ದರೆ, ಇದು 'ಪ್ರಶ್ನರೂಪ'ವಾದ 'ಹೇಳಿಕೆ' ಎನ್ನಲೂ ಬಹುದು.

iii. ಅಸ್ಪಷ್ಟಾಕ್ಷರ

ನೆಟ್ಟನೆ ತಾಂ ಸವಿಂಪೊಳೊಂದಿರೆ ಭೋಜನಮಾ
ಸಟ್ಟು ಬದ್ದಿಸು ನಾಮುಱಿಯದೆನಸುಂ ಸವಿಯಂ
ಪುಟ್ಟಿದಾ [ರು]ಮುಱಿಯದಿದಱ ಪೆಸರೊ
ಳಟ್ಟಿದಂ ಪೇೞಿ ಕೇಳ್ದೆನೆಂದಱಿಯೊ —(ii, 145)

'ಸ್ವಲ್ಪವೂ ನಾವರಿಯದ ಮತ್ತು ಈವರೆಗೆ ಹುಟ್ಟದ ಯಾರೂ ಸವಿಯನ್ನರಿಯದ ಭೋಜನವನ್ನು ಸವಿಯೊಡನೊಡನೆ ಅಟ್ಟು ಬಡಿಸು; ಅವರ ಹೆಸರಿನಿಂದ ಅಟ್ಟ ಭೋಜನವನ್ನು ಕೇಳ್ದರಿಯೆನು'. ಇಲ್ಲಿ, 'ಮಧುರ', 'ಕಟು', 'ಕಷಾಯ', 'ಆಮ್ಲ', 'ಲವಣ', 'ತಿಕ್ತ'—ಎಂಬವು ಆ ಸವಿಯ ನಾಮ ವಿಭಾಗಗಳು ಎಂಬುದನ್ನರಿತಲ್ಲಿ ಸ್ಪಷ್ಟಾಕ್ಷರವಾಗುವಂತೆ ತೋರುತ್ತಿದೆ. 'ಆಱುಂ ಅಱಿಯದ' ಎಂಬುದಕ್ಕೆ 'ಆರುಂ (ಯಾರೂ) ಅರಿಯದ' ಎಂಬ ಅರ್ಥವಾಗುವುದೇ 'ಅಸ್ಪಷ್ಟಾಕ್ಷರತೆ'. ನಾಗವರ್ಮನು ಅಸ್ಪಷ್ಟಾರ್ಥಕ್ಕೆ ಕೊಟ್ಟ ಉದಾಹರಣ ಪದ್ಯದಲ್ಲಿ ಅಕ್ಷರಗಳೇ ಕಡಿಮೆಯಿರುವುದರಿಂದ ಅದನ್ನಿಲ್ಲಿ ವಿವೇಚಿಸಿಲ್ಲ.

### iv. ವರ್ಣ ವ್ಯತ್ಯಯ

ಅಕ್ಷರಗಳು ಹಿಂದುಮುಂದಾಗಿ ತೋರುವುದಕ್ಕೆ ಈ ಹೆಸರೆಂದು ತೋರುವುದು.

### v. ಬಿಂದುಚ್ಯುತಕ

ಇದರ ದೃಷ್ಟಾಂತ ಪದ್ಯವು ದೋಷಯುಕ್ತವಾಗಿ ತೋರುವುದು. ಅದರಿಂದ, ಅದನ್ನಿಲ್ಲಿ ವಿಸ್ತರಿಸಿಲ್ಲ.

### vi. ಒಸರ್ಗಡಿ

ಅವುದು ಬಾಗಿದುದುಮಧಿಕಂ ಬಸನಂ
ಕೇವಳಮಾಗೆ ನೆಗೆವುದುಚಿತಾವಯವಂ
ದೀವದಿಂ ನಿಂದು ಸಿತಗನಂ ನುಡಿದುವು [ವುದು ?]
ಭಾವಿಸೆ ಬಗೆಗೊಳದಾರಕೊರ್ಣದಿಯುಂ

—ಮದರಾಸು ಪ್ರತಿ, (ii, 150)

ಇದು, ಇದರೊಳಗೆ ಭಾಷವಾದ ಒಂದು ವ್ಯಕ್ತಿಯು ಕೊರಳಿನಲ್ಲಿರುವ 'ಆರ' (ಹಾರ) ವಾಚಕವಾದ 'ಒಸರ್ಗಡಿ'ಯನ್ನು ವರ್ಣಿಸುವ, ಅದೇ ನುಡಿಯಿಂದ ಅರ್ಥಾವಗಾಹನೆ ಮಾಡಿಕೊಳ್ಳುವ ಪದ್ಯವಾಗಿ ತೋರುತ್ತಿದೆ. ಹಾರವು ಕೊರಳಲ್ಲಿ ಬಾಗಿಕೊಂಡಿರುತ್ತದೆ; ವ್ಯಕ್ತಿಗೆ ಬೇಸರಿಕೆಯಾಗಿ ಅದನ್ನೆತ್ತಿದಲ್ಲಿ ಉಚಿತಾವಯವವು ನೆಗೆಯುತ್ತದೆ. ಅದು ದೀಪದೊಡನೆ ಸಮಾನ ಜ್ಯೋತಿಯುತವಾಗಿ ವಿಟನನ್ನು (ಬೆಳ್ಳಗಿಲನ್ನು) ಬೋಧಿಸುತ್ತದೆ. ಈ 'ಆರಕೆ' (ಹಾರವನ್ನು) ಭಾವಿಸಿದಲ್ಲಿ, ಅದು ಒಂದು ಸವಿಯನ್ನು ಹೋಲಿಕೆಗೊಳ್ಳುವುದು.

ಇದಕ್ಕೆ ನಾಗವರ್ಮನಿತ್ತ ದೃಷ್ಟಾಂತವನ್ನು ನೋಡಿರಿ:

ಒಂದು ಗಱಿಗೆಯೊಳೆ ಸಂಪುಟ
ದುದದೆ ಮಡಿವಿರ್ಪರಹಿತರೆರೆದ ನರರ್ ಕೋ[1]

---

[1] 'ಕಾವ್ಯಾವಲೋಕನ'ದ ಮೈಸೂರು ಪ್ರತಿಯಲ್ಲಿ 'ಕೊಂಡೊಂದಱಿಕೂಳೆ' ಎಂದಿದೆ. ಇದು 'ಕೋಡೊಂದಱಿಕೂಳೆ' ಎಂದಿದ್ದರೆ ಉಚಿತವೆಂದು ತೋರುವುದು.

ಕೊಂದಳಿಕೊಳೆ ಮೆಱೆದು ಗಣಪತಿ
ಯೆಂದದಿನೊಸೆದಿರ್ಪರಿದಿರ್ಗೆ ವಂದಿಂದಿರನಾ
—'ಕಾವ್ಯಾವಲೋಕನ', ಪ. ೫೯೬

ಇಂದ್ರಲೋಕದ ರಾಜಧಾನಿಯಲ್ಲೇ ಯಾಚಕರಾದ 'ನರರ್' ಇಂದ್ರನ ಇದಿರಿಗೆ ಬಂದಿರುವುದು ಅಸಾಧ್ಯ. ಆದರಿಂದ, ಇದು ಯಾರೋ ಒಬ್ಬ 'ಇಂದ್ರರಾಜ'ನ ದಾನ ಪರಾಕ್ರಮಗಳನ್ನು ಬಣ್ಣಿಸುವ ಪದ್ಯವಾಗಿ ತೋರುತ್ತಿದೆ. 'ಕರಡಿಗೆಯ ಸಂಪುಟವು ಹೇಗೆ ಅಲ್ಪ ಕಾಲವಲ್ಲಿ 'ಮಡಿವು' (೧. ಮಡಿಚು ; ೨. ಸತ್ತು ಹೋಗು) ಇರುವುದೋ ಹಾಗೆ ನಮ್ಮ ಇಂದ್ರನಿಗಿದಿರಾದ ಅಹಿತರು ಮಡಿದು ಹೋಗುತ್ತಾರೆ ; ಯಾಚಕರಾದವರು 'ಕೋಡೊಂದ ಱಿಕೊಳೆ', ಎಂದರೆ ದಾನವೊಂದರಿಂದಲೇ, ಆನಂದಿತರಾಗಿ, ಗಣಪತಿಯಂತೆ ಕೋಡೊಂದ ಱಿಕೊಳೆ, ಎಂದರೆ ಏಕದಂತದಿಂದ, ನಗುತ್ತಾ ಇಂದ್ರನಿದಿರಿಗೆ ಬಂದು ಸಂತೋಷ ಪಡೆಯುತ್ತಾರೆ. ಇಲ್ಲಿ 'ಮಡಿದಿರ್ಪರ್', 'ಕೋಡೊಂದಱಿಕೊಳೆ'—ಎಂಬ ನುಡಿಗಳು ಭಿನ್ನಭಿನ್ನಗಳಾದ 'ಒರ್ನುಡಿ'ಗಳು ಎಂದು ತೋರುವುದು.

**vii. ಸಮುಸ್ತಕ ಅಥವಾ ಸಮಂತಿ**

'ಸುಸಮುಸ್ತಕ' ಎಂದು ಇದಕ್ಕೆ ಆದಿಯ ನಾಮನಿರೂಪಣವಾಗಿದ್ದರೆ, ಉದಾಹರಣವು 'ಸಮಂತಿ' ಎಂದು ಅಂಕಿತವಾಗಿದೆ. ಆದರಿಂದ, ಮೊದಲಿನದರೊಡನೆ ಅಭಿನ್ನವಾಗಿಯೋ ಅದರ ತದ್ಭವವಾಗಿಯೋ ಮತ್ತಿನದು ಪ್ರಯುಕ್ತವಾಗಿದೆ ಎಂದು ಭಾವಿಸಬಹುದಾಗಿ ತೋರುತ್ತದೆ. ದೃಷ್ಟಾಂತವು ಹೀಗಿದೆ :

ವಿಗಳಿತರಾಗನಾವೊನಿಂನಾವುದಱ
ಸೊಗಯಿಸುಗುಂ ಕಟಕತ್ವಮುಂ ಸಮರ್ಥಬಲಂ
ಬಗೆದೆನಗೊಯ್ಯನೆಸಗೆಯ್ದು ವೊದಾ
ಲಗಲಲಾಟಿಸುಗುಮದೆ ಪೇೞ್ದಿಂ ಬನದೊಳ್
—ಮದರಾಸು ಪ್ರತಿ, (ii, 152)

ಪೂರ್ವೋಕ್ತವಾದ ಹಲವು 'ಹೇಳಿಕೆ'ಗಳು ಸಮ್ಮಿಳಿತವಾಗಿ ರೂಪಿತವಾದುದೇ 'ಸಮಂತಿ' ಅಥವಾ 'ಸಮುಸ್ತಕ' ಎಂಬ ಹೆಸರನ್ನೊಂದುವುದಾಗಿ ತೋರುವುದು. ಬಹುಶಃ ಗ್ರಂಥಪಾತವಿರುವುದರಿಂದ ಅರ್ಥವು ವಿಶದವಾಗುವಂತಿಲ್ಲ. ಇದು ಬನದಲ್ಲಿ ತೋರಿದ ಅದೊಬ್ಬ ಋಷಿಯನ್ನು ಮದವಿಳಿದ ಆನೆಯೊಡನೆ ಹೋಲಿಸಿದ ಮಾತಾಗಿ ತೋರುತ್ತದೆ. ನಾಗವರ್ಮನು 'ಉೞಿವು' ಎಂಬ ಹೆಸರಿನ ಕನ್ನಡ ಹೇಳಿಕೆಯೊಂದನ್ನು ಉದಾಹರಿಸುತ್ತಾನೆ. 'ನಿಶ್ಶೇಷವಾಗದೆ ಉಳಿದಿರುವಿಕೆ' ಎಂಬ ಅರ್ಥದಿಂದ 'ಉೞಿವು' 'ಸಮಂತಿ'ಯೊಡನೆ ಅಭಿನ್ನವಾಗಿದ್ದಿರಲೂಬಹುದು. ಅದನ್ನೀಕ್ಷಿಸಿರಿ :

ಉಮೆಗೆ ಮಹೀಜೆಗೆ ಸುಮನೋ
ರಮಣೀ [ಮಣಿ] ನಚ್ಚಿನಾ ತಿಳೋತ್ತಮೆಗೊಪ್ಪಿಂ

ಸಮನೆನಿಸುವ ಮಂದಾಕಿನಿ
ಯಮುನಾನದಿ ಸಿಂಧು ಸಂಕರಂ ಕಣ್ಗೆಸೆಗುಂ

—'ಕಾವ್ಯಾವಲೋಕನ', ಪ. ೫೯೯

ಕ್ರಮವಾಗಿ ಉಮೆ (ಗೌರೀ ದೇವಿ), ಮಹೀಜೆ (ಸೀತೆ), ತಿಲೋತ್ತಮೆ (ತಿಲವರ್ಣದ ದೇವಸ್ತ್ರೀ)—ಇವರಿಗೆ ಸಮಾನವಾದ ಮಂದಾಕಿನೀ ಯಮುನಾ ನದಿಗಳು ಸಿಂಧುವಿನೊಡನೆ (ಸಾಗರದೊಡನೆ) ಸಂಗಮಿಸಿದಲ್ಲಿ ಕ್ರಮವಾಗಿ ತಲೆದೋರಿದ ಧವಳ, ಕೃಷ್ಣ, ನೀಲಗಳೆಂಬ ಜಲವರ್ಣ ಸಾಂಕರ್ಯವನ್ನು ಪದ್ಯವಿದು ವರ್ಣಿಸುತ್ತಿದೆ. ಇಲ್ಲಿ ಆ ಎಲ್ಲ ಬಣ್ಣಗಳು, 'ಸಮಸ್ತಕ'ವಾಗಿ 'ಉಟಿದ' ಬಣ್ಣವೆಮ ಎಂದೂ, ಆದರಿಂದಲೆ 'ಸಮಸ್ತಕ' (ಸಮಂತಿ), ಅಥವಾ 'ಉಟಿವು' ಎಂಬ ಹೆಸರು ಈ ಹೇಳಿಕೆಗಾಗಿರಬೇಕೆಂದೂ ಭಾವಿಸಬಹುದು.

ಇನ್ನು ನಾಗವರ್ಮನು ಮಾತ್ರ ಲಕ್ಷಿಸಿದ 'ನಾಮಾಂತರಿತ' ಎಂಬ 'ಹೇಳಿಕೆ'ಯನ್ನು ಅವಗಾಹಿಸಿರಿ—

**ನಾಮಾಂತರಿತ—**

ಮೊದಲೊಳೆ ವಿಕಾರಿ ನಾಕಾ
ರದರ್ಶನೀಯಂ ವಿರಾಮದೊಳ್ ಸಾಯಕಮಂ
ತದು ತಾಂ ವಿನಿಂದ್ಯಮಲ್ತಾ
ದಿದೇವ ಪುತ್ರಂ ಸದಾನವಾರಿಪ್ರಮುಖಂ

—'ಕಾವ್ಯಾವಲೋಕನ', ಪ. ೬೦೦

ಯಾವುದೋ ಒಂದು ವಿಶಿಷ್ಟ ವ್ಯಕ್ತಿಯ 'ನಾಮ'ವು, ರಚನಾಕ್ರಮದಿಂದ 'ಅಂತರಿತ' (ಅದೃಶ್ಯ)ವಾಗುವಂತೆ ಬಣ್ಣಿಸಿದುದರಿಂದಲೆ ಈ 'ಹೇಳಿಕೆ'ಗೆ 'ನಾಮಾಂತರಿತ' ಎಂಬ ಹೆಸರಾದುದಾಗಿ ಹೊಳೆವ ತೋರುತ್ತಿದೆ. ಹಾಗೆ 'ಅಂತರಿತ'ವಾದಂತಿದ್ದರೂ ಆ 'ನಾಮ'ವು, ಪದ್ಯವನ್ನು ವಿವೇಚಿಸಿದಲ್ಲಿ, ಭಾಸವಾಗುವುದು ಎಂಬುದೂ ಈ ಹೆಸರಿನಿಂದಲೇ ಸೂಚಿತವಾಗುತ್ತಿದೆ. ಅದರ ಹೊಲಬನ್ನೀಕ್ಷಿಸುವ—

ಆ ನಾಮಾಕ್ಷರಗಳ ಆದಿಯು 'ವಿಕಾರಿ ನಾಕಾರದರ್ಶನೀಯಂ'—ಎಂದರೆ ಕ್ರಮವಾಗಿ 'ವಿ', 'ನ' ಎಂಬ ಅಕ್ಷರಗಳಿಂದ ಕೂಡಿದೆ; ಆಮೇಲೆ 'ಸಾಯಕಂ ವಿರಾಮದೊಳ್'—ಎಂದರೆ ವಿರಾಮದಲ್ಲಿ 'ಅ', 'ಯ', 'ಕಂ' ಎಂಬ ಅಕ್ಷರಗಳಿಂದ ಬದ್ಧವಾಗಿದೆ; ಹೀಗಿದ್ದ ಅಕ್ಷರಗಳು 'ವಿನ+ಅಯಕಂ' ಎಂದು ಬರೆದಲ್ಲಿ, 'ಹೇಳಿಕೆ'ಯ ಮುಂದಿನ ಭಾಗವು ಸೂಚಿಸುವಂತೆ, 'ವಿನಿಂದ್ಯಂ ಅಲ್ತು' ಎಂದರೆ ಅದು ನಿರರ್ಥಕಾಕ್ಷರ ಕೂಟವಲ್ಲ—'ಸದಾನವಾರಿ ಪ್ರಮುಖಂ ಆದಿದೇವ ಪುತ್ರಂ' ಎಂದು ಅರ್ಥವಾಗುತ್ತಿದೆ. ಈ ಪದಗಳ ಅರ್ಥವನ್ನು ಗಮನಿಸಿದರೆ, 'ಮದಜಲಯುತ ಮುಖವುಳ್ಳ' 'ಶಿವಪುತ್ರ' ಎಂಬುದೇ ಇದರ ಅರ್ಥವೆಂಬುದು ವ್ಯಕ್ತವಾಗುವುದು. ಹಿಂದೆ ಸಂದುಗೂಡಿಸುವಂತೆ ಇರಿಸಿದ 'ವಿನ+ಅಯಕಂ'

ಎಂಬ ಅಕ್ಷರಗಳನ್ನು ಕೂಡಿಸಿದಲ್ಲಿ 'ವಿನಾಯಕಂ' ಎಂಬ ಪದವು ರೂಪಿತವಾಗುವುದು ; ಆದರಿಂದ 'ನಾಮಾಂತರಿತ'ವು ಸಲಕ್ಷಣವೆನ್ನಿಸುವುದು.

ಈ 'ಹೇಳಿಕೆ'ಗಳೊಳಗೆ ಅಲ್ಲಲ್ಲಿ ಅರ್ಥ-ಸ್ವಾರಸ್ಯವು ಅಷ್ಟಿಷ್ಟು ತೋರಬಹುದು. ಆದರೂ ಇವೆಲ್ಲವೂ 'ದುಷ್ಕರ' ಸಾಮ್ರಾಜ್ಯದೊಳಗಿನ ಪ್ರಜಾವರ್ಗವೇ ಸರಿ.



# ಅಲಂಕಾರ ದರ್ಶನ (ಮುಂದುವರಿದುದು II)

## ಅರ್ಥಾಲಂಕಾರದ ಪ್ರಮುಖ ಭೇದಗಳು

ಅರ್ಥಾಲಂಕಾರಗಳನ್ನು ಹಿಂದಿನ ಬಲುಮಂದಿ ಲಾಕ್ಷಣಿಕರು ನಾನಾ ಸಂಖ್ಯಾಕಗಳಾಗಿ ವಿಭಾಗಿಸಿದ್ದಾರಷ್ಟೆ. ಆದರೆ, ಅವುಗಳಲ್ಲಿ 'ವಾಸ್ತವ', 'ಔಪಮ್ಯ', 'ಅತಿಶಯ', 'ಶ್ಲೇಷ'—ಎಂದು ಒಳಗೊಳಗೆ ಬೆಸುಗೆಯಿಲ್ಲದ ನಾಲ್ಕು ಭೇದಗಳೆಂದೂ, ಅವು ನಾನಾ ಬಗೆಯಲ್ಲಿ ಬೆರಸಿ ನಾನಾ ಭೇದ ರೂಪಗಳಾಗುವುವೆಂದೂ ಕೆಲಮಂದಿ ನಿರೂಪಿಸಿದ್ದಾರೆ. ಅದು ಸಕಾರಣವಾಗಿ ತೋರುತ್ತಿದೆ. ನಾಟಕದಲ್ಲಿ ಒಂದು ಪಾತ್ರದ ಮೋರೆಗೆ ಬೇರೊಂದು ಬಣ್ಣವನ್ನು ಒಂದಿಷ್ಟು ಲೇಪಿಸಿದೊಡನೆ ಅನ್ಯಪಾತ್ರವಾಗಿಯೂ, ಕೈಯ ಸರಪಣಿಗೆ ಒಂದಷ್ಟು ಗೊಣಸುಗಳನ್ನು ಸೇರಿಸಿ ಬಲಿದರೆ ಕೊರಳ ಸರವಾಗಿಯೂ ಪರಿಣಮಿಸುವುದಷ್ಟೆ. ಅದಿರಲಿ; ಪೂರ್ವೋಕ್ತ ವಿಭಾಗಗಳು ಹೇಗೆ ಸ್ಫುಟಭೇದಗಳಾಗಿವೆ ಎಂಬುದನ್ನು ಒಂದಿಷ್ಟು ಭಾವಿಸಬೇಕು.

### ೧ ವಾಸ್ತವ

ವಸ್ತುವಿನ ಸಂಬಂಧವಾದುದು ಎಂಬ ಅರ್ಥಭೇದಕ್ಕನುವಾಗಿ ಈ ಪದವು ರೂಪಿತವಾಗಿದೆ. ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವಗಳೆಂದು ಪ್ರಪಂಚ ಘಟಕಗಳಾದ ಪದಾರ್ಥಗಳು ಅಥವಾ ವಸ್ತುಗಳು ಏಳು, ಎಂದು ಶಾಸ್ತ್ರಜ್ಞರ ಹೇಳಿಕೆ. ಇವುಗಳಲ್ಲಿ ಕೊನೆಯ ವಿಶೇಷಾದಿತ್ರಯವು ಶಾಸ್ತ್ರ ಮಾತ್ರಕ್ಕೆ ಸಂಬಂಧಿಸುವುದಲ್ಲದೆ ಕಾವ್ಯ ಸಾಹಿತ್ಯಕ್ಕಲ್ಲ; ಮಾತ್ರವಲ್ಲ, ಇವು ಆದಿಯ ದ್ರವ್ಯಾದಿ ಚತುಷ್ಕದೊಳಗೇ ಅಡಕವಾಗುತ್ತವೆ. ಏಕರೀತಿಯ ಹಲವು ಪದಾರ್ಥಗಳೊಳಗೆ ಪರಸ್ಪರ ಸಮಾನತೆ ಇರುವುದಷ್ಟೆ. ಅದನ್ನು ಸೂಚಿಸುವ ಪದವನ್ನು 'ಸಾಮಾನ್ಯ' ಇಲ್ಲವೆ 'ಜಾತಿ' ಎನ್ನುತ್ತಾರೆ. ಅದಕ್ಕನುವಾಗಿ ದ್ರವ್ಯ, ಗುಣ, ಕರ್ಮ, ಸಾಮಾನ್ಯಗಳನ್ನು ಯಥಾವಸ್ಥಿತವಾಗಿ ಬಣ್ಣಿಸುವ ಪದ್ಧತಿಯನ್ನು ಪ್ರಕೃತ ಗ್ರಂಥದಲ್ಲಿ ತೋರುವಂತೆ 'ಜಾತ್ಯಲಂಕಾರ', ಇಲ್ಲವೆ 'ವಾಸ್ತವಾಲಂಕಾರ', ಎನ್ನುತ್ತಾರೆ. ಇದರೊಳಗೆ, ಆಯಾ ವಿಶಿಷ್ಟ ವರ್ಣ್ಯಗಳನ್ನೊಂದಿ ವಸ್ತು (ಜಾತಿ) ವರ್ಣನೆ, ಕ್ರಿಯಾ (ಜಾತಿ) ವರ್ಣನೆ, ಗುಣ (ಜಾತಿ) ವರ್ಣನೆ, ದ್ರವ್ಯ (ಜಾತಿ) ವರ್ಣನೆ—ಎಂದು ನಾಲ್ಕು ಭೇದಗಳಿವೆ. ಈ ಅಲಂಕಾರದ ಅರ್ಥವು ಹೇಗೋ ಪದರಚನೆಯೂ ಹಾಗೆ ಸ್ಫುಟವಾಗಿದ್ದರೆ ಪ್ರಕೃತಿಗೊಪ್ಪುವುದು.

## ೨. ಔಪಮ್ಯ

'ಜಾತಿ', 'ದ್ರವ್ಯ', 'ಕ್ರಿಯಾ', ಗುಣ'ಗಳ ವರ್ಣನೆ ವಾಸ್ತವಾಲಂಕಾರಕ್ಕೆ ಮಾತ್ರ ಮೀಸಲಾದುದಲ್ಲ. ಸಂದರ್ಭಾನುಸಾರವಾಗಿ ಸಮಗ್ರ ಪ್ರಪಂಚವನ್ನೇ ಕವಿ ವರ್ಣಿಸ ಬೇಕಾಗುವುದು. ಪ್ರಪಂಚ ಘಟಕಗಳೇ ಈ ಜಾತ್ಯಾದಿಗಳೆಂದಾದರೆ, ಔಪಮ್ಯಾದಿಗಳಿಗೆ ಮಾತ್ರ ಅವುಗಳ ಸಂಬಂಧವಿಲ್ಲವಾಗುವುದು ಹೇಗೆ? ಆದರೆ, 'ವಾಸ್ತವ'ದಲ್ಲಿ ವರ್ಣನೀಯ ವಾದ ಒಂದು ಪದಾರ್ಥ ಮಾತ್ರದ ವರ್ಣನೆಯಾದರೆ, ಇಲ್ಲಿ ಹಾಗಲ್ಲ; ವರ್ಣನೀಯವಾದ ಪದಾರ್ಥಕ್ಕೆ ನೆರವಾಗಿ ಇನ್ನೊಂದು ಪದಾರ್ಥವೂ ಬೆರೆದುಕೊಂಡಿರುತ್ತದೆ. ಅದನ್ನೇ ಅಪ್ರಕೃತ, ಉಪಮಾನ, ಇತ್ಯಾದಿ ಹೆಸರುಗಳನ್ನಿಟ್ಟು ಲಾಕ್ಷಣಿಕರು ಕರೆದಿರುವುದು. ಈ ಉಪಮಾಲಂಕಾರದಲ್ಲಿ, 'ಉಪಮಾನ', 'ಉಪಮೇಯ', 'ಸಮಾನ ಧರ್ಮ', ಉಪಮಾ ವಾಚಕ ಎಂಬ ನಾಲ್ಕು ಅಂಗರೂಪ ಪದಗಳಿದ್ದರೆ, ಅದು 'ಪೂರ್ಣೋಪಮೆ'ಯೆನ್ನಿಸುವುದು; ಇಲ್ಲವಾದರೆ, 'ಅಪೂರ್ಣೋಪಮೆ' ಇಲ್ಲವೆ 'ಲುಪ್ತೋಪಮೆ' ಎಂದೆನ್ನಿಸಿ, ಅದರಿಂದಲೇ ಹಲವು ಭೇದಗಳನ್ನೊಂದುವುದು. 'ರಾಜಂಅಂಬುಧಿವೋಲ್ ಗಂಭೀರಂ' ಎಂಬುದನ್ನು ಅವಲೋಕಿಸಿರಿ. ಇಲ್ಲಿ, 'ಅಂಬುಧಿ' 'ರಾಜಂ', 'ವೋಲ್', 'ಗಂಭೀರಂ' ಎಂಬವು ಕ್ರಮ ವಾಗಿ ಉಪಮಾನ, ಉಪಮೇಯ, ಉಪಮಾವಾಚಕ ಮತ್ತು ಸಮಾನಧರ್ಮ ಎಂಬ ಅಲಂಕಾರ ಚತುರಂಗಗಳು. ಔಪಮ್ಯದ ಮತ್ತು ಇತರಾಲಂಕಾರಗಳ ಬೆಸುಗೆಯುವುಗಳಲ್ಲಿ ಈ 'ಚತುರಂಗದ' ಆಟವು ಬಲು ಚುರುಕಿನಿಂದ ಸಾಗುತ್ತಿದೆ. ಆಗ ಪದ, ಅರ್ಥಗಳ ಕೊಂಕು ಎಲ್ಲೆಮೀರಿಯೂ ಸುಳಿಯುತ್ತಿದೆ ಎನ್ನಬಹುದು. ಇಲ್ಲಿ ತೋರುವ ಪ್ರಕೃತ, ಅಪ್ರಕೃತಗಳೆಂಬ ಎರಡರ ಸಂಬಂಧವಿರುವ ರೂಪಕಾಲಂಕಾರಗಳೆಲ್ಲವೂ ಔಪಮ್ಯ ಭೇದ ಗಳೇ ಸರಿ.

## ೩. ಅತಿಶಯ

ಆದಿಯಲ್ಲಿ ವಿವರಿಸಿದ 'ಜಾತಿ' ಇಲ್ಲವೆ 'ವಾಸ್ತವ' ಎಂಬ ಅಲಂಕಾರದ ಎಲ್ಲೆಯನ್ನೂ ಮೀರಿ ಅಧಿಕ(ಅತಿಶಯ)ವಾಗಿ ವರ್ಣಿತವಾಗುವ ಅಲಂಕಾರವಿದು. ವಾಸ್ತವಾಲಂಕಾರ ವನ್ನು 'ಆರ್ಥಿಕ ಸರಳೋಕ್ತಿ' ಎಂದರೆ, ಇದನ್ನು 'ಆರ್ಥಿಕ ವಕ್ರೋಕ್ತಿ ಎಂದು ಸೂಚಿಸ ಬಹುದಾಗಿ ತೋರುತ್ತಿದೆ. ರೂಪಕ, ಉತ್ಪ್ರೇಕ್ಷಾದಿಗಳೊಳಗಿನ ಕೆಲಕೆಲವು ಭೇದಗಳು ಈ ಅತಿಶಯೋಕ್ತಿಯ ಬೆರಸಣಿಗೆಯಿಂದಲೇ ಮೂಡಿದುವೆಂದು ನಿರ್ಧರಿಸಬಹುದು. ವಾಸ್ತ ವಾಲಂಕಾರವು ರೇಖಾಚಿತ್ರದಂತೆ ಇಲ್ಲವೆ ಭಾವಚಿತ್ರದಂತೆ; ಅತಿಶಯಾಲಂಕಾರವು ತೈಲ ಚಿತ್ರದಂತೆ. ಹಿಂದೆ ಸೂಚಿಸಿದ ಔಪಮ್ಯವೂ ಮುಂದೆ ಸೂಚಿಸುವ ಶ್ಲೇಷವೂ ವರ್ಣಚಿತ್ರ ಪ್ರಭೇದಗಳು.

## ೪. ಶ್ಲೇಷ

ಪದಗತ ಅರ್ಥಗತಗಳೆಂದು ಶ್ಲೇಷವು ಎರಡು ತರವಾಗಿದೆ. ಔಪಮ್ಯದಲ್ಲಿ ಅಪ್ರಕೃತಾರ್ಥ ವನ್ನು ಸೂಚಿಸುವ ಬೇರೆ ಪದವಿದ್ದರೆ, ಇಲ್ಲಿ ಹಾಗಲ್ಲ; ಪದಭಂಗದಿಂದ ಅಥವಾ ಒಂದು

ಪದದ ಅರ್ಥದ್ವಯದೊಳಗಿನ ಒಂದರಿಂದ ಆ ಅಪ್ರಕೃತಾರ್ಥವು ಭಾಸವಾಗುವುದು. ಈ ರೀತಿಯಿಂದ ಅಲ್ಲಿ ಅರ್ಥವಕ್ರತೆ ಗಂಗಮಿಸುತ್ತಿದೆ. 'ಆ ರಾಜನಂತೀ ರಾಜನು ಕಲಾಮಯು ವಾಗಿ ಬೆಳಗುತ್ತಾನೆ'—ಎಂಬಲ್ಲಿ ಶ್ಲೇಷೋತ್ಥಾಪಿತವಾದರೂ ಪ್ರಮುಖವಾಗಿರುವುದು ಉಪಮಾಲಂಕಾರ. ಮೊದಲಿನ 'ರಾಜ' ಪದವು, ದೂರಸ್ಥ ಪದಾರ್ಥವನ್ನು ಗುರಿಯಿಟ್ಟು ತೋರುವ 'ಆ' ಪದಸಂಬದ್ಧವಾದುದರಿಂದ 'ಚಂದ್ರ' ಎಂಬ ಅಪ್ರಕೃತಾರ್ಥವನ್ನೇ ಸೂಸು ವುದಲ್ಲದೆ, ಪ್ರಕೃತವಾದ 'ಅರಸ' ಎಂಬುದನ್ನಲ್ಲ. ಆ ಅರ್ಥವು 'ಈ ರಾಜ' ಎಂಬಲ್ಲಿ ವಿಶದ ವಾಗುವುದು. 'ಕಲಾಮಯನು' ಎಂಬುದು ಸಮಾನಧರ್ಮಸೂಚಕ ಪದ. ಅರುವತ್ತ ನಾಲ್ಕು ಕಲೆಗಳಿಂದ ಕೂಡಿದವನು, ಷೋಡಶಕಲಾಪೂರ್ಣನು—ಎಂಬ ಅರ್ಥದ್ವಯದಿಂದ ಈ ಸಮಾನ ಧರ್ಮಸಾರವು ಉಪಮೇಯೋಪಮಾನ (ಪ್ರಕೃತಾಪ್ರಕೃತ)ಗಳೆರಡನ್ನೂ ಹೊದ್ದಿಕೊಂಡು ಮುಂದಿನ ಹೋಲಿಕೆಗೆ ಆಸರೆಗೊಡುತ್ತಿದೆ. ಅದರಿಂದ, ಇಲ್ಲಿ, ಶ್ಲೇಷಬದ್ಧ ವಾದರೂ ಉಪಮಾಲಂಕಾರವೇ ಪ್ರಧಾನವಾಗಿದೆ, ಎನ್ನಬೇಕು. ಆದರೆ 'ಸಕಲಂ ಸುಶಾಂತ ನಿಂತೀ ರಾಜಂ' ಎಂದಿರುವಲ್ಲಿ ಹಾಗಲ್ಲ. ಇದು ಚಂದ್ರವರ್ಣನ ಸಂದರ್ಭವಾಗಿದ್ದರೆ, ಪ್ರಕೃತವಾಗಿ ಚಂದ್ರಪರವಾದ ಅರ್ಥವನ್ನೂ ಅಪ್ರಕೃತವಾಗಿ ಉತ್ತಮ ರಾಜಸಂಬಂಧ ವಾದ ಅರ್ಥವನ್ನೂ ಒದಗಿಸುವುದು. ರಾಜವರ್ಣನ ಸಂದರ್ಭವಾಗಿದ್ದರೆ, ಅದಕ್ಕನುವಾಗಿ ಪ್ರಕೃತಾಪ್ರಕೃತಗಳನ್ನು ಮಾರ್ಪಡಿಸಿಕೊಳ್ಳತಕ್ಕದು. ಈ ರೀತಿಯಲ್ಲಿ ಅರ್ಥವನ್ನು ಎಡೆಯರಿತು ಬಳಸಿಕೊಳ್ಳಬೇಕಾದುದರಿಂದಲೇ ಈ 'ಶ್ಲೇಷ' ವೆಂಬುದು ಬಲುಕೊಂಕು, ಎನ್ನಲು ಕಾರಣವಾಯಿತು. ಆದರೂ, ಇದು ಉಪಮಾಲಂಕಾರದಿಂದಲೇ ಅಗೆಯೊಡೆದು ಚಿಗುರಿದ ಮೊಳೆ ಎಂಬುದನ್ನು ಅರ್ಥವೇ ಸೂಚಿಸುತ್ತಿದೆ.

ಇವುಗಳೊಳಗೆ ಜಾತಿ (ವಾಸ್ತವ), ಅತಿಶಯಾಲಂಕಾರಗಳು ಅರ್ಥಯೋಜನಾಕ್ರಮ ದಲ್ಲಿ ಭಿನ್ನಗಳಾದರೂ ಪದಯೋಜನೆಯಲ್ಲಿ ಎರಡೂ ಒಂದೇ ಸಾಲಿನವು—ಎಂದರೆ, ಎರಡೂ ಸ್ಥೈತಾದ ದಾರಿಯಲ್ಲೆ ಅಡಿಯಿಡುವವುಗಳು—ಎನ್ನಬೇಕು. ಔಪಮ್ಯ, ಶ್ಲೇಷಗಳು ಅಧಿಕಾಧಿಕವಾಗಿ ಆರ್ಥಿಕ ವಕ್ರಮಾರ್ಗದಲ್ಲೆ ನಡೆಗೊಳ್ಳುವವುಗಳು. ಈ ನಾಲ್ಕೂ ಬೇರೆ ಬೇರೆ ವಿಸ್ತರಿಸಿ, ಅನ್ಯೋನ್ಯವಾಗಿ ಇಷ್ಟಷ್ಟು ಬೆರೆದು, ಭಿನ್ನಭಿನ್ನ ನಾಮಗಳನ್ನೊಂದಿ ಹಲವು ಅಲಂಕಾರಗಳೆನ್ನಿಸಿದುವು—ಎಂಬುದನ್ನು ಮನನ ಮಾಡಿಕೊಳ್ಳಬೇಕು. ನಮ್ಮ ಗ್ರಂಥಕಾರನು ಈ ಮಾರ್ಗದಲ್ಲಿ ಅಡಿಯಿಡಲಿಲ್ಲವೆಂಬುದು ನಿಜ. ಆದರೂ ಮಾರ್ಗಭೇದ ವನ್ನು ಕಾಣಿಸುವುದೇ ಅವನ ಹೆಗ್ಗುರಿ ; ಮಾರ್ಗಭೇದವನ್ನು ಇನ್ನಷ್ಟು ವಿಶದವಾಗಿ ಕಂಡು ಕೊಳ್ಳುವುದಕ್ಕಾಗಿ, ಮಾರ್ಗೀಯವೇ ಆದ ಮೇಲಿನ ಪ್ರಮುಖ ಭೇದಗಳನ್ನು ವಿವರಿಸ ಬೇಕಾಯಿತು.

ಇಷ್ಟನ್ನು ನಿವೇದಿಸಿಕೊಂಡ ಮೇಲೆ, ಪ್ರಕೃತ ಗ್ರಂಥದಲ್ಲಿ ತೋರುವ ಅರ್ಥಾಲಂಕಾರ ಗಳನ್ನು ಪರಾಂಬರಿಸುವ. ಆದರೆ, ಗ್ರಂಥದೊಳಗಿನ ಎಲ್ಲ ಅಲಂಕಾರ ಪ್ರಭೇದಗಳನ್ನೂ ವ್ಯಾಖ್ಯಾನ ಪೂರ್ವಕವಾಗಿ ವಿಸ್ತರಿಸುವುದು ನಮ್ಮ ಗುರಿಯಲ್ಲ. ಅಲಂಕಾರಗಳ ಸಾರ್ಥಕತೆ ವಿಭಿನ್ನತೆಗಳು ವಿಶದವಾಗುವಂತೆ ಮಾರ್ಗಭೇದವನ್ನು ಅರಿತುಕೊಳ್ಳಲು ನೆರವಾಗುವ

ದಾರಿಯಿಂದ ಈ ಅಲಂಕಾರಗಳನ್ನೆಲ್ಲ ಸಂಗ್ರಹವಾಗಿ ವಿವರಿಸಲು ಹವಣಿಸುತ್ತೇವೆ.

**ಅರ್ಥಾಲಂಕಾರಗಳು**

'ಕವಿರಾಜಮಾರ್ಗ'ದ ತೃತೀಯ ಪರಿಚ್ಛೇದದ ಆದಿಯಲ್ಲಿ ಗ್ರಂಥಕಾರನು ಮೂವತ್ತ ನಾಲ್ಕು ಅಲಂಕಾರಗಳನ್ನು ನಿರೂಪಿಸಿದ್ದಾನೆ. ಗ್ರಂಥಕಾರನ ಆಶಯಕ್ಕನುವಾಗಿ ಅವುಗಳ ಪರಿವಿಡಿಯನ್ನು ಹೀಗೆ ಕೊಡಬಹುದು :

ಜಾತಿ, ರೂಪಕ, ಅರ್ಥಾಂತರನ್ಯಾಸ, ಅತಿರೇಕ, ಯಾಥಾಸಂಖ್ಯ, ದೀಪಕ, ಉಪಮೆ, ಅತಿಶಯ, ಸದೃಶಯೋಗಿತೆ, ಆಕ್ಷೇಪ (10)

ಶ್ಲೇಷ, ಉತ್ಪ್ರೇಕ್ಷೆ, ಸೂಕ್ಷ್ಮ, ವಿಶೇಷ, ಸಮಾಹಿತ, ಸಮಾಸೋಕ್ತಿ, ಪರ್ಯಾಯೋಕ್ತಿ, ವಿರೋಧ, ಅಪ್ರಸ್ತುತ ಪ್ರಶಂಸೆ, ನಿದರ್ಶನ, ಸಹೋಕ್ತಿ, ಸಂಕೀರ್ಣ (12)

ಪರಿವೃತ್ತಿ, ವ್ಯಾಜಸ್ತುತಿ, ಹೇತು, ವಿಭಾವನೆ, ಲವ, ಉದಾತ್ತ, ಅಪಹ್ನುತಿ, ರಸವತ್, ಊರ್ಜಿತ, ವ್ಯಾವೃತ್ತಿ, ಪ್ರಿಯತರ, ಆಶಿ (12)

ಹೀಗೆ ಮೂವತ್ತನಾಲ್ಕು ಅಲಂಕಾರಗಳನ್ನು 'ಪುರಾಣ ಶಾಸ್ತ್ರೋಕ್ತಂಗಳ್' ಎಂದು ಸೂಚಿಸಿ, ಕೊನೆಗೆ 'ಭಾವಿಕ', 'ಧ್ವನಿ' ಎಂಬ ಎರಡು ಅಲಂಕಾರಗಳನ್ನು ಹೆಚ್ಚಿಗೆಯಾಗಿ ಸೇರಿಸಿದ್ದಾನೆ. ಈ ಅಲಂಕಾರ ನಿರೂಪಣ ಕ್ರಮವು ದಂಡಿಯದನ್ನೇ ಅನುಸರಿಸಿರುವುದು ನಿಜವಾದರೂ, ಕೊನೆಯ 'ಧ್ವನಿ' ಎಂಬ ಅಲಂಕಾರವು ದಂಡಿಯ ಗ್ರಂಥದಲ್ಲಿಲ್ಲ. ಇರಲಿ; ಈಗ, ಈ ಅಲಂಕಾರಗಳನ್ನು ಒಂದೊಂದಾಗಿ ಪರಿಶೀಲಿಸುವ.

೧. ಜಾತಿ

ಭಾವಿಸಿ ಸಮಸ್ತವಸ್ತು ವಿ
ಭಾವಿತಜಾತಿ ಕ್ರಿಯಾ ಗುಣ ದ್ರವ್ಯ ಸ್ವಾ .
ಭಾವಿಕ ಗುಣಮಂ ಪೇಟ್ಟುದು
ಕೇವಲಮಾ ಜಾತಿಯೆಂಬ ಸದಳಂಕಾರಂ

—(iii, 6)

—ಕಾವ್ಯ ವಿಷಯಕವಾದ ಸಮಸ್ತ ಪದಾರ್ಥಗಳಿಗೆ ಸಂಬಂಧಿಸುವ ಜಾತಿ ಕ್ರಿಯಾ ಗುಣ ದ್ರವ್ಯಗಳೆಂಬ ಚತುರಂಗಗಳ ಸ್ವಾಭಾವಿಕ ಗುಣವನ್ನು ವಿಸ್ತರಿಸುವುದಕ್ಕೆ ಒಟ್ಟಾಗಿ (ಕೇವಲಂ) 'ಜಾತ್ಯಲಂಕೃತಿ' ಎಂಬ ಹೆಸರು.

ಈ ಲಕ್ಷಣವನ್ನೂ ಇದಕ್ಕಿತ್ತ ಲಕ್ಷ್ಯಗಳನ್ನೂ ವಿವರಿಸುವುದಕ್ಕಿಂತ ಮೊದಲು, ಈ ಅಲಂಕಾರದ ಹೆಸರಾದ 'ಜಾತಿ' ಎಂದರೇನು, ಅದರೊಳಗಿನ ಭೇದಗಳಾದ 'ಜಾತಿ', 'ಕ್ರಿಯಾ', 'ಗುಣ', 'ದ್ರವ್ಯ'ಗಳೆಂದರೇನು, ಆ ಮೇಲೆ 'ಜಾತಿ' ಮೊದಲಾದ ನಾಲ್ಕು ಒಳಗವಲುಗಳಿಂದ ಕೂಡಿದ ಮೂಲಾಧಾರವಾದ 'ಜಾತಿ'ಯ ಸ್ವರೂಪವೇನು—ಎಂಬುದನ್ನು ಮನಗಂಡುಗೊಳ್ಳಬೇಕು. ಇಲ್ಲಿ 'ಸ್ವಾಭಾವಿಕ ಗುಣಮಂ ಪೇಟ್ಟುದು ಕೇವಲಮಾ

ಜಾತಿ' ಎಂದು ಗ್ರಂಥಕಾರನೇ ಎಲ್ಲ ಭೇದಗಳಿಗೆ ಆಧಾರವಾದ ಆ ಮೂಲ 'ಜಾತಿ'ಯ ಸ್ವರೂಪವನ್ನು ವಿವರಿಸಿದ್ದಾನೆ. ಹೇಗೆ ತಂದೆತಾಯಿಗಳು ಎಲ್ಲ ಮಕ್ಕಳಿಗೂ ಆಧಾರವ್ಯಕ್ತಿಗಳೋ ಹಾಗೆ, ಮತ್ತಿನ ಭೇದ ಪರಂಪರೆಗೆ ಆಶ್ರಯವಾಗಿರುವ ಸಮಾನ ವಿಷಯವೇ ಮೂಲಾಲಂಕಾರ—ಎಂಬುದು ವಾಸ್ತವಿಕ. ಆದರೆ, ಸ್ವಾಭಾವಿಕ ಗುಣಕಥನ ರೂಪವಾಗಿ ವರ್ಣಿಸಬೇಕಾದರೆ ವರ್ಣನೀಯ ವಸ್ತುಗಳು ಬೇಕಲ್ಲವೆ? ಅವುಗಳನ್ನೇ 'ಜಾತಿ', 'ಕ್ರಿಯಾ' 'ಗುಣ' 'ದ್ರವ್ಯ'ಗಳೆಂದು ನಿರೂಪಿಸಿದುದು. ಸ್ವಭಾವಾಖ್ಯಾನವೇ ಮೂಲಾಧಾರವಾದ 'ಜಾತಿ'ಯಾದರೆ, ಭೇದಗಳೊಳಗೆ ಮೊದಲಿನದಾದ ಈ 'ಜಾತಿ' ಅದಕ್ಕಿಂತ ಒಂದಿಷ್ಟಾದರೂ ಭಿನ್ನವಾಗಿರಲೇಬೇಕಲ್ಲವೆ? ಇದೀಗ ತದ್ಭಿನ್ನವಾದ, ಪದಾರ್ಥಗಳ 'ಜಾತಿ', ಅಲ್ಲವೆ 'ಸಾಮಾನ್ಯ'.

ಜಾತಿ, ದ್ರವ್ಯ, ಕ್ರಿಯಾ, ಗುಣಗಳಲ್ಲಿ ಸಮಗ್ರ ಪ್ರಪಂಚವೇ ಒಳಗೊಳ್ಳುತ್ತಿದೆ. ಅವುಗಳ ಸ್ವರೂಪವನ್ನು ಅರಿತುಕೊಳ್ಳದಿದ್ದರೆ, 'ಜಾತ್ಯಲಂಕಾರ'ದ ಸ್ವರೂಪವೂ ಹೊಳೆಯುವಂತಿಲ್ಲ. ತರ್ಕಶಾಸ್ತ್ರದಲ್ಲಿ ಈ ಪ್ರಪಂಚದ ಸ್ವರೂಪವು ನಿರೂಪಿತವಾಗಿದೆ. ಅದನ್ನು ಸಂಗ್ರಹವಾಗಿಯಾದರೂ ಇಲ್ಲಿ ವಿವರಿಸಲೇಬೇಕು—

(i) ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವ—ಇವು ಏಳು ಪದಾರ್ಥಗಳು. ಪ್ರಪಂಚ ಘಟಕಗಳಾದ ವಸ್ತುಗಳೇ 'ಪದಾರ್ಥ'ಗಳು. ಬಲ್ಲವರು ಸಾಮಾನ್ಯರಿಗೆ ಬೋಧಿಸಿ ತಿಳಿಸಬಹುದಾದ 'ಪದ'ಗಳ 'ಅರ್ಥ'ಗಳೇ ಅವುಗಳಾದುದರಿಂದ ಅವುಗಳನ್ನು 'ಪದಾರ್ಥ'ಗಳು ಎನ್ನುವುದು. ಇವುಗಳಲ್ಲಿ ಕೊನೆಯ ಮೂರೂ ಇಲ್ಲಿ ಅಪ್ರಕೃತವೆಂದು ಹಿಂದೆಯೇ ಹೇಳಿದೆ.

(ii) 'ದ್ರವ್ಯ' ಎಂಬ ಪದಾರ್ಥದೊಳಗೆ ಒಂಬತ್ತು ಭೇದಗಳು. ಪೃಥಿವೀ, ಅಪ್, ತೇಜಸ್, ವಾಯು, ಆಕಾಶ, ಕಾಲ, ದಿಕ್, ಆತ್ಮ, ಮನಸ್ಸು—ಎಂದು ಅವುಗಳನ್ನು ಶಾಸ್ತ್ರಜ್ಞರು ವಿವರಿಸುತ್ತಾರೆ. ಜಾತಿ ಕ್ರಿಯಾ ಗುಣ ದ್ರವ್ಯಗಳೆಲ್ಲ 'ಜಾತಿ'ಯೊಳಗಿನವುಗಳಾಗಿರುವಂತೆ, ಪೃಥಿವ್ಯಾದಿಗಳೆಲ್ಲವೂ ದ್ರವ್ಯಗಳೇ. ಆದರಿಂದ 'ಗುಣ ಕರ್ಮ'ಗಳಿಂದ ಕೂಡಿರುವುದೇ ದ್ರವ್ಯ—ಎಂದು 'ಕೇವಲ'ವಾದೊಂದು ಲಕ್ಷಣವನ್ನಿಲ್ಲಿ ಸೂಚಿಸಬಹುದು.

(iii) 'ಗುಣ'ದಲ್ಲಿ ರೂಪ, ರಸ, ಗಂಧ, ಸ್ಪರ್ಶ, ಶಬ್ದ ಮೊದಲಾದ ಇಪ್ಪತ್ತು ಗುಣಗಳು ನಿರೂಪಿತವಾಗಿವೆ. ಈ ರೂಪ ರಸಾದಿಗಳಿಗೆ ಒಂದೊಂದಕ್ಕೂ ಭಿನ್ನ ಭಿನ್ನಗಳಾದ ಭೇದಕ ಲಕ್ಷಣಗಳಿವೆ. ದ್ರವ್ಯಗಳನ್ನೊಂದಿ ವ್ಯಕ್ತವಾಗುವುದೇ ಗುಣಸ್ವಭಾವ. ರೂಪ ರಸಾದಿಗಳಾದ ಪದಾರ್ಥಗಳೆಲ್ಲ ಪೂರ್ವೋಕ್ತವಾದ ಆಯಾ ದ್ರವ್ಯಗಳನ್ನು ಆಶ್ರಯಿಸದಿದ್ದರೆ, ಅವುಗಳ ಅಸ್ತಿತ್ವವನ್ನು ಲೋಕವು ಅರಿಯಲಾರದು.

(iv) ಉತ್ಕ್ಷೇಪಣ, ಅವಕ್ಷೇಪಣ, ಆಕುಂಚನ, ಪ್ರಸಾರಣ, ಗಮನ—ಎಂದು 'ಕರ್ಮ'ವು ಐದು ಬಗೆಯಾಗಿರುವುದು. ಇವೈದೂ ಕರ್ಮಗಳು ಗುಣದಂತೆ ದ್ರವ್ಯವನ್ನೇ ಆಶ್ರಯಿಸುವವುಗಳು. ಅದರಿಂದ ದ್ರವ್ಯಾಶ್ರಯತೆಗೊಂಡು, ಅವುಗಳನ್ನು ಚಲನಗೊಳಿಸುವ ವಿಶಿಷ್ಟಶಕ್ತಿ, ಅಥವಾ ದ್ರವ್ಯಚೈತನ್ಯವೇ, ಕರ್ಮ. ಈ 'ಕರ್ಮ'ವೇ ಮೇಲೆ 'ಜಾತ್ಯ

ಲಂಕಾರ' ಲಕ್ಷಣದೊಳಗೆ 'ಕ್ರಿಯೆ' ಎಂಬುದಾಗಿ ತೋರುವುದು. ಕರ್ಮ—ಕ್ರಿಯೆಗಳಿಗೆ, ವ್ಯಾಕರಣ ಪ್ರಕ್ರಿಯೆಗಳೊಳಗಿನ ಕರ್ಮಪದ—ಕ್ರಿಯಾಪದ ಎಂಬಲ್ಲಿ ಮಾತ್ರ ಒಂದಿಷ್ಟು ಭಿನ್ನಾರ್ಥವಲ್ಲದೆ, ಉಳಿದೆಡೆಯಲ್ಲಿ ಅವುಗಳನ್ನು ಪರ್ಯಾಯ ಪದಗಳನ್ನಾಗಿ ಭಾವಿಸಬಹುದು.

(೫) ಸಮಾನಗಳಾದ ಪದಾರ್ಥಗಳನ್ನೆಲ್ಲ ಪಂಗಡಪಂಗಡವಾಗಿ ವರ್ಗೀಕರಿಸಿ ಸೂಚಿಸುವಿಕೆ ಎಂಬ ಅರ್ಥವುಳ್ಳುದೇ 'ಸಾಮಾನ್ಯ' ಪದ. ಅದನ್ನೇ 'ಜಾತಿ' ಎಂದೂ ಹೇಳುವುದು. ಅಮರಕಾರನೂ ತನ್ನ ನಿಘಂಟುವಿನಲ್ಲಿ 'ಜಾತಿರ್ಜಾತಂ ಚ ಸಾಮಾನ್ಯೇ' ಎಂದು ಅವುಗಳನ್ನು ಪರ್ಯಾಯ ಪದಗಳನ್ನಾಗಿ ನಿರೂಪಿಸಿದ್ದಾನೆ. ಒಂದೇ ಲಕ್ಷಣಕ್ಕೊಳಪಟ್ಟ, ಒಂದೇ ಸ್ವಭಾವವನ್ನೊಂದಿದ ಹಲವು ಸಮಾನ ಪದಾರ್ಥಗಳನ್ನು ವರ್ಗೀಕರಿಸಿ ನಿರೂಪಿಸುವುದನ್ನೇ 'ಸಾಮಾನ್ಯ' ಅಥವಾ 'ಜಾತಿ' ಎನ್ನುವುದು. ಈ ಜಾತಿಯೇ ಸ್ವಭಾವಾಖ್ಯಾನರೂಪ ಜಾತ್ಯಲಂಕಾರದ ಭೇದಗಳೊಳಗೆ ಮೊದಲಿನದಾದ 'ಜಾತಿ'. ಇದು ಸ್ವಭಾವೈಕ್ಯದಿಂದ ವರ್ಗೀಕೃತಗಳಾದ ಏಕಜಾತೀಯ ಪದಾರ್ಥಗಳ ಆ ವರ್ಗವನ್ನು ಸೂಚಿಸುವ 'ಜಾತಿ'ಯಾದರೆ, ಅದು (ಮೂಲ ಜಾತಿ) ಏಕೀಕರಿಸುವ ಆ ಸ್ವಭಾವವನ್ನು ಆಖ್ಯಾನಿಸುವ 'ಜಾತಿ'. ಅದನ್ನೇ ಕ್ರಮವಾಗಿ ಹೇಳುವುದಾದರೆ, ವರ್ಗದ ಏಕಸ್ವಭಾವಾಖ್ಯಾನಕ್ಕೆ ಎಡೆಗೊಡುವ ಏಕವರ್ಗವೇ ಮತ್ತಿನ 'ಜಾತಿ'. 'ಕೊಡೆ ಬಿಳಿದು', 'ಮಣಿ ಕರಿದು'—ಎಂಬ ಪ್ರಯೋಗಗಳು ರೂಢವಷ್ಟೇ ಅಲ್ಲ, ನಿರ್ದುಷ್ಟವೂ ಆಗಿವೆ. 'ಬಿಳಿದು', 'ಕರಿದು'—ಎಂಬವು ಗುಣವಾಚಿಗಳು; 'ಕೊಡೆ', 'ಮಣಿ'ಗಳು ದ್ರವ್ಯವಾಚಕಗಳು. ಈ ಗುಣಗುಣಿ(ದ್ರವ್ಯ)ಗಳನ್ನು ಅಭಿನ್ನಗಳನ್ನಾಗಿ ಹೇಳುವುದು ತಪ್ಪಲ್ಲವೇ?—ಎಂದು ಆಕ್ಷೇಪಿಸುವುದಾದರೆ, 'ಗುಣ ಗುಣಿನೋರಭೇದಃ' ಎಂಬ ಶಾಸ್ತ್ರವಚನವೇ ಆ ಆಕ್ಷೇಪಕ್ಕೆ ಸಮಾಧಾನ. ಅದರಂತೆ, ಇಲ್ಲಿ, 'ಸ್ವಭಾವಾಖ್ಯಾನ ಜಾತಿ'ಯೂ ಆ 'ಸ್ವಭಾವಾಶ್ರಯ ಪದಾರ್ಥ ಜಾತಿ'ಯೂ 'ಜಾತಿ' ಎಂಬ ಒಂದೇ ಪದದಿಂದ ನಿರ್ದಿಷ್ಟವಾಗಿರುವುದರಲ್ಲಿ ದೋಷವೇನೂ ಇಲ್ಲ.

ಈ ಸಂಗ್ರಹ ವಿವರಣದಿಂದ ಜಾತ್ಯಲಂಕೃತಿಯೊಳಗೆ ಸಮಾವೇಶಗೊಳ್ಳುವ ಭಿನ್ನ ಭಿನ್ನ ಭಾಗಗಳ ಹೊಲಬನ್ನು ವಾಚಕರು ಭಾವಿಸಿಕೊಳ್ಳಬಹುದು ಎಂದು ತೋರುತ್ತಿದೆ. ಇನ್ನು, ಕ್ರಮವಾಗಿ ಆಯಾ ಭೇದಗಳನ್ನು ದೃಷ್ಟಾಂತಗಳೊಡನೆ ವಿವೇಚಿಸೋಣ—

೧. ಜಾತಿಸ್ವಭಾವಾಖ್ಯಾನ

ಧವಳಾಪಾಂಗಂ ಕೇಕಾ
ರವ ಮುಖರು ಹರಿತಶಾಬಲಾಂಕ ಕಳಾಪಂ
ನವಿಲಾದು ಸೊಗಯಿಸುಗುಂ
ಸುವಿನೀಳಾಯತಗಳಂ ಪಯೋದಾಗಮದೊಳ್ —(iii, 7)

ಮಳೆಗಾಲವು ನವಿಲುಗಳ ಜಾತಿಗೆ ಅತ್ಯಾನಂದಕರ ಸಮಯವೆಂದೂ ತದ್ಭಿನ್ನ ಕಾಲಗಳಲ್ಲಿ ಅವುಗಳ ಆನಂದವನ್ನು ಪ್ರದರ್ಶಿಸುವಂತೆ ಬಣ್ಣಿಸಬಾರದೆಂದೂ ಕವಿಸಮಯವು ಸಾರು

ತ್ತಿದೆಯಷ್ಟೆ. ಅದರಂತೆ, ಮಳೆಗಾಲದ ಪ್ರಾದುರ್ಭಾವ ಸಂದರ್ಭದೊಳಗೆ ಆನಂದಾನುಭಾವವನ್ನೊಂದಿಕೊಂಡಿರುವ ನವಿಲುಗಳ ವರ್ಣನೆ ಇದು. ಇಲ್ಲಿ ‘ನವಿಲ್ ಸೊಗಯಿಸುಗುಂ’ ಎಂಬಲ್ಲಿ ಕರ್ತೃಪದವು ಏಕವಚನದಲ್ಲಿದೆಯೆಂಬುದರಿಂದ, ಇದು ಬರಿಯ ಒಂದೇ ನವಿಲಿನ ಸ್ವಭಾವಾಖ್ಯಾನವೆಂದೆಣಿಸಬಾರದು. ‘ಪಯೋದಾಗಮ’ ಸಂದರ್ಭವೆಂದರೆ, ಬೇಸಗೆಯುರಿಯಿಂದ ಬಳಲಿ ಬೆಂಡಾಗಿ ಹೋಗುವುದು ಸ್ವಾಭಾವಿಕವಾಗಿರುವ ಸಮಗ್ರ ಮಯೂರ ವರ್ಗಕ್ಕೆ ಅಮೃತಪ್ರಾಯವಾದ ಜಲದಿಂದ ಚೈತನ್ಯವನ್ನೊದಗಿಸುವ ಸಂದರ್ಭ. ಆದ್ದರಿಂದ ‘ನವಿಲ್’ ಎಂಬ ಏಕವಚನವು ‘ಜಾತಿ’ ವಾಚಕವಾಗಿದೆ. ‘ಜಾತಿ’ಯಲ್ಲಿ ಏಕವಚನ ಪ್ರಯೋಗವು ರೂಢಿ ವ್ಯಾಕರಣಗಳೆರಡಕ್ಕೂ ಸಮ್ಮತವೆಂಬುದು ಹಿಂದೆಯೇ ನಿರೂಪಿತವಾಗಿದೆಯಷ್ಟೆ. ‘ಸಾಮಾನ್ಯ’ ಅಲ್ಲವೆ ‘ಜಾತಿ’ ಎಂದರೆ, ಸಮಾನ ಗುಣ ಕರ್ಮ ವಿಶಿಷ್ಟಗಳಾಗಿ ಒಂದು ಕೂಟದೊಳಗೆ ಸೇರುವ ಎಲ್ಲ ಪದಾರ್ಥಗಳನ್ನೂ ಕೇವಲೀಕರಿಸಿ ಅಥವಾ ಒಂದುಗೂಡಿಸಿ ನಿರೂಪಿಸುವುದು. ಹಾಗೆ ಏಕೀಕೃತವಾದ ಭಾವನೆಯನ್ನು ಒಂದುಗೂಡಿಸುವುದಕ್ಕೆ ಏಕವಚನವಷ್ಟು ಬಹುವಚನವು ಸಮರ್ಥವಲ್ಲ. ‘ನವಿಲ್ಗಳ್ ಸೊಗಯಿಸುಗುಂ’ ಎಂದರೆ ‘ಹಲಕೆಲವು ನವಿಲುಗಳು’ ಎಂಬ ಅರ್ಥವು ಆಗಬಹುದಲ್ಲದೆ, ‘ಪ್ರಪಂಚದೊಳಗಿನ ನವಿಲುಗಳೆಲ್ಲ’ ಎಂಬ ಅರ್ಥವಾಗಬೇಕೆಂಬ ನಿರ್ಬಂಧವೇನೂ ಇಲ್ಲ. ಆದರಿಂದ, ಕಿರಿಯ ಮಾತಿನಿಂದ ಹಿರಿಯ ಅರ್ಥವನ್ನು ವ್ಯಕ್ತೀಕರಿಸುವ ಈ ಸೈತಿಗೆ ‘ನವಿಲ್ ಸೊಗಯಿಸುಗುಂ’ ಎನ್ನುವುದೇ ಯುಕ್ತವಾಗಿದೆ.

ಮಾತ್ರವಲ್ಲ; ಈ ಪದ್ಯದ ಪದರಚನೆಯಾದರೂ ಸೈತಾಗಿ, ಎಂದರೆ ವಿಶೇಷಣಗಳು ವಿಶೇಷ್ಯದೊಡಗೂಡಿ, ಆ ವಿಶೇಷ್ಯವು ಕ್ರಿಯೆಯನ್ನೊಂದುವ ದಕ್ಷಿಣಮಾರ್ಗಕ್ಕೆ ತಕ್ಕುದಾಗಿದೆ. ಆದರೆ ಕಡೆಯ ಪಾದದಲ್ಲಿ, ‘ಸುವಿನೀಳಾಯತಗಳಂ’ ಎಂಬ ‘ನವಿಲ್’ ಪದದ ವಿಶೇಷಣವೊಂದು ಅಗಲಿ ನಿಂದುದು ವಕ್ರಕ್ರಮವಾಯಿತಲ್ಲವೆ? ಎನ್ನಬಹುದು. ಅದಾದರೂ ಅರ್ಥಾನುಸಾರವಾಗಿ ಅಲ್ಲಿರುವುದೇ ಸೈತು: ‘ಪಯೋದಾಗಮ’ದೊಳಗಲ್ಲವೆ, ನವಿಲು ‘ಸುವಿನೀಳಾಯತಗಳ’ವಾಗುವುದು? ಈ ವಿಶೇಷಣ ಹಿಂದೆಲ್ಲಿಯೋ ಇರುತ್ತಿದ್ದರೆ, ಅದು ಅರ್ಥಾನುಸಾರಿಯಾಗಿ ಸರಳೋಕ್ತಿ ಎನ್ನಿಸುತ್ತಿದ್ದಿಲ್ಲ.

ಇಲ್ಲಿ ಬೇರೆ ಯಾವ ಅಲಂಕಾರವೂ ಇಲ್ಲವೆಂಬುದನ್ನೂ ಇರುವುದು ‘ಪದಾರ್ಥ’ದೊಳಗೆ ಒಂದಾದ ಮಯೂರ (ರೂಪದ್ರವ್ಯ) ಜಾತಿಯ ಸ್ವಭಾವಾಖ್ಯಾನವೆಂಬುದನ್ನೂ ಗಮನಿಸಿಕೊಳ್ಳಬೇಕು.

### ೨. ಕ್ರಿಯಾ ಸ್ವಭಾವಾಖ್ಯಾನ

ಅರೆ ಮುಚ್ಚಿ ಕಣ್ಗಳಂ ವನ
ಕರಿ ಮೆಲ್ಲದೆ ಲಲಿತಸಲ್ಲಕೀಪಲ್ಲವಮಂ
ಸ್ಮರವಶದಿಂದಿರ್ದುದು ನಿಜ
ಕರೇಣು ಪೇಚಕ ನಿರೂಪಿತಾಯತ ಹಸ್ತಂ (—iii, 8)

—ಇದು, ವನಕರಿಯೊಂದರ ಶೃಂಗಾರ ಭಾವಯುಕ್ತ ಕ್ರಿಯಾವಸ್ಥೆಯ ವರ್ಣನೆ. ಇಲ್ಲಿ 'ವನಕರಿಯೊಂದು' ಎಂಬ ಸಂಖ್ಯಾವಾಚಕ ಪದವಿಲ್ಲ: ಅದರಿಂದ, ಹಿಂದೆ 'ನವಿಲ್ ಆದಂ ಸೊಗಯಿಸುಗುಂ' ಎಂಬಲ್ಲಿ 'ನವಿಲ್' ಎಂಬುದಕ್ಕೆ 'ಮಯೂರ ಜಾತಿ' ಎಂಬ ಅರ್ಥವನ್ನೆಸಗಿದಂತೆ, ಇಲ್ಲಿ 'ವನಕರಿ' ಎಂಬುದಕ್ಕೆ 'ವನಕರಿ ಜಾತಿ' ಎಂಬ ಅರ್ಥಮಾಡಿ, ಇಲ್ಲಿರುವುದು 'ಜಾತಿ ಸ್ವಭಾವಾಖ್ಯಾನ ಎನ್ನಬಾರದೆ? ಇಲ್ಲಿ 'ಸ್ಮರವಶದಿಂದಿರ್ದುದು' ಎಂದು ಸ್ಮರಾನುಭಾವಯುಕ್ತ ಕ್ರಿಯೆ ಸೂಚಿತವಾಗಿರುವಂತೆ, ಅಲ್ಲಿ 'ಆದಂ ಸೊಗಯಿಸುಗುಂ' ಎಂದು ತತ್ಕಾಲದ ಮಯೂರಾನುಭಾವ ಕ್ರಿಯೆ ವ್ಯಕ್ತವಾಗುವುದೆಂದು ಭಾವಿಸಿ, ಅಲ್ಲಿರುವುದು 'ಕ್ರಿಯಾ ಸ್ವಭಾವಾಖ್ಯಾನ'ವೆಂದು ಹೇಳಬಾರದೆ?—ಎಂಬ ಪ್ರಶ್ನೆಗಳೆರಡೂ ತಲೆದೋರಬಹುದು. ಆದರೆ ಈ ಸಂದೇಹಗಳೆರಡೂ ಯುಕ್ತವಲ್ಲ.

ಅಲ್ಲಿ, 'ನವಿಲ್' ಎಂಬ ಕರ್ತೃ ಪದದ ಏಕವಚನವು ಜಾತಿವಾಚಕವೆಂಬುದು ಮುಂದಿರುವ 'ಪಯೋದಾಗಮದೊಳ್' ಎಂಬ ಕಾಲವಾಚಕಪದದಿಂದ ವ್ಯಕ್ತವಾಗುತ್ತಿದೆ. ಆ ಸಮಯದಲ್ಲಿ, ಎಂದರೆ ಪಯೋದಾಗಮ ಸಮಯದಲ್ಲಿ, ಕೇಕಾರವ, ಮೊದಲಾದ ಸ್ವಭಾವಗಳಿಂದ ಒಂದೇ ನವಿಲು ಸೊಗಯಿಸಿತು—ಎಂದರೆ ತಪ್ಪಾಗುವುದು. ಇಲ್ಲಿ ಈ ವಿಶಿಷ್ಟ ಕರಿಯ ಕಾಮಾವಸ್ಥೆಗೆ ವಿಶಿಷ್ಟವಾದೊಂದು 'ಕರೇಣು' (ಹೆಣ್ಣಾನೆಯು) ಸಂಬಂಧವೇ ಕಾರಣ. ಅಂಥ ವಿಶಿಷ್ಟ ವನಕರಿ ಕರೇಣುಗಳ ಸಂಬಂಧದಿಂದ ಕರಿಜಾತಿಯೇ ಕಾಮಾಂಧವಾಯಿತೆಂದರೆ, ಅದೂ ತಪ್ಪಾಗುವುದು. ಎರಡನೆಯ ಆಕ್ಷೇಪವೂ ಸರಿಯಲ್ಲ. ಇಲ್ಲಿ, 'ವನಕರಿ ಸ್ಮರವಶದಿಂದೆ ಇರ್ದುದು' ಎಂದು ಮಾತ್ರವಲ್ಲ; ಹಾಗೆ 'ಇರ್ದ' ಮದನಾವಸ್ಥಾರೂಪದ ಪೂರ್ಣ ಕ್ರಿಯಾ ಪದಕ್ಕೆ ವಿಶೇಷಣಗಳಾದ ಹಿಂದಿನ ಅಪೂರ್ಣ ಕ್ರಿಯಾ ಪದಗಳನ್ನೀಕ್ಷಿಸಿರಿ. 'ಕಣ್ಗಳಂ ಅರೆಮುಚ್ಚಿ', 'ಲಲಿತಸಲ್ಲಕೀ (ಗಜಲತೆಯ) ಪಲ್ಲವಮಂ ಮೆಲ್ಲದೆ' ಎಂಬವುಗಳೇ 'ಇರ್ದುದು' ಎಂಬ ಕ್ರಿಯೆಯ ವಿಶೇಷಣಗಳು. ಮುಂದಿನ 'ನಿಜಕರೇಣು ಪೇಚಕ ನಿರೂಪಿತಾಯತ ಹಸ್ತಂ' (ಸೊಂಡಿಲಿನಿಂದ ಸ್ವಾಭಿಪ್ರಾಯವನ್ನು ಸಂಜ್ಞಾಮೂಲಕವಾಗಿ ತಿಳಿಸಿದ) ಎಂಬುದು ಕ್ರಿಯಾವಿಶೇಷಣವೂ ಆಗಬಹುದು. ಅದರಿಂದ, ಇದು ಆ ವಿಶಿಷ್ಟ ವನಕರಿಯ ಮದನಾವಸ್ಥಾರೂಪವಾದ ಕ್ರಿಯೆಯ ಸ್ವಭಾವಾಖ್ಯಾನವೇ ಸರಿ. ಹಿಂದಿನ ಪದ್ಯದೊಳಗೆ ಈ ರೀತಿಯ ಕ್ರಿಯಾ ವಿಶೇಷಣಗಳೇ ಇಲ್ಲ.

೩. ಗುಣ ಸ್ವಭಾವವಾಖ್ಯಾನ

ಆವಿರ್ಭವಿಸಮಂ ಕಣ್ಗಳೊ
ಳಾ ಮದದೊಳಗೊಸಗೆಯಿಂ ಶರೀರದೊಳೆತ್ತಂ
ರೋಮಾಂಚಕಂಚುಕಂ ಮದಿ
ರಾಮದವಾಗಿಸೆ ತೆಗಬ್ಬಿನಾಕೆಯ ನುಡಿಯೊಳ್ —(iii, 9)

—ಗೋಷ್ಠೀಕೇಳಿಯೊಳಗೆ ಮದಿರಾಪಾನವೆಸಗಿದ ವಿಲಾಸಿನಿಯೊಬ್ಬಳ ಬಾಹ್ಯಾಂತರಂಗಗಳಲ್ಲಿ ತಲೆದೋರಿದ ವಿಶೇಷಗುಣಗಳನ್ನು ಬಣ್ಣಿಸುವ ಪದ್ಯವಿದು. ಇದರ ಅರ್ಥವನ್ನು

ಹೀಗೆ ವಿವರಿಸಬಹುದು : "ಮದಿರಾಪಾನಜನ್ಯ ಮದವು ಆಕೆಯ ಕಣ್ಣುಗಳಲ್ಲಿ 'ಅವಿಾಳನ' ವನ್ನು (ಎಂದರೆ ಮುಚ್ಚುವಿಕೆಯನ್ನು), ಮನದೊಳಗೆ ಒಸಗೆಯನ್ನು (ಎಂದರೆ ಆನಂದ ವನ್ನು), ಶರೀರದೊಳಗೆಲ್ಲಲೂ ರೋಮಾಂಚವೆಂಬ ಕಂಚುಕವನ್ನು, ನುಡಿಯೊಳಗೆ 'ತೆಗಟ್ಟಿ'ನ್ನು (ಎಂದರೆ ತಡನರಿಕೆಯನ್ನು) ಆಗಿಸಿತು." ಆಕೆಯ ಆಯಾ ಬಹಿರಂತರಂಗಗಳ ಸ್ವಭಾವಾನುಸಾರವಾಗಿ ಮದಿರಾಮದವು ಅಲ್ಲಲ್ಲಿ ಆಗಿಸಿದ ಅವಿಾಲನ, ಒಸಗೆ, ರೋಮಾಂಚ, ತೆಗಟ್ಟು—ಎಂಬವುಗಳೆಲ್ಲ ಆಯಾ ದ್ರವ್ಯಾಶ್ರಯವಾದ ಗುಣಗಳೇ ಎಂಬುದನ್ನು ಭಾವಿಸಿಕೊಳ್ಳಬೇಕು. ಹಿಂದಿನ ಪದ್ಯಗಳಲ್ಲಿ ಬೇರೆ ಯಾವ ಅಲಂಕಾರಗಳೂ ಇಲ್ಲ. ಇಲ್ಲಿ, 'ರೋಮಾಂಚ ಕಂಚುಕ' ಎಂಬ ರೂಪಕಾಲಂಕಾರವೊಂದಿದೆ. ಈ ರೂಪಕವು ಇಲ್ಲಿ ಪ್ರಕೃತ ವಿಷಯವಲ್ಲವಾದರೂ, ಈ ಪದ್ಯದ ಪದರಚನೆ ಹಿಂದಿನ ಎರಡು ಪದ್ಯ ಗಳೊಳಗಿನದರಂತೆ ನೇರಾಗಿಲ್ಲ. 'ಮದಿರಾಮದಂ' ಎಂಬ ಕರ್ತೃಪದವು ತೃತೀಯ ಚತುರ್ಥ ಪಾದಗಳೆಡೆಯಲ್ಲಿಯೂ ಕಣ್ಣು, ಮನಸ್ಸು, ಶರೀರ, ನುಡಿಗಳಿಗೆಲ್ಲ ಸಂಬಂಧಿಸುವ 'ಆಕೆಯ' ಎಂಬುದು ಅಂತ್ಯಾತ್ಪೂರ್ವದಲ್ಲಿಯೂ ಇದೆ. ವರ್ಣನೀಯಗಳಾದ ಅವಿಾಲನಾದಿ ಗುಣ ವಾಚಕಗಳೂ ತದಧಿಕರಣಗಳಾದ 'ಕಣ್ಗಳೊಳ್' ಮೊದಲಾದ ಪದಗಳೂ ಒಂದು ಸ್ಥಾನ ಕ್ರಮಾನುಸಾರವಾಗಿ ಪರಿಚಿತವಾಗಿಲ್ಲ. ಈ ಪದರಚನಾವಕ್ರತೆ ದಾಕ್ಷಿಣಾತ್ಯರದಲ್ಲವೆಂದೇ ಹೇಳಬೇಕು. 'ಸ್ವಭಾವಾಖ್ಯಾನ'ರೂಪ ಜಾತ್ಯಲಂಕಾರವು ದಾಕ್ಷಿಣಾತ್ಯರಿಗೆ ಮೀಸ ಲಾದುದೇನೋ ಸರಿ. ಆದರೆ, ಹಿಂದೆ ಸೂಚಿಸಿದಂತೆ, ಶಿಥಿಲ ವಿಷಮಾದಿ ಬಂಧಗಳೂ ತತ್ಸಂಬದ್ಧ ರಸಗಳೂ ಔತ್ತರೇಯರಿಗೇ ಸಾಹಜಿಕವಲ್ಲವೆ ? ಅವುಗಳನ್ನು ದಾಕ್ಷಿಣಾತ್ಯರು ದೇಶಭಾಷಾ ಸಾಹಿತ್ಯದ ಏಕರೂಪತೆ ಪರಿಪೂರ್ಣತೆಗಳಿಗಾಗಿ ಕೈಕೊಳ್ಳಬೇಕಾಯಿತು. ಹೀಗೆ, ಗುಣಸ್ವಭಾವಾಖ್ಯಾನದ ಈ ದೃಷ್ಟಾಂತ ಪದ್ಯವು ವಕ್ರಭಣಿತಿಯ ಕ್ರಮವನ್ನು ಒಳಗೊಂಡಿದೆ.

೪. ದ್ರವ್ಯ ಸ್ವಭಾವಾಖ್ಯಾನ

ತಳಮಿತಮಧ್ಯೆಯನಾಯತ
ವಿಲೋಳಲೋಚನೆಯನುನ್ನತಸ್ತನಯುಗೆಯಂ
ಲಳಿತವಿಳಾಸಿನಿಯಂ ಕೋ
ಮಳಾಂಗೆಯಂ ಪೃಥುನಿತಂಬ ಬಿಂಬೆಯನುಱದಂ —(iii, 10)

'ಕವಿರಾಜ ಮಾರ್ಗ'ದಲ್ಲಿ ಯಾವುದೋ ಒಂದು ರಾಮಾಯಣದಿಂದ ಹಲವು ಪದ್ಯಗಳು ಉದ್ಧೃತವಾಗಿವೆಯಷ್ಟೆ. ರಾಮಾಯಣದ ಉತ್ತರಭಾಗದಲ್ಲಿ ಶ್ರೀರಾಮನು ಸೀತೆಯನ್ನು ಲೋಕಾಪವಾದಕ್ಕಾಗಿ ಪರಿತ್ಯಜಿಸಿದನಷ್ಟೆ. ಆ ಸಂದರ್ಭದಲ್ಲಿ, ಬಹುಶಃ ಅಂತಃಪುರ ಪರಿವಾರದವರು ಒಳಗೊಳಗೆ ಬೇಸರಿಸುವುದನ್ನು, ಅಥವಾ ಲೋಕದ ಸಾಮಾನ್ಯರು ಆ ವಿಷಯವನ್ನೆತ್ತಿ ಸಂಭಾಷಿಸುವ ಸಂದರ್ಭವನ್ನು, ವರ್ಣಿಸುವ ಪದ್ಯವೇ ಇದಾಗಿರಲೂ

ಬಹುದು.[1] ಇಲ್ಲಿ, ಆ ಕೋಮಲಾಂಗಿರೂಪವಾದ, ವಿಶಿಷ್ಟವಾದ, ಒಂದು 'ದ್ರವ್ಯ' ವಸ್ತುವಿನ ಸ್ವಭಾವಾಖ್ಯಾನವು 'ದಕ್ಷಿಣಾಯನ' ಕ್ರಮಾನುಸಾರವಾಗಿಯೇ ಸಾಗಿದೆ.

ಜಾತ್ಯಲಂಕಾರವು ಹೀಗೆ ನಾಲ್ಕೇ ಭೇದಗಳಿಂದ ಕೂಡಿದೆ. ಇದರ ಆಕಾರವು ರೂಪಕಾದಿಗಳಿಗಿಂತ ಚಿಕ್ಕದಾದರೂ, ಸಾಹಿತ್ಯದೊಳಗೆ ಇದರ ವ್ಯಾಪಕತೆ ಬಲುದೊಡ್ಡದು. ಮುಂದಿನ ಅಲಂಕೃತಿಗಳನ್ನೆಲ್ಲ 'ವಿಕೃತಾಲಂಕಾರ'ಗಳೆಂದು ಹೇಳಿ ಈ 'ಜಾತಿ'ಯನ್ನು ಮಾತ್ರವೇ 'ಪ್ರಕೃತ್ಯಲಂಕಾರ' ಎನ್ನಬಹುದು. ತಾತ್ತ್ವಿಕ ದೃಷ್ಟಿಯಿಂದೀಕ್ಷಿಸಿದರೆ, 'ಪ್ರಕೃತಿ' ರೂಪದಿಂದ ಮೂಲದಲ್ಲಿರುವ ಭಿನ್ನ ಭಿನ್ನ ಪಂಚಭೂತಗಳಿಂದಲೇ ಪರಸ್ಪರ ಮಿಶ್ರಿತವಾಗಿ ನಾನಾರೂಪಗೊಂಡು ಈ 'ವಿಕೃತ' ಪ್ರಪಂಚವು ತೋರುವುದಲ್ಲವೆ ? ಹೀಗೆ 'ವಿಕೃತಿ'ಗೊಂಡವುಗಳ ಕೂಟವನ್ನೆ ನಾವು 'ಪ್ರಕೃತಿ' ಎನ್ನುವುದು. ಆದರೂ ಆ 'ಪ್ರಕೃತಿ' ಎತ್ತೆತ್ತಲೂ ಹಾಸುಹೊಕ್ಕಾಗಿರುವ ವಿಕೃತಿರೂಪದ ವಿಶ್ವಕ್ಕೆ ಒಂದು ಪ್ರಕೃತಿಯನ್ನುಂಟುಮಾಡಿದೆ. ಅದರಂತೆಯೇ, ರೂಪಕಾದಿ 'ವಿಕೃತಾಲಂಕಾರ'ಗಳಲ್ಲೆಲ್ಲ ಈ 'ಪ್ರಕೃತಿ ರೂಪ ಜಾತ್ಯಲಂಕಾರ'ವು ವ್ಯಾಪಿಸಿದೆ. ಯಾವ ಗುಣಾಲಂಕಾರಗಳಾದರೂ ಸರಿಯೆ : ಅವುಗಳಿಂದ ವರ್ಣ್ಯವಾದುವುಗಳೆಂದರೆ, ಹಿಂದೆ ವಿವರಿಸಿದ ಜಾತಿ, ಕ್ರಿಯಾ, ಗುಣ ದ್ರವ್ಯಗಳಲ್ಲದೆ ಬೇರೇನೂ ಅಲ್ಲ. ಅದರಿಂದ, ಸ್ವಭಾವಾಖ್ಯಾನ ಭೇದಗಳೆಂದರೆ, ಶುದ್ಧ ಪ್ರಕೃತಿ ಪಡೆದಿರುವ ಬೇರೆ ಬೇರೆ ಸ್ವತಂತ್ರ ವರ್ಣಗಳಂತೆ ; ಮತ್ತಿನ ರೂಪಕಾದ್ಯಲಂಕಾರಗಳೆಂದರೆ, ಸ್ವತಂತ್ರವಾದ ವರ್ಣಗಳನ್ನು 'ಇಲ್ಲಿಗಿದು ತಕ್ಕುದೆಂದು 'ಅಱಿದು' ಬೆರಸಿ ಸಿದ್ಧಪಡಿಸಿದ ಮಿಶ್ರವರ್ಣಗಳಂತೆ ; ಹಾಗೆ, 'ಇಲ್ಲಿಗಿದು ತಕ್ಕುದೆಂದು ಅಱಿದು' ಬಗೆದು ಕಾವ್ಯವನ್ನು ರಚಿಸುವ ಕವಿ ಪ್ರತಿಭೆಯೆಂದರೆ, ಉತ್ತಮ ಚಿತ್ರಕಾರನ ಜಾಣ್ಮೆಯಂತೆ.

ಜಾತ್ಯಲಂಕಾರದ ಲಕ್ಷಣವೆಂದರೆ 'ಸ್ವಭಾವಾಖ್ಯಾನ'ವೆಂದು ನಿರ್ದಿಷ್ಟವಾಗಿದೆಯಷ್ಟೆ. ಹಿಂದೆ ಮಾರ್ಗಭೇದಕಾರಕಗಳಾದ ಪ್ರಮುಖ ಗುಣಗಳ ವಿವೃತಿಯಲ್ಲಿ 'ದಕ್ಷಿಣ ಮಾರ್ಗೋ

---

[1] ಇಲ್ಲಿ ಇನ್ನೊಂದು ಸಂದೇಹಕ್ಕೂ ಅವಕಾಶವಿರುವಂತೆ ತೋರುವುದು. ಈ ಪದ್ಯದಲ್ಲಿ ಆ 'ಉಱಿದ ಕೋಮಲಾಂಗಿ'ಯ ಬಾಹ್ಯಾಂಗಸೌಂದರ್ಯವನ್ನೇ ವರ್ಣಿಸಿದೆ ; ಅಲ್ಲದೆ, ಅವಳನ್ನು ಒಬ್ಬಳು 'ಲಳಿತವಿಳಾಸಿನಿ' ಎಂದೂ ಹೇಳಿದೆ. ಇಂತಹ ಸಂದರ್ಭದಲ್ಲಿ, ಉತ್ತಮ ಕವಿಗಳು ಸೀತೆಯ ಬಾಹ್ಯಾಂಗ ಸೌಂದರ್ಯವನ್ನು ವರ್ಣಿಸುವುದಕ್ಕಿಂತ, ಆ ಸ್ತ್ರೀಜನ ಶಿರೋಮಣಿಯ ಅಂತರಂಗಸೌಂದರ್ಯವನ್ನೇ ವರ್ಣಿಸುವರೆಂದು ನಮ್ಮೆಣಿಕೆ. ಇದರ ಪದರಚನಾಕ್ರಮವೇನೋ ದಕ್ಷಿಣಮಾರ್ಗಕ್ಕೊಪ್ಪುವಂತೆಯೇ ಇದೆ. 'ಉಱಿದಂ' ಎಂಬ ಕ್ರಿಯಾಪದಾರ್ಥವು ಮಾತ್ರ ಹೊಳೆದೊಡನೆ, ಆ 'ಕೋಮಳಾಂಗಿ'ಯ ಸೌಂದರ್ಯಾರ್ಥವೆಲ್ಲವೂ ಮನಸ್ಸಿನೊಳಗೆ ಮರಳುಗಾಡಿನ ಹೂವಾಗಿ ಹೋಗುತ್ತಿದೆ. ಹಾಗಿದ್ದರೆ, ಈ ನಿರ್ಭಾಗ್ಯೆ 'ಕೋಮಳಾಂಗಿ' ಯಾರು ? ಅವಳನ್ನು 'ಉಱಿದ' ನಾಯಕನೆಂಬವನಿನ್ನಾರು ? ಒಂದು ವೇಳೆ ಅವಳು ಕಾಶೀರಾಜಪುತ್ರಿಯಾದ ಅಂಬೆಯಾಗಿದ್ದಿರಬಹುದೆ ? ಅದು 'ಬಹುದು' ಎಂದಾದರೆ ಈ 'ಉಱಿದ'ವನು ಭೀಷ್ಮನಾಗಿದ್ದಿರಬೇಕು. ಅದು ಸರಿಯಾದರೆ, ಆಕೆಯ ಚೆಲುವನ್ನು ಈ ರೀತಿ ವರ್ಣಿಸಿದುದರಲ್ಲಿ ಅಷ್ಟೊಂದು ಕೊಕ್ಕರಿಕೆಯೊದಗುವಂತಿಲ್ಲ. ಹಾಗಿದ್ದರೆ, ಇದು ಯಾವುದೋ ಭಾರತದಿಂದ ಉದ್ಧೃತವಾದ ಪದ್ಯವಾಗುವುದು.

ದಿತೋಕ್ತಿಭೇದಕ ಗುಣಂ ಸ್ವಭಾವಾಖ್ಯಾನಂ' ಎಂದೂ ಹೇಳಿದೆಯಷ್ಟೆ. ಉತ್ತರಮಾರ್ಗದ ವಕ್ರೋಕ್ತಿಯಿಂದ ದಾಕ್ಷಿಣಾತ್ಯ ಮಾರ್ಗವನ್ನು ಭೇದಿಸುವ ಆ ಸ್ವಭಾವಾಖ್ಯಾನವೇ ಮತ್ತೆ ಸಮ, ಮಧುರ, ನಿಬಿಡ, ಕಾಂತ, ಸುಕುಮಾರ, ಸಮಾಹಿತ, ಪ್ರಸನ್ನ, ಉದಾರ, ಪ್ರಮಿತ ಗ್ರಾಮ್ಯ, (ಗದ್ಯಗತ) ಓಜಸ್ವಿ—ಎಂಬ ದಶಗುಣಗಳಾಗಿ ವಿಸ್ತರಿಸಿದೆ. ಆ ದಶಗುಣಗಳೆಂದರೆ, ಶಬ್ದಾರ್ಥೋಭಯಗಳು ಎಂಬುವನ್ನು ಮರೆಯಲಾಗದು. ಆ ಮೇಲೆ, ದಶಗುಣಯುತವಾದ ಆ ಸ್ವಭಾವಾಖ್ಯಾನರೂಪ ಗುಣವೇ ಬರಿಯ ಅರ್ಥವನ್ನೊಂದಿ ಜಾತಿ ಕ್ರಿಯಾ ಗುಣ ದ್ರವ್ಯಗಳೊಂದೊಂದರಲ್ಲಿಯೂ ಹರಿಯುತ್ತಿದೆ. 'ಭಾವಿಸಿ ಸಮಸ್ತ ವಸ್ತು ವಿಭಾವಿತ ಜಾತಿ ಕ್ರಿಯಾ ಗುಣ ದ್ರವ್ಯ'ಗಳ 'ಸ್ವಾಭಾವಿಕ ಗುಣಮಂ ಪೇಳ್ವುದು' ಎಂಬ ಲಕ್ಷಣವಾಕ್ಯದಿಂದ ಆ ಸ್ವಭಾವಾಖ್ಯಾನ ರೂಪಗುಣವೇ ಈ ಜಾತ್ಯಲಂಕಾರವಾಗಿ ಪರಿಣಮಿಸಿದುದೆಂಬುದು ಸ್ಪಷ್ಟವಾಗುತ್ತಿದೆ. ಸ್ವಭಾವಾಖ್ಯಾನವು ದಾಕ್ಷಿಣಾತ್ಯರ ಸಮ ಮಧುರಾದಿ ಕಾವ್ಯಧರ್ಮ(ಗುಣ)ಗಳಲ್ಲಿ ತಲೆದೋರಿದ ಬಿರಿಮುಗುಳಿನಂತಿದ್ದರೆ, ಈ ಜಾತ್ಯಲಂಕಾರದಲ್ಲಿ, ಅದು ಜಾತಿ ಕ್ರಿಯಾಗುಣ ದ್ರವ್ಯಗಳೆಂಬ ಎಲ್ಲವುಗಳಲ್ಲಿಯೂ ಕ್ರಮಬದ್ಧವಾಗಿ ನೆಲಸಿದ ಪುಷ್ಪವಾಗಿದೆ. ಈ ಅವಸ್ಥಾಭೇದವೇ ಗುಣಾಲಂಕಾರಗಳೊಳಗಿನ ಭೇದ. ಮೊದಲಿನದಾದ ಗುಣವು ನೂತನವಾಗಿದ್ದು ನಳನಳಿಸುವುದರಿಂದ ಅತ್ಯಾವಶ್ಯಕ; ಎರಡನೆಯದಾದ ಅಲಂಕಾರವು ವೃದ್ಧವಾದುದರಿಂದ, ಕೆಲವೆಡೆಯಲ್ಲಿ ಅತಿವೃದ್ಧವಾಗಿ ತೋರುವುದರಿಂದ, ವೈಕಲ್ಪಿಕ.

ದಕ್ಷಿಣೋತ್ತರ ಮಾರ್ಗಭೇದಕಗಳಾದ ಗುಣಗಳಿಗೆ ಕ್ರಮವಾಗಿ ಸ್ವಭಾವೋಕ್ತಿ ವಕ್ರೋಕ್ತಿಗಳೆಂದು ಹೆಸರಿತ್ತವರು ದಾಕ್ಷಿಣಾತ್ಯ ಲಾಕ್ಷಣಿಕರೆಂದೇ ತೋರುವುದು. ಏಕೆಂದರೆ, ವಾಸ್ತವವಾಗಿ ನೋಡಿದರೆ, ಮಾರ್ಗದ್ವಯದ ಗುರಿಯೂ ಸ್ವಭಾವಾಖ್ಯಾನ (ಸ್ವ + ಭಾವ + ಆಖ್ಯಾನ) ವೇ, ಎಂದರೆ ಕವಿಪ್ರತಿಭೆಗೆ ಇದಿರಾದ ಆಯಾ ಪದಾರ್ಥಗತ ಭಾವಗಳನ್ನು ವಿವರಿಸುವುದೇ, ಅಲ್ಲವೆ? ಈ ಆಖ್ಯಾನವು ದಾಕ್ಷಿಣಾತ್ಯರಿಗೆ 'ಸರಳೋಕ್ತಿ'ಯಿಂದ, ಔತ್ತರೇಯರಿಗೆ 'ವಕ್ರೋಕ್ತಿ'ಯಿಂದ-ಎಂಬುದಿಷ್ಟೇ ನಿಜವಾದ ಭೇದ. ಹಾಗಿಲ್ಲದೆ, ಔತ್ತರೇಯರಿಗೆ ಅಸ್ವಾಭಾವಿಕವಾಗಿ ಆಖ್ಯಾನಿಸಬೇಕೆಂಬ ಎಣಿಕೆಯೇ ಇರಲೆಡೆಯಿಲ್ಲ. ಅದರಿಂದ, ಮಧ್ಯಸ್ಥರಾದ ವಿಮರ್ಶಕರು ದಕ್ಷಿಣಮಾರ್ಗ ಭೇದಕಗುಣವು ವಕ್ರೋಕ್ತಿ ಭಿನ್ನವಾದ ಸರಳೋಕ್ತಿ ಎನ್ನುವುದೇ ಸಾಧುವಾಗಿ ತೋರುತ್ತಿದೆ. ಈ ಗುಣಗಳಿಗೆ ಕ್ರಮವಾಗಿ ಸೈತು (ಸರಳೋಕ್ತಿ), ಕೊಂಕು (ವಕ್ರೋಕ್ತಿ) ಎಂದು ಹೆಸರಿತ್ತ ಕನ್ನಡದ ನುಡಿಯೇ ಈ ಸಂದರ್ಭದಲ್ಲಿ ಸರಿಯಾದ 'ಉಭಯ ಸ್ವಭಾವಾಖ್ಯಾನ'ವನ್ನೆಸಗಿದೆ ಎನ್ನಬೇಕು.

## ೨. ರೂಪಕ

ಅರ್ಥಾಲಂಕಾರದೊಳಗೆ ಪ್ರಮುಖವಾದ ಭೇದಗಳು ಎರಡು : ವರ್ಣನೀಯವಾದ ವಿಷಯಗಳನ್ನು ಮಾತ್ರವೇ ವಿಸ್ತರಿಸುವುದೊಂದು; ಈ ವರ್ಣ್ಯವಿಷಯಗಳನ್ನು ಆಧರಿಸಿ

ಕೊಳ್ಳಲು ನೆರವಾಗುವಂತೆ ಅವರ್ಣ್ಯ ವಿಷಯಗಳನ್ನು ತಕ್ಕಂತೆ ಬೆರಸಿ ನಿರೂಪಿಸುವುದು ಇನ್ನೊಂದು. ಇವೆರಡನ್ನು ಆಲಂಕಾರಿಕರು ಕ್ರಮವಾಗಿ (೧) ವರ್ಣ್ಯ, ಪ್ರಕೃತವಿಷಯ, ಪ್ರಸ್ತುತ, ಉಪಮೇಯ ಎಂದೂ (೨) ಅವರ್ಣ್ಯ, ಅಪ್ರಕೃತವಿಷಯ, ಅಪ್ರಸ್ತುತ, ಉಪಮಾನ ಎಂದೂ ಕರೆಯುತ್ತಾರೆ. ಮೊದಲಿನದು ದೇಶಕಾಲಾದಿ ಸಂದರ್ಭದಿಂದ ಪ್ರಕೃತ ವಿಷಯವಾದರೆ, ಮತ್ತಿನದು ಅಪ್ರಕೃತ ವಿಷಯ. ಹೀಗೆ ಪ್ರಕೃತ ವಿಷಯ ಗಳನ್ನು ಮಾತ್ರ ವಿಸ್ತರಿಸುವ ಅರ್ಥಾಲಂಕಾರಗಳೊಳಗೆ (೧) 'ವಾಸ್ತವಾಲಂಕಾರ', (೨) ಅತಿಶಯಾಲಂಕಾರ ಎಂಬ ಎರಡು ಭೇದಗಳನ್ನೆಸಗಬಹುದಾದರೆ, ಅಪ್ರಕೃತದೊಡನೆ ಪ್ರಕೃತವನ್ನು ನಿರೂಪಿಸುವ ಅರ್ಥಾಲಂಕಾರದಲ್ಲಿ (೧) ಔಪಮ್ಯಾಲಂಕಾರ, (೨) ಶ್ಲಿಷ್ಟಾ ಲಂಕಾರ ಎಂಬ ಭೇದಗಳನ್ನು ಕಲ್ಪಿಸಬಹುದು. 'ರೂಪಕಾಲಂಕಾರ'ವು, ಅಪ್ರಕೃತ ವಿಷಯದ ಸಹಾಯದೊಡನೆ ಪ್ರಕೃತ ವಿಷಯವನ್ನು ನಿರೂಪಿಸುವ 'ಔಪಮ್ಯ'ದ ವರ್ಗಕ್ಕೆ ಸೇರಿದುದೆಂಬುದನ್ನು ಗಮನಿಸಬೇಕು. ಈಗ, ಇದನ್ನು ಗ್ರಂಥಕಾರನಿತ್ತ ಲಕ್ಷಣೋದಾ ಹರಣಗಳೊಡನೆ ಪರಿಶೀಲಿಸಬೇಕು.

ರೂಪಕವೆಂಬುದು ಪೆಱವಱ
ರೂಪಾದಿಗುಣಂಗಳಾನಭೇದೋಕ್ತಿಗಳಿಂ
ರೂಪಿಸುವುದಿಂತು ಬಾಹುಲ
ತಾ ಪಾದಾಂಬುಜ ಮುಖೇಂದು ನಯನಾಳಿಗಳಿಂ —(iii, 12)

'ಅಪ್ರಕೃತಗಳ (ಪೆಱವಱ) ರೂಪವೇ ಮೊದಲಾದ ಗುಣಗಳನ್ನು (ಪ್ರಕೃತಗಳ ರೂಪಾದಿಗಳೊಡನೆ) ಅಭೇದೋಕ್ತಿಗಳಿಂದ ರೂಪಿಸುವುದೇ 'ರೂಪಕ.' ಬಾಹುಲತೆ (ಬಾಹುರೂಪದಲ್ಲಿ ತೋರುವ ಲತೆ), ಪಾದಾಂಬುಜ (ಪಾದರೂಪದ ಅಂಬುಜ), ಮುಖೇಂದು, ನಯನಾಳಿ ಎಂಬವು ರೂಪಕದ ದೃಷ್ಟಾಂತಗಳು.

ಇಲ್ಲಿ, ಕ್ರಮವಾಗಿ ಲತೆ, ಅಂಬುಜ, ಇಂದು, ಅಳಿಗಳ ರೂಪಾದಿ ಗುಣಗಳು ಯುವತಿ ಯೊಬ್ಬಳ ಬಾಹು, ಪಾದ, ಮುಖ, ನಯನಗಳ ಗುಣಗಳೊಡನೆ ಅಭೇದೋಕ್ತಿಗಳಿಂದ ರೂಪಿತವಾಗಿವೆ. ಆಕೆಯ ಕೈ, ಅಡಿ, ಮೋರೆ, ಕಣ್ಣುಗಳು ಚೆಲುವಾಗಿವೆ ಎಂದು ವಿಷಯ ಗಳನ್ನು ಮಾತ್ರ ನಿರೂಪಿಸಿದರೆ, ಒಂದು ತೆರದ ಸ್ವಭಾವಾಖ್ಯಾನವೇನೋ ಆಗಬಹುದು. ಆದರೆ, ಹಿಂದೆ ಜಾತಿ ಕ್ರಿಯಾ ಗುಣ ದ್ರವ್ಯಗಳೆಂಬ ಕ್ರಮವಿಡಿದು ವರ್ಣಿಸಿದ ಸ್ವಭಾ ವಾಖ್ಯಾನದಂತೆ ಇದು ಅಂದವಾಗುವುದೆ? ಆಗದು. ಲತಾದಿಗಳೊಡನೆ ರೂಪಿಸಿ ಬಾಹ್ವಾದಿ ಗಳನ್ನು ನಿರೂಪಿಸಿದುದರಿಂದ, ಅವುಗಳ ಆಕಾರಾದಿಗಳನ್ನು ಒಂದಿಷ್ಟು ಅಂದವಾಗಿ ನಿರೂಪಿಸಿದಂತಾಗಿದೆ. ಈ ರೂಪಕವು, 'ಒಂದಱ ಮಾತುಗಳನ್ನು ಪೆಱತೊಂದಱತೊಳಱ ದಿಟ್ಟು' ವರ್ಣಿಸುವ 'ಸಮಾಹಿತ (ಸಮಾಧಿ)'ಗುಣವೇ ಅರಳಿದ ಅಲಂಕಾರವಾಗಿದೆ ಯೆಂಬುದನ್ನು ಅವಧರಿಸಿಕೊಳ್ಳಬಹುದು. ಬೇಕಾದರೆ, ಗ್ರಂಥಕಾರನು 'ಸಮಾಹಿತ' ಗುಣಕ್ಕೆ ಕೊಟ್ಟಿರುವ ಉದಾಹರಣವನ್ನೇ ನೋಡಬಹುದು—

ವಿನಿಮೀಳಿತ ಕುಮುದವನಂ
ಜನಿತೋನ್ಮೀಲಾರವಿಂದ ವನಲಕ್ಷ್ಮೀಶಂ
ದಿನಕರನುದಯಂಗೆಯ್ದಂ
ವಿನಿಹತತಿಮಿರಂ ವಿಶಿಷ್ಟ ಸಂಧ್ಯಾಶ್ಲೇಷಂ —(ii, 72)

ಇಲ್ಲಿ, 'ಲೋಚನಾದಿ ಧರ್ಮ'ಗಳೆನ್ನಿಸಿದ 'ವಿನಿಮೀಳನ' ಮೊದಲಾದ ಗುಣಗಳು ಕುಮುದಾದಿಗಳಲ್ಲಿ ಆರೋಪಿತವಾಗಿದೆ. ಆದರೆ, ಅಪ್ರಕೃತವಾದ 'ಲೋಚನ'ದ ಧರ್ಮವು ಪ್ರಕೃತವಾದ ಕುಮುದದಲ್ಲಿ ಆರೋಪಿತವಾಗಿದೆಯಲ್ಲದೆ, ಅದರಿಂದ 'ಕುಮುದ'ವನ್ನು ಲೋಚನವನ್ನಾಗಿ ರೂಪಿಸಿ ಹೇಳಿಲ್ಲ. ಆ ರೂಪಣ ಕ್ರಮವು ಈ ರೂಪಕಾಲಂಕಾರ ದೃಷ್ಟಾಂತದ ಉಭಯ ಗುಣಗಳಲ್ಲಿಯೂ ಪೂರ್ಣವಾದುದರಿಂದ, ಇದು ರೂಪಕಾಲಂಕೃತಿ. ಅಲ್ಲಿ, ಅನ್ಯ (ಉಪಮಾನ) ಧರ್ಮವನ್ನು ಮಾತ್ರವೇ ಪ್ರಕೃತದ ಧರ್ಮ (ಗುಣ)ವಾಗಿ ನಿರೂಪಿಸಿದುದರಿಂದ, ಅದು 'ಸಮಾಹಿತ ಗುಣ.' ಗುಣಗಳೊಳಗೆ ಪ್ರಕೃತಾಪ್ರಕೃತಗಳೆಂಬ ಅರ್ಥದ್ವಯ ಸಂಬದ್ಧವಾದುದೆಂದರೆ ಸಮಾಹಿತವೇ ಸರಿ. ಈ 'ಸಮಾಹಿತ ಗುಣ'ವೇ ವೃದ್ಧಿವಡೆದು,—ಎಂದರೆ ರೂಪಾದಿ ಗುಣಗಳನ್ನೊಂದಿ, ಅಭೇದೋಕ್ತಿಗಳಿಂದ ರೂಪಿತವಾಗಿ 'ರೂಪಕಾಲಂಕಾರ'ವೆನ್ನಿಸಿರಬೇಕು. ಇದು ಕ್ರಮಾಂತರದಲ್ಲಿ ಮಾರ್ಪಟ್ಟು, ಬೇರೆ ಅಲಂಕಾರವೆನ್ನಿಸಿದುದನ್ನು ಮುಂದೆ ಸೂಚಿಸುತ್ತೇವೆ.

ರೂಪಕಾಲಂಕಾರದಲ್ಲಿ (i) ಸಮಸ್ತ ರೂಪಕ, (ii) ವ್ಯಸ್ತ ರೂಪಕ, (iii) ಸಾವಯವ ರೂಪಕ, (iv) ಅವಯವಿ ರೂಪಕ, (v) ವಿಷಮ ರೂಪಕ, (vi) ವಿಶೇಷಣ ರೂಪಕ, (vii) ವಿರುದ್ಧ ರೂಪಕ, (viii) ಹೇತು ರೂಪಕ, (ix) ಶ್ಲಿಷ್ಟ ರೂಪಕ, (x) ವಿಭಿನ್ನ ರೂಪಕ, (xi) ರೂಪಕರೋರು ರೂಪಕ, (xii) ರೂಪಕಾಪಹ್ನುತಿ, (xiii) ಯುಕ್ತ ರೂಪಕ ಮತ್ತು (xiv) ವ್ಯಾಜರೂಪಕ—ಎಂಬ ಹದಿನಾಲ್ಕು ಭೇದಗಳನ್ನು ಗ್ರಂಥಕಾರನು ಲಕ್ಷ್ಯ ಸಮೇತವಾಗಿ ವಿವರಿಸಿದ್ದಾನೆ.

### (i) ಸಮಸ್ತ ರೂಪಕ

ಸ್ಮಿತ ಕುಸುಮಂ, ಅಧರ ಪಲ್ಲವಂ, ಅತಿಶಯ ನಯನಾಳಿ,
ಬಾಹುಶಾಖಂ ಕಾಂತಾಲತೆ ಎಂದಿಂತು ಸಮಸ್ತಾಶ್ರಿತಂ
ಸಮಸ್ತಂ ಸಮಸ್ತರೂಪಕಂ —(iii, 13)

ಎಂಬಲ್ಲಿ ಸಮಾಸದಿಂದ ಉಪಮೇಯೋಪಮಾನಗಳ ರೂಪಣವಾಗಿದೆ; 'ಬಾಹುಲತೆ' ಎಂಬಂತೆ ಒಂದು ಭಾಗದಲ್ಲಿ ಮಾತ್ರ ಸಮಸ್ತವಾದುದಲ್ಲ. 'ಸ್ಮಿತ' ಮೊದಲ್ಗೊಂಡು 'ಕಾಂತೆ'ಯ ವರೆಗಣ ಎಲ್ಲ ಭಾಗಗಳೂ ಹಾಗೆ ಸಮಾಸದಿಂದ ರೂಪಿತವಾದುದರಿಂದ ಇದು 'ಸಮಸ್ತ ರೂಪಕ'. ಇಂಥ ರೂಪಣ ಸಂಘಾತ ಕ್ರಮವೆಂಬುದು, ಸರಳ ಮಾರ್ಗವನ್ನುಳಿದು ವಕ್ರಮಾರ್ಗವತ್ತಲೇ ಗುರಿವಡೆದುದು ಸೂಚಿತವಾಗುತ್ತಿದೆಯಲ್ಲವೆ ?

(ii) ವ್ಯಸ್ತ ರೂಪಕ

(ವಿ + ಅಸ್ತ, ಎಂದರೆ ಸಮಾಸ ರಹಿತವಾದ, ರೂಪಕ)

ಕುಸುಮಂ ಸ್ಮಿತಂ, ಅಳಿ ನಯನಂ, ಕಿಸಲಯಂ ಅಧರಂ
ಭುಜದ್ವಯಂ ವಿಟಪಂ (ಗೆಲ್ಲು), ಅಸುವಲ್ಲಭೆ
(ಪ್ರಾಣಪ್ರಿಯೆ) ಲತೆ—ಎಂಬ ಈ ಸಮಾಸರಹಿತ ಕ್ರಮದ
ರೂಪಕಕ್ಕೆ 'ವ್ಯಸ್ತ ರೂಪಕ' ಎಂದು ಹೆಸರು —(iii, 14)

ಹಿಂದಿನ ದೃಷ್ಟಾಂತದಲ್ಲಿ 'ಸ್ಮಿತ ಕುಸುಮಂ' (ಸ್ಮಿತವೆಂಬ ರೂಪವಡೆದ ಕುಸುಮ) ಮೊದಲಾದ ಸಮಾಸಗಳೊಳಗೆ ಉಪಮೇಯೋಪಮಾನ ಪದಾರ್ಥಗಳು ಕ್ರಮವಾಗಿ ಪೂರ್ವೋತ್ತರ ಸ್ಥಾನಗಳಲ್ಲಿ ಬೆರೆತಿವೆ. ಈ 'ವ್ಯಸ್ತ' ದೃಷ್ಟಾಂತದೊಳಗೆ 'ಕುಸುಮಂ ಸ್ಮಿತಂ' ಎಂದು ಮೊದಲಾಗಿ ಸಮಸ್ತ ರೂಪಕಕ್ಕೆ ಬದಲಾಗಿ, ಉಪಮಾನೋಪಮೇಯಗಳು ಕ್ರಮಗೋಡು ಆಯಾ ಸ್ಥಳಗಳನ್ನೊಂದಿವೆ ಎಂಬುದನ್ನರಿತುಕೊಳ್ಳಬೇಕು. ಅದಕ್ಕೆ ಆ ರೂಪಣಯುತವಾದ, ಎಂದರೆ 'ಅವಧಾರಣಾಪೂರ್ವಪದ' ಕರ್ಮಧಾರಯ ಸಮಾಸದ, ರಚನಾಕ್ರಮವೇ ಕಾರಣ. 'ಸ್ಮಿತ ಕುಸುಮಂ' ಇತ್ಯಾದಿ ಕಡೆಗಳಲ್ಲಿ 'ಸ್ಮಿತಂ ಏವ ಕುಸುಮಂ' [ಸ್ಮಿತಂ (ಉಪಮೇಯ), ಏವ (ಅವಧಾರಣೆ), ಕುಸುಮಂ (ಉಪಮಾನ)] ಈ ಕ್ರಮವಿಡಿದು, ಎಂದರೆ ಪ್ರಕೃತವಾದ 'ಸ್ಮಿತ' ಮೊದಲಾದ ಪದಗಳು ಪೂರ್ವಪದಗಳಾಗಿಯೂ ಅಪ್ರಕೃತವಾದ 'ಕುಸುಮ' ಇತ್ಯಾದಿ ಪದಗಳು ಉತ್ತರ ಪದಗಳಾಗಿಯೂ ನೆಲೆಗೊಂಡರೆ ಮಾತ್ರವೇ ಉದ್ದಿಷ್ಟಾರ್ಥವು ನೆಲೆಗೊಳ್ಳುವುದು.

(iii) ಸಾವಯವ ರೂಪಕ

—'ಈ ಕಾಂತೆ ಸ್ಫುರಿತಾಧರಪಲ್ಲವೆಯಾಗಿ, ಬಂಧುರ ಲೋಚನ ಕುಸುಮೆಯಾಗಿ, ಲೋಲ ಭುಜ ಶಾಖೆಯಾಗಿ ಮನೋಹರೆಯಾಗಿರುತ್ತಾಳೆ'. —(iii, 15)

ಇಲ್ಲಿ ವಿಶಿಷ್ಟಾವಯವಗಳಲ್ಲಿ ಮಾತ್ರ ಲತೆಯ ಆಯಾ ಅಂಗಗಳನ್ನು ಆರೋಪಿಸಿದುದಲ್ಲದೆ, ಅವಯವಿಯಾದ ಕಾಂತೆಯಲ್ಲಿ ಲತಾತ್ವವನ್ನು ಆವಾಹಿಸಿಲ್ಲ.

(iv) ಅವಯವಿ ರೂಪಕ

—'ತರಳತರ ಲೋಚನಗಳುಳ್ಳ, ನಿರ್ಭರ ರಾಗರಸದಿಂದ ಕೂಡಿದ ನಿನ್ನ ಮುಖಾರವಿಂದವು ಒಸಗೆಯನ್ನು ದೊರೆಕೊಳಿಸಿತು.' —(iii, 16)

ಇಲ್ಲಿ, ಮುಖವೆಂಬ ಅವಯವಿಯನ್ನು ಮಾತ್ರ ಅರವಿಂದದೊಡನೆ ರೂಪಣಗೊಳಿಸಿದೆ; ಅದರ ಅವಯವವಾದ ಲೋಚನವನ್ನು ತುಂಬಿಗಳೊಡನೆ, ಆ ಲೋಚನದಲ್ಲಿ ಚಿಮ್ಮುವ ರಾಗರಸವನ್ನು ಮಕರಂದದೊಡನೆ ರೂಪಿಸಲಿಲ್ಲ ಹಿಂದಿನ ಪದ್ಯದಲ್ಲಿ ಹೇಗೋ ಹಾಗೆ ಇಲ್ಲಿ ಆಯಾ ವಿಶಿಷ್ಟ ವಿಷಯವು ರೂಪಿತವಾಗದಿದ್ದರೂ ಅರ್ಥವು ತಾನಾಗಿ ಸ್ಫುರಿತವಾಗುತ್ತದೆ.

(v) ವಿಷಮ ರೂಪಕ

—"'ಮೃದುತರ ಕಪೋಲ ಫಲಕ'ಗಳುಳ್ಳ, ಉನ್ನತೋನ್ನತಗಳಾದ ಹುಬ್ಬುಗಳೆಂಬ ಬಿಲ್ಲುಗಳುಳ್ಳ, (ನಿನ್ನ) ವದನಾಂಬುಜವು 'ಎನಗೆ ಮುದಮಂ ಪಡೆದತ್ತು'— ಎಂಬುದಿದು 'ವಿಷಮಿತ ರೂಪ'ದ (ಎಂದರೆ, ಸಮತಾರಹಿತವಾದ ಪದರಚನೆಯನ್ನೊಂದಿರುವುದರಿಂದ) 'ವಿಷಮ ರೂಪಕ.'" —(iii, 17)

'ವಿಷಮಿತ ರೂಪ'ದಿಂದಾಗಿ ಇದಕ್ಕೆ 'ವಿಷಮ ರೂಪಕ'ವೆಂಬ ಹೆಸರಾಮಿದೆಂಬುದನು ಗ್ರಂಥಕಾರನೇ ಸೂಚಿಸುತ್ತಾನೆ. ಇಲ್ಲಿ 'ವಿಷಮಿತರೂಪ'ವೇನೆಂಬುದನ್ನು ಪರಿಶೀಲಿಸಬೇಕು. 'ಮೃದುತರ ಕಪೋಲ ಫಲಕಂ....ಆಯತೋನ್ನತ ಭ್ರೂಚಾಪಂ' ಎಂಬಲ್ಲಿ ಅಕ್ಷರಗಳೊಳಗಿನ ವಿಷಮತೆ ಹೇಗೂ ಸ್ಪಷ್ಟವಾಗಿದೆಯಷ್ಟೆ. ಅಲ್ಲದೆ, ಅರ್ಥದೊಳಗೂ ವಿಷಮತೆ ವ್ಯಕ್ತವಾಗಿರುವುದನ್ನು ನೋಡಿ : 'ವದನ'ವೆಂಬ 'ಅಂಬುಜ'ವು 'ಮೃದುತರ'ವಾದರೂ 'ಕಪೋಲ'ವೆಂಬ 'ಫಲಕ'ವುಳ್ಳುದೆಂದೂ 'ಆಯತೋನ್ನತ'ವಾದ ಹುಬ್ಬೆಂಬ 'ಚಾಪ'ಗಳುಳ್ಳುದೆಂದೂ ವರ್ಣಿತವಾಗಿದೆ. ಹೀಗೆ, 'ಫಲಕ (ಹಲಗೆ)', 'ಚಾಪ' (ಬಿಲ್ಲು)ಗಳು 'ಅಂಬುಜ'ದಲ್ಲಿ ಸೇರಿದಂತೆ ಬಣ್ಣಿಸುವುದೆಂದರೆ, 'ಸಮತೆ'ಯಲ್ಲ, 'ವಿಷಮತೆ'ಯೇ ಸರಿ. ಇದು ಔತ್ತರೇಯ ಮಾರ್ಗದ ರೂಪಕವೇ ಆಗಿರಬೇಕು.

(vi) ವಿಶೇಷಣ ರೂಪಕ

ದಂಡಿಯ ಕ್ರಮವಿಡಿದೇ ನಿರೂಪಿತವಾದ ರೂಪಕ ಚಕ್ರದಲ್ಲಿ ಇದೊಂದು ರೂಪಕಭೇದವು ವಿಪರ್ಯಸ್ತವಾಗಿ ತೋರುತ್ತಿದೆ. ಹೆಸರೇ ಸೂಚಿಸುವಂತೆ, ಇದರೊಳಗೆ ವಿಶೇಷಣ ಭಾಗದಲ್ಲಿ ರೂಪಕವಿರಬೇಕು. ಆದರೆ, ಗ್ರಂಥಕಾರನಿತ್ತ ದೃಷ್ಟಾಂತವನ್ನು ನೋಡಿ—

ಜಿನಚರಣ ನಖಾದರ್ಶಂ
ವಿನತಾಮರರಾಜ ರಾಜ ವದನ ಪ್ರತಿಮಂ
ಮನದೊಳ್ ಸಲೆ ನಿಲ್ಕೆಂಬುದು
ವಿನಿಶ್ಚಿತ ವಿಶೇಷಣೋರು ರೂಪಕಮಕ್ಕುಂ —(iii, 18)

ಇದರೊಳಗೆ, 'ಜಿನಚರಣನಖಾದರ್ಶಂ' ಎಂಬುದು ವಿಶೇಷ್ಯವಾಗಿಯೂ 'ವಿನತಾಮರರಾಜ ರಾಜವದನ ಪ್ರತಿಮಂ' ಎಂಬ ದ್ವಿತೀಯ ಪಾದವು ವಿಶೇಷಣವಾಗಿಯೂ ಇರುವುದು ಸರಿಯಷ್ಟೆ. ಆದರೆ, ರೂಪಕವಿರುವುದು ವಿಶೇಷ್ಯದಲ್ಲಿ, ವಿಶೇಷಣದಲ್ಲಲ್ಲ. ಆದದರಿಂದ, ಇದು 'ವಿಶೇಷ್ಯ ರೂಪಕ'ದಂತೆ ತೋರುವುದೇ ಹೊರತು, 'ವಿಶೇಷಣ ರೂಪಕ'ವಾಗಿ ಕಾಣುವುದಿಲ್ಲ. ಈ ರೂಪಕ ಭೇದಕ್ಕೆ ದಂಡಿಯು ಕೊಟ್ಟಿರುವ ಲಕ್ಷ್ಯವನ್ನೂ ಲಕ್ಷಣ ಸಮನ್ವಯವನ್ನೂ ಭಾವಿಸಿರಿ—

ಹರಿಪಾದಃ ಶಿರೋಲಗ್ನ ಜಹ್ನುಕನ್ಯಾಜಲಾಂಶುಕಃ
ಜಯತ್ಯಸುರ ನಿಶ್ಶಂಕ ಸುರಾನಂದೋತ್ಸವ ಧ್ವಜಃ

ವಿಶೇಷಣ ಸಮಗ್ರಸ್ಯ ರೂಪಂ ಕೇತೋರ್ಯದೀದೃಶಂ
ಪಾದೇ ತದರ್ಪಣಾದೇತತ್ ಸವಿಶೇಷಣ ರೂಪಕಂ
—'ಕಾವ್ಯಾದರ್ಶ,' (ii, 81–82)

ಇಲ್ಲಿ 'ಧ್ವಜ'ಕ್ಕೆ ವಿಶೇಷಣವಾಗಿರುವ 'ಶಿರೋಲಗ್ನಜಹ್ನುಕನ್ಯಾ ಜಲಾಂಶುಕಃ' ಎಂಬಲ್ಲಿ ರೂಪಕವಿರುವುದು ಸ್ಪಷ್ಟವಾಗಿದೆಯಷ್ಟೆ. ಅದರಂತೆ ಮೇಲಿನ 'ವಿನತಾಸುತ ರಾಜರಾಜವದನ ಪ್ರತಿಮಂ' ಎಂಬಲ್ಲಿ ರೂಪಕವು ತೋರುವುದಿಲ್ಲ. ಇದಕ್ಕೆ ಪ್ರತಿಕಾರರ ಹಸ್ತಸ್ಖಾಲಿತ್ಯವು ಕಾರಣವಾಗಿದ್ದರೂ ಇರಬಹುದು. 'ವಿನತಾಸುತರಾಜ ವದನರಾಜ ಪ್ರತಿಮಂ' ಎಂದು ತಿದ್ದಿಕೊಂಡರೆ, ಈ ದೋಷವು ಪರಿಹಾರವಾಗುವುದಲ್ಲವೆ ?

(vii) ವಿರುದ್ಧ ರೂಪಕ

—'ನಿನ್ನ ಮುಖೇಂದು ಬಿಂಬವು ಕಮಲಾಕರದಲ್ಲಿ ಸಂಕೋಚಭಾವನನ್ನೂ ಚಕ್ರವಾಕ ಗಳಲ್ಲಿಅಳಲನ್ನೂ ಮಾಡದು ; (ಆದರೂ ಅದು) ಇಂದುವಿಗೆ ಸಮಾನವಾಗಿದೆ' – (iii, 19)

ಇಲ್ಲಿ 'ನಿನ್ನ ಮುಖೇಂದು ಬಿಂಬಂ ಇಂದುಗೆ ಸಮಂ' ಎಂಬುದು ಉಪಮಾಲಂಕಾರ ವಲ್ಲದೆ ರೂಪಕವಲ್ಲ ; ಮುಖೇಂದು' ಎಂಬುದಷ್ಟೆ ರೂಪಕ. ಆ 'ಮುಖೇಂದು' ಚಂದ್ರಕಾರ್ಯ ಗಳಾದ 'ಕಮಲಾಕರ ಸಂಕೋಚ'ವನ್ನೂ 'ಚಕ್ರವಾಕ ವಿಯೋಗ'ವನ್ನೂ 'ಮಾಡದು' ಎಂಬುದು ಚಂದ್ರಕಾರ್ಯ ವಿರೋಧ. ಆದರಿಂದ ಇದು 'ವಿರುದ್ಧ ರೂಪಕ.' ಈ 'ಮುಖೇಂದು' ಚಂದ್ರಕಾರ್ಯಗಳನ್ನು ಮಾಡದು ಎಂದಂತೆ, ಅನ್ಯಕಾರ್ಯಗಳನ್ನು ಮಾಡುವುದು ಎಂದು ಬಣ್ಣಿಸಿದರೂ 'ವಿರುದ್ಧ ರೂಪಕ'ವೇ ಆಗಬಹುದು. ಅಂತೂ ಇಲ್ಲಿ ವಕ್ರತೆಯೇ ವ್ಯಕ್ತವಾಗಿದೆ.

(viii) ಹೇತು ರೂಪಕ (ಹೇತ್ವಲಂಕಾರದಿಂದ ಕೂಡಿದ ರೂಪಕ) :

—'(ರಾಜನೆ), ನೀನು ಗೌರವದಿಂದ ಕುಲಪರ್ವತವಾಗಿ, ಸ್ಥೈರಣೆಯಿಂದ ನೆಲವಾಗಿ, ಕಾಂತಿ ಯಿಂದ ಚಂದ್ರನಾಗಿ, ಗಂಭೀರತೆಯಿಂದ ಜಲನಿಧಿಯಾಗಿ ಕಂಗೊಳಿಸುವೆ'—(iii, 20)

ಗೌರವಾದಿ ಹೇತುಗಳಿಂದ ಅರಸನನ್ನು ಕುಲಗಿರಿ ಮೊದಲಾದವುಗಳನ್ನಾಗಿ ರೂಪಿಸಿದ ಕಾರಣ, ಇದು 'ಹೇತು ರೂಪಕ.' ಆದರೆ, ಇಲ್ಲಿ ರೂಪಕಹೇತುಗಳಾಗಿ ನಿರೂಪಿಸಿದ 'ಗೌರವ' ಇತ್ಯಾದಿಗಳು ಒಂದಿಷ್ಟು ಶ್ಲೇಷಚ್ಛಾಯೆಯಿಂದ ಕೂಡಿವೆ. 'ಕುಲಗಿರಿ' ಮೊದಲಾದ ಅಪ್ರಕೃತಗಳನ್ನೊಂದಿದ 'ಗೌರವಾ'ದಿಗಳ ಅರ್ಥಗಳಿಗೂ ಪ್ರಕೃತನಾದ ರಾಜ ನನ್ನೊಂದಿದ 'ಗೌರವಾ'ದಿಗಳ ಅರ್ಥಗಳಿಗೂ ಒಂದಿಷ್ಟು ಅಂತರಗಳಿವೆಯಲ್ಲವೆ ? ಆದರೂ ಆ ಗೌರವಾದಿಗಳನ್ನು ಇಲ್ಲಿ ಆಯಾ ರೂಪಣಗಳಿಗೆ ಹೇತುಗಳನ್ನಾಗಿ ನಿರೂಪಿಸಿದುದರಿಂದ ಇದು 'ಹೇತು ರೂಪಕ'ವಾಗುವುದು. ರಾಜನೊಬ್ಬನನ್ನೇ ಭಿನ್ನಭಿನ್ನ ಧರ್ಮಗಳಿಗನುಗುಣ ವಾಗಿ ಭಿನ್ನ ಭಿನ್ನ ಸ್ವರೂಪನನ್ನಾಗಿ ವರ್ಣಿಸಿದುದರಿಂದ ಮತ್ತಿನ ಲಾಕ್ಷಣಿಕರು ಇದು

‘ಉಲ್ಲೇಖಾಲಂಕಾರ’ ಎನ್ನಲೂ ಬಹುದು. ಗೌರವಾದಿಗಳು ವಾಸ್ತವಿಕ ಕಾರಣ (ಲಿಂಗ) ಗಳಲ್ಲದೆ, ಕಾವ್ಯದ ವರ್ಣನಾಬಲದಿಂದ ಮಾತ್ರವೇ ಕಾರಣ (ಲಿಂಗ)ವಾದುವರಿಂದ ಮತ್ತಿನ ಕೆಲವರು ಇದನ್ನೇ ‘ಕಾವ್ಯಲಿಂಗ’ ಎನ್ನಲೂ ಬಹುದು. ಅದು ಹಾಗಿರಲಿ.

ಈ ರೂಪಕವು ಮುಂದೆ ನಿರೂಪಿಸಲಿರುವ ‘ಹೇತು’ ಎಂಬ ಅಲಂಕಾರದಿಂದ ಮಿಶ್ರಿತ ವಾಗಿದೆ.

(ix) **ಶ್ಲಿಷ್ಟ ರೂಪಕ** (ಶ್ಲೇಷಾಲಂಕಾರದಿಂದ ಕೂಡಿದ ರೂಪಕ) :

—‘(ರಾಜನೆ), ನಿನ್ನ ‘ವಿಮಲ ಯಶೋವಿಧು’ ‘ಕುಮುದಾನಂದಕರಂ [೧. ಕುಮುದ (ನೈದಿಲೆ)ಗಳಿಗೆ ಆನಂದವನ್ನೊದಗಿಸುವ ಕಿರಣ (ಕರ)ಗಳಿಂದ ಕೂಡಿದವನು ; ೨. ಭೂಮಿಗೆ (ಕು—ಭೂಮಿ) ಸಂತೋಷಾನಂದ (ಮುದ್—ಆನಂದ) ಗಳನ್ನೊದಗಿಸುವುದು] ಮತ್ತು ‘ಕಮಲಾಕರ ರಾಗಹರಂ’ [೧. ಪದ್ಮಾಕರಗಳ ಆನಂದವನ್ನು ಹೋಗಲಾಡಿಸುವುದು ; ೨. ಕೋಶ (ಕಮಲಾಕರ) ಪ್ರೇಮವನ್ನು ಹೋಗಲಾಡಿಸುವುದು] ; ಅದರಿಂದಲೇ ಆ ನಿನ್ನ ಯಶೋವಿಧು ಉದಾರವಾಗಿದೆ. [೧. ವಿಶಾಲವಾಗಿದೆ ; ೨. ಉದಾತ್ತತೆಯಿಂದ ‘ಉದಾರ’ ನೆಂಬ ಬಿರುದನ್ನೇ ಪಡೆದ ನೃಪತುಂಗನ (?) ಯಶಸ್ಸೂ ಉದಾರವಾಗಿದೆ.]’”—(iii, 21)

ಶ್ಲೇಷಾಲಂಕಾರವೆಂಬುದು ಅರ್ಥ ದೃಷ್ಟಿಯಿಂದ ಅತಿ ವಕ್ರವಾಗಿ ಔತ್ತರೇಯ ಮಾರ್ಗಕ್ಕೆ ವಿಶೇಷವಾಗಿ ಒಪ್ಪುವುದೆಂದು ನಮ್ಮೆಣಿಕೆ. ಇಲ್ಲಿ ಎರಡು ಅಲಂಕಾರಗಳಿರುವುದನ್ನು ಭಾವಿಸಬೇಕು.

(x) **ವಿಭಿನ್ನ ರೂಪಕ**

ಇದರ ಲಕ್ಷ್ಯ ಹೀಗೆ—

ಪರಿಚಿತ ಸನಾಭಿ ರಾಗಾಂ
ಕುರ ಜಲಸೇಚಂ ವಿರೋಧಿ ತರುದವದಹನಂ
ಪರಮೋದಯ ರವಿ ಗಗನಂ
ಪರಾಕ್ರಮಮದೆನೆ ವಿಭಿನ್ನರೂಪಕಮಕ್ಕುಂ[1] —(ii, 22)

—“ಪರಾಕ್ರಮವೆಂಬ ‘ಪರಮೋದಯ ರವಿ ಗಗನ’ವು ‘ಪರಿಚಿತ ಸನಾಭಿ (ಬಂಧು)ಗಳ ಅನುರಾಗವೆಂಬ (ಅಥವಾ ಅನುರಾಗದ) ಅಂಕುರಕ್ಕೆ ಜಲಸೇಚನ ರೂಪವಾದುದು ; ವಿರೋಧಿಗಳೆಂಬ (ಅಲ್ಲವೆ ವಿರೋಧಿಗಳ) ತರುಗಳಿಗೆ ಕಾಡುಗಿಚ್ಚಿನ ಸ್ವರೂಪವಾದುದು.”

ಹಿಂದಿನ ‘ವಿಷಮ ರೂಪಕ’, ‘ವಿರುದ್ಧ ರೂಪಕ’ಗಳೂ ಈ ‘ವಿಭಿನ್ನ ರೂಪಕ’ವೂ ಸಾಮಾನ್ಯವಾಗಿ ಏಕರೀತಿಯವುಗಳು. ಇವುಗಳೊಳಗೆ ಭೇದವೆಂಬುದು ಬಹಳ ಕಡಿಮೆ. ಇಲ್ಲಿ

---

[1] ಈ ಪದ್ಯಕ್ಕೆ ‘ಕಾವ್ಯಾದರ್ಶ’ದೊಳಗೆ ಆಕರ ತೋರುವುದಿಲ್ಲ.

'ಪೂರ್ವನು' ಮತ್ತು 'ಪರನೋದಯ (ನೃಪತುಂಗ ?)ನೆಂಬ ರವಿ(ಯ) ಗಗನ' ಎಂಬ 'ವಿಭಿನ್ನ' ಪದಗಳನ್ನು ರೂಪಕೀಕರಿಸಿದ್ದಾನೆ. ಮಾತ್ರವಲ್ಲ ; ಈ 'ಪೂರ್ವನು'ವೆಂಬ' 'ಪರ ನೋದಯ ರವಿಗಗನ'ವು 'ಜಲಸೇಚಕ'ವಾಗಿಯೂ, 'ವಿರೋಧಿ ತರುವನದಹನ'ವಾಗಿಯೂ ಸಂಪೂರ್ಣ ವಿಭಿನ್ನಗುಣಯುತವಾಗಿ—ರೂಪಿತವಾಗಿದೆ. ಆಕಾಶದಿಂದ ವರ್ಷ'ಜಲ', ಸಿಡಿಲಿನ 'ದಹನ'—ಎಂಬೆರಡೂ ಬೀಳುವುದೂ ಪ್ರಸಿದ್ಧವಾಗಿರುವುದರಿಂದ, ಇದು ಹಿಂದೆ ಲಕ್ಷಿಸಿದ 'ವಿರುದ್ಧಗುಣ ರೂಪಕ'ವಲ್ಲ, 'ವಿಭಿನ್ನಗುಣ ರೂಪಕ.'

(xi) **ರೂಪಕೋರು ರೂಪಕ**

—"ವದನಾಂಬುಜ ರಂಗ (ವದನವೆಂಬ ಅಂಬುಜ ; ವದನಾಂಬುಜವೆಂಬ ರಂಗ)ದಲ್ಲಿ, 'ಈ ಮದಾಲಸ ಭ್ರೂಲತಾ ವಿಲಾಸಿನಿ [ಭ್ರೂ (ಹುಬ್ಬು) ಎಂಬ ಲತೆ; ಭ್ರೂಲತೆ ಎಂಬ ವಿಲಾಸಿನಿ, ಎಂದರೆ ನರ್ತಕಿ] ಲೀಲಾಸ್ಪದ ನೃತ್ಯಮಂ ಆಗಿಸಿದಪ್ಪುದು."—(ii, 23)

ಒಂದು ರೂಪಣದ ಮೇಲೆ ಮತ್ತೊಂದು ರೂಪಣವನ್ನೆಸಗಿದುದರಿಂದ ಇದು 'ರೂಪ ಕೋರು ರೂಪಕ' ಎಂಬ ಅಲಂಕಾರ.

(xii) **ರೂಪಕಾಪಹ್ನುತಿ (ಸಾಪಹ್ನವ ರೂಪಕ) :**

—'ಇದು ವದನವಲ್ಲ, ಅಂಬುರುಹ ; (ಇದರೊಳಗಿರುವ) ಮದಲೋಲಗಳಾದ ಇವುಗಳು ಕಣ್ಣುಗಳಲ್ಲ, ತುಂಬಿಗಳು ; (ಕಣ್ಣುಗಳಲ್ಲಿ ಸ್ಫುರಿಸುವುದು) ಇದು ಮುದವಲ್ಲ, ವಿಕಾಸ —ಎಂಬುದಿದು 'ರೂಪಕಾಪಹ್ನುತಿ' —(iii, 24)

ವಾಸ್ತವಸ್ಥಿತಿಯನ್ನು ಅಲ್ಲಗಳೆಯುವುದಕ್ಕೆ 'ಅಪಹ್ನುತಿ' ಎಂದು ಹೆಸರು. ಇಲ್ಲಿ ವಾಸ್ತವಿಕ ಮುಖಾದಿಗಳನ್ನು ಅಲ್ಲಗಳೆಯುವಿಕೆಯೇ 'ಅಪಹ್ನುತಿ' ; ಆ ಮೇಲೆ, ಆ ವದ ನಾದಿಗಳಲ್ಲಿ ಅಂಬುರುಹಾದಿಗಳನ್ನು ಆರೋಪಿಸುವುದೇ 'ರೂಪಕ.' 'ಅಪಹ್ನುತಿ' ಎಂಬ ಸ್ವತಂತ್ರವಾದ ಅಲಂಕಾರವಿರುವುದರಿಂದ ಇದು ಮಿಶ್ರಾಲಂಕಾರ. ಇಲ್ಲಿ 'ರೂಪಕ'ವೇ ಪ್ರಮುಖವಾಗಿರುವುದರಿಂದ, ಇದನ್ನು, ದಂಡಿ ಹೇಳಿವಂತೆ, 'ಸಾಪಹ್ನವ ರೂಪಕ' ಎನ್ನುವುದೇ ಉಚಿತವಾಗಿತ್ತೆಂದು ತೋರುವುದು. ಈ ಗ್ರಂಥಕಾರನು ಬೇರೆಲ್ಲ ಕಡೆ ಗಳಲ್ಲಿಯೂ ದಂಡಿಯಿತ್ತ ಹೆಸರುಗಳನ್ನೇ ಅನುಸರಿಸಿದ್ದಾನಲ್ಲವೆ ?

(xiii) **ಯುಕ್ತ ರೂಪಕ**

—'ಮೊಗವೆಂಬ ಕಮಲಪುಷ್ಪದ ನಗೆಯೆಂಬ ವಿಕಾಸವು (ಅರಳುವಿಕೆಯು) ಶೋಭಿ ಸುವ ಅದರಲ್ಲಿ ಕಣ್ಣುಗಳೆಂಬ ತುಂಬಿಗಳು ಆನಂದದಿಂದ ಸುಳಿಯುತ್ತವೆ' —(iii, 25)

ಕಮಲದಲ್ಲಿ ತುಂಬಿ ಸುಳಿದಾಡುವುದು ಯುಕ್ತವಾಗಿರುವುದರಿಂದ, ಹಿಂದೆ ವಿವರಿಸಿದ 'ವಿಷಮ'—'ವಿರುದ್ಧ' ಧರ್ಮ ರೂಪಣಕ್ಕೆ ಭಿನ್ನವಾಗಿರುವ ಇದು 'ಯುಕ್ತ ರೂಪಕ.'

### (xiv) ವ್ಯಾಜ ರೂಪಕ

—"ನಗೆ ಎಂಬ ನೆವದಿಂದ ತೊಳಗುವ (ಜ್ಯೋತ್ಸ್ನಾಮಯವಾದ), ಮೊಗವೆಂಬ ನೆವದಿಂದ ತೋರುವ ಚಂದ್ರನಲ್ಲಿ, ಕಣ್ಣುಗಳೆಂಬ ನೆವದಲ್ಲಿ 'ಲಕ್ಷ್ಮ' (ಕಳಂಕ)ವು ಸೊಗಯಿಸಿ ತೋರ್ಕುಂ." —(iii, 26)

'ನೆವ' ಎಂದರೆ ವ್ಯಾಜ. 'ವ್ಯಾಜಸ್ತುತಿ' ಎಂದು ಮುಂದೆ ವಿವರಿಸಲಿರುವ ಅಲಂಕಾರದಿಂದ ಕೂಡಿದ ಮಿಶ್ರರೂಪಕವಿದು. ಅಪ್ರಕೃತ ವಸ್ತುವಿನ ಗುಣಾದಿ ಧರ್ಮಗಳನ್ನು ಪ್ರಕೃತ ವಸ್ತುವಿನಲ್ಲಿ ನಾನಾ ಕ್ರಮವಿಡಿದು ಆರೋಪಿಸಿ ವರ್ಣಿಸುವುದೇ ಈ ರೂಪಕ ವರ್ಗದ ಪ್ರಮುಖ ಲಕ್ಷಣ.

ಮೇಲೆ ವಿವರಿಸಿದ ರೂಪಕಚಕ್ರದಲ್ಲಿ 'ವಿಷಮ ರೂಪಕ', 'ವಿರುದ್ಧ ರೂಪಕ', 'ಹೇತು ರೂಪಕ', 'ಶ್ಲಿಷ್ಟ ರೂಪಕ', 'ರೂಪಕಾಪಹ್ನುತಿ', 'ವ್ಯಾಜ ರೂಪಕ'ಗಳು 'ಭಿನ್ನಾಲಂಕಾರ ಮಿಶ್ರಿತವಾದ ರೂಪಕಗಳು;' 'ರೂಪಕೋರು ರೂಪಕ'ವೆಂದರೆ, ಒಂದು ರೂಪಕಾಲಂಕಾರದ ಮೇಲೆ ಮತ್ತೊಂದು ರೂಪಕವನ್ನು ಆರೋಪಿಸಿ ಮಾಡಿದ ಮಿಶ್ರರೂಪಕ; ಉಳಿದುವು 'ಸಮಸ್ತ', 'ವ್ಯಸ್ತ' ಮೊದಲಾದ ರಚನಾ ಕ್ರಮದಿಂದ ಒಂದಿಷ್ಟು ಕವಲಾದ ಹೆಸರುಗಳು. ವಾಸ್ತವವಾಗಿ ನೋಡಿದರೆ, ಉಪಮಾಲಂಕಾರ ಜನ್ಯವಾದ ಈ ರೂಪಕದಲ್ಲಿ ಬೇರಾವ ಭೇದವೂ ಅನವಶ್ಯವಾಗುವುದು. ಆಯಾ ಕವಿಗಳ ಸ್ವೈತುಕೋಕ್ತಿಗಳ ಮಾರ್ಗವನ್ನನುಸರಿಸಿಯೇ ಈ ಭೇದಗಳು ತಲೆದೋರಿವೆಯೆಂದು ಭಾವಿಸಬಹುದು.

## ೩. ಅರ್ಥಾಂತರನ್ಯಾಸ

'ಅರ್ಥಾಂತರನ್ಯಾಸ' ಎಂಬ ಹೆಸರೇ ಇದು ಪ್ರಕೃತಾಪ್ರಕೃತಗಳೆಂಬ ಎರಡು ವಿಷಯಗಳನ್ನು ಒಳಕೊಂಡ ಅಲಂಕಾರವೆಂಬುದನ್ನು ಸೂಚಿಸುತ್ತಿದೆ. ಪ್ರಕೃತವಾದ ವಿಷಯ (ಅರ್ಥ)ದ ಗುಣಕ್ರಿಯಾದಿಗಳನ್ನು ಸಮರ್ಥಿಸಲಿಕ್ಕಾಗಿ ಅದಕ್ಕೆ ಸಮಾನವಾದ ಅಪ್ರಕೃತಾರ್ಥದ ನಿರೂಪಣ(ನ್ಯಾಸ)ವೆಸಗುವಿಕೆ—ಎಂಬುದೇ ಆ ಹೆಸರಿನೊಳಗೆ ಅಡಕವಾದ ಅರ್ಥ. ಹಿಂದೆ ವಿವರಿಸಿದ 'ರೂಪಕ'ವು, ಆ ಉಭಯಾರ್ಥಗಳೊಳಗೆ ಒಂದನ್ನು ಇನ್ನೊಂದರೊಡನೆ ರೂಪಣಗೊಳಿಸುವ ಕ್ರಮದಿಂದ ಉಂಟಾಗುವುದು. ಇದು ಹಾಗಲ್ಲ—ಪ್ರಕೃತ ವಿಷಯವನ್ನು ಅಪ್ರಕೃತದಿಂದ ಸಾಧಿಸುವುದು. ಗ್ರಂಥಕಾರನಿತ್ತ ಲಕ್ಷಣವನ್ನು ನೋಡಿ:

ದೊರೆಕೊಳೆ ಪೇೞ್ದರ್ಥಮನಾ
ದರದಿಂ ಸಾಧಿಸಲೆವೇೞ್ದಿ ಪೆಱತೊಂದರ್ಥಾಂ
ತರಮಂ ಪೇೞ್ದುದರ್ಥಾಂ
ತರ ವಿನ್ಯಾಸಾಖ್ಯಮದಱ ಭೇದಂಗಳ್ —(iii, 28)

ಮೊದಲು ವಿಸ್ತರಿಸಿದ ಅರ್ಥವನ್ನು ಸಾಧಿಸಲಿಕ್ಕಾಗಿ ಬೇರೊಂದು ಅರ್ಥವನ್ನು (ಅರ್ಥಾಂತರಮಂ) ಮುಂದಿರಿಸಿ ಹೇಳುವುದಕ್ಕೆ 'ಅರ್ಥಾಂತರನ್ಯಾಸ'ವೆಂದು ಹೆಸರು.'

ಇಲ್ಲಿ 'ಸಾಧಿಸಲೆ'ಬೇಕಾದ ಅರ್ಥವೆಂದರೆ 'ವರ್ಣ್ಯ' ಅಲ್ಲವೆ' ಉಪಮೇಯ. 'ಪೇಳತೊಂದು 'ಅರ್ಥಾಂತರ' ಎಂದರೆ, 'ಅವರ್ಣ್ಯ' ಅಲ್ಲವೆ 'ಉಪಮಾನ.' ಸ್ವಭಾವಾಖ್ಯಾನದಂತೆ ಒಂದೇ ಅಲ್ಲದೆ, ರೂಪಕದಂತೆ ಅರ್ಥದ್ವಯವು ಹೊಳೆಯುವುದರಿಂದ ಇದು ಪ್ರಮುಖವಾಗಿ ಔಪಮ್ಯ'ದಿಂದಲೇ ಉದಯಿಸಿದುದೆಂದು ನಿರ್ಧರಿಸಿಕೊಳ್ಳಬೇಕು. ಆಧುನಿಕಾಲಂಕಾರಿಕರ ಮತದಂತೆ, ಈ ಅಲಂಕಾರದಲ್ಲಿ, ಮೊದಲು 'ಪೇಳ್ದುದು' ವಿಶೇಷಾರ್ಥವಾದರೆ ಅದನ್ನು 'ಸಾಮಾನ್ಯ'ದಿಂದ ಸಮರ್ಥಿಸುವುದೆಂದೂ, ಹಾಗೆ 'ಪೇಳ್ದುದು' ಸಾಮಾನ್ಯಾರ್ಥವಾದರೆ ಅದನ್ನು 'ವಿಶೇಷ'ದಿಂದ ಸಮರ್ಥಿಸುವುದೆಂದೂ ಎರಡೇ ಭೇದಗಳು; ಆದರೆ ಇದರಲ್ಲಿ ಎಂಟು ಭೇದಗಳನ್ನು ಕಲ್ಪಿಸಬಹುದೆಂಬುದು 'ಕವಿರಾಜಮಾರ್ಗ'ಕಾರನ ಅಭಿಪ್ರಾಯ. ಇಲ್ಲಿಯೂ ಕೆಲವು ಭೇದಗಳು ಭಿನ್ನಾಲಂಕಾರ ಮಿಶ್ರಿತಗಳಾದುದರಿಂದಲೇ ಕವಲೊಡೆದುವು ಗಳೆಂದು ಭಾಸವಾಗುತ್ತಿದೆ.

(i) ಸಕಲ ವ್ಯಾಪಿ–ಅರ್ಥಾಂತರ ನ್ಯಾಸ, (ii) ವಿಶೇಷ ಪ್ರಕಾಶಕ–ಅರ್ಥಾಂತರ ನ್ಯಾಸ (iii) ಯುಕ್ತಕಾರಿ–ಅರ್ಥಾಂತರ ನ್ಯಾಸ; (iv) ಯುಕ್ತಾಯುಕ್ತ–ಅರ್ಥಾಂತರ ನ್ಯಾಸ (v) ಶ್ಲೇಷ ಪ್ರಕಟಿತ-ಅರ್ಥಾಂತರ ನ್ಯಾಸ (vi) ವಿರುದ್ಧಾತ್ಮಕ-ಅರ್ಥಾಂತರ ನ್ಯಾಸ (vii) ವಿಪರ್ಯಯ–ಅರ್ಥಾಂತರ ನ್ಯಾಸ ಮತ್ತು (viii) ಯುಕ್ತಾರ್ಥ-ಅರ್ಥಾಂತರ ನ್ಯಾಸ—ಎಂಬ ಎಂಟು ಭೇದಗಳನ್ನು ಗ್ರಂಥಕಾರನು ನಿರೂಪಿಸುತ್ತಾನೆ. ಇವುಗಳನ್ನು ಒಂದೊಂದಾಗಿ ಪರಿಶೀಲಿಸುವ.

### (i) ಸಕಲವ್ಯಾಪಿ-ಅರ್ಥಾಂತರ ನ್ಯಾಸ

—"'ಸತತೋದಯಂ', 'ಅಪ್ರತಿಹತಗತಿ ತೀವ್ರಂ' ಎನ್ನಿಸಿದ 'ತದ್ದಿನಾಧಿನಾಥನುಂ ಅಸ್ತಂ ಗತನಾದಂ' (ಪ್ರಕೃತ); 'ಅಂತೆ' ಲೋಕಕ್ಕೆಲ್ಲ 'ವ್ಯಾಪಕ'ವಾದ 'ನಿಯತ ಪ್ರತೀತಿ'ಯಂ ಕಳೆಯಲಕ್ಕುಮೇ! ಆಗದು (ಅಪ್ರಕೃತ.)" —(iii, 30)

ಸೂರ್ಯಾಸ್ತಮಾನ ವರ್ಣನೆಯ ಪದ್ಯವಿದು. ಇಲ್ಲಿ, ಸೂರ್ಯಾಸ್ತಮಾನ ವರ್ಣನೆಯೇ ಪ್ರಕೃತವಾಗಿ 'ಪೇಳ್ದ' ಅರ್ಥ. ಆ 'ದಿನಾಧಿನಾಥ'ನೆಂದರೆ, ಉದಯ ಮೊದಲ್ಗೊಂಡು ಎಡೆಬಿಡದೆ ಏಳ್ಗೆವಡೆಯುತ್ತಾ ಬಂದವನು; ಅವನ ತೇಜಃಪ್ರಸಾರವನ್ನು ತಡೆಯುವ ಪ್ರತಿಭಟನ ತೇಜಸ್ಸೆಂಬುದು ಪ್ರಪಂಚದೊಳಗಾವುದೂ ಇಲ್ಲ; ಅಂಥ ವಿಶಿಷ್ಟ ಪರಾಕ್ರಮಣ ತೇಜೋಮೂರ್ತಿಗೂ ಹೀಗೆ ಅಸ್ತಂಗತವಾಗುವ ಅವಸ್ಥೆಯೊದಗಿತು—ಎಂಬುದು ಪ್ರಕೃತಾರ್ಥ. ಇಂಥ ವಿಶಿಷ್ಟ ವ್ಯಕ್ತಿಗೂ ಈಯವಸ್ಥೆಯೊದಗಿದುದು ಆಶ್ಚರ್ಯಕರವಲ್ಲವೆ! —ಎಂದು ಬೆರಗಾಗಬೇಕಾಗಿಲ್ಲ. ಈ ವ್ಯಾಪಕ ಪ್ರಪಂಚದೊಳಗೆ ಎಲ್ಲರೂ ವ್ಯಾಪ್ಯರು; ವ್ಯಾಪಕ ಪ್ರಪಂಚವೂ ವಿಧಿನಿಯಮಕ್ಕೆ ವ್ಯಾಪ್ಯವೇ ಸರಿ; ವಿಧಿನಿಯಮ ಪ್ರತೀತಿಯನ್ನು ಆ 'ದಿನಾಧಿನಾಥ'ನಾದರೂ ಅಲ್ಲಗಳೆಯಲಾರನು—ಎಂಬುದಾಗಿ ವ್ಯಾಪ್ಯನಾದ ಸೂರ್ಯನ ಅಸ್ತಮಾನರೂಪ ವಿಷಯವು ವ್ಯಾಪಕವಾದ ಅಪ್ರಕೃತ 'ನಿಯತ ಪ್ರತೀತಿ'ಯ ವರ್ಣನೆಯಿಂದ ಸಮರ್ಥಿತವಾಗಿದೆ. ಸಮರ್ಥನೆಯಿದು 'ಸಕಲ ವ್ಯಾಪಿ' ಎಂಬುದನ್ನು ಭಾವಿಸಿ

ಕೊಳ್ಳಬೇಕು. ವ್ಯಾಪಕ ಪ್ರಪಂಚದೊಳಗಿನ ಪದಾರ್ಥಗಳೆಲ್ಲ ಹೇಗೋ ಹಾಗೆ 'ದಿನಾಧಿನಾಥ'ನೂ ಉದಯಾಸ್ತಮಾನಗಳೆಂಬ ನಿಯತಿಗೆ ಒಳಗಾಗಿರಲೇಬೇಕೆಂಬ ಔಪಮ್ಯವು ಇಲ್ಲಿ ಆರ್ಥಿಕವಾಗಿ ಹೊಳೆಯುತ್ತಿದೆ.

'ತದ್ದಿನಾಧಿನಾಥ'ನು 'ಅಸ್ತಂಗತ'ನಾದುದನ್ನು ವರ್ಣಿಸುವ ಈ ಪದರಚನೆಯೊಳಗೆ ಕವಿಹೃದಯದ ಒಂದು ದುಃಖವೂ, ಅದು ವಿಧಿನಿಯಮವಲ್ಲವೆ ಎಂಬ ಆದೊಂದು ಸಮಾಶ್ವಾಸವೂ ಹೊಳೆದು ತೋರುತ್ತಿವೆ. ಈ ಸೂರ್ಯಾಸ್ತಮಾನ ವರ್ಣನಾ ಸಂದರ್ಭದ ಲೆಕ್ಕಣಿಕೆಯೊತ್ತುವಲ್ಲಿ, ಕವಿಯ ನೆತ್ತಿಯಲ್ಲಿ ಇನ್ನೊಂದು ತತ್ಸಮಾನ ವಿಷಯವೂ ನೆನಪಾಗಿರಬೇಕೆಂದು ತೋರುವುದು. 'ಸೂರ್ಯನೂ' ಎಂಬ ವ್ಯಕ್ತಾರ್ಥ ಪದಕ್ಕೆ ಬದಲಾಗಿ 'ಆ ದಿನದ (ಹಿಂದಿನ ಕಾಲದ) ಅಧಿನಾಥನೂ' ಎಂಬ ಅರ್ಥವನ್ನೊದಗಿಸುವ. 'ತದ್ದಿನಾಧಿನಾಥನುಂ' ಎಂಬ ಪದವನ್ನೀಕ್ಷಿಸಿರಿ : ಈ 'ತದ್ದಿನಾಧಿನಾಥ' ಎಂಬ ವಿಶೇಷ್ಯವನ್ನೊಂದಿದ 'ಸತತೋದಯುಂ', 'ಅಪ್ರತಿಹತ ಗತಿ ತೀವ್ರಂ' ಎಂಬ ಎರಡು ವಿಶೇಷಣ ಪದಗಳನ್ನೂ ನೋಡಿರಿ. 'ಪರಮೋದಯ' ಎಂಬುದು ನೃಪತುಂಗನ ಬಿರುದಾದರೆ, ಅವನ ತಂದೆಯಾದ ಗೋವಿಂದನಿಗೆ 'ನಿತ್ಯೋದಯ' ಎಂಬ ಬಿರುದಿದ್ದುದಷ್ಟೆ. ಗೋವಿಂದರಾಜನ ಮಂಡಳ ತಾಮ್ರಪಟದಲ್ಲಿರುವ ಈ ಶ್ಲೋಕವನ್ನು ಒಂದಿಷ್ಟು ಪರಿಭಾವಿಸಿರಿ :

ಪರಮಾನಂದಕರಃ ಪ್ರತಾಪಸಹಿತೋ ನಿತ್ಯೋದಯಸ್ಸೋನ್ನತೇಃ
ಪೂರ್ವಾದ್ರೇರಿವ ಭಾನುಮಾನಭಿಮತೋ ಗೋವಿಂದರಾಜಸ್ಸತಾಂ
ಯಸ್ಮಿನ್ ಸರ್ವಗುಣಾಶ್ರಯೋ ಕ್ಷಿತಿಪತೌ ಶ್ರೀ ರಾಷ್ಟ್ರಕೂಟಾನ್ವಯೋ
ಜಾತೇ ಯಾದವವಂಶವನ್ಮಧುರಿಪಾವಾಸೀದಲಂಘ್ಯಃ ಪರೈಃ[1]—

ಈ ಶಾಸನ ಪದ್ಯದಲ್ಲಿ ಗೋವಿಂದರಾಜನನ್ನು ಮೇಲಿನ ಅರ್ಥಾಂತರ ನ್ಯಾಸ ದೃಷ್ಟಾಂತದೊಳಗಿನದರಂತೆ, ಸೂರ್ಯಪ್ರತಿಮನನಾಗಿಯೇ ವರ್ಣಿಸಿದೆ; ಮಾತ್ರವಲ್ಲ, ಗೋವಿಂದನಿಗೆ 'ನಿತ್ಯೋದಯ' ಎಂಬ ಬಿರುದಿತ್ತೆಂಬುದು ಈ ಶಾಸನ ಪದ್ಯದಲ್ಲಿ ವ್ಯಕ್ತವಾಗಿದೆ. ಮೇಲಿನ ಅಲಂಕಾರ ದೃಷ್ಟಾಂತವನ್ನು ತೋರುವ 'ಸತತೋದಯ' ಎಂಬುದೂ ಅದೇ ಬಿರುದಿನ ರೂಪಾಂತರವಾಗಿರಬೇಕೆಂದು ನಮ್ಮಣಿಕೆ. ಅದನ್ನು 'ತದ್ದಿನಾಧಿನಾಥನುಂ' ಎಂಬ ವಿಶೇಷ್ಯವು ಆರ್ಥಿಕವಾಗಿ ಮತ್ತಷ್ಟು ಬಲಗೊಳಿಸುತ್ತಿದೆ; ಅಲ್ಲದೆ, ತುದಿಯ 'ಉಂ' ಎಂಬ ಸಮುಚ್ಚಯವೂ ಬೇರೂರಿಸುತ್ತಿದೆ ಎಂದೇ ತೋರುವುದು.

ಹಾಗಾದರೆ, ಈ ವ್ಯಾಪಕಾರ್ಥಾಂತರ ನ್ಯಾಸವು ಶ್ಲೇಷಯುಕ್ತವಾಯಿತೆ? ಇಲ್ಲ; ಶ್ಲೇಷವಿರುವುದು ಪ್ರಕೃತವಾದ 'ಸತತೋದಯುಂ' ಮೊದಲಾದ ವರ್ಣ್ಯವೆನ್ನಿಸಿದ ಸೂರ್ಯಾರ್ಥ ಸೂಚಕ ಪದಗಳಲ್ಲಿ. 'ಶ್ಲೇಷ ಪ್ರಕಟಾರ್ಥಾಂತರ ನ್ಯಾಸ'ವೆಂಬ ಐದನೆಯ ಭೇದವಾಗಬೇಕಾದರೆ, ಅರ್ಥಾಂತರ ಸೂಚಕವಾಗಿ ಪ್ರಕೃತ ವಾಕ್ಯಾರ್ಥವನ್ನು ಸಮರ್ಥಿ

---

[1] ಭಾರತ ಇತಿಹಾಸ ಸಂಶೋಧಕ ಮಂಡಲದ ತ್ರೈಮಾಸಿಕ ಪತ್ರಿಕೆ, ಸಂಪುಟ ೧೬, ಸಂಚಿಕೆ ೪, ಮಂಡಲ ಶಾಸನ, ಪದ್ಯ ೧೬

ಸುವ ಅಪ್ರಕೃತ ವಾಕ್ಯವು ಮಾತ್ರ ಶ್ಲೇಷಯುಕ್ತವಾಗಿರತಕ್ಕುದು—ಎಂಬುದು ಆ ಹೆಸರಿನಿಂದಲೇ ವ್ಯಕ್ತವಾಗಿರುವಲ್ಲಿ, ಆ ಆಕ್ಷೇಪಕ್ಕೆ ಎಡೆಯೇ ಇಲ್ಲ.

(ii) **ವಿಶೇಷ ಪ್ರಕಾಶಕ-ಅರ್ಥಾಂತರ ನ್ಯಾಸ**

—"ಆ 'ಸರಸಿಜ ಬಾಂಧವ'ನಾದ ದಿನಾಧಿನಾಥನು ಅಸ್ತಂಗತನಾದಾಗ 'ಸರೋಜಿನೀವನಂ' ಕೊರಗುತ್ತ 'ಮುಗಿಗುಂ'—(ಪ್ರಕೃತ); 'ವಿಶೇಷಾಪ್ತ ಜನ'ವು 'ಈಶ್ವರ (ಒಡೆಯನ) ವಿರಹ'ದಿಂದ ಶೋಕಾಕುಲವಾಗುವುದು— (ಅಪ್ರಕೃತ)."

—(iii, 31)

ಇಲ್ಲಿ, ಸಮರ್ಥಕವಾದ ಅಪ್ರಕೃತವು ಸಾಮಾನ್ಯವಾಗಿದ್ದು ವ್ಯಾಪಕವೆನ್ನಿಸಿದುದಲ್ಲ; ವಿಶೇಷವಾಗಿ ಪ್ರಕೃತದಂತೆಯೇ ವ್ಯಾಪ್ಯವಾದುದು. ಆ ಹಿಂದಿನ 'ತದ್ದಿನಾಧಿನಾಥ'ನು ಅಸ್ತಂಗತನಾದಲ್ಲಿ ಸರೋಜಿನೀವನವು ಕೊರಗಿದ ವರ್ಣನೆಯೇ ಪ್ರಕೃತವಾಗಿದೆ.

ಮುಂದಿನ ಸಮರ್ಥಕವಾದ ಅಪ್ರಕೃತ ವಾಕ್ಯವು, ಆ ಗೋವಿಂದ ರಾಜಾವಾಸದ ವಿಶೇಷಾಪ್ತ ಜನವು ಶೋಕಾಕುಲವಾದ ಈ ವಿಶಿಷ್ಟ ಸಂದರ್ಭ ಸೂಚಕವಾದುದೇ ಆಗಿರಬೇಕು.

(iii) **ಯುಕ್ತಕಾರಿ-ಅರ್ಥಾಂತರ ನ್ಯಾಸ**

—"(ಹಾಗೆ ಸಂಜೆಯಾದೊಡನೆ) 'ಮಲಯಾನಿಲನುಂ ಮಲಯಜಜಲಮುಂ (ಗಂಧದ್ರವವೂ) ಶಶಿಕಿರಣಮುಂ ವಿಯೋಗಿ'ಗಳಾದವರ ಎಡೆಯಲ್ಲಿ 'ನೆಲಸಿರ್ದುವು'; ಆದರೂ ಏನು? (ಆ ವಿಯೋಗಿಗಳೆದೆಗೆ ಅವುಗಳು ತಾವೆಸಗಿದ) 'ಪಾಪದ ಫಲ'ವಾದ 'ಅಟಲೆ' (ದುಃಖವೇ) ಆಗಿ ಪರಿಣಮಿಸಿದುವು (ಪ್ರಕೃತ). (ಈ ವಿಧಿನಿಯಮಿತಿಯು) 'ಕಾಮುಕ ಜನದ' (ಸಂಬಂಧವಿಡಿದು ಹೇಳುವುದಾದರೆ) 'ಯುಕ್ತಕಾರಿ'ಯೇ ಸರಿ (ಅಪ್ರಕೃತ)."

—(iii 32)

ನೃಪತುಂಗನ ತಂದೆಯಾದ ಗೋವಿಂದರಾಜನೆಂದರೆ, ಹೇಗೆ ಅಸಮಾನ ಪರಾಕ್ರಮಿಯೋ ಹಾಗೆ ಅತಿ ದಯಾಳು; ಹಾಗೆಯೇ ಅತಿ ವಿಲಾಸಿಯೂ ಆಗಿದ್ದವನು. ಅಂಥ ರಾಜರ ಅಂತಃಪುರಾಂಗನೆಯರನ್ನೆಲ್ಲ, 'ರಾಸಿಗೆ ಹೊಲಿಯೆರಚಿದಂತೆ' ಆಶ್ರಿತ ಕವಿಗಳು 'ಸುಶೀಲವತಿಯರು' ಎಂದೇ ವರ್ಣಿಸಬಹುದು. ಆದರೂ ಅಂತಹ 'ಸುಶೀಲವತಿ'ಯರಾದ ಹಲವರೆದೆಯಲ್ಲಿ ಕಾಮುಕತೆಯೇ ವಿಶೃಂಖಲವಾಗಿ ಹರಿಯುತ್ತಿದ್ದಿರಬೇಕು—ಎಂಬುದನ್ನು ಸೂಚಿಸಬೇಕಾಗಿಲ್ಲವಷ್ಟೆ. ಆ ಗೋವಿಂದರಾಜನು ತೀರಿಹೋದೊಡನೆ, ಕಾಮಲಾಲಸೆಯಿಂದ ಅವನನ್ನೊಂದಿದ್ದ ಆ ಅಂತಃಪುರಾಂಗನೆಯರಿಗೆ ಒದಗಿದ ವಿಯೋಗಾವಸ್ಥೆಯನ್ನೇ ಉದ್ದೇಶಿಸಿ ಕವಿ ವರ್ಣಿಸಿದುದಾಗಿರಬೇಕು. ಪರಿತಾಪ ನಿವಾರಕವಾದ ಔಪಚಾರಿಕ ಸಾಧನವೆಲ್ಲ ತನ್ನ ಕಾಮುಕತಾರೂಪ ಪಾಪ ಫಲವಾದ ದುಃಖವಾಗಿ ಪರಿಣಮಿಸಿತು—ಎಂಬುದೇ ಈ ಪದ್ಯದ ತಾತ್ಪರ್ಯವಾಗಿರಬೇಕು.

ಇಲ್ಲಿ ಉತ್ತರಮಾರ್ಗದ ವಕ್ರರಚನೆ ಹೊಳೆಯುತ್ತಿದೆ.

**೪. ವ್ಯತಿರೇಕ**

ಆದಿಪ್ರತೀತಿಯಿಂ ಶ
ಬ್ದಾದರದಿಂ ಸದೃಶಮಾದ ವಸ್ತುದ್ವಯದೊಳ್
ಭೇದಮನಱಿಪುವುದುಚಿತ ಗು
ಣೋದಯ ಕೃತ ವಾಕ್ಯವಿಸ್ತರಂ ವ್ಯತಿರೇಕಂ —(iii, 39)

ವ್ಯಕ್ತವಾದ ಸಾದೃಶ್ಯ (ಸಮಾನ ಧರ್ಮ)ವುಳ್ಳ (ಪ್ರಕೃತಾಪ್ರಕೃತ) ವಸ್ತುಗಳಲ್ಲಿ, ಅರ್ಥ ಪ್ರತೀತಿಯಿಂದಾಗಲಿ ಶಬ್ದಮೂಲಕವಾಗಿಯಾಗಲಿ, ಭೇದವನ್ನು ಸೂಚಿಸುವುದು 'ವ್ಯತಿರೇಕ.' 'ವ್ಯತಿರೇಕ' ಎಂದರೆ, ಹೆಚ್ಚು ಕಡಿಮೆ. ಇದರೊಳಗೆ ಏಕವ್ಯತಿರೇಕ, ಉಭಯ ವ್ಯತಿರೇಕ, ಸಶ್ಲೇಷ ವ್ಯತಿರೇಕ, ಸಾಕ್ಷೇಪ ವ್ಯತಿರೇಕ, ಸಹೇತುಕ ವ್ಯತಿರೇಕ ಮೊದಲಾದ ಭೇದಗಳಿವೆ. ಅವುಗಳಲ್ಲಿ ಒಂದರ ದೃಷ್ಟಾಂತವನ್ನು ನೋಡಿ—

**ಏಕವ್ಯತಿರೇಕ :**

" 'ಶ್ರೀವನಿತಾಪ್ರಸವದಿಂ' (೧. ಶ್ರೀದೇವಿಯಿಂದ ಜನಿಸಿದುದರಿಂದ, ೨. ಲಕ್ಷ್ಮಿಗೆ ಜನಕವಾದುದರಿಂದ), 'ಲಾವಣ್ಯದಿಂ' (೧. ಸೌಂದರ್ಯದಿಂದ, ೨. ಲವಣ ಸಂಬಂಧ ದಿಂದ), 'ಅತಿ ಗಂಭೀರ ಭಾವದೆ' (೧. ಗಂಭೀರ ಗುಣದಿಂದ, ೨. ಆಳದಿಂದ) ನೀಂ ಇಂತು ಆ ವಾರಿಧಿಯುಂ ಪೋಲ್ವೈ; 'ಕೇವಲ ಭೇದಂ' ನಿಮ್ಮನ್ನು ಪರಿಚ್ಛೇದಿಸಿ ತೋರಿಸುವುದೆಂದರೆ) ನಿನ್ನ 'ಲಲಿತಾಕಾರವೊಂದೇ'". —(iii, 40)

ಇಲ್ಲಿ 'ಶ್ರೀ ವನಿತಾಪ್ರಸವದಿಂ ಆ ಲಾವಣ್ಯದಿಂ ಅತಿ ಗಂಭೀರಭಾವದೆ ನೀನ್ ಇಂತು ಆ ವಾರಿಧಿಯುಂ ಪೋಲ್ವೈ'—ಎಂದು ವಾರಿಧಿಯೊಡನೆ 'ನೀನ್' ಎಂದು ಸೂಚಿತನಾದ ವ್ಯಕ್ತಿಯೊಡನೆ (ನೃಪತುಂಗನೊಡನೆ?) ಸಾದೃಶ್ಯವು ವಿಸ್ತೃತವಾಗಿದೆ. ಇಷ್ಟು ಮಾತ್ರವೇ ಆಗುತ್ತಿದ್ದರೆ, ಇದು ಉಪಮಾಲಂಕಾರವಾಗುತ್ತಿತ್ತು; ಆದರೆ, ಮುಂದಿನ 'ಕೇವಲ ಭೇದಂ (ನಿನ್ನ) ದ್ವಿತೀಯ ಲಲಿತಾಕಾರಂ' ಎಂಬ ಭಾಗವನ್ನು ಕೂಡಿಸಿ ಇದನ್ನು 'ವ್ಯತಿರೇಕಾ ಲಂಕಾರ'ವನ್ನಾಗಿ ಮಾರ್ಪಡಿಸಿರುದನ್ನು ಕಾಣಬಹುದು. 'ಶ್ರೀ ವನಿತಾಪ್ರಸವ' ಮೊದ ಲಾದ ಸಮಾನಧರ್ಮಗಳನ್ನೂ, 'ದ್ವಿತೀಯ ಲಲಿತಾಕಾರ' ಎಂಬ ವ್ಯತಿರೇಕ ಧರ್ಮವನ್ನೂ ಸೂಚಿಸುವ ಪದಗಳಲ್ಲಿರುವ ಶ್ಲೇಷಬಲವನ್ನೂ ಇಲ್ಲಿ ಭಾವಿಸಿಕೊಳ್ಳಬೇಕು.

ಮುಂದೆ ೪೧ರಿಂದ ೪೮ರ ವರೆಗಿನ ಪದ್ಯಗಳಿಂದ ಲಕ್ಷಿಸಿದ ವ್ಯತಿರೇಕದೃಷ್ಟಾಂತಗಳಲ್ಲಿ ಹೆಣೆದುಕೊಂಡಿರುವ ವಕ್ರತೆಗಳನ್ನು ಅವಗಾಹಿಸುತ್ತಾ ಓದಿಕೊಳ್ಳಬೇಕು.

**೫ ಯಥಾಸಂಖ್ಯ**

'ಯಥಾಸಂಖ್ಯ' ಎಂಬ ಗುಣವು ಹಿಂದೆ ಗುಣವರ್ಗದೊಳಗೆ ಸೂಚಿತವಾಗಿಲ್ಲ. ಆದರೂ ದೋಷಗಳೊಳಗಿನದಾದ 'ಚ್ಯುತಯಾಥಾಸಂಖ್ಯ'ವನ್ನು ನಿರೂಪಿಸುವಲ್ಲಿ, ಸಂದ

ಭಾನುಸಾರವಾಗಿ ಅದೂ ವಿವೃತವಾಗಿದೆಯಷ್ಟೆ; ದೋಷ ವಿರುದ್ಧವಾದುದರಿಂದ ಅದೂ ಗುಣವೆಂದೇ ಭಾವಿಸಬೇಕು. ನಮ್ಮ ಗ್ರಂಥಕಾರನು 'ಯಥಾಸಂಖ್ಯ', 'ಅರ್ಥ ವ್ಯಕ್ತಿ' ಎಂಬೆರಡು ಗುಣಗಳನ್ನು ಗುಣವರ್ಗದಲ್ಲೇ ವಿಸ್ತರಿಸದೆ, ಪ್ರಸನ್ನಾದಿಗಳ 'ಉಪಗುಣ, ಗಳನ್ನಾಗಿ ಭಾವಿಸಿರುವಂತೆ ತೋರುತ್ತಿದೆ. ಆ 'ಉಪಗುಣ'ದಿಂದಲೆ ಈ ಯಾಥಾಸಂಖ್ಯ ಎಂಬ ಅಲಂಕಾರವು ಜನಿಸಿದೆ. ಇದರಲ್ಲಿ 'ಅನ್ವಿತಯಾಥಾ ಸಂಖ್ಯ', 'ಅನನ್ವಿತಯಾಥಾ ಸಂಖ್ಯ' ಎಂಬ ಎರಡು ಭೇದಗಳಿವೆ.

ಉದ್ದೇಶಿ (ಗುರಿ) ಅನುದೇಶಿಗಳನ್ನು ಕ್ರಮವಾಗಿ, ಸೂಜಿಯ ಹಿಂದೆ ನೂಲನ್ನು ಹೇಗೋ ಹಾಗೆ, ಬಣ್ಣಿಸಿದುದೇ—ಎಂದರೆ, ಉದ್ದಿಷ್ಟ ಪದಾರ್ಥಗಳ ಪರಿವಿಡಿಗನುವಾಗಿ ಅನುದೇಶಿಸಿದುದೇ—ಯಥಾಸಂಖ್ಯ ಎಂಬ ಉಪಗುಣ. (ಹಿಂದೆ ಈ ಉಪಗುಣಕ್ಕೆ ಇಲ್ಲವೆ ದೋಷರಾಹಿತ್ಯಕ್ಕೆ ಕೊಟ್ಟ ದೃಷ್ಟಾಂತವನ್ನು ನೋಡಿಕೊಳ್ಳಬಹುದು.)

ಅಳಕಾನನ ನಯನಂಗಳೊ
ಳಳಿನಳಿನೋತ್ಪಳ ವಿಳಾಸಮುಂ ಗೆಲ್ದುದಱಿಂ
ತಿಳಿಗೊಳನಂ ಪೋಲ್ತಿರ್ದುಂ
ತಿಳಿಯದಿದೇನೆಂಬುದುಂ ತದನ್ವಯಮುದಱಿಂ[1] —ಮದರಾಸು ಪ್ರತಿ (i, 89)

ಇದು ದೋಷರಾಹಿತ್ಯದ ಅಲ್ಲವೆ ಉಪಗುಣದ ದೃಷ್ಟಾಂತ. ಈ ದೃಷ್ಟಾಂತವೇ ಒಂದಿಷ್ಟು ಬದಲಾವಣೆಯೊಡನೆ ಅಲಂಕಾರ ಲಕ್ಷ್ಯವಾಗಿ ಸೂಚಿತವಾಗಿದೆ:

ಅಳಕಾನನ ನಯನಂಗಳಿ
ನಳಿನಳಿನೋತ್ಪಳ ವಿಳಾಸಮುಂ ಗೆಲ್ದುದಱಿಂ
ಕಳಹಂಸ ಲೀಲ ಗಮನೇ
ಕೊಳನಂ ನೀಂ ಪೋಲ್ತೆಯೆಂಬುದನುಗತಮಕ್కుಂ —(iii, 50)

ಹಿಂದಿನ ಗುಣದಲ್ಲಿ ಉದ್ದೇಶಿ (ಪ್ರಕೃತ) ಅನುದೇಶಿ (ಅಪ್ರಕೃತ)ಗಳು ಕ್ರಮಗೊಂಡು ಪೋಣಿಸಲ್ಪಟ್ಟವೆಯಷ್ಟೆ; ಅವು ಈ ಅಲಂಕಾರದಲ್ಲಿಯೂ ಹಾಗೆಯೇ ಇವೆ. ಆದರೂ ಅದು ಗುಣ, ಇದು ಅಲಂಕಾರ—ಎಂಬುದು ಹೇಗೆ? ಭಾವವು ಕಿರುಮುಗುಳಾಗುವುದೇ ಗುಣ; ಆ ಕಿರುಮುಗುಳು ಅರಳಿ ಹೊಸ ಹೂವಾಗುವುದೇ ಅಲಂಕಾರ. ಅಲ್ಲಿ 'ತಿಳಿ ಗೊಳನಂ ಪೋಲ್ತಿರ್ದುಂ', ಹಾಗೆ ಹೋಲಿಕೆಗೊಂಡುದು 'ತಿಳಿಯದು'—ಎನ್ನುವಲ್ಲಿ, ಉದ್ದೇಶಿ ಅನುದೇಶಿಗಳ ಕ್ರಮವಾದ ವರ್ಣನೆಯಿದೆ; ಅದರಿಂದ ಸೂಚಿತವಾಗುವ ತಿಳಿ ಗೊಳನಂ ಪೋಲ್ವ' ಯಾಥಾಸಂಖ್ಯಬದ್ಧವಾದ ಉಪಮಾಲಂಕೃತಿ ಮಾಸಿ ಹೋಗಿದೆ. ಇಲ್ಲಿ ಹಾಗಲ್ಲ; 'ಕೊಳನಂ ನೀಂ ಪೋಲ್ತೆ' ಎಂದು ಯಾಥಾಸಂಖ್ಯ (ಕ್ರಮ) ಗುಣಬದ್ಧ ವಾದ ಅಲಂಕಾರದ ವರ್ಣನೆಯಿದೆ. ಇದೇ ಈ ಜನಕಗುಣ-ಜನ್ಯಾಲಂಕಾರಗಳೊಳ ಗಣ ಭೇದ. ಇಲ್ಲಿ ಉದ್ದಿಷ್ಟಗಳಾದ ಅಳಕಾದಿಗಳು ಅಳಿ, ಮೊದಲಾದವುಗಳಿಗೆ 'ಅನುಗತ'

---

[1] ಪಾಠಕರ ಪ್ರತಿಯಲ್ಲಿ 'ತದನ್ವಯಮುದಱಿಕೊಳ್' ಎಂದಿದೆ; ಆದರೆ, ಮದರಾಸು ಪ್ರತಿಯಲ್ಲಿ ರುವಂತೆ, 'ತದನ್ವಯಮುದಱಿಂ' ಎಂಬುದೇ ಶುದ್ಧವೆಂದು ತೋರುವುದು.

ವಾಗಿರುವುದು ವ್ಯಕ್ತವಾಗಿರುವುದರಿಂದ ಇದು 'ಅನುಗತ' (ಇಲ್ಲವೆ 'ಅನ್ವಿತ') ಯಾಥಾಸಂಖ್ಯಕ್ಕೆ ಲಕ್ಷ್ಯವಾಗಿದೆ.

ಹೀಗೆ ಅಳಕಾದಿಗಳು 'ಅನುಗತ'ವಾಗಿರುವುದರ ಬದಲಾಗಿ 'ಅನನುಗತ'ವಾಗಿದ್ದರೆ, ಹಿಂದೆ ನಿರೂಪಿಸಿದ 'ಚ್ಯುತ ಯಾಥಾಸಂಖ್ಯ' ಎಂಬ ದೋಷವೇ ಆಗುವುದಿಲ್ಲವೆ? ಇಲ್ಲ. ಈ 'ಅನನ್ವಿತ'ದಲ್ಲಿಯೂ ಒಂದು ಬಗೆಯ 'ಕ್ರಮ'ವಿದೆ. ದೃಷ್ಟಾಂತವನ್ನು ನೋಡಿರಿ:

'ನಳಿನ—ಉತ್ಪಳ—ಅಳಿರುಚಿಗಳಂ (ವಿಪರ್ಯಯ ಕ್ರಮವಿದಿದು)
ಅಳಕ ವಿಳೋಚನ ಮುಖಂಗಳ್ ಈಚ್ಚುಳಿಗೊಳೆ ನೀಂ
ತಿಳಿಗೊಳನನೆ ಪೋಲ್ತಿರ್ದುಂ ತಿಳಿಯದೆ ಇದೇನ್ —(iii, 51)

ಕ್ರಮವು ಭಂಗಗೊಂಡು ಉಂಟಾದ ದೋಷವಲ್ಲ. ಮುಂದಿನಿಂದ ಹಿಂಬರಿದು ಬಂದ ವಿಪರ್ಯಯ ಕ್ರಮವಾದುದರಿಂದಲೇ ಇಲ್ಲಿಯೂ ಆ ಬಗೆಯಲ್ಲಿ ಯಥಾಸಂಖ್ಯತೆಯಿದೆ. ಹೀಗೆ ನೋಡಿದಲ್ಲಿ ಮೊದಲಿನ ಲಕ್ಷ್ಯದಲ್ಲಿ ದಾಕ್ಷಿಣಾತ್ಯರ ಸ್ಥಿತಿಯೂ ಮತ್ತಿನದರಲ್ಲಿ ಔತ್ತರೇಯರ ಕೊಂಕೂ ವಿಶದವಾಗುವುದು.

ಇವೆರಡೂ ದೃಷ್ಟಾಂತಗಳಲ್ಲಿರುವ 'ಗೆಲ್ದುದೆಱಂ', 'ಈಚ್ಚುಳಿಗೊಳೆ', 'ಪೋಲ್ತೆ', 'ಪೋಲ್ತಿರ್ದುಂ' ಎಂಬ ಉಪಮಾವಾಚಕ ಪದಗಳೆಲ್ಲವೂ ಇಲ್ಲಿ ಅಪ್ರಕೃತವಾದ ಉಪಮಾಲಂಕಾರ ಸಂಬದ್ಧಗಳಲ್ಲದೆ, ಪ್ರಕೃತವಾದ ಯಥಾಸಂಖ್ಯವನ್ನೊಂದಿದವುಗಳಲ್ಲ. ಅನುಗತ, ಅನನುಗತ—ಎಂಬ ಇಬ್ಬಗೆಯ ಕ್ರಮರಚನೆ ಮಾತ್ರವೇ ಈ ಯಥಾಸಂಖ್ಯಾಲಂಕಾರ ನಿರೂಪಕಗಳು, ಎಂಬುದನ್ನು ಗಮನಿಸಬೇಕು. ಹೀಗೆ ಕ್ರಮ ರಚನೆಯೇ ಪ್ರಕೃತ ವಿಷಯವಾದಲ್ಲಿ, ಇದು ಶಬ್ದಾಲಂಕಾರ ಪ್ರಭೇದ ಮಾತ್ರವಾಗುವುದಿಲ್ಲವೆ? ಇಲ್ಲ. ಅಂಥ ಕ್ರಮಬದ್ಧವಾದ ಪದರಚನೆ ಇಲ್ಲಿ ಅವಶ್ಯವೆಂಬುದೇನೋ ನಿಜ. ಆ ಕ್ರಮರಚನೆ ಅಸ್ತವ್ಯಸ್ತವಾದರೆ ಅರ್ಥಯೋಜನೆ ತಪ್ಪಿಹೋಗುವುದಲ್ಲದೆ ಶಬ್ದಾಲಂಕಾರವೇನೂ ಕೆಡುವುದಿಲ್ಲ. ಪ್ರಾಸಾನುಪ್ರಾಸಗಳಿಗೆ ಭಂಗವಾದಲ್ಲಿ, ಆಯಾ ಶಬ್ದಾಲಂಕಾರಗಳು ಮಾತ್ರವೇ ಕೆಡುತ್ತವೆಯಲ್ಲದೆ ಅರ್ಥಕ್ಕೇನೂ ತೊಡಕಾಗುವಂತಿಲ್ಲವಷ್ಟೆ. ಅದರಿಂದ 'ಯಥಾಸಂಖ್ಯ'ವನ್ನು ಅರ್ಥಾಲಂಕಾರವಾಗಿ ಪರಿಗಣಿಸಿರುವುದು ಮಾರ್ಗೀಯವಾಗಿಯೇ ಇದೆ.

## ೬. ದೀಪಕ

ಜಾತಿ ಕ್ರಿಯಾ ಗುಣ ದ್ರ
ವ್ಯಾತಿಶಯ ವಿಶೇಷಿಯಪ್ಪ ಪದಮೊರ್ಬುಳಿ ನಿಂ
ದೀ ತೆಱದಿನುಱದ [ವಾಕ್ಯ][1]
ಸಮೇತಿಗಮುಪಕಾರ ಯೋಗ್ಯ ದೀಪಕಮಕ್ಕುಂ —(iii, 53)

---

[1] ಡಾ. ಪಾಠಕರ ಪ್ರತಿಯಲ್ಲೂ ಮದರಾಸು ಪ್ರತಿಯಲ್ಲೂ 'ಕಾವ್ಯ...' ಎಂದೇ ಇದೆ. ಆದರೆ ಮೊದಲನೆಯ ಪ್ರತಿಯೊಳಗೆ ಅಡಿ ಟಿಪ್ಪಣಿಯಲ್ಲಿ 'ವಾಕ್ಯ...'ಎಂಬ ಪಾಠಾಂತರವೊಂದಿದೆ. ಸಂದರ್ಭಕ್ಕನುಸಾರವಾಗಿ, ಈ ಪಾಠವೇ ಸಾಧುವಾಗಿ ತೋರುವುದರಿಂದ ಅದನ್ನೇ ಆರಿಸಿಕೊಂಡಿದ್ದೇವೆ.

—"ಹಿಂದೆ ವಿಸ್ತರಿಸಿದ ಜಾತಿ ಕ್ರಿಯಾ ಗುಣದ್ರವ್ಯ ವಾಚಕಗಳೊಳಗೆ ಯಾವ ಪದವಾದರೂ ಸರಿ, ಒಂದು ನಿಯಮಿತ ಸ್ಥಳದಲ್ಲಿ ನೆಲೆಗೊಂಡು (ಒಬ್ಬಳಿ ನಿಂದು) ಇಡಿ ವಾಕ್ಯವನ್ನು 'ದೀಪನ'ಗೊಳಿಸುವುದರಿಂದ, 'ದೀಪಕಾಲಂಕಾರ' ಎಂಬ ಹೆಸರಾಗುತ್ತಿದೆ."

ಆಧುನಿಕರು 'ವರ್ಣ್ಯಾವರ್ಣ್ಯಗಳಿಗೆ' ಎಂದರೆ ಉಪಮೇಯೋಪಮಾನಗಳಿಗೆ, ಧರ್ಮೈಕ್ಯವಾದಲ್ಲಿ 'ದೀಪಕ' ಎನ್ನುತ್ತಾರೆ—'ವದಂತಿ ವರ್ಣ್ಯಾವರ್ಣ್ಯಾನಾಂ ಧರ್ಮೈಕ್ಯಂ ದೀಪಕಂ ಬುಧಾಃ' (ಚಂದ್ರಾಲೋಕ, ಸೂತ್ರ ೪೩). ಅವರೆಣಿಕೆಯಂತೆ ನೋಡಿದರೂ, ಒಂದೇ ಧರ್ಮವು ಆ ಉಭಯ ಪದಾರ್ಥಗಳನ್ನೂ ಬೆಳಗಿಸಬೇಕೆಂಬುದೇ ಲಕ್ಷಣ. ಧರ್ಮಗುಣಗಳೆಂದರೆ ಅಭಿನ್ನ ಪದಾರ್ಥಗಳಷ್ಟೆ; ದಂಡಿಯನ್ನನುಸರಿಸಿದ ಈ ಗ್ರಂಥಕಾರನೆಣಿಕೆಯಲ್ಲಿ, ಧರ್ಮ(ಗುಣ)ದೊಡನೆ ಅಭಿನ್ನಗಳಾದ ವರ್ಣ್ಯಾವರ್ಣ್ಯ ಜಾತಿ ಕ್ರಿಯಾದ್ರವ್ಯಗಳನ್ನು ಕೂಡಿಕೊಳ್ಳಬೇಕೆಂಬುದಿಷ್ಟೇ ವಿಶೇಷ. ಹಿಂದೆಂದ ನಿಯಮಿತ ಸ್ಥಳವೆಂದರೆ 'ಆದಿ ಮಧ್ಯಾಂತ'ಗಳೊಳಗೆ ಯಾವುದೂ ಆಗಬಹುದು. ಈ ಭೇದಗಳ ಕ್ರಮವಿಡಿದು ಲೆಕ್ಕಿಸಿದರೆ, ದೀಪಕದಲ್ಲಿ (೧) ಜಾತ್ಯನುಗತ ಆದಿದೀಪಕ, (೨) ಜಾತ್ಯನುಗತ ಮಧ್ಯದೀಪಕ, (೩) ಜಾತ್ಯನುಗತ ಅಂತ ದೀಪಕ, (೪) ಕ್ರಿಯಾನುಗತ ಆದಿ ದೀಪಕ, (೫) ಕ್ರಿಯಾನುಗತ ಮಧ್ಯ ದೀಪಕ, (೬) ಕ್ರಿಯಾನುಗತ ಅಂತ ದೀಪಕ, (೭) ಗುಣಾನುಗತ ಆದಿ ದೀಪಕ, (೮) ಗುಣಾನುಗತ ಮಧ್ಯ ದೀಪಕ, (೯) ಗುಣಾನುಗತ ಅಂತ ದೀಪಕ, (೧೦) ದ್ರವ್ಯಾನುಗತ ಆದಿ ದೀಪಕ, (೧೧) ದ್ರವ್ಯಾನುಗತ ಮಧ್ಯ ದೀಪಕ, ಮತ್ತು (೧೨) ದ್ರವ್ಯಾನುಗತ ಅಂತದೀಪಕ— ಹೀಗೆ ಹನ್ನೆರಡು ಭೇದಗಳಾಗುತ್ತವೆ.[2] ಶಾಸ್ತ್ರ ದೃಷ್ಟಿಯಲ್ಲಿ ಈ ಭೇದಗಳು ಬೇಕಾದರೆ, ಕಾವ್ಯಕ್ಷೇತ್ರದೊಳಗೆ 'ವರ್ಣ್ಯಾವರ್ಣ್ಯಗಳೊಳಗೆ ತೋರುವ ಧರ್ಮೈಕ್ಯವೇ ದೀಪಕ' ಎಂಬ ಆಧುನಿಕಾಭಿಪ್ರಾಯವು ಇವೆಲ್ಲ ದೀಪಕ ಭೇದಗಳನ್ನೂ ಒಳಕೊಳ್ಳುವುದು.

ಈ ಅಲಂಕಾರ ಪ್ರಭೇದಗಳೆಲ್ಲವನ್ನೂ ಸೂಕ್ಷ್ಮವಾಗಿ ಅವಲೋಕಿಸುವುದು ನಮ್ಮ ಉದ್ದೇಶವಲ್ಲ; ಅದರಿಂದ, ಒಂದು ದೃಷ್ಟಾಂತವನ್ನು ಮಾತ್ರವೇ ವಿವರಿಸುತ್ತೇನೆ:

---

[2] 'ಕವಿರಾಜಮಾರ್ಗ'ಕಾರನು ಈ ಭೇದಗಳನ್ನು ಸ್ಪಷ್ಟವಾಗಿ ನಿರೂಪಿಸಿಲ್ಲ. ಜಾತಿ ಕ್ರಿಯಾ ಗುಣ ದ್ರವ್ಯಾನುಗತವಾದ ಆದಿದೀಪಕ ದೃಷ್ಟಾಂತಗಳನ್ನು ಮಾತ್ರವೇ ಕೊಟ್ಟು—

ದೀಪಕಮಾ ಜಾತ್ಯಾದಿ ನಿ
ರೂಪಕಮಿಂತಕ್ಕುಮಾದಿಯೊಳ್ ಮಧ್ಯಾಂತ
ವ್ಯಾಪಕಮುಮದಂ ತಱಿಸ
ಲ್ಗೀಪೇಟ್ದ ವಿಕಲ್ಪಲಕ್ಷ್ಯದೊಳ್ ಕವಿ ಮುಖ್ಯರ್ —(iii, 58)

ಎಂದಷ್ಟೇ ಹೇಳಿದ್ದಾನೆ. '...ಅದಂ ತಱಿಸಲ್ಗೆ' ಎಂಬುದರಿಂದ ಈ ಭೇದಗಳನ್ನು ಊಹಿಸಿಕೊಳ್ಳಬಹುದು.

ಮಲಯಾನಿಲಂ ವಿಟಪಿಗಳೊಳ್ ಪಣ್ತ ಎಲೆಯಂ ಒಯ್ಯನೆ
ನೆಲೆಯಿಂ ಕಟಿಲ್ಚುಗುಂ ; ಅಂತೆ ಅವಱ ಎಡೆಯೆಡೆಯೊಳ್
ವಿಲಸಿತ ಕಳಿಕಾಕುಳ ಕೋಮಲಾಂಕುರಮುಂ ಪಡೆಗುಂ —(iii, 54)

ವಸಂತಾದಿಯ ವರ್ಣನೆ ಇದು.'ಮಲಯಾನಿಲಂ' ಎಂಬ ಕರ್ತೃಪದವು ಪದ್ಯದ ಆದಿಯೊಳಗೆ ಏಕವಚನದಲ್ಲಿದ್ದು 'ಕಟಿಲ್ಚುಗುಂ', 'ಪಡೆಗುಂ' ಎಂಬ ಕ್ರಿಯಾಪದಗಳ ಮೂಲಕವಾಗಿ ವಾಕ್ಯದ್ವಯವನ್ನೂ ದೀಪನಗೊಳಿಸುತ್ತಿದೆ. 'ಮಲಯಾನಿಲಂ' ಎಂಬ ಕರ್ತೃವು ಏಕವಚನದಲ್ಲಿರುವುದರಿಂದ, ಉಪವನದತ್ತ ಬೀಸುವ ಒಂದೇ ಮಲಯಾನಿಲ ಪ್ರವಾಹವನ್ನು ಕವಿ ಬಣ್ಣಿಸುವುದೆಂದು ಭಾವಿಸಬಾರದು. ವಸಂತದ ಆದಿಕಾಲದಲ್ಲಿ ಮಲಯಾನಿಲ ಪ್ರವಾಹಗಳು ತರಂಗೋತ್ತರಂಗವಾಗಿ ಹರಿಯುತ್ತಿವೆ; ಅವುಗಳಿಂದಲೇ ಹಣ್ಣೆಲೆಯುದುರಿ ತಳಿರೆಲೆ ತಲೆದೋರುವುದೆಂದು ಕವಿಗಳು ವರ್ಣಿಸುತ್ತಾರೆ. ಈ 'ಮಲಯಾನಿಲಂ' ಎಂಬ ಏಕವಚನವು ಆಗ ಎತ್ತೆತ್ತಲೂ ಹರಿಯುವ ವಾಯುತರಂಗಗಳು ಎಂಬ ಬಹುವಚನಾರ್ಥದಲ್ಲಿಯೇ ಸಾಮಾನ್ಯ (ಜಾತಿ) ವಾಚಕವಾಗಿ ಬಂದುದು. ಅಂಥ 'ಮಲಯಾನಿಲಂ' '...ಪಣ್ತ ಎಲೆಯಂ ಕಟಿಲ್ಚುಗುಂ' ಎಂದೂ 'ಅಂತೆ....ಕೋಮಲಾಂಕುರಮುಂ ಪಡೆಗುಂ' ಎಂದೂ ಆ ಜಾತಿ ವಾಚಕವಾದ 'ಮಲಯಾನಿಲ' ಪದವು ಆ ವಾಕ್ಯದ 'ಕಟಿಲ್ಚುಗುಂ' ಎಂಬ ಮತ್ತು 'ಉೞಿದ ವಾಕ್ಯ ಸಮೇತ' ಯಾದ 'ಪಡೆಗುಂ' ಎಂಬ ಎರಡು ಕ್ರಿಯಾಪದಗಳಿಗೂ ಕರ್ತೃವಾಗಿದೆ.

ದೀಪಕವಿದು ಸ್ವಭಾವಾಖ್ಯಾನದೊಳಗೇ ಸೇರಿದೆ. ಒಂದು ವಾಕ್ಯವು ಪ್ರಕೃತವಾಗಿದ್ದು ಇನ್ನೊಂದು ಅಪ್ರಕೃತವಾಗಿದ್ದರೆ ಮಾತ್ರ ಅದು ವಕ್ರೋಕ್ತಿಯೊಳಗೂ ತಲೆಯಿಕ್ಕಬಹುದು. ಆದರಿಂದ 'ದೀಪಕ' ಸಾಮಾನ್ಯವೆಂಬುದು ಉಭಯ ಮಾರ್ಗ ಸಾಮಾನ್ಯವೆಂಬುದನ್ನು ಮರೆಯಲಾಗದು.

ಉಳಿದ 'ದೀಪಕ' ಪ್ರಭೇದಗಳ ಹೊಲಬನ್ನು ಇದೇ ಬಗೆಯ ವಿಚಾರಕ್ರಮದಿಂದ ತಿಳಿದುಕೊಳ್ಳಬೇಕು.

## ೭. ಉಪಮೆ

ನಾನಾವಸ್ತು ವಿಭೇದಮ
ನೇನಾನುಂ ತೆಱದೆ ಪೋಲ್ಕೆ ಮಾಡುವುದುಪಮಾ
ಮಾನಿತ ಸದಳಂಕಾರಮ
ನೂನ ವಿಕಲ್ಪ ಪ್ರಪಂಚಮಿಾ ತೆಱನದಱಾ —(iii, 59)

—ಸ್ವಭಾವತಃ ನಾನಾ ಭೇದಯುಕ್ತವಾಗಿರುವ ಪದಾರ್ಥಗಳೊಳಗೆ ಸಮಾನತೆಯನ್ನು ನಿರ್ಧರಿಸಿ ಒಂದನ್ನು (ಎಂದರೆ ಪ್ರಕೃತ ವಸ್ತುವನ್ನು) ಇನ್ನೊಂದರೊಡನೆ (ಎಂದರೆ, ಅಪ್ರಕೃತ ವಸ್ತುವಿನೊಡನೆ) ಹೋಲಿಸುವುದಕ್ಕೆ 'ಉಪಮಾಲಂಕಾರ' ಎಂದು ಹೆಸರು.'

ಹಿಂದೆ ಅರ್ಥಾಲಂಕಾರಗಳೊಳಗಣ ಪ್ರಮುಖ ಭೇದಗಳಲ್ಲೊಂದಾದ 'ಔಪಮ್ಯ'ವನ್ನು ಲಕ್ಷಿಸುವಲ್ಲಿ ಇದರ ಲಕ್ಷಣವನ್ನು ವಿವರಿಸಬೇಕಾಗಿ ಬಂದುದರಿಂದ, ಅದನ್ನಿಲ್ಲಿ ಪುನಃ ವಿಸ್ತರಿಸಬೇಕಾಗಿಲ್ಲ. ನಮ್ಮ ಗ್ರಂಥಕಾರನು ಈ ಉಪಮಾ ಪ್ರಪಂಚದೊಳಗೆ ವಸ್ತೂಪಮೆ ಧರ್ಮೋಪಮೆ, ವಿಪರ್ಯಯೋಪಮೆ ಮೊದಲಾದ ಇಪ್ಪತ್ತಾರು ಉಪಮಾ ಭೇದಗಳನ್ನು ದೃಷ್ಟಾಂತಪೂರ್ವಕವಾಗಿ ಹೆಸರಿಸಿದ್ದಾನೆ.[1] ಅರ್ಥಾಲಂಕಾರಗಳೊಳಗೆ ಉಪಮಾಲಂಕಾರವೇ ಅತಿ ವಿಶಾಲವಾದುದು. ಜಾತಿ ದ್ರವ್ಯ ಕ್ರಿಯಾ ಗುಣ ಬದ್ಧತೆಯು ಸ್ವಭಾವೋಕ್ತಿಗೆ ಮಾತ್ರವಲ್ಲ, ಎಲ್ಲ ಅಲಂಕಾರಗಳಿಗೂ ಮೀಸಲಾದುದಷ್ಟೆ; ಅದಲ್ಲದೆ, ಉಪಮಾನ, ಉಪಮೇಯ, ಸಾಧಾರಣಧರ್ಮ, ಉಪಮಾವಾಚಕ—ಎಂಬ ನಾಲ್ಕು ಅಂಗಗಳೂ ಅದೊಂದೇ ಅಲಂಕಾರದೊಳಗೆ ಅಡಕವಾಗಿರುವುದರಿಂದಲೇ ಅದು ಅಷ್ಟೊಂದು ವಿಸ್ತರಿಸಿರುವುದೆಂದು ಭಾವಿಸಬಹುದು. ವಿಶಿಷ್ಟಭೇದಗಳೆಂದು ಗ್ರಂಥಕಾರನು ದೃಷ್ಟಾಂತಿಸಿರುವವುಗಳಲ್ಲದೆ, ಬೇರೆ ಸ್ವತಂತ್ರಗಳೆನ್ನಿಸುವ ಹಲವು ಅಲಂಕಾರಗಳಲ್ಲಿಯೂ ಈ ಉಪಮಾ ಗಂಧವು ಹರಡಿಕೊಂಡಿದೆ.

ಆಧುನಿಕ ಲಾಕ್ಷಣಿಕರು ಉಪಮಾಲಂಕಾರದೊಳಗೆ 'ಪೂರ್ಣೋಪಮೆ', 'ಲುಪ್ತೋಪಮೆ' ಎಂಬ ಎರಡೇ ಭೇದಗಳನ್ನು ಕಲ್ಪಿಸಿಕೊಂಡಿದ್ದಾರೆ. ಮೇಲೆ ಸೂಚಿಸಿದ ನಾಲ್ಕೂ ಅಂಗಗಳು ವ್ಯಕ್ತವಾಗಿದ್ದರೆ, 'ಪೂರ್ಣೋಪಮೆ;' ಅವುಗಳೊಳಗೆ ಒಂದರಿಂದ ಮೂರರವರೆಗೆ ಲುಪ್ತವಾಗಿ ಸಂದರ್ಭಾನುಸಾರವೆನ್ನಿಸಿ ಅಧ್ಯಾಹರಿಸಿಕೊಳ್ಳುವಂತಿದ್ದರೆ, 'ಲುಪ್ತೋಪಮೆ.' ಈ ಲುಪ್ತೋಪಮೆಯೊಳಗೆ ಎಂಟು ಭೇದಗಳಾಗುತ್ತವೆ. ಸ್ಫುಟತೆಗೂ ಅನುಕೂಲ್ಯಕ್ಕೂ ಈ ಬಗೆಯ ಪರಿಚ್ಛೇದವೇ ಹೆಚ್ಚಾಗಿ ಒಪ್ಪುವಂತೆ ತೋರುತ್ತದೆ. ಉಳಿದ ಭೇದ ಸಂಖ್ಯಾನಗಳೆಲ್ಲ ಅಲಂಕಾರವೈಶದ್ಯಕ್ಕಿಂತ ಹೆಚ್ಚಾಗಿ, ಅಲಂಕಾರರಚನಾ ಕ್ರಮದಿಂದಲೂ ಇತರಾಲಂಕಾರ ಮಿಶ್ರಣದಿಂದಲೂ ಉಂಟಾದುವುಗಳು; ದಕ್ಷಿಣೋತ್ತರ ಮಾರ್ಗಭೇದಗಳ ಸಮ್ಮಿಲನದಿಂದ ಕಲ್ಪಿತವಾದವುಗಳು. ಪ್ರಕೃತಾಪ್ರಕೃತರೂಪದ ಉಭಯಪದಾರ್ಥ ಸಮ್ಮಿಲಿತಗಳಾದ ಅಲಂಕಾರಗಳೆಲ್ಲವೂ ಸಮಾಧಿಗುಣದಲ್ಲಿ ಅಂಕುರಿಸಿದವು. ರೂಪಕಾಲಂಕಾರದಲ್ಲಿ ಬಿರಿಮುಗುಳೆನ್ನಿಸಿದುವು; ಉಪಮಾಲಂಕಾರದಲ್ಲಿ ಹೂವಾದುವು.

ಈ ಪುಷ್ಪಜಾತಿಯ ಒಳಗೊಳಗಿನ ಭೇದಗಳನ್ನೆಲ್ಲ ಅಲ್ಲಲ್ಲಿ ನೋಡಿಕೊಂಡು ಅವಗಾಹಿಸಿಕೊಳ್ಳಬಹುದು. ಅವುಗಳೊಳಗೆ ಒಂದೆರಡನ್ನು ಮಾತ್ರವೇ ನಾವಿಲ್ಲಿ ಪರಿಶೀಲಿಸುತ್ತೇವೆ.—

---

[1] ವಸ್ತೂಪಮೆ, ಧರ್ಮೋಪಮೆ, ವಿಪರ್ಯಯೋಪಮೆ, ಅನ್ಯೋನ್ಯೋಪಮೆ, ನಿಯಮೋಪಮೆ, ಅನಿಯಮೋಪಮೆ, ಅತಿಶಯೋಪಮೆ, ಉಪಮೋತ್ಪ್ರೇಕ್ಷೆ, ಅದ್ಭುತೋಪಮೆ, ಮೋಹೋಪಮೆ, ಸಂಶಯೋಪಮೆ, ಊರ್ಜಿತೋಪಮೆ, ಶ್ಲೇಷೋಪಮೆ, ನಿಂದೋಪಮೆ, ಪ್ರಶಂಸೋಪಮೆ, ವಿರೋಧೋಪಮೆ, ತತ್ತ್ವಾಖ್ಯಾನೋಪಮೆ, ಅಸಾಧಾರಣೋಪಮೆ, ಅಭೂತೋಪಮೆ, ಅಸಂಭವೋಪಮೆ, ಬಹೂಪಮೆ, ಮಾಲೋಪಮೆ, ವಾಕ್ಯೋಪಮೆ, ಸಂಧಾನೋಪಮೆ, ಪ್ರತಿವಸ್ತೂಪಮೆ, ಹೇತೂಪಮೆ.

ವನರುಹದಂತೆ ಮುಖಂ ಲೋ
ಚನಮೆಸೆವುತ್ಪಳದವೋಲ್ ತಳಂ ತಳಿರಂತೆಂ
ದನುರೂಪಮಾಗಿ ಪೇಟಿಟ್ಟೊಡ
ದೆನಸುಂ ವಸ್ತೂಪಮಾನಮೆಂಬುದು ಪೆಸರಿಂ —(iii, 60)

—'ವನರುಹದಂತೆ ಮುಖ; ಎಸೆವ ಉತ್ಪಲದಂತೆ ಲೋಚನ; ತಳಿರಂತೆ ಕರತಳ—ಎಂದು (ವನರುಹಾದಿ ಅಪ್ರಕೃತ ವಸ್ತುಗಳೊಡನೆ ಮುಖಾದಿ ಪ್ರಕೃತವಸ್ತುಗಳನ್ನು) ಅನುರೂಪವಾಗಿ ವರ್ಣಿಸುವುದು ವಸ್ತೂಪಮೆ.'

ಇಲ್ಲಿ ಮೂರು 'ವಸ್ತೂಪಮೆ'ಗಳಿವೆ. ಈ ಮೂರರಲ್ಲಿ, ಕ್ರಮವಾಗಿ 'ವನರುಹ', 'ಉತ್ಪಲ', 'ತಳಿರ್'—ಇವು ಉಪಮಾನಗಳು; 'ಮುಖ', 'ಲೋಚನ', 'ತಳ'—ಇವು ಉಪಮೇಯಗಳು. 'ಅಂತೆ' 'ವೋಲ್', 'ಅಂತೆ'—ಇವು ಉಪಮಾವಾಚಕಗಳು. ಇವುಗಳಲ್ಲಿ ಕ್ರಮವಾಗಿ 'ಚೆಲ್ವು', 'ಕರ್ಪು', 'ಕೆಂಪು' ಎಂಬ ಸಮಾನಧರ್ಮವಾಚಕ ಪದಗಳು 'ಲುಪ್ತ'ವಾಗಿವೆ. ಅದರಿಂದ, ಆಧುನಿಕರು ಇದನ್ನು 'ಲುಪ್ತೋಪಮೆ' ಎಂದು ಕರೆಯುತ್ತಾರೆ. ಉಪಮಾನೋಪಮೇಯ 'ವಸ್ತು' (ಪದಾರ್ಥ)ಗಳನ್ನು ಲೋಪಿಸದ ಕಾರಣ, ನಮ್ಮ ಗ್ರಂಥಕಾರನು ಇದಕ್ಕೆ 'ವಸ್ತೂಪಮೆ' ಎಂಬ ಹೆಸರನ್ನಿತ್ತಿರಬಹುದು.

ಮುಂದಿನ 'ಧರ್ಮೋಪಮೆ'ಯನ್ನು ನೋಡಿ:

ತಳಿರ್ಗಳವೊಲ್ ಮೆಲ್ಲಿದುವೀ
ತಳಂಗಳಳಿಕುಳದವೊಲ್ ವಿನೀಳಂಗಳ್ ನಿ
ನ್ನಳಕಾಳಿಗಳೆಂಬುದನಾ
ಕುಳಮಿಲ್ಲದೆ ವಿಬುಧರಱಿಗೆ ಧರ್ಮೋಪಮೆಯಂ —(iii, 61)

ಇಲ್ಲಿ 'ಮೆಲ್ಲಿದುವು', 'ವಿನೀಳಂಗಳ್' ಎಂಬ ಧರ್ಮವಾಚಕ ಪದಗಳಿವೆ. ಅದರಿಂದಲೇ ಇವು 'ಧರ್ಮೋಪಮೆ'ಗಳು ಎಂದು ಗ್ರಂಥಕಾರನೆಣಿಕೆಯಾಗಿದ್ದಿರಬೇಕು. ಉಪಮಾನೋಪಮೇಯಗಳೂ ಧರ್ಮವಾಚಕ ಉಪಮಾವಾಚಕಗಳೂ ಇರುವುದರಿಂದ ಆಧುನಿಕರೆಣಿಕೆಯಂತೆ ಇವು 'ಪೂರ್ಣೋಪಮೆ'ಗಳು.

ಈಗ, ವಿಪರ್ಯಾಯೋಪಮೆ:

ನಿನ್ನ ಮುಖದಂತೆ ಕಮಳಮಿ
ದುನ್ನಿದ್ರಂ ನಿನ್ನ ತಳದವೋಲಾರಕ್ತಂ
ನಿ[ರ್ನೆರಮಿ ?] ಪಲ್ಲವಮೆನೆ
ಸನ್ನುತರೂಪಿಂ ವಿಪರ್ಯಯೋಪಮಮಕ್ಕುಂ[1] —(iii, 62)

ವರ್ಣನೀಯ (ಉಪಮೇಯ)ವಾದ ಮುಖವನ್ನು ಅವರ್ಣನೀಯ (ಉಪಮಾನ)ವಾದ ಕಮಲದ ಸ್ಥಾನದಲ್ಲಿರಿಸಿ, 'ನಿನ್ನ ಮುಖದಂತೆ ಕಮಳಮಿದು ಉನ್ನಿದ್ರಂ....' ಎಂದು

[1] ಎರಡು ಪ್ರತಿಗಳಲ್ಲಿಯೂ 'ನಿನ್ನಯವೀ...' ಎಂದೇ ಇದೆ. 'ನಿರ್ನೆರಮಿ...' ಎಂದಿರಬಹುದೆಂಬುದು ನಮ್ಮ ಊಹೆ.

ವರ್ಣಿಸುವುದು 'ವಿಪರ್ಯಯೋಪಮೆ'. ಹಾಗೆ ಹಿಂದುಮುಂದಾಗಿ ಹೋಲಿಸುವುದೆಂದರೆ, ಅತಿವಕ್ರ ಮಾರ್ಗದಲ್ಲಿ ಸೇರಿದುದು ಎನ್ನಬೇಕು. ಇದನ್ನು 'ಕವಿರಾಜಮಾರ್ಗ' ಕಾರನು 'ವಿಪರ್ಯಯೋಪಮೆ' ಎಂದರೆ, ಕೆಲಮಂದಿ ಲಾಕ್ಷಣಿಕರು 'ಪ್ರತೀಪಾಲಂಕಾರ' ಎನ್ನುತ್ತಾರೆ.

ಉಪಮಾಲಂಕಾರದಲ್ಲಿ, ಹೀನಾಧಿಕರೊಳಗೆ ಔಪಮ್ಯವನ್ನು ಕಲ್ಪಿಸುವ ಅದೊಂದು ಪದ್ಧತಿಯೂ ಇದ್ದಂತೆ ತೋರುತ್ತಿದೆ. 'ನಿನ್ನಂತೆ ಸುರೇಶ್ವರಂ ಉತ್ಪನ್ನ ಮಹೈಶ್ವರ್ಯಂ ಎಂಬುದುಂ', (ನಿನ್ನಂತೆ) 'ಜಲನಿಧಿತಾಂ ಸನ್ನುತಗಭೀರಂ ಎಂಬುದುಂ' (iii, 87) ಹೀನಾಧಿಕ ಪ್ರಶಂಸಾರೂಪವಾದ ಉಪಮೆಯಲ್ಲಿ ಗುಣವೆಂದೂ, 'ಈತಂ ಕೊಳದಂತಂಬರಮತಿ ನಿರ್ಮಲಂ, ಸ್ವಾಮಿಭಕ್ತನೆಂದುಂ ನಾಯ್ವೋಲ್' (iii, 88) ಎಂಬುದಿದು ದೋಷವೆಂದೂ ಹೇಳಿದೆ. ಈ ದೃಷ್ಟಾಂತದೊಳಗೆ, ಕಡೆಯದೇನೋ ಹಿಂದಣ ದೇಸಿಯಿಂದೊದಗಿದ ಗ್ರಾಮ್ಯಾರ್ಥಕವಾದ 'ಉಪಮಾ ದೋಷ'ವಾಗಿಯೇ ತೋರುವುದು. ಉಳಿದುವುಗಳು 'ವಿಪರ್ಯಯೋಪಮೆ'ಯೇ ಆಗಿರುವುದರಿಂದ, ಅಲ್ಲಿ ದೋಷವೇನು ? ಆದರೆ 'ನಿನ್ನ ಮುಖದಂತೆ ಕಮಲಮಿದುನ್ನಿದ್ರಂ' ಎಂಬ ವಿಪರ್ಯಯೋಪಮೆಯಲ್ಲಿ 'ಮುಖ'ವೇ ವರ್ಣ್ಯವಾಗಿದೆ; ಕವಿಯಾದರೋ ಉದ್ದೇಶಪೂರ್ವಕವಾಗಿಯೇ ಅದಕ್ಕೆ ಅವರ್ಣ್ಯಸ್ಥಾನವನ್ನು ಕಲ್ಪಿಸಿಕೊಂಡಿದ್ದಾನೆ. 'ನಿನ್ನಂತೆ ಸುರೇಶ್ವರಂ...' ಇತ್ಯಾದಿಗಳಲ್ಲಿಯೂ 'ನೀನು' ಮೊದಲಾದುವುಗಳೇ ವರ್ಣ್ಯಗಳು. ಹಾಗಲ್ಲದೆ, ಸುರೇಶ್ವರಾದಿಗಳೇ ಪ್ರಕೃತಗಳಾಗಿದ್ದರೆ ಮಾತ್ರ, ಅದನ್ನು ವಿಶಿಷ್ಟವಾದ ಉಪಮಾಭೇದವನ್ನಾಗಿ ಭಾವಿಸಿಕೊಳ್ಳಬಹುದು.

**೮. ಅತಿಶಯಂ**

ಮೇರೆಗಳೆದಿರೆ ವಿಶೇಷ ವಿ
ಚಾರಮನಧಿಕೋಕ್ತಿಯೊಳ್ ತಗುಳ್ಚುವುದಕ್ಕುಂ
ಸಾರತರಮತಿಶಯಾಲಂ
ಕಾರಂ ಮತ್ತದಱ ಲಕ್ಷ್ಯಮೀ ತೆಱನಕ್ಕುಂ —(iii, 91)

—"ಒಂದು ಪದಾರ್ಥಕ್ಕೆ (ಎಂದರೆ, ಪ್ರಕೃತ ವಸ್ತುವಿಗೆ ಮಾತ್ರವೇ) ಸಂಬಂಧಿಸಿದ ವಿಶೇಷ ವಿಚಾರವನ್ನು ಎಲ್ಲೆಮೀರಿದ ಅಧಿಕೋಕ್ತಿಯಿಂದ ಬಣ್ಣಿಸುವುದು 'ಅತಿಶಯಾಲಂಕಾರ."

ಇದನ್ನು, 'ಸಾರತರಂ', 'ಕಾಂತಾಂತಿಕಂ' ಎಂದೂ ಗ್ರಂಥಕಾರನು ವರ್ಣಿಸುತ್ತಾನೆ. ಆಧುನಿಕರು 'ಅತಿಶಯೋಕ್ತಿ'ಯೊಳಗೆ ಹಲವು ಭೇದಗಳನ್ನು ಕಲ್ಪಿಸಿದ್ದಾರೆ. ಹಿಂದಿನ ಆಲಂಕಾರಿಕ ಮಾರ್ಗವನ್ನೇ ಅನುಸರಿಸಿದ ನಮ್ಮ ಲಕ್ಷಣಕಾರನಾದರೋ ಇದರೊಳಗೆ ಹೆಚ್ಚಿನ ಭೇದಗಳನ್ನು ಸೂಚಿಸಿಲ್ಲ.

ಅತಿಶಯೋಕ್ತಿ ಎಂಬುದು ಸ್ವಭಾವಾಖ್ಯಾನಕ್ಕೆ ವಿರುದ್ಧವಾದ ಉಕ್ತಿ ವಿಶೇಷ. ಅದರಿಂದ, ಇದು ಮೊತ್ತಮೊದಲು ಉತ್ತರ ಮಾರ್ಗದ ಕವಿಗಳಲ್ಲೇ ಅಲಂಕೃತಿಯಾಗಿ ಬಳಕೆಗೊಂಡು

ದಾಗಿರಬೇಕೆಂದು ಭಾಸವಾಗುವುದು. ಇದರೊಳಗೆ ಸ್ವಭಾವಾಖ್ಯಾನದಂತೆ ಪ್ರಕೃತವಾದ ಒಂದೇ ಪದಾರ್ಥದ ವರ್ಣನೆಯಲ್ಲದೆ ಅಪ್ರಕೃತವೆಂಬುದರ ಆವಶ್ಯಕತೆ ಇಲ್ಲ. ಆದರೆ, ಅದರಲ್ಲಿ ಅರ್ಥವರ್ಣನೆ ಮೇರೆವಡೆದು ಸ್ಫೀತಾಗಿರುವುದು; ಇದರಲ್ಲಿ 'ಮೇರೆಗಳೆದು' ಕೊಂಕೆನ್ನಿಸಿ ಮಿರುಗುವುದು. ಇವೆರಡರ ಕೂಟದಿಂದ, ಇಲ್ಲವೆ ಸಮತೋಲನ ಭಾವನೆ ಯಿಂದ, ಉಪಮಾಲಂಕಾರವು ತಲೆದೋರಿರಬೇಕೆಂದು ನಮ್ಮೆಣಿಕೆ. ಗ್ರಂಥಕಾರನು ಕೊಟ್ಟಿರುವ 'ಅತಿಶಯ' ದೃಷ್ಟಾಂತವನ್ನು ನೋಡಿ:

'ಸಿಂದೂರದೆ ತಲೆವಱಿದುದಂ ಗೈರಿಕರಸಾರ್ದ್ರಮಂ
ಮದವಾರಣಮಂ ಕಂಡು, ಆಂ ಸಂಧ್ಯಾರಾಗದೊಳ್
ಅಱಿಯದೆ ಸೋಂಕಿ ಒಯ್ಯನೆ ಕೆಲದೊಳ್
ಪೋದೆಂ —(iii, 92)

ಬಹುಶಃ, ಪರ್ವತದ ತಪ್ಪಲಿನಲ್ಲಿ ಸಂಚರಿಸುತ್ತಿದ್ದವನೊಬ್ಬನು ತನಗೊದಗಿದ ಒಂದು ವಿಶಿಷ್ಟ ಸಂದರ್ಭವನ್ನು ಅವನೇ ತನ್ನ ಮಿತ್ರನಲ್ಲಿ ವಿಸ್ತರಿಸಿಕೊಳ್ಳುವ ಮಾತಿದು. 'ನಾನು ವಿಹಾರ ಪ್ರವಣನಾಗಿ ಪರ್ವತಸಾನುವಿನಿಂದಿತ್ತ ಬರುವಲ್ಲಿ ಸಂಜೆಯಾಯಿತು; ಆ ಸಂಜೆಯ ಕೆಂಬಣ್ಣವು ಆಕಾಶವನ್ನೆಲ್ಲ ನಿಬಿಡವಾಗಿ ವ್ಯಾಪಿಸಿತ್ತು; ಬರುವ ದಾರಿಯಲ್ಲಿ ವ್ಯಕ್ತಿಯೊಂದು ನನಗಿದಿರಾಯಿತು; ಅದರ ಅಂಗೋಪಾಂಗಗಳೆಲ್ಲ 'ಗೈರಿಕ ರಸ' ದಿಂದ (ಗಿರಿಗಳಲ್ಲಿ ಜಲಮಿಶ್ರಿತವಾಗಿ ಹರಿಯುವ ಕೆಂಪಾದ ಧಾತುದ್ರವದಿಂದ) ಒದ್ದೆಯಾಗಿತ್ತು; ಅದರ ತಲೆ ಸಿಂದೂರ ರೇಣು ಧೂಸರಿತವಾಗಿತ್ತು; ಮೊದಲೇ ವ್ಯಾಪಕವಾಗಿ ಪಸರಿಸಿದ್ದ ಸಂಧ್ಯಾರಾಗದೊಳಗೆ ಬರುತ್ತಿದ್ದ ಅದೇ ಬಣ್ಣದ ವ್ಯಕ್ತಿಯ ಹೊಲಬು ನನಗಾಗಲಿಲ್ಲ; ಅದರಿಂದ ತೊಲಗಿ ಸೋಂಕುವಲ್ಲಿ, ಅದು ಮದವಾರಣವೆಂದು ತಿಳಿದು ಹೊರಟು ಬಂದೆನು'—ಇದು ಪದ್ಯದ ತಾತ್ಪರ್ಯ. ಇದರಲ್ಲಿ ಸಂಧ್ಯಾರಾಗದ ವಿಶೇಷ ವಿಚಾರವೇ 'ಮೇರೆಗಳೆದು' 'ಅತಿಶಯ'ವಾಗಿ ವರ್ಣಿತವಾಗಿರುವುದು. ಗೈರಿಕ ರಸದಿಂದಲೂ ಸಿಂದೂರ ದಿಂದಲೂ ಲಿಪ್ತವಾಗಿ ಅಭಿಮುಖವಾದ ಮದಗಜವನ್ನೂ ಪರಿಚ್ಛೇದಿಸಿ ತಿಳಿದುಕೊಳ್ಳ ಲಾರದಂತಿತ್ತು, ಎಂಬುದರಿಂದ ಆ ಸಂಧ್ಯಾರಾಗದ ನಿಬಿಡಿತತೆ 'ಮೇರೆಗಳೆದು' ವ್ಯಕ್ತ ವಾಗಿದೆ. ಇಲ್ಲಿ ಪ್ರಮುಖವಾಗಿರುವುದು ಯಾವುದು—ಸಂಧ್ಯಾರಾಗದ ವರ್ಣನೆಯೋ, ಮದವಾರಣದ ವರ್ಣನೆಯೋ, ಅಥವಾ 'ಕೆಲದೊಳೊಯ್ಯನೆ ಪೋದ' ತನ್ನ ಅವಸ್ಥಾ ವರ್ಣನೆಯೋ ಅಥವಾ ಸಂಧ್ಯಾರಾಗ ಮದವಾರಣಗಳೆರಡರ ವರ್ಣನೆಯೂ ಮುಖ್ಯವೋ ಎಂಬ ಪ್ರಶ್ನೆಗಳೇಳಬಹುದು. ಈ ನಾಲ್ಕರೊಳಗೆ ಕ್ರಮವಾಗಿ ಕಡೆಯಿಂದ ಬುಡದ ವರೆಗಿನವುಗಳನ್ನು ಉತ್ತರಿಸುತ್ತಾ ಹೋಗಬೇಕು:—

(i) 'ಕೆಲದೊಳೊಯ್ಯನೆ ಪೋದ' ಕ್ರಿಯೆಯೊಳಗೆ ಅಧಿಕೋಕ್ತಿ ಯಾವುದೂ ತೋರು ವುದಿಲ್ಲ. ಆದರಿಂದ, ಅದು ಇಲ್ಲಿಯ ಅತಿಶಯಾಲಂಕಾರ ವಿಷಯವಲ್ಲ ಎಂಬುದು ಹೊಳೆ ಯುತ್ತಿದೆ.

(ii) 'ಗೈರಿಕ ರಸಾರ್ದ್ರ'ತ್ವವೇ ಮೊದಲಾದವುಗಳಿಂದ ಕೂಡಿ 'ಮದವಾರಣ' ವಿರುವುದ

ರಲ್ಲಾಗಲಿ, ಅದನ್ನೊಬ್ಬನು ಕಾಣುವುದರಲ್ಲಾಗಲಿ 'ಅತಿಶಯ'ವೇನಿದೆ? ಏನೂ ಇಲ್ಲ. ಆದರೆ ಅದನ್ನೀಕ್ಷಿಸಿದವನಿಗೆ ಅದು 'ಮದವಾರಣ' ಎಂಬ ಭಾವನೆಯುಂಟಾಗದಿರುವುದು 'ಅತಿಶಯ'ವೆನ್ನುವುದಕ್ಕಿಂತಲೂ ಭ್ರಮವಾಗಿ ತೋರುತ್ತಿದೆ. ಅಂಥ ವ್ಯಕ್ತಿಯೊಂದನ್ನು ಕಂಡಾಗ ಅದು ಅಪಾಯಕರವಾದ 'ಮದವಾರಣ' ಎಂಬ ಭಾವನೆ ಅವನಿಗುಂಟಾಗಲಿಲ್ಲ; ಬದಲಾಗಿ, ಅದು ಆನಂದದಾಯಕವಾದೊಂದು ಪದಾರ್ಥವಾಗಿರಬೇಕೆಂಬ ಎಣಿಕೆಯೇ ಅವನಲ್ಲಿ ಮೊಳೆದೋರಿದ್ದಿರಬೇಕು. ಅದರಿಂದಲೇ ಅವನು ಅದನ್ನು 'ಸೋಂಕಿ'ದುದು. ಅಂಥ ಆನಂದಪ್ರದ ಪದಾರ್ಥವೆಂದರೆ ಯಾವುದು? 'ಮದವಾರಣ'ದಂತೆಯೇ ಗತಿಯುಳ್ಳ ತನ್ನ ಮನದನ್ನೆಯಾಗಿರಬಹುದೆ? ಇರಬಹುದು. ಅದರಿಂದ 'ಗೈರಿಕ ರಸಾದ್ರ್ರ'ತ್ವಾದಿ ವಿಶೇಷಣಗಳನ್ನು ಆ ವ್ಯಕ್ತಿಗಿತ್ತುದಾಗಿರಬೇಕು. 'ಗೈರಿಕರಸ'ದಂತೆ ಚೆನ್ನುಣುಪಾದ ಕೆಂಗಾವಿಯುಡೆಯುನ್ನುಟ್ಟು, ಸಿಂದೂರಲೇಪನದಿಂದ ಹಣೆಯನ್ನಲಂಕರಿಸಿ, ಸಂಜೆಯಲ್ಲಿ ನಲ್ಲನಾದ ತನ್ನನ್ನು ಅರಸಿಕೊಂಡು, 'ಮದವಾರಣ' ಗಮನೆಯಾದ ತನ್ನ ಮನಃಪ್ರಿಯೆಯೇ ಅಭಿಸಾರಿಕೆಯಾಗಿ ಬರುತ್ತಾಳೆ ಎಂದೇ ಭ್ರಮಿಸಿ ಆತನು ಆ ವ್ಯಕ್ತಿಯನ್ನು 'ಸೋಂಕಿ' ದುದು. ಹಾಗಿದ್ದರೆ, ಇದು 'ಭ್ರಮಾಲಂಕಾರ' ದೃಷ್ಟಾಂತವಲ್ಲವೆ? ಆದರೆ, ಆಧುನಿಕರು 'ಭ್ರಮಾಲಂಕಾರ'ವನ್ನು ಲಕ್ಷಿಸಿದರೂ, ನಮ್ಮ ಗ್ರಂಥಕಾರನ ಎಣಿಕೆಯಂತೆ 'ಭ್ರಮ' ಎಂಬುದೊಂದು ವಿಶಿಷ್ಟವಾದ ಅಲಂಕಾರವೇ ಇಲ್ಲ. 'ಕಮಳವಿಮೋಹದಿಂ ಈ ನಿನ್ನ ಮೊಗಕ್ಕೆಱಗುವುದು...ಭ್ರಮರಂ...' (iii, 69) ಎಂಬ 'ಮೋಹೋಪಮಾ' ದೃಷ್ಟಾಂತದ 'ಮೋಹ'ವೂ ಭ್ರಮವೂ ಅಭಿನ್ನವಾಗಿಯೇ ತೋರುವುದು. ಆದರೆ, ಅಲ್ಲಿ 'ಕಮಲ ವಿಮೋಹ'ವೆಂಬುದು ವ್ಯಕ್ತವಾಗಿಯೇ ಇದೆ; ಇಲ್ಲಿ 'ಗೈರಿಕರಸಾದ್ರ್ರ'ತ್ವ ಮೊದಲ್ಗೊಂಡು 'ಮದವಾರಣ'ದ ವರೆಗಿನ ವಿಶಿಷ್ಟ ಪದಗಳ ಬಲದಿಂದ 'ಮದವಾರಣ ಗಮನೆ' ಎಂಬ ಭ್ರಮಾಶ್ರಯ ವಸ್ತುವನ್ನು ನಾವು ಊಹಿಸಿಕೊಳ್ಳಬೇಕಲ್ಲದೆ ಅದು ವ್ಯಕ್ತವಾಗಿಲ್ಲ. ಇಷ್ಟು ಮಾತ್ರವಲ್ಲ. 'ಭ್ರಮಾಲಂಕಾರ'ವು ಉಪಮಾಭೇದ; ಒಂದನ್ನು ಇನ್ನೊಂದ ನ್ನಾಗಿ ಭ್ರಮಿಸುವುದು ಆ ಅಲಂಕೃತಿಯ ಸ್ವಭಾವವಾದರೂ, ಅದರೊಳಗೆ ಪ್ರಕೃತಾ ಪ್ರಕೃತಗಳೆಂಬ ಉಭಯ ವಸ್ತುಗಳಿವೆ. ಇಲ್ಲಿ ಹಾಗಿಲ್ಲ, ಅನ್ನದೆಡೆಯಲ್ಲಿ ಅದೇ ಆಕೃತಿಯ ಬೆಳುಗಲ್ಲಾಗಲಿ ಅಕ್ಕಿಯ ಹುಳುವಾಗಲಿ ಇದ್ದರೆ ಆ ಉಭಯತ್ವಜ್ಞಾನವೇ ಆಗುವುದಿಲ್ಲ ವಷ್ಟೆ. ಅದರಂತೆ, ಸಂಧ್ಯಾರಾಗದ ಸಾಂದ್ರತೆಯಿಂದಾಗಿ ಅವನಿಗೆ ಆ ಮದವಾರಣರೂಪದ ವಸ್ತು ಇದಿರಾಗಿ ಬರುವುದೇ ಗೊತ್ತಾಗಲಿಲ್ಲವಂತೆ. ಹಾಗಾದರೆ, ಆಧುನಿಕರು ಕಲ್ಪಿಸಿದ 'ತದ್ಗುಣಾಲಂಕಾರ'ವು ಇಲ್ಲಿ ತೋರುವುದಿಲ್ಲವೆ? ಆದರೆ 'ಭ್ರಮ'ದಂತೆ ಈ 'ತದ್ಗುಣ'ವೂ ಉಪಮಾಜನ್ಯವಾಗಿ ಪ್ರಕೃತಾಪ್ರಕೃತಗಳೆಂಬ ಉಭಯಾಂಗ ವಿಶಿಷ್ಟವಾಗಿದೆ. ನಮ್ಮ ಗ್ರಂಥಕಾರನು ಆ ಅಲಂಕೃತಿಗಳನ್ನೇ ಸೂಚಿಸಿಲ್ಲ. ಮಾತ್ರವಲ್ಲ; ಉಭಯಾಂಗ ವಿಶಿಷ್ಟಾರ್ಥ ಗಳನ್ನು ವ್ಯಕ್ತವಾಗಿ ಸೂಚಿಸದೆ, ತಾತ್ಪರ್ಯದೊಳಗೆ ಮಾತ್ರವೇ ನುಸುಳಿಸಿ, ಪ್ರಕೃತದಲ್ಲಿ ಸಂಧ್ಯಾರಾಗದ ಅತಿಶಯವನ್ನೇ ಬಲುಜಾಣ್ಮೆಯಿಂದ ವಕ್ರೋಕ್ತಿ ಮೂಲಕ ಹೊಳೆಯಿಸಿ ದ್ದಾನೆ. ಹೀಗೆ ಪ್ರಕೃತಮಾತ್ರದ ವರ್ಣನೆಯಾಗಿ ತೋರಿದರೂ, ಅಪ್ರಕೃತವನ್ನೂ

ಆದರೊಳಗೆ ಸಮರಸವನ್ನಾಗಿ ಬಣ್ಣಿಸಿರುವುದರಿಂದ, ಗ್ರಂಥಕಾರನು ಇದನ್ನು 'ಸಾರತರ'ವೆಂದು ನಿರೂಪಿಸಿದ್ದಾನೆ. ದಂಡಿಯೂ 'ಅಸಾವತಿಶಯೋಕ್ತಿಃ ಸ್ಯಾತ್ ಅಲಂಕಾರೋತ್ತಮಾ' ('ಕಾವ್ಯಾದರ್ಶ', ii, 314) ಎಂದು ಒಪ್ಪಿರುವುದಕ್ಕೂ ಅದೇ ಕಾರಣ. 'ಸಾರತರಂ' ಎಂದು ಮಾತ್ರವಲ್ಲದೆ 'ಕಾಂತಾಂತಿಕಂ' ಎಂದೂ ನಮ್ಮ ಲಾಕ್ಷಣಿಕನು ಇದನ್ನು ವಿವರಿಸಿದ್ದಾನಲ್ಲವೆ ? ಇದು ಬರಿಯ ಹೊಗಳಿಕೆಯ ಮಾತಲ್ಲ. ಹಿಂದೆ ನಿರೂಪಿಸಿದ 'ಕಾಂತಿ' ಎಂಬ ಗುಣವು ತನ್ನ ಪರಮಾವಸ್ಥೆಯನ್ನು ಎಂದರೆ, ಅಂತಿಕಾವಸ್ಥೆಯನ್ನು ಹೊಂದಿದಲ್ಲಿ ಅದು ಅತಿಶಯಾಲಂಕಾರವಾಗುವುದು ಎಂಬುದೇ ಆ ಮಾತಿನ ಸಾರ. ಕವಿಗಳು ಬಲು ಚತುರರಲ್ಲವಾದರೆ, ಅವರ 'ಅತಿಶಯೋಕ್ತಿ'ಯೂ ನೀರಸವಾಗಿಯೂ ಅಲಂಕಾರವೇ ಅಲ್ಲವಾಗಿಯೂ ಪರಿಣಮಿಸುವುದಲ್ಲವೆ ?

## ೯. ಸದೃಶಯೋಗಿತೆ

ಸ್ತುತಿನಿಂದೆಗಳಿಂ ಸವಿವ
ಕ್ಷಿತಗುಣದೊಳ್ ಸದೃಶಮಾಗಿ ಪೇೞ್ವುದು ಪೆಱತಂ
ನುತ ಸದೃಶಯೋಗಿತಾಲಂ
ಕೃತ ಲಕ್ಷಣಮಕ್ಕುಂ................... —(iii, 95)

—"ಪ್ರಕೃತಾಪ್ರಕೃತ ವಸ್ತುಗಳನ್ನು ಅವುಗಳ ವಿಶಿಷ್ಟ ಗುಣ (ಧರ್ಮ)ಗಳ ಸಮಾನತೆಯಿಂದಾಗಿ, ಸ್ತುತಿಯಲ್ಲಾಗಲಿ ನಿಂದೆಯಲ್ಲಾಗಲಿ, ಸದೃಶವಾಗಿ ಬಣ್ಣಿಸಿದರೆ, 'ಸದೃಶಯೋಗಿತಾಲಂಕಾರ'."

ಹಲವು ವರ್ಣ್ಯಪದಾರ್ಥಗಳಿಗೆ ಅಥವಾ ಹಲವು ಅವರ್ಣ್ಯ ಪದಾರ್ಥಗಳಿಗೆ ಧರ್ಮೈಕ್ಯವನ್ನು ಹೇಳಿದರೆ 'ಸದೃಶಯೋಗಿತೆ' ಅಲ್ಲವೆ 'ತುಲ್ಯಯೋಗಿತೆ' ಎಂಬ ಅಲಂಕಾರವಾಗುವುದೆಂದು ಆಧುನಿಕರ ಅಭಿಪ್ರಾಯ. ಯಾಕೆಂದರೆ, ಉಪಮಾನೋಪಮೇಯಗಳನ್ನು ಸದೃಶವಾಗಿ, ಅಲ್ಲವೆ ಅವುಗಳೊಳಗೆ ಧರ್ಮೈಕ್ಯವಾಗಿ, ಬಣ್ಣಿಸಿದರೆ ಆ ಅಲಂಕಾರವೂ ದೀಪಕಾಲಂಕಾರದೊಳಗೇ ಮಿಳಿತವಾಗಿಬಿಡಬಹುದೆಂದು ಅವರ ಭಾವನೆಯಿರುವಂತೆ ತೋರುತ್ತಿದೆ. ಆದರೆ ಈ ಗ್ರಂಥಕಾರನ ಕಲ್ಪನೆಯಂತೆ, ಹಿಂದೆ ವಿವರಿಸಿದ 'ದೀಪಕ'ಕ್ಕೂ ಈ 'ಸದೃಶಯೋಗಿತೆ'ಗೂ ಭೇದವು ವ್ಯಕ್ತವಾಗಿಯೇ ಇದೆ. ದೃಷ್ಟಾಂತವನ್ನು ನೋಡಿ :

ಅಮರಾಧಿರಾಜ ಹುತವಹ ಯಮ ನೈಋತ ವರುಣ ವಾಯು
ಯಕ್ಷೇಶಾನಕ್ರಮದಿಂ ಅವರ್ ಎಣ್ಬರ್, ಅಂತೆ ನೀಂ
ಉತ್ತಮನೈ, ಅವರೊಳ್ ನವಮಲೋಕಪಾಳನೆ —(iii, 96)

ಇದು ಸ್ತುತಿರೂಪದ 'ಸದೃಶಯೋಗಿತೆ.' ಇಲ್ಲಿ, ಹಿಂದೆಂದ ಉಪಮಾಭೇದವಾದ 'ಧರ್ಮೋಪಮೆ'ಯೇ ತೋರುವುದಲ್ಲವೆ ? ಹೌದು. ಆದರಿಂದಲೇ ಈ ಅಲಂಕಾರದ ಉಪಸಂಹೃತಿ ಭಾಗದಲ್ಲಿ ಮುಂದೆ—

ಉಪಮಿತಭೇದೋಕ್ತಿ ಕ್ರಮ
ಮುಪರಿಮಿತಾಖ್ಯಾಕೃತಿಪ್ರಯೋಗಾನುಗತಂ
ನೃಪತುಂಗದೇವ ಮತದಿಂ
ದುಪಮಾಭೇದಂಗಳಿಂದೆ ತಱಿಸಲ್ಗಱಿವಂ —(iii, 98)

ಎಂದು ಗ್ರಂಥಕಾರನೇ ನಿರೂಪಿಸುತ್ತಾನೆ. ಆದರೆ, ಈ 'ಧರ್ಮೋಪಮೆ'ಗೆ 'ಸದೃಶಯೋಗಿತೆ' ಎಂಬ ಭೇದವನ್ನೊಂದಿಸುವುದು ಯಾವುದು ? ಪ್ರಕೃತಾಪ್ರಕೃತ ವಸ್ತುಗಳ ಧರ್ಮ (ಗುಣ)ವನ್ನು 'ಸ್ತುತಿನಿಂದೆಗಳಿಂ ಸದೃಶಮಾಗಿ ಪೇೞ್ವುದೇ ಆ ಭೇದಕರೇಖೆ.

## ೧೦. ಆಕ್ಷೇಪ

ವಿದಿತಾರ್ಥ ವಿಪರ್ಯಾಸಾ
ಸ್ಪದಮೆ ದಲಾಕ್ಷೇಪಮೆಂಬಳಂಕಾರಂ......
..........................
...................................... —(iii, 99)

—"ವಿದಿತವಾದ ಅರ್ಥವನ್ನು ವಿಶಿಷ್ಟ ವಿಚಾರಪೂರ್ವಕವಾಗಿ ಅಲ್ಲಗಳೆಯುವುದಕ್ಕೆ 'ಆಕ್ಷೇಪಾಲಂಕಾರ' ಎಂದು ಹೆಸರು."

ಇದರೊಳಗೆ 'ವೃತ್ತಾಕ್ಷೇಪ', 'ಅನುಶಯಾಕ್ಷೇಪ', 'ಶ್ಲೇಷಾಕ್ಷೇಪ', 'ಉಪಮಾಕ್ಷೇಪ', 'ಸಂಶಯಾಕ್ಷೇಪ', 'ಹೇತ್ವಾಕ್ಷೇಪ'—ಎಂಬ ಆರು 'ಆಕ್ಷೇಪ' ಭೇದಗಳನ್ನು ಹೇಳಿವೆ. ಇವುಗಳಲ್ಲಿ ಆದಿಯ ಎರಡನ್ನು ಬಿಟ್ಟು, ಉಳಿದ ನಾಲ್ಕು ಇತರಾಲಂಕಾರ ಮಿಶ್ರಿತ ಗಳೆಂಬುದು ಅವುಗಳ ಹೆಸರುಗಳಿಂದಲೇ ವ್ಯಕ್ತವಾಗುತ್ತಿದೆ. ವಸ್ತುವಿನ ಸ್ವಾಭಾವಿಕ ವರ್ತನೆಯೇ 'ವೃತ್ತ' : ಆ 'ವೃತ್ತ'ವನ್ನು ವಿಚಾರಿಸಿ ಒಳಕೊಂಡ ನಿರ್ಧಾರಣಾನುಸಾರ ವಾಗಿ, ಆ ವಸ್ತುವಿನ ಕುರಿತು ಪ್ರಕೃತದಲ್ಲಿ ನೆಲೆಗೊಂಡ ಅದೊಂದು ವಿಶ್ವಾಸವನ್ನು ಅಲ್ಲಗಳೆದರೆ 'ವೃತ್ತಾಕ್ಷೇಪ' ಎನ್ನಿಸುವುದು. ಅದರಂತೆ ವಿಚಾರಪೂರ್ವಕವಾದ 'ಅನುಶಯ' (ಪಶ್ಚಾತ್ತಾಪ)ದಿಂದ, ಶ್ಲೇಷಯುತ ವಾಕ್ಯಾರ್ಥದಿಂದ, ಉಪಮಾಲಂಕಾರ ಯುಕ್ತವಾಕ್ಯ ದಿಂದ, ಸಂಶಯಯುಕ್ತ ವಾಕ್ಯದಿಂದ, ಹೇತ್ವಲಂಕಾರಯುಕ್ತವಾಕ್ಯದಿಂದ, ಆಕ್ಷೇಪಿಸಿ ಹೇಳುವವುಗಳನ್ನು ಕ್ರಮವಾಗಿ 'ಅನುಶಯಾಕ್ಷೇಪ', 'ಶ್ಲೇಷಾಕ್ಷೇಪ' ಮೊದಲಾದ ಹೆಸರು ಗಳಿಂದ ಗಣಿಸಬೇಕು. ಇವುಗಳೊಳಗೆ 'ವೃತ್ತಾಕ್ಷೇಪ'ದ ಲಕ್ಷ್ಯ ಹೀಗೆ—

ಮೃದುತರ ಮಾರ್ಗದೆ ಕೆನ್ನಂ
ಮದನ ಶರಾನೀಕಮೊಯ್ಯನೊಲವಂ ಪಡೆಗುಂ
ಹೃದಯಮನಱಿಲಳವಿಂದುಱೆ
ವಿದಾರಿಸುವುವಿಂತು ಕುಸುಮಮಯಮಲ್ತದಱಿಂ —(iii, 100)

—'ಮದನ ಬಾಣಸಮೂಹವು ತನ್ನ ಮೃದುತರ ಮಾರ್ಗದಿಂದ ಲೋಕ ಹೃದಯವನ್ನು ಮೆಲ್ಲನೆ ಪ್ರವೇಶಿಸಿ ಒಲವನ್ನು ಪಡೆಯಬೇಕು. ಆದರೆ, ಅದರ ಅಳವು (ಶಕ್ತಿಯು)

ಲೋಕ ಹೃದಯವನ್ನು ಅಳಲಿನಿಂದ ಬಹಳವಾಗಿ ವಿದಾರಿಸುವುದು; ಆದರಿಂದೆ, ಅದು ಕುಸುಮಮಯವಲ್ಲ.'

ಇಲ್ಲಿ ಕಾಮಬಾಣದ ವೃತ್ತವನ್ನೆಲ್ಲ ವಿವರಿಸಿ, ತನ್ಮೂಲಕವಾಗಿ 'ಮದನಶರಂ ಕುಸುಮ ಮಯಂ' ಎಂದು ಆ ವರೆಗೆ ನೆಲೆಗೊಂಡಿದ್ದ ಅಭಿಪ್ರಾಯವನ್ನು 'ಅಲ್ತು' ಎಂದು ಆಕ್ಷೇಪಿಸಿದೆ.

'ಆಕ್ಷೇಪ' ಎಂಬ ಪದವು ಆಡುನುಡಿಯಲ್ಲಿಯೂ ಬಳಕೆಗೆ ಬಂದಿರುವ ಪದ. ಅದನ್ನು ವಿಶಿಷ್ಟವಾದೊಂದು ಅಲಂಕಾರದ ಹೆಸರಾಗಿ ಹೇಳುವಲ್ಲಿ, ಲಾಕ್ಷಣಿಕರು ಅದೊಂದು ಜಾಣ್ಮೆಯಿಂದೊಡಗೂಡಿದ ಆಕ್ಷೇಪಾರ್ಥವನ್ನು ಬೆರಸಿದ್ದಾರೆ. ಆಕ್ಷೇಪಾಲಂಕಾರವನ್ನು ಗ್ರಂಥಕಾರನು 'ವ್ಯತಿರೇಕವಿಕಲ್ಪವಿದೆಂದು' (iii, 106) ಕೊನೆಗೆ ಸೂಚಿಸುತ್ತಾನೆ. ಇದು ದಂಡಿಗೆ ಅನುಸಾರವಾದ ಸೂಚನೆಯಲ್ಲ. ಆದರೆ, 'ಸದೃಶಮಾದ ವಸ್ತುದ್ವಯದೊಳ್ ಭೇದಮಂ' ಅಱಪುವುದಲ್ಲವೆ ವ್ಯತಿರೇಕವು? 'ವಿದಿತಾರ್ಥವಿಪರ್ಯಾಸಾಸ್ಪದಮೆ' ಎಂಬ ಆಕ್ಷೇಪಾಲಂಕಾರ ಲಕ್ಷಣವೂ ಬಹುಮಟ್ಟಿಗೆ ಹಾಗೆಯೇ ಇದೆ. 'ಆಕ್ಷೇಪ'ವನ್ನು 'ವ್ಯತಿರೇಕ ವಿಕಲ್ಪಂ' ಎನ್ನಲು ಅದೇ ಕಾರಣವಿದ್ದಿರಬೇಕು. ಆದಿಯ 'ವೃತ್ತ', 'ಅನುಶಯ' ಎಂಬ ಎರಡು ಶುದ್ಧಾಕ್ಷೇಪಗಳಲ್ಲಿಯೂ ಪ್ರಕೃತ ವರ್ಣನೆ ಮಾತ್ರವೇ ತೋರುವುದೆಂಬುದು ನಿಜ. ಆದರೆ 'ವೃತ್ತಾಕ್ಷೇಪ'ದ 'ಮದನ ಶರಾನೀಕ'ದಲ್ಲಿ 'ಮೃದುತ್ವ', 'ಕಾಠಿನ್ಯ' ಎಂಬ, 'ಅನುಶಯಾಕ್ಷೇಪ'ದ 'ಮನುಜತ್ವ'ದಲ್ಲಿ 'ಅಸಫಲತೆ', 'ಸಫಲತೆ' ಎಂಬ ಎರಡೆರಡು ಪ್ರಕೃತಾಪ್ರಕೃತ ಧರ್ಮಗಳು ಸೂಚಿತವಾಗುತ್ತವಲ್ಲವೆ? ಇದರಿಂದ, 'ವ್ಯತಿರೇಕ'ದಲ್ಲಿ 'ಸದೃಶಮಾದ ವಸ್ತುದ್ವಯ'ದೊಳಗೆ ಭೇದನಿರೂಪಣೆ; 'ಆಕ್ಷೇಪ'ದಲ್ಲಿ ಒಂದೇ ವಸ್ತುವಿನ ಉಭಯ ಧರ್ಮ ನಿರೂಪಣೆ—ಎಂಬುದೇ ಅವೆರಡರೊಳಗಿನ ಭೇದವೆಂಬುದು ವ್ಯಕ್ತವಾಗುವುದು. ಅಂತೂ, ಇವೆರಡೂ ಏಕವಂಶಕ್ಕೇ ಸೇರಿದವುಗಳು ಎನ್ನಬಹುದು.

## ೧೧. ಶ್ಲೇಷ

ನಾನಾರ್ಥಮೇಕರೂಪಾ
ಧೀನ ವಚೋರಚಿತಮಪ್ಪೊಡಕ್ಕುಂ ಶ್ಲೇಷಂ
ಮಾನಿತಮಲಂಕ್ರಿಯಾನುವಿ
ಧಾನಂ................................ —(iii, 108)

—"ಏಕರೂಪಾಧೀನ ವಚನದೊಳಗೆ ನಾನಾರ್ಥಗಳು ಹೊಳೆದರೆ, 'ಶ್ಲೇಷಾಲಂಕಾರ'."

'ಶ್ಲೇಷ' ಎಂದರೆ, ಒಂದು ಇನ್ನೊಂದರೊಡನೆ ಹೆಣೆದುಕೊಂಡಿರುವುದು. ಅನೇಕ ಅಕ್ಷರಗಳೊಳಗೆ, ಒಂದು ಇನ್ನೊಂದರೊಡನೆ ಹೆಣೆದಿದ್ದರೆ 'ಶ್ಲೇಷಗುಣ'; ಒಂದೇ ಪದದೊಳಗೆ 'ನಾನಾರ್ಥ'ಗಳು ಅಡಕವಾಗಿದ್ದರೆ 'ಶ್ಲೇಷಾಲಂಕಾರ'. ದಂಡಿಯು ಈ ಅಲಂಕಾರದಲ್ಲಿ 'ಅಭಿನ್ನಪದ ಶ್ಲೇಷ', 'ಭಿನ್ನಪದ ಶ್ಲೇಷ' ಎಂಬ ಎರಡು ಭೇದಗಳನ್ನು ಸ್ವೀಕರಿಸುತ್ತಾನೆ ('ಕಾವ್ಯಾದರ್ಶ', ii, 310). ಪದವನ್ನು ವಿಂಗಡಿಸದೆ ನಾನಾರ್ಥಗಳು ಹೊಳೆದಲ್ಲಿ, 'ಅಭಿನ್ನಪದ ಶ್ಲೇಷ'—ಇದು ಅರ್ಥಶ್ಲೇಷ; ಪದವನ್ನು ವಿಂಗಡಿಸಿದಾಗ ನಾನಾರ್ಥ

ಸ್ಫುರಣೆಯಾದಲ್ಲಿ 'ಭಿನ್ನಪದ ಶ್ಲೇಷ'—ಇದು ಶಬ್ದಶ್ಲೇಷ.

ನಮ್ಮ ಗ್ರಂಥಕಾರನು 'ಶ್ಲೇಷ'ಕ್ಕೆ ನಾಲ್ಕು ದೃಷ್ಟಾಂತಗಳನ್ನು ಕೊಡುತ್ತಾನೆ. ಆ ಮೇಲೆ 'ರೂಪಕ', 'ಉಪಮೆ', 'ಆಕ್ಷೇಪ'—ಮೊದಲಾದ ಅಲಂಕಾರಗಳಲ್ಲೂ ಶ್ಲೇಷವೂ ವ್ಯಕ್ತವಾಗಿರುವುದನ್ನು ಮುಂದೆ 'ವರರೂಪಕಾದ್ಯಳಂಕಾರ ರಚನೆಯೊಳ್-ಮುನ್ನೆ ಪೇೞ್ದ ಬಂದೆಂ ಕೆಲವಂ' (iii, 113) ಎಂದು ಸೂಚಿಸಿ, ಶ್ಲೇಷದೊಳಗೆ 'ನಿರಂತರ ವಿರುದ್ಧ ನಿಯಮಿತ' ಭೇದಗಳನ್ನು ಲಕ್ಷಿಸುತ್ತಾನೆ. ಇವುಗಳಲ್ಲಿ ಒಂದೆರಡನ್ನು ಇಲ್ಲಿ ಪರಿಶೀಲಿಸುತ್ತೇವೆ.

ಉದಯಾರೂಢಂ ಕಾಂತ್ಯಾ
ಸ್ಪದನನುರಕ್ತಾತ್ಮಮಂಡಲಂ ಕುಮುದಕರಂ
ಮೃದುತರಕರಂಗಳಿಂದಂ
ಮುದಮಂ ಲೋಕಕ್ಕೆ ಪಡೆಗುಮಿಂತೀ ರಾಜಂ[1] —(iii, 109)

ಇಲ್ಲಿ, ಪದ್ಯದಲ್ಲಿರುವ ನಾಮಪದಗಳೆಲ್ಲವೂ ಅಭಿನ್ನಗಳಾಗಿದ್ದು ಅರ್ಥದ್ವಯದಿಂದ ಕೂಡಿ, ಕ್ರಿಯಾಪದದೊಡನೆ ಅನ್ವಯಿಸುತ್ತವೆ. 'ರಾಜಂ' ಎಂಬ ಪದಕ್ಕೆ 'ಚಂದ್ರ', 'ಅರಸ' ಎಂಬ ಎರಡು ಅರ್ಥಗಳಿವೆ. ಆದರಂತೆ, 'ಉದಯಾರೂಢಂ', 'ಕಾಂತ್ಯಾಸ್ಪದಂ' 'ಅನುರಕ್ತಾತ್ಮಮಂಡಲಂ', 'ಕುಮುದಕರಂ' ಎಂಬ ವಿಶೇಷಣಗಳಲ್ಲಿಯೂ 'ಮೃದುತರ ಕರಂಗಳಿಂದಂ' ಎಂಬ ಕರಣಕಾರಕದಲ್ಲಿಯೂ ಈ ರಾಜನ ಪರವಾದ ಮತ್ತು ಉದಯಿಸಿದ ಚಂದ್ರನ (ರಾಜನ) ಪರವಾದ ಉಭಯಾರ್ಥಗಳಿವೆ. 'ಉದಯಾರೂಢನಾದ ರಾಜನು (ಬಾಲಚಂದ್ರನು) ತನ್ನ ಮೃದುತರಕರಗಳಿಂದ (ಕಿರಣಗಳಿಂದ) ಲೋಕಕ್ಕೆ ಆನಂದವನ್ನುಂಟುಮಾಡುವಂತೆ, ಉದಯಾರೂಢನಾದ (ಸಿಂಹಾಸನವನ್ನೇರಿದ) ಈ ರಾಜನು (ಬಾಲರಾಜನು) ತನ್ನ ಮೃದುತರಕರಗಳಿಂದ (ಸುಲಭವಾಗಿ ತೆರಬಹುದಾದ ತೆರಿಗೆಗಳಿಂದ ಲೋಕಕ್ಕೆ ಆನಂದವನ್ನುಂಟುಮಾಡುವನು', ಎಂದು ವಿಸ್ತರಿಸಿ ಹೇಳಿದರೆ ಉಪಮಾಲಂಕಾರವಾಗಬಹುದು. ಹಾಗೆನ್ನದೆ ಉಭಯಸಂಬದ್ಧ ಶ್ಲೇಷಾರ್ಥನಿಬಿಡಿತಗಳಾದ 'ಈ ರಾಜಂ' ಎಂಬ ವಿಶೇಷ್ಯದಿಂದಲೂ 'ಉದಯಾರೂಢಂ' ಮೊದಲಾದ ವಿಶೇಷಣಗಳಿಂದಲೂ ವರ್ಣಿಸಿದುದರಿಂದ, ಇದು 'ಶ್ಲೇಷಾಲಂಕಾರ.' ಇವುಗಳಲ್ಲೆಲ್ಲ ವ್ಯಕ್ತವಾಗಿರುವುದು ಅರ್ಥಶ್ಲೇಷ. 'ಕುಮುದಕರಂ' ಎಂಬ ಕೊನೆಯ ವಿಶೇಷಣವು ಮಾತ್ರ (i) ಕು ಮುದ ಕರಂ= ಲೋಕಾನಂದ ಕರನಾದವನು, (ii) ಕುಮುದ ಕರಂ=ನೈದಿಲೆಗಳನ್ನು ಅರಳಿಸುವವನು ಎಂಬ ಶಬ್ದಶ್ಲೇಷದಿಂದ ಕೂಡಿದೆ.

ಉಪಮಾಲಂಕೃತಿಯೇ ಶ್ಲೇಷವಾಗಿ ಅರಳಿದುದೆಂದು ನಾವು ಹಿಂದೆ ಕೊಟ್ಟಿದ್ದ ಸೂಚನೆ ಈ ಮೇಲಿನ ವಿವರಣೆಯಿಂದ ವಿಶದವಾಗಬಹುದು.

ಇನ್ನೊಂದು ದೃಷ್ಟಾಂತವನ್ನು ನೋಡಿ—

---

[1] ಈ ಪದ್ಯಕ್ಕೆ 'ಕಾವ್ಯಾದರ್ಶ'ದಲ್ಲಿ ಆಕರವಿದೆ. ಆದರೆ, ಅದನ್ನು ಈ ಗ್ರಂಥಕಾರನು ತನ್ನೊಡೆಯನಾದ ನೃಪತುಂಗನ ಪರವಾಗಿ ಮಾರ್ಪಡಿಸಿಕೊಂಡಿರುವಂತೆ ಭಾವಿಸಬಹುದಾಗಿದೆ.

ವಿಪುಳತರ ಕಟಕನುದ್ಯತ್
ದ್ವಿಪಹರಿ ಮಹಿಷೀ ನಿಷೇವ್ಯನುನ್ನತ ಪಾದಂ
ನೃಪನೀತ ಶ್ರೀ ಫಲದಂ
ವಿಪರೀತಕನಪ್ಪನಂತು ಭೂಭೃನ್ನಾಥಂ —(iii, 110)

ಇಲ್ಲಿ 'ರಾಜಾಧಿರಾಜ' (ನೃಪತುಂಗ ?) ಮತ್ತು 'ಪರ್ವತ ನಾಥನಾದ ಹಿಮಾಲಯ ಪರ್ವತ' ಎಂಬ ಅರ್ಥದ್ವಯವುಳ್ಳ 'ಭೂಭೃನ್ನಾಥ' ಎಂಬ ಪದಕ್ಕೆ ಪದ್ಯದ ಆದ್ಯಂತ ಪಾದಗಳಲ್ಲಿರುವ 'ವಿಪುಳತರಕಟಕಂ' ಮತ್ತು 'ವಿಪರೀತಕಂ' ಎಂಬ ವಿಶೇಷಣ ದ್ವಿತಯವು ವಿಶಿಷ್ಟಾರ್ಥಯುತವಾಗಿರಬಹುದೆಂಬ ಸಂದೇಹವುಂಟಾಗುತ್ತಿದೆ. 'ವಿಪರೀತಕಂ' ಎಂಬುದಕ್ಕೆ 'ವಿ'ಯಿಂದ 'ಪರೀತ' (ಕೂಡಿದ) 'ಕ' (ಉಳ್ಳವನು) ಎಂದು ಅರ್ಥ ಮಾಡಿದರೆ, ಈ ಭೂಭೃನ್ನಾಥನು (ರಾಜನು) ಸ್ವತಃ 'ಕವಿ'ಯೆಂಬ ಅರ್ಥವಾಗಬಹುದು. ಈ ಪದ್ಯಕ್ಕೆ ಮೂಲವೆಂದು ತೋರುವ ದಂಡಿಯ ಶ್ಲೋಕವು ಹೀಗಿದೆ—

ಮಹೀಭೃದ್ಭೂರಿಕಟಕಸ್ತೇಜಸ್ವೀ ನಿಯತೋದಯಃ
ದಕ್ಷಃ ಪ್ರಜಾಪತಿಶ್ಚಾಸೀತ್ ಸ್ವಾಮೀ ಶಕ್ತಿಧರಶ್ಚ ಸಃ
—'ಕಾವ್ಯಾದರ್ಶ', (ii, 321)

ಇದರೊಳಗಿನ ಆದಿಯ ಎರಡು ಪದಗಳನ್ನು ನಮ್ಮ ಗ್ರಂಥಕಾರನೂ ಎತ್ತಿಕೊಂಡಿರುವುದು ನಿಜ. ಆದರೆ ಕನ್ನಡ ಪದ್ಯದ ಉಳಿದ ಭಾಗವೆಲ್ಲ ಸ್ವತಂತ್ರವಾದುದು. ಅದರಿಂದ, ತನ್ನ ಆಶ್ರಯದಾತನು ಸ್ವತಃ 'ಕವಿ' ಎಂಬುದನ್ನೂ ಗ್ರಂಥಕಾರನು ಇಲ್ಲಿ ತಿಳಿಸಿರಬಹುದು. ಈ ಊಹೆ ಸರಿಯಾದರೆ, ನೃಪತುಂಗನು ಕವಿಯೂ ರಾಜನೂ ಆಗಿರುವುದರಿಂದ ಗ್ರಂಥದ 'ಕವಿರಾಜಮಾರ್ಗ' ಎಂಬ ಹೆಸರು ಅನ್ವರ್ಥವೂ ಆಗುವುದೆಂದು ಭಾವಿಸಬಹುದು.

ಶ್ಲೇಷಾಲಂಕಾರದ ಮತ್ತೊಂದು ಲಕ್ಷ್ಯವನ್ನು ಅವಧರಿಸಿರಿ—

ಅರಿಗೋತ್ರ ಭೇದಿ ವಿಬುಧೇ
ಶ್ವರನಲ್ಲಂ ಧೃತಕಳಾಕಳಾಪಂ ದೋಷಾ
ಕರನಲ್ಲಂ ವಿದಿತೋಮಾ
ವರನಾತ್ತಭುಜಂಗನಲ್ಲನೀ ಭೂಪಾಲಂ[1] —(iii, 112)

ಇದು ಗ್ರಂಥಕಾರನು ಹೇಳುವ 'ವಿರುದ್ಧ ಶ್ಲೇಷ' ಎಂಬ ಶ್ಲೇಷಪ್ರಭೇದಕ್ಕೆ ದೃಷ್ಟಾಂತ. ಇದರಲ್ಲಿ, ಈ ಭೂಪಾಲನನ್ನು ಇಂದ್ರ, ಚಂದ್ರ, ಶಿವರೊಡನೆ ಶ್ಲೇಷ ಕ್ರಮದಿಂದ ಹೋಲಿಸಿದೆ. ಪದ್ಯಾರ್ಥವನ್ನು ಹೀಗೆ ವಿಸ್ತರಿಸಬೇಕು—

---

[1] ಈ ಪದ್ಯವೂ 'ಕಾವ್ಯಾದರ್ಶ'ದಲ್ಲಿರುವ ಸಂವಾದಿ ಶ್ಲೋಕದ ಅನುವಾದವೆಂದು ತೋರುವುದು ನಿಜ; ಆದರೆ ಇವೆರಡರೊಳಗೆ ವ್ಯತ್ಯಾಸವಿರುವಂತೆಯೂ ಭಾಸವಾಗುವುದು. 'ಕಾವ್ಯಾದರ್ಶ'ದ ಶ್ಲೋಕ ಹೀಗಿದೆ—

—"ಈ ಭೂಪಾಲನು 'ಅರಿಗೋತ್ರ ಭೇದಿ'] (i) ಹಗೆಗಳಾದ ಪರ್ವತಗಳನ್ನು ಭೇದಿಸಿದವನು, (ii) ವಿರೋಧಿವಂಶವನ್ನು ನಿರ್ನಾಮವುವೆಸಗಿದವನು], ಇಂದ್ರನಲ್ಲ; 'ಧೃತಕಳಾಕಳಾಪ'ನು [(i) ಕಳಾಸಮೂಹವನ್ನೊಂದಿದವನು, (ii) ವಿದ್ಯಾ ಸಮೂಹಕ್ಕೆ ಆಶ್ರಯದಾತನು], 'ದೋಷಾಕರ' (ಚಂದ್ರ)ನಲ್ಲ; 'ವಿದಿತೋಮಾ ವರ'ನು [(i. ಪ್ರಸಿದ್ಧನಾದ ಉಮಾ(ಪಾರ್ವತೀ) ವಲ್ಲಭನು, (ii) ಪ್ರಸಿದ್ಧಳಾದ ಉಮಾದೇವಿಯ ವಲ್ಲಭನು], 'ಆತ್ತ ಭುಜಂಗನಲ್ಲ' [(i) ಸರ್ಪಾಭರಣನಾದ ಶಿವ ನಲ್ಲ, (ii) ವಿಟರಿಗೆ ಎಡೆಗೊಡುವವನಲ್ಲ]".

## ೧೨. ಉತ್ಪ್ರೇಕ್ಷೆ

ತಱಿಸಂದು ಪಲವು ತೆಱದಿಂ
ತೆಱಕದಿರೆ ನೆಗಱ್ದ ದರ್ಪದೊಂದು ವಸ್ತುಸ್ಥಿತಿಯಂ
ಮಱಸಿ ಪೆಱತೊಂದು ಮಾೞ್ಕೆಯಿ
ನಱಪುವುದುತ್ಪ್ರೇಕ್ಷೆಯೆಂಬುದಿಂತದಱ ತೆಱಂ —(iii, 114)

—"ಒಂದು ರೀತಿಯಲ್ಲಿರುವ ವಸ್ತುಗತ ನಿಜಸ್ಥಿತಿಯನ್ನು ಮರಸಿ, ಬೇರೊಂದು ರೀತಿ ಯಲ್ಲಿ ಭಾವಿಸಿ, ನಿರ್ಣಯಿಸುವುದಕ್ಕೆ 'ಉತ್ಪ್ರೇಕ್ಷೆ' ಎಂದು ಹೆಸರು."

'ಉತ್ಕ್ರಮಿಸಿದ ಪ್ರಕೃಷ್ಟವಾದ ಈಕ್ಷೆ', ಎಂದರೆ ಎಲ್ಲೆಯನ್ನು ಮೀರಿದ ಭಾವನೆ, ಎಂಬ ಅರ್ಥಕ್ಕನುವಾಗಿ ಈ 'ಉತ್ಪ್ರೇಕ್ಷೆ' ಎಂಬ ಪದವು ರೂಪುಗೊಂಡಿದೆ. ಮೇರೆಗಳೆದ ಅಧಿಕೋಕ್ತಿ ಎಂಬ ಲಕ್ಷಣದ ಅತಿಶಯಾಲಂಕಾರವೂ ಹೀಗೆಯೇ ಅಲ್ಲವೆ? ಹೌದು. ಹೇಗೆ ಉಪಮಾಲಂಕಾರದಿಂದ ರೂಪಕಾದಿಗಳು ಕವಲೊಡೆದುವೋ ಹಾಗೆಯೇ ಅತಿಶಯ ದಿಂದ ಉತ್ಪ್ರೇಕ್ಷೆ ಚಿಗುರಿದುದೇನೋ ನಿಜ. ಅತಿಶಯದಲ್ಲಿ, ಮೇರೆಗಳೆದ ಅಧಿಕೋಕ್ತಿ ವಿಸ್ತರವಾಗಿ ಹಬ್ಬಬಹುದು; ಉತ್ಪ್ರೇಕ್ಷೆಯಲ್ಲಿ, ಉತ್ಕ್ರಮಿಸಿದ ಭಾವನೆ ನಿಜವಾದ

---

ಅಚ್ಯುತೋಽಪ್ಯವೃಷಚ್ಛೇದೀ ರಾಜಾಪ್ಯವಿದಿತಕ್ಷಯಃ
ದೇವೋಽಪ್ಯವಿಬುಧೋ ಜಜ್ಞೇ ಶಂಕರೋಽಪ್ಯಭುಜಂಗವಾನ್
—'ಕಾವ್ಯಾದರ್ಶ' (ii, 322)

ಕನ್ನಡ ಪದ್ಯಾಂತದೊಳಗೆ 'ಭೂಪಾಲ'ನನ್ನು ಇಂದ್ರ, ಚಂದ್ರ, ಶಿವರೊಡನೆ ಹೋಲಿಸಿದರೆ ದಂಡಿಯು ಗ್ರಂಥದಲ್ಲಿ ಉದ್ದಿಷ್ಟ ರಾಜನನ್ನು ಅಚ್ಯುತ, ಚಂದ್ರ, ದೇವಪುರುಷ, ಶಂಕರರೊಡನೆ ಬಣ್ಣಿಸಿದೆ. ಆದರೆ, ಆ ರಾಜನನ್ನು ಶಿವನೊಡನೆ ಹೋಲಿಸುವಲ್ಲಿ, ಸಂಸ್ಕೃತ ಮೂಲದಲ್ಲಿ 'ಶಂಕರೋಽಪ್ಯಭುಜಂಗವಾನ್' ಎಂದಿದೆಯಲ್ಲದೆ, ಕನ್ನಡ ಪದ್ಯದಲ್ಲಿ ತೋರುವ 'ವಿದಿತೋ ಮಾವರಂ' ಎಂಬುದಕ್ಕೆ ಆಶ್ರಯವಾದ ಏನೂ ಇಲ್ಲ. 'ವಿದಿತೋಮಾವರಂ' ಎಂಬ ಪದಕ್ಕೆ ಶ್ಲಿಷ್ಟಾರ್ಥದ ಅವಶ್ಯಕತೆ ಇದೆ ಎಂಬುದು ಹಿಂದುಮುಂದಿನ ಪದರಚನೆಗಳಿಂದ ಸ್ಫುಟವಾಗು ವುದು. ಈ ಕನ್ನಡ ಪದ್ಯವು ಗ್ರಂಥಕಾರನ ಆಶ್ರಯದಾತನಾದ ನೃಪತುಂಗನಿಗೂ ಅನ್ವಯಿಸ ಬಹುದೆಂದು ಒಪ್ಪಿಕೊಂಡರೆ, 'ಉಮಾ'ದೇವಿಯೆಂದರೆ ನೃಪತುಂಗನ ರಾಣಿಯ ಹೆಸರೇ ಆಗಿರ ಬಹುದೆಂಬ ಊಹೆಗೆ ಅವಕಾಶವುಂಟು.

ವಸ್ತುಸ್ಥಿತಿಯನ್ನು ಮರಸಿ, ಬೇರೊಂದು ಬಗೆಯಲ್ಲಿ ಮಾರ್ಪಡಿಸಿ ಬಣ್ಣಿಸುವುದು. ಆದ ರಿಂದಲೇ ಇದು 'ಉತ್ಪ್ರೇಕ್ಷೆ' ಎಂದರೆ ಕವಿಯ 'ಉತ್ಕ್ರಾಂತ ಪ್ರಕೃಷ್ಟ ಈಕ್ಷೆ' ; ಕವಿಯ ಕೈವಾಡದಿಂದ ವಿಶೃಂಖಲತೆಯನ್ನುಳಿದ ಅತಿಶಯ ಮಾರ್ಪಟ್ಟು ತಲೆದೋರಿದ ರೂಪವಿದೆಂಬುದನ್ನು ಈ ಹೆಸರೇ ಹೇಳುತ್ತಿದೆ.

ಇದರ ದೃಷ್ಟಾಂತವೊಂದನ್ನು ನೋಡಿ—

ನಡುವಗಲ ಬಿಸಿಲ್ ತನ್ನಂ
ಸುಡೆ ವನಕರಿ ಕಮಳಬಂಧುವೊಳ್ ದಿನಕರನೊಳ್
ಕಡುಗಾಯ್ಪಿನೆ ಸರಸಿಜಮಂ
ಕಿಡಿಸಲ್ ತಾಂ ಪೊಕ್ಕುದಾಗ ಬಗೆಗಾ ಕೊಳನಂ —(iii, 115)

—'ನಡುಹಗಲ ಬಿಸಿಲು ತನ್ನನ್ನು ಸುಡಲು, ವನಕರಿ (ಯೊಂದು) ಕಮಲಬಂಧುವಾದ ದಿನಕರನಲ್ಲಿ ಕಡುಕೋಪದಿಂದಲೋ ಎಂಬಂತೆ ಸರಸಿಜವನ್ನು ಕೆಡಿಸುವುದಕ್ಕಾಗಿ ಆ ಕೊಳವನ್ನು ಹೊಕ್ಕುದು.'

ಬೇಸಗೆಯಲ್ಲಿ ನಡುಹಗಲ ಬಿಸಿಲು ವ್ಯಾಪಿಸಿ ಬೇಗೆಯನ್ನೊದಗಿಸುತ್ತಿದ್ದುದೂ ವಸ್ತುಸ್ಥಿತಿ : ಆಗ ಆನೆಯೊಂದು, ಆ ಬೇಗೆಯನ್ನು ಸೈರಿಸಲಾರದೆ, ತಂಗೊಳವನ್ನು ಹೊಕ್ಕುದೂ ವಸ್ತುಸ್ಥಿತಿ. ಆದರೆ ಇಷ್ಟನ್ನೇ ಹೇಳಿದರೆ ಇಲ್ಲಿ ಅಲಂಕಾರವೇನೂ ತೋರುವಂತಿಲ್ಲವಷ್ಟೆ. ಅದರಿಂದ, ಆ ವಸ್ತುಸ್ಥಿತಿಯನ್ನು ಕವಿ ಇಲ್ಲಿ ಮರಸಿದ್ದಾನೆ. ಆ ಬಿಸಿಲಿಗಾಧಾರವಾದ ದಿನಕರನೆಂದರೆ 'ಕಮಳ ಬಂಧು'. ಅವನನ್ನು ಕಿಡಿಸಲು ತನಗೆ ಅಸದಳವಾದರೂ ತದ್ಬಂಧುವಾದ ಕಮಲವನ್ನು ಕೆಡಿಸಿ, ಈ ಮುಯ್ಯನ್ನು ಆ ಮುಯ್ಯ ಮೂಲಕವಾಗಿ ಕಳೆದುಕೊಳ್ಳುವೆನು—ಎಂಬ 'ಪೆಜತೊಂದು ಮಾಚಿಕ್ಕ'ಯಿಂದ ಇಲ್ಲಿ ಬಣ್ಣಿಸಿರುವುದು ವಿಶದವಾಗಿದೆ. ಇದು ಉತ್ಪ್ರೇಕ್ಷಾ ಸಾಧಾರಣವಾದ ಲಕ್ಷ್ಯ.

ಆದರೆ ನವೀನಾಲಂಕಾರಿಕರು ಈ ಲಕ್ಷ್ಯವನ್ನು 'ಪ್ರತ್ಯನೀಕ' ಎಂಬ ಬೇರೊಂದು ಸ್ವತಂತ್ರಾಲಂಕಾರವನ್ನಾಗಿಯೇ ಮಾರ್ಪಡಿಸಿ ಹೇಳಿದ್ದಾರೆ. 'ಪ್ರತ್ಯನೀಕಂ ಬಲವತಃ ಶತ್ರೋಃ ಪಕ್ಷೇ ಪರಾಕ್ರಮಃ'—ಬಲಾಧಿಕನಾದ ಶತ್ರುವನ್ನು ಗೆಲ್ಲಲಾರದೆ ಅವನ ಪಕ್ಷದ ಅಬಲರಲ್ಲಿ ಪರಾಕ್ರಮವನ್ನು ತೋರಿದಂತೆ ಬಣ್ಣಿಸಿದರೆ 'ಪ್ರತ್ಯನೀಕ' ಎಂಬ ಅಲಂಕಾರವೆನ್ನಿಸುವುದು ('ಚಂದ್ರಾಲೋಕ', ಸೂತ್ರ ೧೧೩)

ಆಧುನಿಕರು ಉತ್ಪ್ರೇಕ್ಷೆಯೊಳಗೆ 'ವಸ್ತೂತ್ಪ್ರೇಕ್ಷೆ', 'ಹೇತೂತ್ಪ್ರೇಕ್ಷೆ', 'ಫಲೋತ್ಪ್ರೇಕ್ಷೆ', ಎಂದು ಮೂರು ಭೇದಗಳನ್ನು ಕಲ್ಪಿಸಿಕೊಂಡಿದ್ದಾರೆ. ಒಂದು ಪದಾರ್ಥವನ್ನು ಇನ್ನೊಂದನ್ನಾಗಿ ಹೇಳುವುದು 'ವಸ್ತೂತ್ಪ್ರೇಕ್ಷೆ': ಅದನ್ನು ಕಲ್ಪಿತಕಾರಣದಿಂದ ಮತ್ತೊಂದು ವಸ್ತುವನ್ನಾಗಿ ಹೇಳಿದರೆ 'ಹೇತೂತ್ಪ್ರೇಕ್ಷೆ: ಅದನ್ನೇ ಕಲ್ಪಿತಫಲಕ್ಕಾಗಿ ಅನ್ಯವಸ್ತುವನ್ನಾಗಿ ವರ್ಣಿಸಿದರೆ 'ಫಲೋತ್ಪ್ರೇಕ್ಷೆ'. ಇವೆಲ್ಲವೂ ಹಿಂದಿನ ಉತ್ಪ್ರೇಕ್ಷಾ ಲಕ್ಷಣದಲ್ಲಿ ಅಡಕವಾಗಿರುವುದನ್ನು ಕಾಣಬಹುದು.

## ೧೩. ಸೂಕ್ಷ್ಮ

ಬಗೆದಿಂಗಿತ ಚೇಷ್ಟಾಕಾ
ರಗತಂಗಳಿನಂತರಂಗದೊಳ್ ಮಱಸಿದುದಂ
ಮಿಗೆ ಸೂಚಿಸುವುದು ಸೂಕ್ಷ್ಮ
ಮುಗತಾಳಂಕಾರಮಿಂತು ತದುದಾಹರಣಂ —(iii, 117)

—"ಅಂತರಂಗದಲ್ಲಿ ಮರಸಿ ಗುಪ್ತವಾಗಿರಿಸಿದ ವಿಷಯವನ್ನು ಇಂಗಿತ, ಚೇಷ್ಟೆ, ಆಕಾರಗತಗಳಾದ ಅತಿಸೂಕ್ಷ್ಮ ಸಂಜ್ಞೆಗಳಿಂದ ಸೂಚಿಸುವುದಕ್ಕೆ 'ಸೂಕ್ಷ್ಮಾಲಂಕಾರ'ವೆಂದು ಹೆಸರು."

ಈ ಅಲಂಕಾರದ ದೃಷ್ಟಾಂತ ಹೀಗೆ—

ತಿಳಿಪಲಡಿಗೆಱಗಿದೋಪನ
ತಳಂಗಳಾ ತೀಟದಿಂ ಪದಂಗಳೊಳೊಗೆದಾ
ಪುಳಕಚಯಂಗಳ್ ಕಳೆದುವು
ಮುಳಿಸಂ ನಲ್ಲಳ್ಗೆ ಬೆಳ್ಮೊಗಂ ಗೆಯ್ದಿರೆಯುಂ —(iii, 118)

—"ಪ್ರಣಯಕೋಪಗೊಂಡ ನಲ್ಲೆಯ ಮುನಿಸನ್ನು ಆರಿಸಲೆಂದು ಪ್ರಿಯನು ಆಕೆಯ ಪಾದಗಳಿಗೆರಗಿದನು. ಆಗ ಪ್ರಿಯನ ಕರತಳಗಳ 'ತೀಟ'ದಿಂದ (ಒರಸುವಿಕೆಯಿಂದ) ಆಕೆಯ ಪಾದಗಳಲ್ಲಿ ರೋಮಾಂಚವು ತಲೆದೋರಿತು. ಆಕೆಯ ಮೋರೆ ಕಳಾರಹಿತವಾಗಿದ್ದರೂ ('ಬೆಳ್ಮೊಗಂ ಗೆಯ್ದಿರೆಯುಂ'), ಆಕೆಯ ಮುಳಿಸು ಮಾಯವಾಯಿತೆಂದು ಆಕೆಯ ಪುಳಕೋದ್ಗಮದಿಂದ ಆತನಿಗೆ ತಿಳಿಯಿತು."

ಇದು ಸ್ವಭಾವಾಖ್ಯಾನದೊಳಗೇ ಒಂದು ಭೇದವಲ್ಲದೆ, ಶುದ್ಧ ವಕ್ರೋಕ್ತಿಯದಲ್ಲ. ಆದರೆ, ಆಕೆಯ ಕೋಪನಿವೃತ್ತಿ ಸ್ವಭಾವದ ಇಂಗಿತವು ಸ್ಪಷ್ಟವಾದ ಮಾತಿನಿಂದಾಗಲಿ ಕ್ರಿಯಾವಿಶೇಷದಿಂದಾಗಲಿ ಹೊರಡದೆ, ರೋಮಾಂಚಮಾತ್ರದಿಂದ, ಅತಿ ಸೂಕ್ಷ್ಮ ದೃಷ್ಟಿಯ ತನ್ನ ರಸಿಕಪ್ರಿಯನೊಬ್ಬನಿಗೇ ತಿಳಿಯುವಂತಿದ್ದುದೆಂದು ವರ್ಣಿತವಾಗಿರುವುದರಿಂದ, ಇದು ಒಂದಿಷ್ಟು ವಕ್ರತಾ ಮಿಶ್ರಿತವಾದ ಸ್ವಭಾವಾಖ್ಯಾನವೆಂದು ಹೇಳಬಹುದು.

## ೧೪. ವಿಶೇಷ

ಗುಣಜಾತ್ಯಾದಿಗಳೊಳಗನು
ಗುಣಮಾಗಿರೆ ಪೇೞದವಱ ವಿಕಳತೆಯಂ ಸ
ಯ್ತೆಣಿಸಿ ವಿಶೇಷಮನಱಿಪುವ
ಗಣಸೆ ವಿಶೇಷಾನುಭಾವ ಸದಳಂಕಾರಂ —(lli, 120)

—"ವರ್ಣ್ಯ ಪದಾರ್ಥಗಳ ಗುಣ ಜಾತ್ಯಾದಿಗಳನ್ನು ಪರಿಶೀಲಿಸಿದಲ್ಲಿ ಅವುಗಳೊಳಗೆ ನ್ಯೂನತೆ ಕಂಡುಬಂದರೂ ಅದನ್ನು ಹೇಳದೆ. ಅವುಗಳಲ್ಲಿ ತೋರುವ ವೈಶಿಷ್ಟ್ಯವನ್ನೇ ಬಣ್ಣಿಸುವುದು 'ವಿಶೇಷೋಕ್ತಿ'".

ಇದು ವರ್ಣ್ಯಮಾತ್ರ ಸಂಬದ್ಧವಾಗಿರುವುದರಿಂದ, ಸ್ವಭಾವಾಖ್ಯಾನಕ್ಕೆ ಹೆಚ್ಚಿನ ಸಂಬಂಧವುಳ್ಳುದಾಗಿದೆ. ಅಲ್ಲಿ ಗುಣಜಾತ್ಯಾದಿ ನಿರೂಪಣವಿದೆ, ಇಲ್ಲಿ ಅದಿಲ್ಲ ಎಂಬುದನ್ನು ಎಣಿಸಿಕೊಳ್ಳಬೇಕು.

'ವಿಶೇಷ' ಎಂದರೆ ಸಾಮಾನ್ಯವಲ್ಲದುದು ಎಂದು ರೂಢವಾದ ಅರ್ಥವಷ್ಟೆ. ಸಪ್ತ ಪದಾರ್ಥಗಳೊಳಗೆ 'ವಿಶೇಷ' ಎಂಬುದೊಂದು ಪದಾರ್ಥ. ಅದು ಸಾಮಾನ್ಯಕ್ಕೆ (ಜಾತಿಗೆ) ಸಂಪೂರ್ಣ ಭಿನ್ನವಾದುದು. ಅನವಧಿಯಾಗಿದ್ದು ಸಂಖ್ಯೆಗೊಳಗಾಗದೆ ಸಾಮಾನ್ಯದಲ್ಲಿ ಸೇರದುದರಿಂದಲೇ ಅದು 'ವಿಶೇಷ'ವೆನ್ನಿಸುವುದು. ಈ ಕಾರಣದಿಂದಲೇ, ಆಲಂಕಾರಿಕರು ಗುಣಜಾತ್ಯಾದಿ ವಿಕಲವಾದುದನ್ನು 'ವಿಶೇಷ' ಎಂದು ಕರೆದುದಾಗಿರಬೇಕು.

ಅಲರಂಬು ಕಬ್ಬುವಿಲ್ ಕೋ<br>
ಮಲ ಸರಸಿಜನಾಳತಂತು ತಿರು ಮತ್ತಿವರಾ<br>
ಬಲದಿನಗಲ್ದರನೆಚ್ಚಾ<br>
ತ್ರಿಲೋಕಮಂ ಕಂತು ಬಸಕೆ ಬರಿಸುವನೆಂತುಂ —(iii, 121)

—'ಅಲರೇ ಅಂಬು, ಕಬ್ಬೇ ಬಿಲ್ಲು, ಕೋಮಲ ಸರಸಿಜನಾಳತಂತುವೇ ತಿರು ; ಇವುಗಳ ಬಲದಿಂದ (ಧೈರ್ಯಗೊಂಡ) ಕಾಮನು ವಿಯೋಗಿಗಳಿಗೆ ಆ ಅಲರಂಬನ್ನು ಎಸೆದು, ಮೂಲೋಕವನ್ನೂ ವಶಗೊಳಿಸುತ್ತಾನೆ.'

ಇಲ್ಲಿ 'ಅಲರಂಬು' ಮೊದಲಾದ ಏಕವಚನದಿಂದ ವ್ಯಕ್ತವಾಗುವ ಜಾತಿವಾಚಕಗಳಲ್ಲಿ ಪ್ರಕೃತಕಾರ್ಯ'ವಿಕಲತೆ' ತೋರುತ್ತಿದೆ. ಆದರೆ, ಆ ವಿಕಲತೆಯನ್ನು ಹೇಳದೆ, ತ್ರಿಲೋಕಜಯರೂಪ 'ವಿಶೇಷ'ವನ್ನು 'ಸಯ್ತಿರಿಸಿ' ನಿರೂಪಿರುವುದು ವ್ಯಕ್ತವಾಗಿದೆ.

## ೧೫. ಸಮಾಹಿತ

ಪರ[ವ]ಸದ ಬಗೆಯೊಳೊಂದಂ<br>
ದೊರೆಕೊಳಿಸುವುದಱಿಂಗತರ್ಕಿತೋಪಸ್ಥಾನಂ<br>
ನಿರುತಂ ಸಮಾಹಿತಾಳಂ<br>
ಕರಣಾಂತರಮಕ್ಕುಮಿಂತು ತದುದಾಹರಣಂ —(iii, 123)

—"ಒಂದು ಕೆಲಸವನ್ನು ಆರಂಭಿಸುವ ವ್ಯಕ್ತಿಗೆ 'ಪರವಸ'ದಿಂದ (ಎಂದರೆ, ದೈವವಶದಿಂದ) ಅತರ್ಕಿತವಾಗಿ ಆ ಕಾರ್ಯಸಾಧನವು ಒದಗಿದಂತೆ ವರ್ಣಿಸಿದರೆ 'ಸಮಾಹಿತಾಲಂಕಾರ'".

ನಮ್ಮ ಗ್ರಂಥಕಾರನು ವಿಶಿಷ್ಟ 'ಗುಣ', 'ಅಲಂಕಾರ'ಗಳೆರಡಕ್ಕೂ 'ಸಮಾಹಿತ' ಎಂಬ ಒಂದೇ ಹೆಸರಿತ್ತಿದ್ದಾನೆ. ಆ ಗುಣವನ್ನು ದಂಡಿಯು 'ಸಮಾಧಿ' ಎಂದು ಕರೆದಿದ್ದಾನೆ. 'ಒಂದರ ಮಾತುಗಳಂ ಪೆಱತೊಂದರೊಳಜಾದಿಟ್ಟು ಪೇೞ್ದುದೆ' 'ಸಮಾಹಿತ' ಗುಣವೆಂದು ಹಿಂದೆ 'ಗುಣ' ವಿವೇಚನೆಯ ಸಂದರ್ಭದಲ್ಲಿ ವಿಸ್ತರಿಸಿದೆ. ಆ 'ಸಮಾಹಿತ'ದಿಂದಲೇ

ರೂಪಕಾಲಂಕೃತಿ ಉದ್ಬುದ್ಧವಾಗಿರಬೇಕೆಂಬುದನ್ನು [ಆಯೆಡೆಯಲ್ಲಿ ಸೂಚಿಸಿದ್ದೇವಷ್ಟೆ. ಆ 'ಗುಣ'ದ ಹೆಸರಿನಲ್ಲೇ ರೂಪಿಸಿದ ಈ ಅಲಂಕಾರಕ್ಕೂ ಆ ಗುಣಕ್ಕೂ ಏನಾದರೂ ಅತಿ ನಿಕಟಸಂಬಂಧವಿರಬಹುದೆ ? ಮೊದಲು ದೃಷ್ಟಾಂತವನ್ನೀಕ್ಷಿಸುವ—

ಮುಳಿದಿರ್ದ ನಲ್ಲಳಲ್ಲಿಗೆ
ತಿಳಿಪಲ್ ಪೋಪೆನ್ನ ಬಗೆಗೆ ದೊರೆಕೊಳೆ ಮತ್ತಿಂ
ತೆಳವೆಱೆ ಗಗನಾಂತರದೊಳ್
ಪೊಳೆದತ್ತೆತ್ತಂ ವಸಂತ ಸಮಯೋತ್ತಂಸಂ —(iii, 124)

ಇಲ್ಲಿ, ಪ್ರಣಯಕಲಹದಿಂದ ನೊಂದ ನಲ್ಲೆಯನ್ನು ಸಮಾಧಾನಿಸಲಿಕ್ಕಾಗಿ ನಾಯಕನೊಬ್ಬನು ಆಕೆಯಲ್ಲಿಗೆ ಹೋಗುತ್ತಿದ್ದಾನೆ ; ಆಗ ರಾತ್ರಿಯ ಮತ್ತು ಆಕೆಯ ಮುನಿಸಿನ ಅಂಧಂತಮದಿಂದ ಕಂಗಾಣದವನಾದ ಆತನ 'ಬಗೆಗೆ ದೊರೆಕೊಳೆ', ಎಂದರೆ ಅದೊಂದು ದಾರಿ ತೋರುವಂತೆ, ಅದೊಂದು 'ವಸಂತಸಮಯೋತ್ತಂಸ'ವಾದ 'ಎಳವೆಱೆ ಗಗನಾಂತರಳದೊಳ್ ಪೊಳೆದತ್ತು'.

'ಎಳವೆಱೆ' ಮಾನೋದ್ರೇಕದ ಮುಳಿಸನ್ನು ಹೋಗಲಾಡಿಸುವ ಸ್ವತಸ್ಸಾಧನವೆಂದು ಪ್ರಸಿದ್ಧಿ. ಆ ಸಾಧನವು ನಾಯಕನ ಪ್ರಯತ್ನಕ್ಕೆ ನೆರವಾದಂತೆ ವರ್ಣಿತವಾಗಿದೆ. 'ತುಂಬುವೆಱೆ' ಎಂದಿರುತ್ತಿದ್ದರೆ, ರಾತ್ರಿಯ ಸೀಮೆಯನ್ನು ದಾಟಿದೊಡನೆಯೆ ಕ್ಷೀಣವಾಗುವುದರಿಂದ ಅದರ ಮಾನನಿವಾರಕ ಶಕ್ತಿ ಕುಗ್ಗಿಹೋಗುತ್ತಿತ್ತು. 'ಎಳವೆಱೆ'ಯಾದುದರಿಂದ, ಅದಕ್ಕೆ ಇನ್ನೂ ಬಹುಕಾಲದ ವರೆಗೆ ಆ ಹುರುಪು ಏರುತ್ತಾ ಹೋಗಿ ತನ್ನ ಬಗೆಗೆ ಪ್ರಬಲ ಸಾಧನವಾಗಬಲ್ಲುದೆಂದೂ, ಆ 'ಎಳವೆಱೆ'ಯು ವಸಂತ ಸಮಯಕ್ಕೇ ಉತ್ತಂಸವಾದುದು ಎಂದು ವರ್ಣಿತವಾಗಿರುವುದರಿಂದ ಅದು ಪ್ರಿಯೆಯ ಮತ್ತು ತನ್ನ ಹೃದಯಗಗನಾಂತರದ ಅಂಧಕಾರರೂಪ ವಿಯೋಗ ದುಃಖವನ್ನು ನಿವಾರಿಸಬಲ್ಲುದೆಂದೂ ಧ್ವನಿತವಾಗುವುದು.

ಇಲ್ಲಿ 'ಸಮಾಹಿತ' ಗುಣ ಸಂಬಂಧವೇನು ? ಸಮಾಹಿತ ಗುಣದಲ್ಲಿ, ನಿಮಿಮಾಲಿತತ್ವಾದಿ ಅಪ್ರಕೃತ ಲೋಚನ ಧರ್ಮಗಳನ್ನು ಪ್ರಕೃತ ಕುಮುದಾದಿಗಳಲ್ಲಿ ಆರೋಪಿಸಿದೆ. ಇಲ್ಲಿ ಹಾಗಲ್ಲ ; ಒಂದಿಷ್ಟು ರೀತ್ಯಂತರವಾದರೂ, 'ಎಳವೆಱೆ'ಯಲ್ಲಿ ನಲ್ಲಳ ಮಾನಾಪಹಾರಕ ಶಕ್ತಿಯನ್ನು ಹೊರಿಸಿದೆ—ಪ್ರಯತ್ನಕ್ಕೆ ದೈವಸಹಾಯವೊದಗಿದಂತೆ ವರ್ಣಿಸಿದೆ. ಇದೆನ್ನೆಣಿಸಿಕೊಂಡು ಇಲ್ಲಿ ಲಾಕ್ಷಣಿಕರು ಅಲಂಕಾರತ್ವವನ್ನು ಕಲ್ಪಿಸಿದ್ದಾರೆ ಎಂದು ಭಾವಿಸಬೇಕು.

## ೧೬. ಸಮಾಸೋಕ್ತಿ

ತಱಿಸಂದು ಮನದೊಳೊಂದಂ
ಪೆಱತಂ ಮತ್ತದನೆ ಪೋಲ್ವುದಂ ಕುಱಿಪುಗಳಂ
ಕುಱಿಮಾಡಿ ಮಾಡಿ ಪೇೞ್ವುದು
ನೆಱೆಯೆ ಸಮಾಸೋಕ್ತಿಯೆಂಬುದಿಂತದಱ ತೆಱಂ —(iii, 126)

—"ಯಾವುದೋ ಒಂದು ವಸ್ತುವನ್ನು ಮನಸ್ಸಿನಲ್ಲಿರಿಸಿಕೊಂಡು, ತತ್ಸಮಾನವಾದೊಂದು ಅನ್ಯವಸ್ತುವನ್ನು ಮಾತ್ರವೇ ಉಕ್ತಿಪೂರ್ವಕವಾಗಿ ಸೂಚಿಸಿದರೆ. ಸಂಕ್ಷಿಪ್ತರೂಪತೆಯಿಂದಾಗಿ 'ಸಮಾಸೋಕ್ತಿ' ಎನ್ನಿಸುವುದು".

ಉಪಮಾನೋಪಮೇಯಗಳೆರಡನ್ನೂ ಹೇಳಿ, ಒಂದಕ್ಕೆ ಇನ್ನೊಂದರ ರೂಪವನ್ನು ಆರೋಪಿಸಿದರೆ, ರೂಪಕಾಲಂಕಾರವಷ್ಟೆ. ಉಪಮಾನೋಕ್ತಿಯಿಂದ ಉಪಮೇಯವನ್ನು ಹೊಳೆಯಿಸುವುದಕ್ಕೆ ಆಧುನಿಕಾಲಂಕಾರಿಕರು 'ರೂಪಕಾತಿಶಯೋಕ್ತಿ' ಎಂಬ ಹೆಸರಿಡುತ್ತಾರೆ. ಅವರು ಹೇಳುವ 'ಸಮಾಸೋಕ್ತಿ'ಯು ಇದರ ವಿಪರ್ಯಯ ವೃತ್ತಿ : ಎಂದರೆ, ಪ್ರಸ್ತುತ (ಉಪಮೇಯ) ಪದರಚನೆಯಿಂದ ಅಪ್ರಸ್ತುತದ (ಉಪಮಾನದ) ಸ್ವರೂಪವು ಹೊಳೆಯುವಂತಿದ್ದರೆ, ಅದು ಆಧುನಿಕಾಲಂಕಾರಿಕ ಸಮ್ಮತವಾದ 'ಸಮಾಸೋಕ್ತಿ'— 'ಸಮಾಸೋಕ್ತಿಃ ಪರಿಸ್ಫೂರ್ತಿಃ ಪ್ರಸ್ತುತೇ ಅಪ್ರಸ್ತುತಸ್ಯ ಚೇತ್' ('ಚಂದ್ರಾಲೋಕ', ಸೂತ್ರ ೫೬)

ಪ್ರಕೃತ, ಗ್ರಂಥಕಾರನು ಕೊಟ್ಟಿರುವ ದೃಷ್ಟಾಂತವನ್ನು ನೋಡಿ :

ತಾಮರೆಯರಲೊಳ್ ಸರಸ ನಿ
ಜಾಮೋದದೊಳೊಂದಿ ನಲಿದು ಮಕರಂದ ರಜೋ
ವ್ಯಾಮುಗ್ಧದೊಳೀ ಮುಗುಳೊಳ
ಮಾ ಮಾೞ್ಕೆಯಿನಱಸಿ ಸುೞಿವುದಳಿ ಕೆಲಕೆಲದೊಳ್ —(iii, 127)

—'ಮೊದಲು ತಾವರೆ ಹೂವನ್ನೊಂದಿ ಅದರ ಸರಸ ಪರಿಮಳವನ್ನು ಸವಿದು ಆನಂದಗೊಂಡು, ಆ ಮೇಲೆ ಹುಡುಕುತ್ತಾ ಹೋಗಿ ಈ ಮುಗುಳನ್ನೊಂದಿ ಇದರ ಮಕರಂದ ರೇಣುಧೂಸರಿತವಾಗಿ ಅದೊಂದು ತುಂಬಿ ಸುಳಿಯುತ್ತಿದೆ'.

ಈ ವರ್ಣನೆಯು ಬರಿಯ ತುಂಬಿಯ ಪರವಾಗಿದ್ದರೆ, ಬರಿಯ ಸ್ವಭಾವಾಖ್ಯಾನವೇ ಆಗುವುದು. ಹಾಗಿದ್ದರೆ, ಇಲ್ಲಿ ಉಭಯ ಸಂಬದ್ಧವಾದ ಸಮಾಸೋಕ್ತಿತ್ವವೇ ಇಲ್ಲ. ಆದರೆ, ಇಲ್ಲಿ ಕ್ರಮವಾಗಿ ಎರಡು ಹೂಗಳನ್ನೊಂದಿದ ತುಂಬಿಯ ಅವಸ್ಥಾದ್ವಯವು ತೋರುತ್ತಿದೆ. 'ತಾಮರೆಯರಲ್' ಎಂದರೆ ಪೂರ್ಣವಿಕಸಿತವಾದ ಕಮಲಪುಷ್ಪ. ಸರಸ ಪರಿಮಳಯುತವಾದ ಆ ಹೂವನ್ನೊಂದಿ ನಲಿದುದೆಂಬುದು ತುಂಬಿಯ ಮೊದಲನೆಯ ಅವಸ್ಥೆ. ಆ ಮೇಲೆ ಆ ತುಂಬಿ 'ಈ ಮುಗುಳ'ನ್ನೊಂದಿತು—ಇದು ಅದರ ಎರಡನೆಯ ಅವಸ್ಥೆ.

ಇಲ್ಲಿ ವ್ಯಕ್ತವಾಗಿರುವುದು—ತಾವರೆಯಲ್ಲಿ ಮೊದಲು 'ನಲಿದು', ಬಳಿಕ 'ಈ ಮುಗುಳೊಳಂ' ಸುಳಿದ ಅಪ್ರಕೃತ ಭ್ರಮರದ ವರ್ಣನೆ. ಆದರೆ ಕವಿಯು ಮನಸ್ಸಿರಿಸಿಕೊಂಡಿದ್ದ ವಿಷಯ ಇದಲ್ಲ; ವಿದಗ್ಧವನಿತಾ ಪಂಡಿತನಾದ ಪ್ರೌಢನೊಬ್ಬನು ಆ ಮೇಲೆ ಮುಗ್ಧಕಾಂತಾರತನಾದುದೇ ಕವಿಗೆ ಪ್ರಕೃತ ವಿಷಯ. ಇದನ್ನು ಗ್ರಂಥಕಾರನೇ ಸ್ಪಷ್ಟಪಡಿಸಿದ್ದಾನೆ. ನೋಡಿ—

ನೆರೆದತಿವಿದಗ್ಧ ಗಣಿಕಾ
ಸುರತಾಸವಸೇವನಾಕೃತೌದನನಾಗಿ
ರ್ದಿರದೆ ತರುಣೀರತಾಂತರ
ಸರಾಗಮಂ ಪೇೞ್ವುದಲ್ಲಿ ತುಂಬಿಯ ನೆವದಿಂ —(iii, 128)

ತುಂಬಿಯ ವರ್ತನೆಯನ್ನು ವರ್ಣಿಸುವ ನೆವದಿಂದ ಕವಿಯು ಇಲ್ಲಿ ಶೃಂಗಾರನಾಯಕನೊಬ್ಬನ ‘ರಾಗಪ್ರಸ್ತಾರ’ವನ್ನು ವರ್ಣಿಸುತ್ತಾನೆ.[1]

## ೧೭. ಪರ್ಯಾಯೋಕ್ತಿ

ಬಗೆದರ್ಥಮನಱಿಪದೆ ಮೆ
ಲ್ಲಗೆ ತಿರ್ದುವ ಬಗೆಯನದಱ ನೆವದಿಂ ಪೆಱತಂ
ನಿಗದಿಸುವುದು ಪರ್ಯಾಯೋ
ಕ್ತಿಗತಾಳಂಕಾರಮುದಱ ಪಾಂಗಿಂತಕ್ಕುಂ —(iii, 131)

—“ಬಗೆದ ಅರ್ಥವನ್ನು ವ್ಯಕ್ತವಚನದಿಂದ ಸಾಕ್ಷಾತ್ತಾಗಿ ಹೇಳದೆ ಪ್ರಕಾರಾಂತರವಾಗಿ ಸೂಚಿಸುವುದು ‘ಪರ್ಯಾಯೋಕ್ತಿ’.”

ಇಲ್ಲಿ ರೂಪಕಾದಿಗಳಂತೆ ಪ್ರಕೃತಾಪ್ರಕೃತಗಳೆಂಬ ಎರಡು ಪದಾರ್ಥಗಳಿಂದ ಒದಗಬಹುದಾದ ಕೊಂಕು ಇಲ್ಲ. ಪ್ರಕೃತ ವಿಷಯವೊಂದೇ ಇರುವುದಾದರೂ, ಅದನ್ನು ಹೇಳುವ ಆರ್ಥಿಕ ರೀತಿ ಒಂದಿಷ್ಟು ಸುತ್ತಾಡಿ, ಸ್ಫೀತಿನೊಡನೆ ಕೊಂಕು ಬೆರಸಿದೆ.

ನೀಮಿರ್ಬರುಮುನ್ನಿಗಮಿಂ
ತೀಮಾೞ್ಕೆಯೊಳಿನಿಸು ಪೊೞ್ತು ನುಡಿವುತ್ತಿರಿಮಾ
ನಾಮೋದಕುಸುಮಸಮಿತಿಯ
ನಾ ಮರಗಳೊಳಾಯ್ದು ಕೊಯ್ದುಮಿಲ್ಲಿಗೆ ಬರ್ಪೆಂ —(iii, 132)

ಈ ಪದ್ಯದ ಭಾವವನ್ನೂ ಗ್ರಂಥಕಾರನೇ ವಿವರಿಸಿದ್ದಾನೆ. ದೂತಿಯೊಬ್ಬಳು, ತನ್ನ ಕೆಳದಿಯನ್ನೂ ಆಕೆಯ ನಲ್ಲನನ್ನೂ ಒಡಗೂಡಿಸಿ, ಅವರಿಗೆ ಏಕಾಂತತೆಯನ್ನು ಒದಗಿಸುವ ಉದ್ದೇಶದಿಂದ ತಾನು ಅಲ್ಲಿಂದ ತೊಲಗಿ ಹೋಗಲು ಕಾರಣವನ್ನು ಕಲ್ಪಿಸಿಕೊಂಡು ಆಡುವ ಮಾತಿದು. ‘ನಾನು ಹೂಗಳನ್ನಾಯ್ದುಕೊಂಡು ಬರುತ್ತೇನೆ; ಆ ವರೆಗೆ ನೀವಿಬ್ಬರೂ ಇಲ್ಲಿ ನುಡಿಯುತ್ತಿರಿ’—ಎಂದು ಹೇಳಿ ಆ ವಿದಗ್ಧೆ ಹೊರಟುಹೋಗುತ್ತಾಳೆ. ‘ನೀವಿಬ್ಬರೂ ಏಕಾಂತ ಸೌಖ್ಯವನ್ನು ಅನುಭವಿಸುತ್ತಿರಿ’ ಎಂಬುದು ವಿದಗ್ಧೆಯ ಮಾತಿನ ಭಾವ.

ಶಕುಂತಲಾ-ದುಷ್ಯಂತರೊಡನೆ ಪ್ರಿಯಂವದೆ ಇಂತಹದೇ ಸಂದರ್ಭದಲ್ಲಿ ಹೇಳುವ ಮಾತನ್ನೂ ಇಲ್ಲಿ ಭಾವಿಸಿಕೊಳ್ಳಬಹುದು.

---

[1] ‘ಸಮಾಸೋಕ್ತಿ’ಗೆ ಗ್ರಂಥಕಾರನು ಕೊಟ್ಟಿರುವ ಇನ್ನೊಂದು ದೃಷ್ಟಾಂತವಾದ ‘ದಾನಪರನಂ ನಿಜೋನ್ನತ ಮಾನನಂ....’ಎಂಬ ಪದ್ಯದ ಅರ್ಥ ವಿವರಣೆಯನ್ನೂ, ಅದರಲ್ಲಿ ಹುದುಗಿರಬಹುದಾದ ಚಾರಿತ್ರಿಕಾಂಶವನ್ನೂ ‘ಅಮೋಘವರ್ಷ ನೃಪತುಂಗ’ ಎಂಬ ಅಧ್ಯಾಯದಲ್ಲಿ ಹಿಂದೆಯೇ ವಿವರಿಸಿದ್ದೇವೆ (ಪುಟ. ೩೪).

## ೧೮. ವಿರೋಧ

ಒಂದೊಂದದಱೊಳೊಂದದುವಂ
ತಂದೊರ್ಬುಳಿಮಾಡಿ ತದ್ವಿಶೇಷಾಂತರಮಂ
ಸಂದೇಹಮಿಲ್ಲದಱಿಪುವು
ದೊಂದೆ ವಿರೋಧಾಭಿಧಾನಮದುಮಿಂತಕ್ಕುಂ —(iii, 134)

—"ಏಕಕಾಲದಲ್ಲಿ ಒದಗುವ ವಿರೋಧ ಪದಾರ್ಥಗಳ ಸಂಸರ್ಗವನ್ನು ಬಣ್ಣಿಸಿ ಅವುಗಳೊಳಗಿನ ವಿಶೇಷವಾದ ಅಂತರವನ್ನು ಆಲಂಕಾರಿಕ ಮಾರ್ಗದಲ್ಲಿ ಕಾಣಿಸುವುದಕ್ಕೆ 'ವಿರೋಧಾಲಂಕಾರ' ಎಂಬ ಹೆಸರು."

ಆಧುನಿಕರು ಹೇಳುವ 'ವಿರೋಧಾಭಾಸ' ಎಂಬ ಅಲಂಕಾರವು ಇದಲ್ಲ. ವಿರೋಧದಂತೆ ಆಭಾಸವಾಗುವುದು (ಹೊಳೆಯುವುದು) 'ವಿರೋಧಾಭಾಸ'. ಈ 'ವಿರೋಧಾಭಾಸ'ವೆಂಬುದು ವಿರುದ್ಧವಾದ ಅರ್ಥಗಳುಳ್ಳ ಶ್ಲಿಷ್ಟ ಪದಗಳ ಸಂಬಂಧದಿಂದಲೇ—ಎಂದರೆ ಶ್ಲೇಷಾಲಂಕಾರಜನ್ಯವಾಗಿಯೇ—ಹೊಳೆಯುವುದು. ಇದರಿಂದ ವಿರೋಧಾಲಂಕಾರವು ತದ್ಭಿನ್ನವಾದ ಅಲಂಕಾರವೆಂಬುದು ಸಿದ್ಧವಾಗುವುದು. ಮಾತ್ರವಲ್ಲ; ಅದರಲ್ಲಿ, ವರ್ಣ್ಯವಿಷಯ ಮಾತ್ರವೇ ಇರುವುದಲ್ಲದೆ ಅವರ್ಣ್ಯದ ಕೂಟವಿಲ್ಲದುದರಿಂದ ವಕ್ರಮಾರ್ಗಕ್ಕೆ ಎಡೆಯಿಲ್ಲವೆಂಬುದನ್ನು ಗಮನದಲ್ಲಿರಿಸಿಕೊಳ್ಳಬೇಕು.

ಶರದಾಗಮದೊಳ್ ಕಳಹಂ
ಸರವಂ ಪೆರ್ಚಿತ್ತು ಕಿವಿಗೆ ಸೊಗಯಿಸಿ ಪೀನಂ
ವಿರಳತರಮಾಯ್ತು ಬರ್ಹಿಣ
ವಿರಾವಮುರುಮದವಿರಾಮವಿರಸವಿರಾಗಂ —(iii, 135)

—"ಶರದಾಗಮದಲ್ಲಿ, ಕಳಹಂಸ ರವವು ಕಿವಿಗೆ ಸೊಗಯಿಸಿ ಬಹಳವಾಗಿ ಹೆಚ್ಚಿತು; ಉರುಮದ ವಿರಾಮ ವಿರಸವಿರಾಗ'ವಾದ ಮಯೂರ ರವವು ವಿರಳತರವಾಯಿತು".

ಇದನ್ನು ಸ್ವಭಾವಾಖ್ಯಾನಾಲಂಕಾರವೆಂದೇ ಹೇಳಬಹುದು. ಆದರೆ, ಹಿಂದೆ ವಿಸ್ತೃತವಾದ ಸ್ವಭಾವೋಕ್ತಿಯಲ್ಲಿ ಜಾತಿ ದ್ರವ್ಯ ಗುಣ ಕ್ರಿಯೆಗಳೆಂಬ ಪದಾರ್ಥಗಳೊಳಗೆ ಒಂದೊಂದರ ಸ್ವಭಾವ ಮಾತ್ರವೇ ವರ್ಣಿತವಾಗುವುದು. ಇಲ್ಲಾದರೋ ಒಂದೇ ಸಂದರ್ಭದಲ್ಲಿ, ವಿರುದ್ಧ ಪದಾರ್ಥಗಳೆರಡರ ಆನಂದ ಧ್ವನಿಯೂ ಆರ್ತನಾದವೂ ಸೂಚಿತವಾಗಿವೆ. ಶರತ್ಕಾಲವು ಹಂಸಕ್ಕೆ, ವರ್ಷಾಕಾಲವು ಮಯೂರಕ್ಕೆ ಆನಂದದಾಯಕವೆಂದೂ ಹಂಸಕ್ಕೆ ವರ್ಷಾಕಾಲವು, ಮಯೂರಕ್ಕೆ ಶರತ್ಕಾಲವು ವ್ಯಸನದಾಯಕವೆಂದೂ ಕವಿ ಸಮಯೋಕ್ತಿ. ಅದರಿಂದಲೇ ಹಂಸ ಮಯೂರಗಳನ್ನು ವಿರುದ್ಧ ಪದಾರ್ಥಗಳನ್ನಾಗಿ ಸೂಚಿಸಿದುದು—ಎಂಬುದನ್ನು ಭಾವಿಸಿಕೊಳ್ಳಬೇಕು. ಇಲ್ಲಿ ಪದಾರ್ಥಗಳು ಎರಡಿದ್ದರೂ ಅವು ವರ್ಣ್ಯಾವರ್ಣ್ಯಗಳಲ್ಲ—ಎರಡೂ ವರ್ಣ್ಯಗಳು. ಇದರಿಂದ, ಇದು ಆಧುನಿಕರ 'ಸದೃಶಯೋಗಿತೆ'ಯೋ ಎಂದು ಸಂದೇಹಿಸಕೂಡದು. ಯಾಕೆಂದರೆ, ಇಲ್ಲಿ ಒಂದರೊಡನೆ ಇನ್ನೊಂದಕ್ಕೆ ಸಾದೃಶ್ಯವೇ ಇಲ್ಲ.

ಈ ಬಗೆಯ ಶರತ್ಕಾಲ ವರ್ಣನೆಯಲ್ಲಿ ಪ್ರಜಾರಂಜಕನಾಗಿ ವಿರೋಧಿ ಮದಭಂಜಕನೆನ್ನಿಸಿದ ವೀರನಾದ ರಾಜನೊಬ್ಬನ ಆಳಿಕೆಯ ರೀತಿ ಧ್ವನಿತವಾಗಬಹುದು.

### ೧೯. ಅಪ್ರಸ್ತುತ ಪ್ರಶಂಸೆ

ಪ್ರಸ್ತುತಮಲ್ಲದುದನೆ ಮಿಗೆ
ವಿಸ್ತಾರಿಸಿ ನೆಗೞೆ ಪೇೞ್ದೊಡಕ್ಕುಂ ಮತ್ತ
ಪ್ರಸ್ತುತಮೆಂಬುದಳಂಕೃತಿ
ವಿಸ್ತರಮಿಂತಕ್ಕುಮದಱ ಲಕ್ಷ್ಯವಿಭಾಗಂ (—iii, 138)

—"ಪ್ರಸ್ತುತವಲ್ಲದುದನ್ನೇ- ಎಂದರೆ ಉಪಮಾನ ಪದಾರ್ಥವನ್ನೇ—ವಿಸ್ತರಿಸಿ ಹೇಳಿದರೆ, 'ಅಪ್ರಸ್ತುತ ಪ್ರಶಂಸೆ' ಎಂಬ ಅಲಂಕಾರವಾಗುವುದು."

'ಕಾವ್ಯಾದರ್ಶ'ಕ್ಕನುವಾದ ಈ ಗ್ರಂಥದಲ್ಲಿ, ಹಿಂದೆ ನಿರೂಪಿಸಿದ 'ಸಮಾಸೋಕ್ತಿ'ಯಲ್ಲೂ ಅಪ್ರಸ್ತುತದಿಂದ ಪ್ರಸ್ತುತ ವಿಚಾರವು ಹೊಳೆಯುವುದಷ್ಟೆ; ಅದರಿಂದ, ಅದಕ್ಕೂ ಈ 'ಅಪ್ರಸ್ತುತ ಪ್ರಶಂಸೆ'ಗೂ ಭೇದವೇನು ? ಎಂಬ ಸಂದೇಹವು ತಲೆದೋರಬಹುದು. ಆದರೆ, 'ಸಮಾಸೋಕ್ತಿ'ಯಲ್ಲಿ ಉಪಮೇಯವನ್ನು ಭಾವಿಸಿಕೊಂಡು-ಅದನ್ನು ಹೊಗಳಲಿ, ತೆಗಳಲಿ—ತತ್ಸಮಾನವಾದ ಉಪಮಾನ ವಸ್ತುವನ್ನು ವರ್ಣಿಸಲಾಗುವುದು; ಈ 'ಅಪ್ರಸ್ತುತ ಪ್ರಶಂಸೆ'ಯು, 'ಪ್ರಸ್ತುತಮಲ್ಲದುದನೆ ಸಲೆ ವಿಸ್ತಾರಿಸಿ ಪೊಗೞ್ವುದು'; ಎಂದರೆ, ಅಪ್ರಸ್ತುತವನ್ನು ತೆಗಳುವುದರಿಂದ ಅಲ್ಲವೆ ಅದರ ಅವಸ್ಥಾಸೂಚನೆಯಿಂದ ಪ್ರಸ್ತುತದ ನಿಂದಾ ಅವಸ್ಥೆಗಳು ಗೊತ್ತಾಗುವಂತಿದ್ದರೆ, ಅದು 'ಅಪ್ರಸ್ತುತ ಪ್ರಶಂಸೆ' ಎನ್ನಿಸಲಾರದು. 'ಸಮಾಸೋಕ್ತಿ'ಯು ಸಂಕ್ಷಿಪ್ತ ರೂಪದಲ್ಲಿರತಕ್ಕುದು; 'ಅಪ್ರಸ್ತುತ ಪ್ರಶಂಸೆ' ಒಂದಿಷ್ಟು ವಿಸ್ತೃತರೂಪದಲ್ಲಿರತಕ್ಕುದು. ಆದರೆ, 'ಸಮಾಸೋಕ್ತಿ' ಲಕ್ಷಣದಲ್ಲಿ ಅಪ್ರಸ್ತುತದ ಸ್ತುತಿಯನ್ನೆಸಗಬಾರದು ಎಂದು ಹೇಳಿಲ್ಲವಲ್ಲವೆ ? ಎಂಬ ಪ್ರಶ್ನೆಯುಂಟಾಗಬಹುದು. ಸರಿಯೆ; ಆದರೆ 'ಸಮಾಸೋಕ್ತಿ'ಯಲ್ಲಿ ಸ್ತುತಿ ನಿಂದೆಗಳೆರಡನ್ನೂ ಸೂಚಿಸಬಾರದು ಎಂಬುದು 'ಅದನೆ ಪೋಲ್ವುದಂ ಕುಱುಪುಗಳಂ ಕುಱುಮಾಡಿ ಮಾಡಿ ಪೇೞ್ವುದು' ಎಂಬುದರಿಂದ, ಅಪ್ರಸ್ತುತದ ಹೋಲಿಕೆ ಮಾತ್ರವೇ ಹೊಳೆಯಬೇಕೆಂಬುದು ಸ್ಫುಟವಾಗಿದೆ. ಅದರಿಂದ, ವಿಚಾರದೃಷ್ಟಿಗೆ ಈ ಅಲಂಕಾರದ್ವಯದೊಳಗೆ ಭೇದವೇನೋ ಇದೆ. ಆದರೂ ಈ ಸಿದ್ಧಾಂತವು ಸುಲಭ ಸಾಧ್ಯವಲ್ಲ. ಅಷ್ಟೇ ಅಲ್ಲ; 'ಸಮಾಸೋಕ್ತಿ' ಎಂಬ ಹೆಸರಿನಲ್ಲಿ, ಸಂಕ್ಷೇಪವಾಗಿ ಹೇಳಬೇಕಾದುದು ಅಪ್ರಸ್ತುತವನ್ನೇ ಎಂಬುದು ವ್ಯಕ್ತವಾಗಿಲ್ಲ. ಅದರಿಂದಲೇ ಅಪ್ರಸ್ತುತೋಕ್ತಿಯಿಂದ ಪ್ರಸ್ತುತವು ಸ್ಫುರಣಗೊಳ್ಳುವುದೇ 'ಸಮಾಸೋಕ್ತಿ' ಎಂದು ಆಧುನಿಕರು ಮಾರ್ಪಡಿಸಿಕೊಂಡರೆಂದು ತೋರುತ್ತಿದೆ. ಇದರಿಂದ, ಈ ಎರಡು ಅಲಂಕಾರ ಭೇದಗಳು ವಿಶದವಾಗಿವೆ ಎನ್ನಬೇಕು. ಪ್ರಕೃತೋದಾಹರಣವನ್ನು ನೋಡಿ :

ಮೃಗಗಣಮೆ ಸುಖಂ ಬಾೞ್ಗುಂ
ಸೊಗಯಿಸುವ ವನಾಂತರಾಳದೊಳ್ ಬಹುತೃಣದೊಳ್

ಬಗೆದಳಿಪಿ ಸುಱುದು ನೋಡದೆ
ಮೊಗಮಂ ವಸುಮದ ವಿರಾಮ ಕಲುಷಾ[ಯಿ]ತರಾ —(iii, 139)

—'ದರ್ಭಾಂಕುರಾದಿ ಬಹುವಿಧತೃಣಗಳಿಂದ ತುಂಬಿ ಸೊಗಯಿಸುವ ದಟ್ಟಡವಿಗಳಲ್ಲಿ, 'ವಸುಮದ'ದಿಂದ 'ಕಲುಷಾ[ಯಿ]ತ'ರಾದ ವ್ಯಕ್ತಿಗಳ ಮುಖಾವಲೋಕನವನ್ನೂ ಮಾಡದ ಆ 'ಮೃಗಗಣ'ದ ಜೀವನವೇ ಸುಖಜೀವನ'—ಇದು ಪದ್ಯದ ತಾತ್ಪರ್ಯ.

ಕಾಡ ಸೊಪ್ಪು, ತೋಡ ನೀರು—ಎಂದಾದರೂ ಆ ಮೃಗಗಳದು ಸ್ವತಂತ್ರ ಜೀವನ; ಆ ಮೃಗಗಳಂತೆ ಅದೊಂದು ಕಾಡೂರಿನಲ್ಲಾದರೂ ಸರಿ, ಮದವದ್ಧನಿಗಳೆಂಬವರ ಮುಖಗಳನ್ನು ಮರೆತಾದರೂ ನೋಡದೆ ಬಾಳುವ ಬಡವನ ಬಾಳ್ಕೆಯೇ ಸುಖ; ದುಷ್ಟ ಸೇವೆಯಿಂದ ಒದಗಬಹುದಾದ ಆರ್ಥಿಕ ಸುಖವೆಂಬುದು ಸುಖವಲ್ಲ—ಎಂಬ ಅಭಿಪ್ರಾಯವು ಇಲ್ಲಿ ವಿವಕ್ಷಿತವಾಗಿದೆ. 'ವಸುಮದ ವಿರಾಮ ಕಲುಷಾ[ಯಿ]ತರಾ ಮೊಗನುಂ ನೋಡದೆ' ಎಂದು ಪ್ರಸ್ತುತ ವಿಷಯವನ್ನು ನಿಂದಾಂಗವಾಗಿ ಕೂಡಿಸಿಕೊಂಡು ಅಪ್ರಸ್ತುತದ ಪ್ರಶಂಸೆಗೆ ಕವಿ ಕಳೆಕೊಟ್ಟಿದ್ದಾನೆ. ಈ ಕ್ರಮವು ಹಿಂದಿನ 'ಸಮಾಸೋಕ್ತಿ'ಯಲ್ಲಿ ಇಲ್ಲ ಎಂಬುದನ್ನು ಗಮನಿಸತಕ್ಕದು.

## ೨೦. ನಿದರ್ಶನ

ಗುಣದೋಷಾದಿಗಳಿಂದನು
ಗುಣಮಾಗಿರೆ ಪೇೞ್ದು ತದನುಸದೃಶದಿನೊಂದಂ
ಪ್ರಣಿಹಿತ ನಿದರ್ಶನ ಕ್ರಮ
ದೆಣೆಸುವುದಕ್ಕುಂ ನಿದರ್ಶನಾಲಂಕಾರಂ —(iii, 141)

—"ವ್ಯಕ್ತಿಯ ಗುಣದೋಷ (ಸತ್—ಅಸತ್) ಸ್ವಭಾವಗಳಿಗೆ ಅನುಗುಣವಾದ ನಡವಳಿಯನ್ನು ವಿಸ್ತರಿಸಿ, ಆ ಗುಣದೋಷಗಳೊಳಗೆ ಒಂದನ್ನು 'ನಿದರ್ಶನ' ಕ್ರಮದಿಂದ ವಿವರಿಸಿದರೆ, 'ನಿದರ್ಶನ' ಎಂಬ ಅಲಂಕಾರವಾಗುವುದು."

ಈ ಅಲಂಕಾರ ವಿವೇಚನಾಂತ್ಯದಲ್ಲಿ ಗ್ರಂಥಕಾರನು 'ಇಂತುದಿತ ಭೇದಮುಂ ದೃಷ್ಟಾಂತಾಳಂಕಾರ ಮಾರ್ಗಮಂ' ಎನ್ನುತ್ತಾನೆ. ಅದರಿಂದ, ಆಧುನಿಕಾಲಂಕಾರಿಕರ ಹೇಳಿಕೆಯಂತೆ 'ನಿದರ್ಶನ', 'ದೃಷ್ಟಾಂತ' ಎಂಬ ಭೇದವು ಇಲ್ಲಿಲ್ಲವೆಂದೂ ಅವುಗಳು ಅಭಿನ್ನಗಳೆಂದೂ ವ್ಯಕ್ತವಾಗುತ್ತದೆ.

ನಿದರ್ಶನಾಲಂಕಾರಕ್ಕೆ ಲಕ್ಷ್ಯಗಳನ್ನು ಕೊಡುವಲ್ಲಿ, ಗ್ರಂಥಕಾರನು ದಂಡಿಯನ್ನು ಅನುಸರಿಸದೆ ಸ್ವತಂತ್ರಗಳಾದ ಹಲವು ದೃಷ್ಟಾಂತಗಳನ್ನು ಕೊಡುತ್ತಾನೆ. ಮುಂದಿನ 'ಉದಾತ್ತಾಲಂಕಾರ' ಮೊದಲಾದುವುಗಳಲ್ಲಿ ಹೇಗೋ ಹಾಗೆ. ಇವುಗಳೂ ನೃಪತುಂಗ ಮಹಾರಾಜನ ರಾಜಕೀಯ ಧಾರ್ಮಿಕಾದಿ ಮಾರ್ಗಗಳನ್ನೇ ವ್ಯಕ್ತೀಕರಿಸುವಂತೆ ತೋರುತ್ತಿವೆ.[1] ಲಕ್ಷ್ಯಗಳಾದ ಹನ್ನೊಂದು ಪದ್ಯಗಳಲ್ಲಿ ಗ್ರಂಥಕಾರನು ಗುಣದೋಷಾದಿ

[1] ಇದೇ ಗ್ರಂಥ, ಪುಟ ೩೫-೩೭

ಗಳನ್ನು ವಿಸ್ತರಿಸಿ 'ನಿದರ್ಶನಾಲಂಕಾರ'ವನ್ನು ಕಾಣಿಸಿದ್ದಾನೆ. ಅವುಗಳೊಳಗೆಲ್ಲ ಹೆಣೆದಿರುವ ಮಾರ್ಗಭೇದಗಳನ್ನು ಗಮನಿಸಬೇಕು. ಒಂದು ದೃಷ್ಟಾಂತವನ್ನು ನೋಡಿ :

ಅಮಳಿನ ಗುಣವೃತ್ತಿಗಳಿಂ
ಸಮುಪಸ್ಥಿತಸಕಲಜನಗತೋಚಿತ ಗುಣಮಂ
ಸಮನಾಗಿಸುವರ್ ಕನ್ನಡಿ
ಕಮನೀಯಾಕಾರ ಬಿಂಬಮಂ ತಾಳ್ದುವ ಪೋಲ್ —(iii, 142)

—'ಸಮುಪಸ್ಥಿತರಾದ ಜನರು ತಂತಮ್ಮ ನಿರ್ಮಲಗುಣ ವೃತ್ತಗಳಿಂದ, ಕನ್ನಡಿಯು ಸುಂದರಾಕಾರವಾದ ಬಿಂಬವನ್ನು ತೋರುವಂತೆ, ಉಚಿತ ಗುಣವನ್ನು ಸಮನಾಗಿಸುವರು.'

ಇಲ್ಲಿ ಕನ್ನಡಿವಿಡಿದವರಂತೆ (ಸಮುಪಸ್ಥಿತರಂತೆ) ಸಕಲಜನರು, ಕನ್ನಡಿಯಂತೆ ಅಮಳಿನ ಗುಣವೃತ್ತಿಗಳು, ಕನ್ನಡಿಯಲ್ಲಿ ಕಮನೀಯಾಕಾರ ಬಿಂಬವು ತೋರುವಂತೆ ಆ ಅಮಳಿನ ಗುಣವೃತ್ತಿಗಳಲ್ಲಿ ಉಚಿತ ಗುಣವನ್ನು ಸಮನಾಗಿಸುವುದು—ಎಂದು ಕನ್ನಡಿಯ ಗುಣದೊಡನೆ ಅನುವಾಗಿ ವ್ಯಕ್ತಿಗುಣವು ವರ್ಣಿತವಾಗಿದೆ. ಇದು ಹಿಂದೆ ವಿವರಿಸಿದ ಉಪಮಾನ, ಉಪಮೇಯ, ಸಮಾನಧರ್ಮ, ಉಪಮಾವಾಚಕ ಎಂಬ ಚತುರಂಗ ಯುಕ್ತವಾದ ಪೂರ್ಣೋಪಮೆಯೇ ಅಲ್ಲವೆ? ಎಂಬ ಶಂಕೆಯೇಳಬಹುದು. ಆದರೆ ಇಲ್ಲಿ ಬರಿಯ ಹೋಲಿಕೆಗಿಂತಲೂ, ಉಪಮಾನದಲ್ಲಿ ಗುಣಜಾತ್ಯಾದಿಗಳಿಂದ ತೋರುವ 'ನಿದರ್ಶನ'ದ ಅಲ್ಲವೆ 'ದೃಷ್ಟಾಂತ'ದ ದರ್ಶನವೇ ಹೆಚ್ಚು. ಉಪಮಾಲಂಕಾರದಲ್ಲಿ ಹೋಲಿಕೆಯೇ ಉಪಮಾನದ ಅಧಿಕ ಗುಣವನ್ನು ಸೂಚಿಸುವುದು. ಅದಕ್ಕಿಂತಲೂ ಈ 'ದೃಷ್ಟಾಂತ'ದಲ್ಲಿ ಉಪಮಾನದ ಅಧಿಕತಮ ಗುಣವು ವ್ಯಕ್ತವಾಗುವುದು; ಮಾತ್ರವಲ್ಲ, ಕೆಲವು ಉದಾಹರಣೆಗಳಲ್ಲಿ 'ಅಂತೆ', 'ಪೋಲ್', ಎಂಬ ಉಪಮಾವಾಚಕ ಪದವೇ ಇರುವುದಿಲ್ಲ. ಅದಿಲ್ಲದ ಸಂದರ್ಭದಲ್ಲಿ, ಉಪಮಾಲಂಕಾರವೋ ಎಂಬ ಭ್ರಮೆಗೂ ಆಸ್ಪದವಿಲ್ಲ.

ನಮ್ಮ ಗ್ರಂಥಕಾರನು ಆದಿಯಲ್ಲಿ, ಎಂದರೆ ಲಕ್ಷಣ ನಿರೂಪಣ ಸಂದರ್ಭದಲ್ಲಿ, ಇದು 'ನಿದರ್ಶನಾಲಂಕಾರ'ವೆಂದು ಹೇಳಿದರೂ ಕೊನೆಗೆ 'ಇಂತುದಿತ ಭೇದಮಂ ದೃಷ್ಟಾಂತಾಳಂಕಾರಮಾರ್ಗಮುಂ ಕನ್ನಡದೊಳ್ ಸಂತತ ಗುಣಮುಂ....(iii, 153) ಎನ್ನುತ್ತಾನಷ್ಟೆ. ಆದರಿಂದ ಈ 'ದೃಷ್ಟಾಂತಾಳಂಕಾರ ಮಾರ್ಗ'ವು ಕನ್ನಡದ ದೇಸಿಯಲ್ಲೇ ವಿಸ್ತರಿಸಿಕೊಂಡಿದ್ದಿರಬೇಕೆಂಬ ಭಾವನೆಯೂ ಹೊಳೆಯುತ್ತಿದೆ. ಮತ್ತಿನ ನಾಗವರ್ಮನಾದರೂ ಈ 'ನಿದರ್ಶನಾಲಂಕಾರ'ವನ್ನು ಹೆಸರಿಸಿ[1], ಲಕ್ಷಣ ಲಕ್ಷ್ಯಗಳನ್ನು ವಿವೇಚಿಸುವಲ್ಲಿ 'ದೃಷ್ಟಾಂತ' ಎಂದೇ ಹೇಳುತ್ತಾನೆ.[2] ಬೇಕಾದರೆ ವಾಚಕಪದ ರಹಿತವಾಗಿ ಆಧುನಿಕಾಲಂಕಾರಿಕರು ಲಕ್ಷಿಸಿದ ದೃಷ್ಟಾಂತಾಲಂಕಾರದೊಡನೆ ಅಭಿನ್ನವಾಗಿರುವ, ಎಂದರೆ

---

1 ಕಾವ್ಯಾವಲೋಕನ (ಮೈಸೂರು ಪ್ರಾಚ್ಯ ಗ್ರಂಥ ಭಂಡಾರದ ಪ್ರಕಟನೆ), ಪದ್ಯ ೬೬೫
2 ಅದೇ ಗ್ರಂಥ ಪದ್ಯ ೭೦೪_೭೦೫

ಬಿಂಬ ಪ್ರತಿಬಿಂಬ ಭಾವದಲ್ಲಿ ತೋರುವ. 'ನಿದರ್ಶನ'ಕ್ಕೆ ಒಂದು ದೃಷ್ಟಾಂತವನ್ನು ನೋಡಿ :

ಪರಪಕ್ಷಮುಳ್ಳನಂ ತನ
ಗಿರವುಬ್ಬಸಮುದಜನಿಸಜನಿವುದದನೇಗೆಯ್ದುಂ
ಪರೆದ ಪುಡಿಯೆಲ್ಲಮುಂ ನೀರ್
ನೆರೆದು ಕೆಸರ್ಮಾಡದದನ್ನೆಗಂ ನೆಲಸುಗುಮೇ —(iii, 150)

## ೨೧. ಸಹೋಕ್ತಿ

ಗುಣಜಾತ್ಯಾದಿಗಳಿಂ ದೊರೆ
ಯೆಣಿಸುವುದು ಸಹೋಕ್ತಿಯೆಂಬುದಕ್ಕುಂ ನಾನಾ
ಗಣನಾ ವಿಶೇಷಮಾಗೀ
ಗಣಿದದಿನಾರ್ಯೆದುಕೊಳ್ಗೆ ಲಕ್ಷ್ಯಮುನಿದಜಾ —(iii, 154)

—"ಗುಣಜಾತ್ಯಾದಿ ಸಂಬಂಧದಿಂದಾಗಿ ಉಪಮಾನದೊಡನೆ ಉಪಮೇಯದ ಸಹಭಾವ (ಒಡನಾಟ)ವನ್ನು ವ್ಯಕ್ತಗೊಳಿಸುವುದು 'ಸಹೋಕ್ತಿ'."

ಇದು ಉಪಮಾಲಂಕಾರಜನ್ಯವೇ ಸರಿ. ಆದರೆ ಭಿನ್ನಕ್ರಮೋಕ್ತಿಯಿಂದಾಗಿ ರೂಪಕಾದಿಗಳಂತೆ ನಾಮಾಂತರವನ್ನು ಪೊಂದಿದೆ. 'ಸಹ ಉಕ್ತಿಃ ಸಹೋಕ್ತಿಃ' ಅಥವಾ 'ಸಹಾರ್ಥೇನ ಉಕ್ತಿಃ ಸಹೋಕ್ತಿಃ' ಅಥವಾ 'ಸಹ (ಭಾವಸ್ಯ) ಉಕ್ತಿಃ ಸಹೋಕ್ತಿಃ' ಎಂದು 'ಸಹೋಕ್ತಿ' ಪದದ ವಿಗ್ರಹ. ಎರಡು ಇಲ್ಲವೆ ಅದಕ್ಕೂ ಹೆಚ್ಚು ವಸ್ತುಗಳೊಳಗೆ ಔಪಮ್ಯವನ್ನು ಸೂಚಿಸುವುದು ಈ ಅಲಂಕಾರದ ಗುರಿ. ಇದರಲ್ಲಿ, ಉಪಮಾನೋಪ ಮೇಯಗಳೊಳಗಣ ಸಾಧಾರಣ ಧರ್ಮವು ಉಪಮಾನಕ್ಕೆ ಪರೋಕ್ಷವಾಗಿಯೂ ಉಪ ಮೇಯಕ್ಕೆ ನೇರಾಗಿಯೂ ಸಂಬಂಧಿಸುವಂತೆ ಒಂದೇ ಸಲ ನಿರೂಪಿತವಾಗಬೇಕು. ಮಾತ್ರವಲ್ಲ; ಸಹಭಾವಾರ್ಥಕ ಪದವೂ ಇರಬೇಕು. ಆದರೆ, ಸಹಭಾವಾರ್ಥಕ ಪದವಿರುವಲ್ಲೆಲ್ಲ ಸಹೋಕ್ತಿಯೆಂದು ಭ್ರಮಿಸಕೂಡದು. 'ತಂದೆಯೊಡನೆ ಮಗನೂ ಹೋದನು' ಎಂಬಲ್ಲಿ ಅಲಂಕಾರವಿಲ್ಲ. ಅಲಂಕಾರವು ವ್ಯಕ್ತವಾಗಿರಬೇಕಾದರೆ, ಔಪಮ್ಯವು ಗಮ್ಯವಾಗಿರಬೇಕು. ಉದಾಹರಣವನ್ನು ನೋಡಿ :

ಅತಿಧವಳಮಾಯ್ತು ಗುಣಸಂ
ತತಿಯೊಡನೆ ಯಶೋವಿತಾನಮಾಶಾಧೀಸಂ
ಸತತಂ ಪೆರ್ಚಿತ್ತು ನಿಜಾ
ಯತಿಯೊಡನೆ ಮಹಾವಿಭೂತಿ ಪರಮೋದಯನಾ —(iii, 155)

—'ಪರಮೋದಯನ ಗುಣಸಂತತಿಯೊಡನೆ ಆಶಾಧೀನವಾದ ಯಶೋವಿತಾನವು ಅತಿ ಧವಳವಾಯಿತು; (ಅವನ) ಪರಾಕ್ರಮದೊಡನೆ ಮಹಾವಿಭೂತಿಯು ನಿತ್ಯವೂ ಹೆಚ್ಚಿತು.'

ಇಲ್ಲಿ 'ಅತಿಧವಳ'ವಾದ ಗುಣಸಂಬಂಧದಿಂದ 'ಗುಣಸಂತತಿ', 'ಯಶೋವಿತಾನ'

ಗಳ ಸಹಭಾವವು ವ್ಯಕ್ತವಾಗಿದೆ: 'ಸತತಂ ಪೆರ್ಚಿತ್ತು' ಎಂಬ ಕ್ರಿಯಾ ಸಂಬಂಧ ದಿಂದ 'ನಿಜಾಯತಿ', 'ಮಹಾ ವಿಭೂತಿ'ಗಳ ಒಡನಾಟವು ಪ್ರಕಟವಾಗಿವೆ.

**೨೨. ಸಂಕೀರ್ಣ**

ಸಂಕೀರ್ಣಮೆಂಬುದುಕ್ತಾ
ಳಂಕಾರ ಸಮೂಹ ಸಂಕರ ಕ್ರಮಮುಕ್ಕುಂ
ಶಂಕಾವಿರಹಿತಚಿತ್ತರ
ದಂ ಕಾವ್ಯದೊಳಿಂತು ಪೇೞ್ಗೆ ಕವಿವೃಷಭರ್ಕಳ್ —(iii, 156)

—"ಮೇಲೆ ವಿವರಿಸಿದ ಮತ್ತು ಮುಂದೆ ವಿವರಿಸಲಿರುವ ಅಲಂಕಾರ ಸಮೂಹಗಳ ಬೆರಸಣಿಗೆಗೆ 'ಸಂಕೀರ್ಣ' ಎಂದು ಹೆಸರು."

ಇದೊಂದು ಸ್ವತಂತ್ರವಾದ, ಅಲ್ಲವೆ ಜನ್ಯವಾದರೂ ಏಕಾಶ್ರಯವಾಗಿ ಅದೊಂದು ವೈಯಕ್ತಿಕತೆಯುಳ್ಳ ಅಲಂಕಾರವಲ್ಲ: ಈ ಅಂಶವನ್ನು 'ಸಂಕೀರ್ಣ' ಎಂಬ ಹೆಸರೇ ಸೂಚಿಸುವುದು. ನಿಜವಾಗಿ ಪರಾಂಬರಿಸಿದರೆ, ಇದನ್ನು ಅಲಂಕಾರ ಎಂದು ಕರೆಯುವುದೇ ಅಷ್ಟೊಂದು ಅಚ್ಚುಕಟ್ಟಲ್ಲ ಎನ್ನಬಹುದು. ಆದರೂ ಗ್ರಂಥಕಾರನು 'ಶಂಕಾವಿರಹಿತ ಚಿತ್ತರ್ ಅದಂ ಕಾವ್ಯದೊಳ್ ಇಂತು ಪೇೞ್ಗೆ' ಎಂದು ಉದಾಹರಿಸುತ್ತಾನೆ.

ಅಪರಾಗಂ ಮುನಿಪತಿವೋ
ಲಪಗತಗುಣನಾಗಿಯುಂ ನಿಜಾಯತದೋಷಂ
ವಿಪುಳಯಶೋಧನಲೋಭಂ
ನೃಪವೃಷಭನರಾತಿನಿಕರತರುದವದಹನಂ —(iii, 157)

—'ನೃಪವೃಷಭಂ' 'ಅಪರಾಗಂ ಮುನಿಪತಿವೋಲ್','ಅರಾತಿ ನಿಕರತರುದವದಹನಂ ವಿಪುಳ ಯಶೋಧನ ಲೋಭಂ, 'ಅಪಗತ ಗುಣನಾಗಿಯುಂ ನಿಜಾಯತ ದೋಷಂ'—ಎಂಬುದು ಅನ್ವಯ.

ಇಲ್ಲಿ ಅದೊಬ್ಬ 'ನೃಪವೃಷಭ'ನನ್ನು ವರ್ಣಿಸಿದೆಯಷ್ಟೆ. 'ಅರಾತಿ ನಿಕರತರುದವ ದಹನಂ' ಎಂಬಲ್ಲಿ ರೂಪಕವಿದೆ; 'ವಿಪುಳ ಯಶೋಧನ ಲೋಭಂ' ಎಂಬಲ್ಲಿಯೂ ರೂಪಕವಿದೆ. ಆದರೆ, ಈ ರೂಪಕದ್ವಯದೊಳಗೆ ಪರಸ್ಪರ ಸಂಬಂಧವೇನೂ ಇಲ್ಲ. 'ಅಪರಾಗಂ ಮುನಿಪತಿವೋಲ್' ಎಂಬಲ್ಲಿ ಶ್ಲೇಷವು ಅಂಗವಾಗಿ, ಉಪಮೆ ಅಂಗಿ ಯಾಗಿದೆ. 'ಅಪಗತ ಗುಣನಾಗಿಯುಂ ನಿಜಾಯತದೋಷಂ ಎಂಬಲ್ಲಿ ಶ್ಲೇಷವೂ, ಆಧುನಿಕರಣಿಕೆಯಂತೆ ವಿರೋಧಾಭಾಸವೂ ಇದೆ. ಇಂಥ ಸಾಂಕರ್ಯವನ್ನು ಬೇರೊಂದು ಅಲಂಕಾರವನ್ನಾಗಿ ಒಪ್ಪಿಕೊಳ್ಳುವುದೇಕೆ? ಎನ್ನಬಹುದು. ಆದರೆ ಈ ಸಂದೇಹಕ್ಕೆ ನ್ಯಾಯವಾದ ಉತ್ತರವೂ ಇಲ್ಲವೆಂದಲ್ಲ.

'ಸಂಕೀರ್ಣ'ದಲ್ಲಿ ಬೆರಸುವ ಅಲಂಕಾರಗಳೊಳಗೆ ಒಂದು ಅಲಂಕಾರವು ಅಥವಾ ಹಲವು ಅಲಂಕಾರಗಳು ಅಂಗವಾಗಿ ಅಥವಾ ಅಂಗಗಳಾಗಿ, ಉಳಿದುದು ಅಥವಾ

ಉಳಿದವುಗಳು ಅಂಗಿಯಾಗಿ ಅಥವಾ ಅಂಗಿಗಳಾಗಿ ಸಂಭವಿಸುವುದಿದೆ. 'ಅಪರಾಗಂ ಮುನಿಪತಿವೋಲ್' ಎಂಬಲ್ಲಿ ಪ್ರಮುಖವಾದುದು, ಎಂದರೆ ಅಂಗಿಯಾದುದು ಉಪಮೆ. 'ಅಪರಾಗಂ' [೧. ಪರರಿಗೆ ಆಗ (ಅಪರಾಧ)ವೆಸಗದವನು; ೨. ರಾಗದ್ವೇಷಾದಿ ರಹಿತನು] ಎಂಬ ಧರ್ಮವಾಚಕಪದದ ಶ್ಲೇಷಾಲಂಕಾರವು ಉಪಮೆಗೆ ಅಂಗವಾಗಿದೆ. ಅಂಗವಿಲ್ಲದಿದ್ದರೆ ವ್ಯಕ್ತಿಯು ಹೇಗೆ ಅಂಗಿ ಎನ್ನಿಸಲಾರದೋ, ಹಾಗೆ ಪ್ರಕೃತದ ಶ್ಲೇಷವು ಉಪಮೆಗೆ ಅವಶ್ಯವಿದೆ: ಎಂದರೆ, ಆ ಶ್ಲೇಷವು ಅಂಗವಾದರೂ, ಅದಿಲ್ಲದೆ ಈ ಉಪಮೆಯು ಅಂಗಿ ಎನ್ನಿಸುವುದೇ ಇಲ್ಲ. ಅದರಂತೆ, ಈ ಉಪಮೆ ಇಲ್ಲದೆ ಆ ಶ್ಲೇಷಕ್ಕೂ ಎಡೆಯಾಗದು. ಅದರಿಂದ ಈ ಅಂಗಾಂಗಿಭಾವ ಸಂಕರವು ಆವಶ್ಯಕವಾಯಿತು.

'ಸಮಕಕ್ಷ್ಯ' ಎಂಬುದು ಸಂಕೀರ್ಣ ಭೇದ. ಅದರಲ್ಲಿ, ಎರಡು ಇಲ್ಲವೆ ಹೆಚ್ಚು ಅಲಂಕಾರಗಳು ಒಂದು ಅಲಂಕಾರಕ್ಕೆ ಅಂಗಗಳೆನ್ನಿಸಿ—ಒಂದು ಪ್ರಮುಖ, ಇನ್ನೊಂದು ಅಪ್ರಮುಖ ಎನ್ನಿಸವೆ—ಸಮಾನ ಸ್ಥಿತಿಯಲ್ಲಿರುವುವು. ಮೇಲಿನ ಪದ್ಯದೊಳಗಿನ 'ವಿಪುಳಯಶೋಧನಲೋಭಂ' ಎಂಬಲ್ಲಿಯೂ 'ಅರಾತಿನಿಕರತರುದವದಹನಂ' ಎಂಬಲ್ಲಿಯೂ ತೋರುವ ರೂಪಕಗಳು ಪರಸ್ಪರ ಬಂಧಗಳಿಲ್ಲದೆ, ಸಮಾನಗಳಾಗಿ' 'ನೃಪವೃಷಭಂ' ಎಂಬ ವಿಶೇಷ್ಯವನ್ನೊಂದಿವೆ. ಇವುಗಳನ್ನೆಲ್ಲ ಬೇರೆ ಬೇರೆ ಅಲಂಕಾರಗಳೆಂದು ಹೆಸರಿಸುವುದಕ್ಕಿಂತ ಒಂದೇ ಅರ್ಥಸಂಬಂಧದಲ್ಲಿ ಕೂಡಿದವುಗಳಾದುದರಿಂದ, 'ಸಂಕೀರ್ಣ' ಎನ್ನುವುದೇ ಲಾಘವವೆಂದು ಲಾಕ್ಷಣಿಕರೆಣಿಕೆ.

ಹೀಗೆ ಪರಾಂಬರಿಸಿದಲ್ಲಿ, ಎಲ್ಲ ಅಲಂಕಾರಗಳೂ ವಿಶದವಾಗುವಂತಿದ್ದರೆ ಅದಕ್ಕೆ 'ಸಂಸೃಷ್ಟಿ' ಎಂದೂ, ಹಾಗೆ ವಿಶದವಾಗದಿದ್ದರೆ ಅದಕ್ಕೆ 'ಸಂಕರ' (ಸಂಕೀರ್ಣ) ಎಂದೂ ಆಧುನಿಕ ಲಾಕ್ಷಣಿಕರ ಸೂಚನೆ. 'ತಿಲತಂಡುಲವತ್ ಸಂಸೃಷ್ಟಿಃ, ನೀರಕ್ಷೀರವತ್ ಸಂಕರಃ —ಎಂದರೆ ಎಳ್ಳು ಅಕ್ಕಿ ಬೆರಸಿದಂತಾಗಿ ಒಳಗೊಳಗಿನ ಭೇದವು ಗೊತ್ತಾಗುವಂತಿರುವುದು 'ಸಂಸೃಷ್ಟಿ' ಎಂದೂ ನೀರು ಹಾಲು ಬೆರಸಿದಂತಾಗಿ ಭೇದಾವಗಾಹನೆಗೆ ಎಡೆದೊರೆಯದಿರುವುದು 'ಸಂಕರ' ಎಂದೂ ಅವರೆಣಿಕೆ.

## ೨೩. ಪರಿವೃತ್ತಿ

ಪರಿವೃತ್ತಿಯೆಂಬುದಕ್ಕುಂ
ನಿರುಪಮಮರ್ಥ ಸ್ವರೂಪ ವಿನಿಮಯ ವಚನಂ
ಪರಮಗುಣೋದಯಮದಱಾ
ಸ್ವರೂಪಮುಂ ಬಗೆದುಕೊಳ್ಗೆ ಮತ್ತೀ ತೆಱದಿಂ —(iii, 158)

—"ಪದಾರ್ಥಗಳ ವಿನಿಮಯ (ಪರಿವೃತ್ತಿ) ಮಾಡಿದಂತೆ ಅಥವಾ ಅದಂತೆ ಅಂದವಾಗಿ ಬಣ್ಣಿಸಿದಲ್ಲಿ, 'ಪರಿವೃತ್ತಿ' ಎಂಬ ಅಲಂಕಾರ."

ಅರಿಗೆ ದುರಾವಹರಂಗಾಂ
ತರದೊಳಭೀತಂ ನಿಜಾರಿಸಮಿತಿಗಳಿಂದಂ

ನೆರೆದ ಜಯಂಗೊಂಡಾಗಡೆ
ಸುರಾಂಗನಾ ಸುರತ ವಿಷಯ ಸುಖಮುಂ ಕೊಟ್ಟಂ —(iii, 159)

—'ದುರಾವಹರಂಗಾಂತರದೊಳ್ ಆರಿಗೆ ಅಭೀತಂ (ಆಗಿ), ನಿಜಾರಿ ಸಮಿತಿಗಳಿಂದಂ ನೆರೆದ (ಸಂಪಾದಿಸಲ್ಪಟ್ಟ) ಜಯಂಗೊಂಡು ಆಗಡೆ (ಅವಂಗೆ) ಸುರಾಂಗನಾ ಸುರತ ವಿಷಯ ಸುಖಮುಂ ಕೊಟ್ಟಂ'—ಇದು ಅನ್ವಯ.

ಅಪ್ರತಿಭಟನಾದ ವೀರನಾಯಕನೊಬ್ಬನು ವೈರಿಗಳನ್ನೆಲ್ಲ ರಣಾಂಕಣದಲ್ಲಿ ಗೆದ್ದನು— ಎಂಬ ವರ್ಣನೆ ಇದು. ಈ ವೀರವರ್ಣನೆ, ಉದಾತ್ತನಾದ ವ್ಯಾಪಾರಿಯೊಬ್ಬನು ಸರ್ವಸಮಕ್ಷದಲ್ಲಿ ಹೀನವಸ್ತುವನ್ನು ತೆಗೆದುಕೊಂಡು ಅಧಿಕವಸ್ತುವನ್ನು ಕೊಟ್ಟಂತೆ ವರ್ಣಿತವಾಗಿದೆ. ಇದನ್ನು 'ಪರ್ಯಾಯೋಕ್ತ' ಎಂದೇ ಹೇಳಬಹುದು. ಆದರೆ 'ಪರಿವೃತ್ತಿ'ಯಲ್ಲಿ 'ನ್ಯೂನಾಧಿಕ ಪದಾರ್ಥವಿನಿಮಯ' ಸ್ವರೂಪ ವರ್ಣನೆಯಿದೆ: ಅದು 'ಪರ್ಯಾಯೋಕ್ತ'ದಲ್ಲಿಲ್ಲ. ಮಾತ್ರವಲ್ಲ, 'ಪರ್ಯಾಯೋಕ್ತ'ದಲ್ಲಿ ಪ್ರಕೃತಾ ಪ್ರಕೃತಗಳೆಂಬ ದ್ವಯವಿಲ್ಲ; 'ಪರಿವೃತ್ತಿ'ಯಲ್ಲಿ ನ್ಯೂನಾಧಿಕ ವಿನಿಮಯವೆಂಬುದು ವಸ್ತುತಃ ಅಪ್ರಕೃತವೇ ಹೊರತು ಪ್ರಕೃತವಲ್ಲ. ಹಾಗೆ ಅವಗಾಹಿಸಿಕೊಂಡಲ್ಲಿ. ವಕ್ರ ಸ್ವಭಾವ ಮಿಶ್ರಣ ಕ್ರಮವು ವ್ಯಕ್ತವಾಗುವುದು.

## ೨೪. ವ್ಯಾಜಸ್ತುತಿ

ಅತಿಶಯಮಾಗಿರೆ ಗುಣಸಂ
ತತಿಯಂ ದೋಷಮನೆ ಪೇೞ್ದವೊಲ್ ಪೇೞ್ವುದು ನಿ
ಶ್ಚಿತ ಶಬ್ದಾರ್ಥಂ ವ್ಯಾಜ
ಸ್ತುತಿಯೆಂಬುದುಮದಱ ಮಾೞ್ಕೆ ಮತ್ತಿಂತಕ್ಕುಂ —(iii, 160)

—"ಅತಿಶಯುವಾದ ಗುಣಸಮೂಹವನ್ನು ದೋಷವನ್ನಾಗಿ ತೋರ್ಪಡಿಸಿ ಹೇಳು ವುದು 'ವ್ಯಾಜಸ್ತುತಿ.' ಇದರೊಳಗೆ 'ಶಬ್ದ ವ್ಯಾಜಸ್ತುತಿ', 'ಅರ್ಥ ವ್ಯಾಜಸ್ತುತಿ' ಎಂಬ ಎರಡು ಭೇದಗಳಿವೆ."

'ವ್ಯಾಜಸ್ತುತಿ' ಎಂದರೆ, ದೋಷ ನಿರೂಪಣೆಯ ನೆವ (ವ್ಯಾಜ) ದಿಂದ—ಎಂದರೆ ದೋಷವನ್ನೇ ಒತ್ತಿ ಹೇಳುವುದೋ ಎಂಬಂತೆ ಮೇಲಿಂದಮೇಲೆ ತೋರಿದರೂ ನಿಜ ವಾಗಿ ಗುಣವನ್ನೇ ವರ್ಣಿಸುವುದು, ಎಂದು ತಾತ್ಪರ್ಯ. ಇದರಂತೆ, ಆಧು ನಿಕಾಲಂಕಾರಿಕರು 'ವ್ಯಾಜನಿಂದೆ' ಎಂಬ, ಎಂದರೆ ಗುಣಕೀರ್ತನೆಯಂತೆ ತೋರುವ ದೋಷನಿಂದೆಯ, ಅಲಂಕಾರವೊಂದನ್ನೂ ಕೂಡಿಸಿಕೊಂಡಿದ್ದಾರೆ. ಪ್ರಕೃತದ ದೃಷ್ಟಾಂತ ವನ್ನು ಪರಿಶೀಲಿಸಿರಿ.

ಜಲರಾಶಿಪ್ರಭವೆಯನವಿ
ಕಲಕೃಷ್ಣಗುಣಾನುರಕ್ತೆಯಂ ಮಿಗೆ ಲಕ್ಷ್ಮೀ
ಲಲನೆಯನಾಂತುಂ ವಕ್ಷಃ
ಸ್ಥಲದೊಳ್ ಪೇೞಿಂತುದಾರ ಚರಿತನೆ ಅಪ್ಪೈ —(iii, 161)

ಕ್ಷೀರಸಾಗರ ಜಾತೆ ಲಕ್ಷ್ಮಿ, ಜಯಶ್ರೀ, ರಾಜ್ಯಲಕ್ಷ್ಮಿ—ಇವರೊಳಗೆ ಐಕ್ಯವನ್ನು ಸೂಚಿಸುವ ಕವಿಸಮಯವನ್ನು ಇಲ್ಲಿ ಮನವರಿಕೆ ಮಾಡಿಕೊಳ್ಳಬೇಕು. ಇದು ಶಬ್ದಗತವಾದ—ಎಂದರೆ 'ಜಲರಾಶಿ ಪ್ರಭವೆಯಂ, ಅವಿಕಲಕೃಷ್ಣ ಗುಣಾನುರಕ್ತೆಯಂ' ಇತ್ಯಾದಿ ವಿಶೇಷಣಗಳಲ್ಲಿರುವ ಶ್ಲೇಷಬಲದಿಂದ ಒದಗಿದ—'ವ್ಯಾಜಸ್ತುತಿ.' ಇದರಂತೆ ಅರ್ಥಗತ 'ವ್ಯಾಜಸ್ತುತಿ'ಯನ್ನೂ ಭಾವಿಸಿಕೊಳ್ಳಬಹುದು. ಮುಂದಿನ ಪದ್ಯವೂ ಲಕ್ಷ್ಮಿಯನ್ನು ವ್ಯಾಜಸ್ತುತಿಯಿಂದ ಬಣ್ಣಿಸಿದೆ.

ಸತತಂ ಭುಜಂಗಭೋಗಾ
ಶ್ರಿತೆ ನಿನ್ನ ಕಳತ್ರವಿಾ ಧರಾವಧು ಮತ್ತೆಂ
ತತಿಶಯದೆ ಮಹಾಪುರುಷ
ಬ್ರತಮಂ ತಾಳ್ದುವಳುದಾರ ಚರಿತ ಕ್ರಮದಿಂ —(iii, 162)

ಇಲ್ಲಿ 'ಧರಾವಧು'ವನ್ನು 'ಭುಜಂಗ ಭೋಗಾಶ್ರಿತೆ' ಎಂದು ವರ್ಣಿಸಿದೆ. 'ವಿಟಸಂಬಂಧ ಸುಖಗೊಳ್ಳುವಾಕೆ', 'ಮಹಾಶೇಷನ ಹೆಡೆಯ ಮೇಲೆ ನೆಲಸಿದಾಕೆ'—ಎಂಬ ಶ್ಲೇಷಾರ್ಥಬಲದಿಂದ ಈ 'ವ್ಯಾಜಸ್ತುತಿ' ರೂಪುಗೊಂಡಿದೆ.

## ೨೫. ಹೇತು

ಕಾರಣಮಾಗಿರ್ಪುದಳಂ
ಕಾರಂ ಹೇತೂಕ್ತಿಯೆಂಬುದದು ತಾಂ ನಾನಾ
ಕಾರಂ ಜ್ಞಾಪಕಸದಳಂ
ಕಾರ ಸುಮಾರ್ಗ ಪ್ರಯೋಗಮೀ ತೆಱನದಱಾ —(iii, 163)

—"'ಕಾರಣಮಾಗಿರ್ಪುದು ಅಲಂಕಾರಂ ಹೇತೂಕ್ತಿ'. ಅದು 'ಜ್ಞಾಪಕ ಹೇತು', 'ಅಭಾವ ಹೇತು' ಮೊದಲಾದ ನಾನಾ ಭೇದಗಳನ್ನೊಂದಿದೆ."

ಬರಿಯ ಲೌಕಿಕ ಕಾರ್ಯವೊಂದಕ್ಕೆ ಹೇತುವನ್ನು ಹೇಳಿದರೆ, ಅದು 'ಹೇತೂಕ್ತಿ' ಎಂಬ ಅಲಂಕಾರವೆನ್ನಿಸುವುದಿಲ್ಲ: ಅದು ಕಾವ್ಯಸೃಷ್ಟಿಯ ಕಾರ್ಯಕ್ಕೆ ಕಾರಣವಾಗಿ, ಎಂದರೆ ಕಾವ್ಯಹೇತುವಾಗಿ, ಇರತಕ್ಕುದು.

ಇಂದು ಕಿರಣಂಗಳಿಂದಂ
ಚಂದನರಸದಿಂದೆ ಮಾಗಿಯಾ ನೀರಿಂದಂ
ನಂದದು ಪರಿತಾಪಾನಳ
ನಿಂದಱಿದೆಂ ನಿನ್ನ ಮೆಯ್ಯ ಕಾಮುಜ್ವರಮಂ —(iii, 164)

—'ಇಂದುಕಿರಣಗಳಿಂದಾಗಲಿ, ಚಂದನ ರಸಲೇಪನದಿಂದಾಗಲಿ, ಮಾಗಿಯ ನೀರಿನಿಂದಾಗಲಿ ನಿನ್ನ ಪರಿತಾಪಾನಲವು ನಂದದು: ಅದರಿಂದ ನಿನ್ನ ಮೈಯ ಕಾಮಜ್ವರವನ್ನು ಅರಿತೆನು.'

ಇತರ ಬಗೆಯ ಪರಿತಾಪವಾಗುತ್ತಿದ್ದರೆ,ಅದು ಇಂದುಕಿರಣಾದಿಗಳಿಂದ ನಿವೃತ್ತವಾಗಬೇಕಾಗಿತ್ತು; ಹಾಗಾಗದೆ ಅದು ವೃದ್ಧಿ ಪಡೆಯುತ್ತಾ ಹೋಯಿತು; ಅದರಿಂದ ಈ

ಪರಿತಾಪವೆಂದರೆ 'ಮೆಯ್ಯ ಕಾಮಜ್ವರ'ವೆಂದು ತಿಳಿಯಿತು—ಎಂದು ತಾತ್ಪರ್ಯ. ಇದು 'ಜ್ಞಾಪಕ ಹೇತು' ಎಂಬ ಅಲಂಕಾರಕ್ಕೆ ದೃಷ್ಟಾಂತವಾಗುವುದು. ಇದರಂತೆ 'ಅಭಾವ ಹೇತು' ಮೊದಲಾದ ಭೇದಗಳನ್ನು ಭಾವಿಸಿಕೊಳ್ಳಬೇಕು.

**೨೬. ವಿಭಾವನೆ**

ಕಾರಣಮುಮಱ[ಪಿ] ನಿಜಸಂ
ಸ್ಕಾರ ಗುಣಾತಿಶಯದೊಳ್ ತಗುಳ್ಚುವುದಕ್ಕುಂ
ಸಾರಂ ವಿಭಾವನಾಳಂ
ಕಾರಂ ಮತ್ತದಱ ಲಕ್ಷ್ಯಮಿಾ ತೆಱನಕ್ಕುಂ —(iii, 168)

—"ಕಾರಣವನ್ನುಳಿದು ನಿಜಸಂಸ್ಕಾರವಿಶೇಷದಿಂದಲೇ ಕಾರ್ಯವಾದಂತೆ ಬಣ್ಣಿಸಿದರೆ, 'ವಿಭಾವನೆ' ಎಂಬ ಅಲಂಕಾರವಾಗುವುದು."

ಕಾರಣವಿಲ್ಲದೆ ಕಾರ್ಯವಾಗುವುದು ಎಂದರೆ, ವಿಗತಭಾವನೆಯುಳ್ಳ ಉಕ್ತಿವೈಚಿತ್ರ್ಯವೇ ಸರಿ. ಅದರಿಂದ, 'ವಿಭಾವನೆ' ಎಂಬ ಹೆಸರು ಸಾರ್ಥಕವೇ ಆಗಿದೆ.

ಸಮಱಗೆಯಿಲ್ಲದ ಮಱಕಮು
ಮಮರ್ದಿರೆ ಕೈಗೆಯ್ಯದೊಪ್ಪುವಂದಮುಮವಳಾ
ನೆವಮಿಲ್ಲದ ದರಹಸಮುಂ
ಸಮದಾಲಸಲಲಿತಗಮನಮುಂ ಸೊಗಯಿಸುಗುಂ —(iii, 169)

ಇಲ್ಲಿ ನಾಯಿಕೆಯೊಬ್ಬಳ 'ಮಱಕ', 'ಅಂದ', ಮೊದಲಾದುವು 'ಸೊಗಯಿಸುಗುಂ' ಎಂದಿದೆ. ಆದರೆ ಅವುಗಳಿಗೆ ಕ್ರಮವಾಗಿ ಕಾರಣವಾಗತಕ್ಕ 'ಸಮಱಗೆ' (ವ್ಯಾಪ್ತಿ, ಪಸರಿಸುವಿಕೆ), ಅಲಂಕರಣಾದಿಗಳಿಲ್ಲ; ಅವಿಲ್ಲದೆಯೇ ಆ ಕಾರ್ಯಗಳಾಗಿವೆ, ಎಂದು ವರ್ಣಿತವಾಗಿದೆ. ಆದುದರಿಂದ, ಇದು 'ವಿಭಾವನೆ.'

**೨೭. ಲೇಶ**

ಗುಣದೊಳವಗುಣಮಪ್ಪುದಿನಿಸವ
ಗುಣಮುಂ ದೋಷದೊಳಮಿನಿಸು ಗುಣಮುಂ ತಂದಿ
ರ್ದೆಣಿಸುವುದು ಲೇಶಮೆಂಬುದು
ಗಣಿದದಿನಿಂತಕ್ಕುಮದಱ ಲಕ್ಷ್ಯವಿಭಾಗಂ —(iii, 170)

—"ಗುಣದೊಳಗೆ ಇನಿಸು (ಲೇಶ) ಅವಗುಣವನ್ನೂ, ದೋಷದೊಳಗೆ ಇನಿಸು (ಲೇಶ) ಗುಣವನ್ನೂ ತಂದು ಬಣ್ಣಿಸಿದರೆ 'ಲೇಶ' ಎಂಬ ಅಲಂಕಾರವಾಗುವುದು."

ಮಾನಿಯುಮುದಾರ ಚರಿತನು
ಮಾನತರಿಪುನಿಕರನುಂ ಮನಸ್ವಿಯುಮಂತಾ
ಮಾನಿಸರನಾರುಮಂ ಮನ
ಕೇನುಂ ಮುಟ್ಟಲ್ಲದಂತು ಬಗೆವುದು ದೋಷಂ —(iii 171)

—"ಮಾನಿಯೂ ಉದಾರಚರಿತನೂ ಅನತರಿಪುನಿಕರನೂ ಮನಸ್ವಿಯೂ ಆದವನು ಅಂತು ಆ ಮಾನಿಸರಾರನ್ನೂ, ದೋಷವು 'ಮನಕೇನುಂ ಮುಟ್ಟಲ್ಲದಂತು' (ಮನಂ ಮುಟ್ಟದಂತು) ಬಗೆವುದು"—ಎಂದು ಅನ್ವಯಾರ್ಥ.

'ಮಾನಿತ್ವಾದಿ ಗುಣಯುತರಾದವರಲ್ಲೂ ಸಹ, ಅನ್ಯಜನರೆಲ್ಲ ತಮ್ಮಿಂದ ಕೀಳ್ತರಗತಿಯವರೆಂಬ ದುಷ್ಟ ಭಾವನೆ ಸಾಮಾನ್ಯವಾಗಿರುತ್ತದೆ'—ಎಂಬುದು ಪದ್ಯದ ತಾತ್ಪರ್ಯ. ಆದರಿಂದ, ಇದು ಗುಣದೊಳಗಿನ ದೋಷಸೂಚನೆಯ 'ಲೇಶ'ಕ್ಕೆ ದೃಷ್ಟಾಂತ. ಈ ಪದ್ಯಕ್ಕಿಂತಲೇ ಮುಂದಿನ 'ಕುಲಜನುಮಲ್ಲಂ ನಣ್ಪಿನ ಬಲಮುಂ ತನಗಿಲ್ಲ' ಎಂಬ ಪದ್ಯದಲ್ಲಿ, ದೋಷಗಳೊಳಗೆ ಗುಣಸೂಚನೆಯಿದೆ. 'ವ್ಯಾಜಸ್ತುತಿ'ಗೂ ಈ ಅಲಂಕಾರಕ್ಕೂ ಇರುವ ಭೇದವು ವ್ಯಕ್ತವಾಗಿಯೇ ಇದೆ.

**೨೮. ಉದಾತ್ತ**

ಮಿಗೆ ಮನದ ಪೆಂಪುಮುಂ ಕೈ
ಮಿಗೆ ವಿಭವದ ಪೆಂಪುಮುಂ ವಿಶೇಷಿಸಿ ಪೇೞಲ್
ಬಗೆವುದುದಾತ್ತಾಲಂಕಾ
ರಗುಣೋದಯಮುದಱಿ[illegible] ಸದುದಾಹರಣಂ —(iii, 173)

—"(ವಿಶಿಷ್ಟ ವ್ಯಕ್ತಿಯ) ಮನದ ಮಹತ್ತ್ವ[illegible]ದಕ್ಕನುವಾದ ವಿಭವದ ಹಿರಿಮೆಯನ್ನು ವಿಶೇಷಿಸಿ ಹೇಳುವುದಕ್ಕೆ 'ಉದಾತ್ತಾಲಂಕಾರ' ಎಂದು ಹೆಸರು."

ಗ್ರಂಥಕಾರನು ಇದನ್ನು 'ಉದಾತ್ತಾಲಂಕಾರ ಗುಣೋದಯಂ' ಎಂದುದನ್ನು ಗಮನಿಸಿಕೊಳ್ಳಬೇಕು. 'ಗುಣೋದಯಂ' ಎಂಬುದೂ 'ಉದಾರ' ಎಂಬುದೂ ನೃಪತುಂಗನ ಬಿರುದುಗಳು ಎಂಬುದನ್ನು ಗಮನಿಸಿಕೊಂಡು, ಮುಂದೆ ಕೊಡುವ ದೃಷ್ಟಾಂತಗಳು ನೃಪತುಂಗನ ಉದಾರತೆಯನ್ನೇ ವಿಸ್ತರಿಸುತ್ತವೆಂಬುದನ್ನು ಮನನ ಮಾಡಿಕೊಳ್ಳಬೇಕು.

ಚಲದೆಡೆಗೆ ಪಿರಿದು ರಜಮುಂ
ನೆಲನುಂ ಪ್ರಿಯದೆಡೆಗೆ ಕಿಱಿದು ಕೊಳಲುಂ ಕುಡಲುಂ
ಚಲಮುಂ ಪ್ರಿಯಮುಂ ಬೞಿ ಸಮ
ಬಲಮಾಗಿರೆ ನೆಗೞ್ದ ಬಗೆಗೆ ಕಿಱಿದೇಂ ಪಿರಿದೇಂ —(iii, 174)

—'(ಉದಾತ್ತನಾರಾಯಣನ) ಚಲದೆಡೆಗೆ ರಜಮುಂ ಪಿರಿದು, ಪ್ರಿಯದೆಡೆಗೆ ನೆಲನುಂ ಕಿಱಿದು; (ಇಂತು) ಕೊಳಲುಂ ಕುಡಲುಂ (ಕ್ರಮವಾಗಿ) ಚಲಮುಂ ಪ್ರಿಯಮುಂ ಬೞಿ ಸಮಬಲಂ ಆಗಿರೆ ನೆಗೞ್ದ (ಆತನ) ಬಗೆಗೆ ಕಿಱಿದೇಂ ಪಿರಿದೇಂ'—ಇದು ಅನ್ವಯಾರ್ಥ.

ಇದರ ತಾತ್ಪರ್ಯವನ್ನು ಒಂದಿಷ್ಟು ಪರಾಂಬರಿಸಿಕೊಳ್ಳಬೇಕು. ನೃಪತುಂಗನ ವೀರೋದಾರತೆ ಇಲ್ಲಿ ವರ್ಣಿತವಾಗಿದೆ: 'ಹಗೆಗಳೊಡನೆ ಹೋರಾಡಿ ಗೆದ್ದುಕೊಳ್ಳುವಲ್ಲಿ

ಒಂದು ಭೂರೇಣುವಾದರೂ ಬಿಡಲಾರದಷ್ಟು ದೊಡ್ಡದೆಂದು ಅವನ 'ಚಲವು' ಬೋಧಿಸುತ್ತಿದೆ; ಪ್ರಜಾಪ್ರೇಮದಿಂದ ದಾನವೆಸಗುವಲ್ಲಿ ನೆಲವಾದರೂ 'ಕಿರಿದೆಂದು ಆತನ 'ಪ್ರಿಯ'ವು ಸೂಚಿಸುತ್ತಿದೆ. ಹೀಗೆ ಕೊಳ್ಳಲೂ ಕೊಡಲೂ ಚಲಬಲಗಳು ಸಮಬಲವಾಗಿದ್ದುವೆಂದ ಮೇಲೆ, ಆತನ ಪ್ರಖ್ಯಾತಿಯ ಅಂದಕ್ಕೆ ಕಿರಿದೇನು, ಹಿರಿದೇನು?'— ಇಲ್ಲಿ, ಅವನ ಮನದ ವಿಭವದ ಪೆಂಪುಗಳನ್ನು ಅಂದವಾಗಿ ವಿವೇಚಿಸಿದೆ. ಆದರೆ, 'ಭೂರೇಣುವನ್ನಾದರೂ ಬಿಡದಾತನು' ಎಂಬುದು ಉದಾರತಾ ಲಕ್ಷಣವೆ? ಎಂಬ ಪ್ರಶ್ನೆಯೇಳಬಹುದು. ದುಷ್ಟರಾದ ಹಗೆಗಳಿಗೂ ಕೈ ನೀಡಿದರೆ ಅವಿಚಾರದಿಂದ ಮುಂದೆ ಲೋಕಹಾನಿಯನ್ನೇ ಮಾಡಿದಂತಾಗುವುದು. ಅದರಿಂದ, ಅಂಥ ವೀರತೆ ಉದಾರತೆಗೆ ಪೋಷಕವಾದ ಅಂಗವೆಂದು ಗ್ರಂಥಕಾರನ ಭಾವನೆ. ಲೋಕಾನುಭವವಾದರೂ ಅದನ್ನೇ ಸಾರುವುದಲ್ಲವೆ?

ಈ ಪದ್ಯದಿಂದ ಮೊದಲ್ಗೊಂಡು, ಮುಂದೆ 'ಪರಚಕ್ರ ಭೂಪರಟ್ಟಿದ ಕರಿಗಳ್....' (ಪ. ೧೮೧) ಎಂಬ ಪದ್ಯದ ವರೆಗೂ ಈ 'ಉದಾತ್ತಾಲಂಕೃತಿ' ಭಿನ್ನ ಭಿನ್ನ ಕ್ರಮದಲ್ಲಿ ಎಂದರೆ, ಮನದ ವಿಭವದ ಪೆಂಪೂ ಅವೆರಡರ ಮಿಶ್ರಣದ ಪೆಂಪೂ ಅವುಗಳು ಸೈತಾಗಿ ಕೊಂಕಾಗಿ ಕಂಗೊಳಿಸುವ ಬಗೆಯೂ, ನೃಪತುಂಗನಿಗನುವಾಗಿಯೇ ವಿಸ್ತೃತವಾಗಿದೆ. ನಿದರ್ಶನಾಲಂಕಾರದ ಪದ್ಯಗಳಂತೆ, ಇವುಗಳಲ್ಲಿಯೂ ದಂಡ್ಯಾದಿಗಳ ಅನುಕರಣೆಯಿಲ್ಲ. 'ಉದಾತ್ತಾಲಂಕಾರ'ವು 'ಉದಾರ ಗುಣ'ವೇ ಅರಳಿ ಪರಿಮಳಿಸುವ ಸ್ವರೂಪ. 'ವಸ್ತುಗತ ಸ್ಥಿತಿ'ಯನ್ನು ಬಗೆದು, ಅದನ್ನೆ 'ಅಗ್ಗಳವಾಗಿ ಪೇೞ್ವುದು' 'ಉದಾರ ಗುಣ' ವಷ್ಟೆ. ಅಂಥ ವಸ್ತುವಾದ ಮಹಾವ್ಯಕ್ತಿಯ 'ಮನದ ಪೆಂಪುಮಂ ಕೈಮಿಗೆ ವಿಭವದ ಪೆಂಪುಮಂ ವಿಶೇಷಿಸಿ 'ಪೇೞಲ್ ಬಗೆವುದು' ಉದಾತ್ತಾಲಂಕೃತಿ. ಹೀಗೆ, 'ಉದಾರ' ಗುಣವು ಸಾಮಾನ್ಯ ರೂಪವಾದರೆ, 'ಉದಾತ್ತಾಲಂಕೃತಿ' ವಿಶೇಷ ರೂಪ. ಮೊದಲಿನದು ಕಿರುಮೊಗ್ಗೆಯಾದರೆ, ಮತ್ತಿನದು ಅರಳಿದ ಹೂ. ಇದನ್ನೇ 'ಉದಾತ್ತಾಲಂಕಾರ ಗುಣೋದಯಂ' ಎಂದು ಬಣ್ಣಿಸಿದ ವಚನವಿರಚನೆಯು 'ನೀತಿನಿರಂತರ ಕ್ರಮ'ಕ್ಕೆ ಅನುಗುಣವಾಗಿದೆ. ಹಿಂದೆಯೇ ಹೇಳಿರುವಂತೆ, 'ಗುಣೋದಯಂ' ಎಂಬುದು 'ಉದಾರ' ಎಂಬಂತೆ ನೃಪತುಂಗನ ಬಿರುದುಗಳೊಳಗೆ ಒಂದೆಂಬುದು ತಿಳಿದ ವಿಷಯವೇ ಸರಿ. ಅದಕ್ಕನುವಾಗಿ ನೃಪತುಂಗನ 'ಉದಾತ್ತ' ಗುಣವನ್ನೇ ವರ್ಣಿಸುವ ದೃಷ್ಟಾಂತ ಪದ್ಯಗಳಿವು.

'ಉದಾತ್ತಾಲಂಕಾರ ಗುಣೋದಯಂ' ಎಂಬ ಪದದಲ್ಲಿ 'ಉದಾರತಾರೂಪದ ಗುಣದ ಉದಯವಿದು' ಎಂಬ ಅರ್ಥವೂ ಮಿಂಚಿ ತೋರುತ್ತಿದೆ.

**೨೯. ಅಪಹ್ನುತಿ**

ಅತಿಶಯಿತ ವಸ್ತುವಿಷಯ
ಪ್ರತೀತಿಯಂ ಮುಚಿಸಿ ನಿಜಿಸಿ ಪೇೞ್ವುದು ಪೆಜತಂ
ಸತತಮಪಹ್ನುತಿ ಸದಳಂ
ಕೃತಿ.............................. —(iii, 182)

—"ಉಪಮೇಯ (ವಿಷಯ)ದ ಸ್ವರೂಪಗುಣಾದಿಗಳನ್ನೆಲ್ಲ ಮರಸಿ, ಬೇರೆ ಸ್ವರೂಪಾದಿಗಳನ್ನು ತೋರಿಸುವುದು 'ಅಪಹ್ನುತಿ' ಎಂಬ ಅಲಂಕಾರ."

'ಅಪಹ್ನುತಿ' ಎಂದರೆ, ಮರಸು ಎಂದರ್ಥ. ರೂಪಕಾಲಂಕಾರದಲ್ಲಿ, ವಿಷಯದಲ್ಲಿ ವಿಷಯಿಯ ಧರ್ಮವನ್ನು ಅಭೇದ ತಾದ್ರೂಪ್ಯಗಳಿಂದ ಆರೋಪಿಸಲಾಗುವುದು; ಇಲ್ಲಿ, ಅಲಂಕಾರ ದೃಷ್ಟಿಯ ಕಾರಣವನ್ನು ಕೊಟ್ಟು, ಅದಕ್ಕನುವಾಗಿ ವಿಷಯ ಧರ್ಮವನ್ನು ಅಡಗಿಸಿ, ಅಲ್ಲಿ ವಿಷಯಿ ಧರ್ಮವನ್ನು ನಿರ್ಧಾರವಾಗಿ ಆರೋಪಿಸಲಾಗುವುದು. 'ಅಪಹ್ನುತಿ'ಯೊಳಗೆ 'ಮೋಹಾಪೋಹ', 'ಧರ್ಮಾಪೋಹ', ಗುಣಾಪೋಹ' ಎಂಬ ಮೂರು ಭೇದಗಳನ್ನು ಗ್ರಂಥಕಾರನು ಕಲ್ಪಿಸಿದ್ದಾನೆ. ಇಲ್ಲಿ, 'ಮೋಹಾಪೋಹಕ್ಕೆ' ಕೊಟ್ಟಿರುವ ಉದಾಹರಣವನ್ನು ಮಾತ್ರ ಉದ್ಧರಿಸಿದೆ—

> ಅಮೃತಮಯ ಕಿರಣನೆಂಬುದು
> ಮಮರದು ಶಿಶಿರಾಂಶುವೆಂಬುದುಂ ಶಶಿಗೆಂದುಂ
> ಸಮನಿಸಿ ವಿಷಕಿರಣನುಮನ
> ಲಮರೀಚಿಯುಮೆಂದೆನಲ್ಕೆ ಮೋಹಾಪೋಹಂ —(iii, 183)

—'ಶಶಿಗೆ ಅಮೃತಮಯ ಕಿರಣ, ಶಿಶಿರಾಂಶು ಎಂಬ ಹೆಸರುಗಳು ಸಲ್ಲವು: ವಿಷಕಿರಣ, ಅನಲಮರೀಚಿ ಎಂಬವುಗಳು ಸಲುವಳಿಗೊಳ್ಳುವುವು'—ಇದು ಅನ್ವಯಾರ್ಥ. ವಿರಹಾವಸ್ಥೆಯಲ್ಲಿರುವ ವ್ಯಕ್ತಿಯೊಂದರ ಮಾತಿದು. ಇಲ್ಲಿ ಕವಿಯು ಚಂದ್ರನ ಧರ್ಮವನ್ನು ಮರಸಿ, ತದ್ವಿರುದ್ಧ ಧರ್ಮವನ್ನು ಆರೋಪಿಸುತ್ತಾನೆ.

## ೩೦. ರಸವತ್

> ನವವಿಧರಸಂಗಳಂ ಮನ
> ಕೆ ವರೆ ನಿರೂಪಿಸುವ ವಚನವಿರಚನೆ ರಸವ
> [ತ್ಸುವಿ]ಧಾಳಂಕಾರಂ . . . .
> . . . . . . . . . . . . . . . —[iii, 187]

—"ಒಂಬತ್ತು ಬಗೆಯ ರಸಗಳನ್ನು ಮನವಟ್ಟಾಗುವಂತೆ ನಿರೂಪಿಸುವ ವಚನ ವಿರಚನೆ 'ರಸವದಲಂಕೃತಿ."

ಈ ರಸವದಲಂಕಾರಗಳೆಂದರೆ ಒಂಬತ್ತು ಬಗೆಯ ರಸಗಳೆಂದು ಮೇಲಿನ ಲಕ್ಷಣಾಂಗದಿಂದಲೆ ಗೊತ್ತಾಗುತ್ತಿದೆ. ಗ್ರಂಥಕಾರನು ಈ ಅಲಂಕಾರಗಳನ್ನು ವೀರ, ಅದ್ಭುತ, ಕರುಣ, ಶೃಂಗಾರ, ಭಯಾನಕ, ರೌದ್ರ, ಬೀಭತ್ಸ, ಹಾಸ್ಯ, ಶಾಂತ— ಎಂದು ಕ್ರಮಗೊಳಿಸಿ ಉದಾಹರಣಗಳನ್ನು ಕೊಟ್ಟಿದ್ದಾನೆ.

ರಸವದಲಂಕಾರಗಳನ್ನು ಸಾಮಾನ್ಯವಾಗಿ ಎಲ್ಲ ಆಲಂಕಾರಿಕರೂ ಲಕ್ಷಿಸಿದ್ದಾರೆ. ಆದರೆ, ಈ ರಸಗಳನ್ನು ಅಲಂಕಾರಗಳೊಳಗೆ ಸೇರಿಸುವುದರ ಔಚಿತ್ಯವೇನು? ಸ್ಥಾಯಿ, ಸಾತ್ತ್ವಿಕ, (ಆಲಂಬನ, ಉದ್ದೀಪನ) ವಿಭಾವ, ಅನುಭಾವ, ಸಂಚಾರಿ

ಭಾವಗಳೆಂಬ ಭಾವಗಳಿಂದ ಪೋಷಿತವಾಗಿ ಕವಿ, ವಾಚಕ, ಶ್ರೋತೃ, ಪ್ರೇಕ್ಷಕರಲ್ಲಿ ಉದ್ಬುದ್ಧವಾಗುವ, ಅವರವರನ್ನು ಮೈಮರೆಯಿಸಿ ತಲ್ಲೀನರನ್ನಾಗಿ ಮಾಡುವ, ಶೃಂಗಾರಾದಿ ರಸಪ್ರಪಂಚವನ್ನು ಲಾಕ್ಷಣಿಕರು ಬೇರೆ ನಿರೂಪಿಸಿದ್ದಾರಷ್ಟೆ. ಕನ್ನಡ ದಲ್ಲಿಯೂ ತದ್ವಿಷಯಕವಾದ 'ರಸರತ್ನಾಕರ', 'ಶೃಂಗಾರ ರತ್ನಾಕರ' ಎಂಬ ಸ್ವತಂತ್ರ ಗ್ರಂಥಗಳು ಈ ಗ್ರಂಥಕಾರನಿಂದ ಎಷ್ಟೋ ಮತ್ತಾದರೂ ತಲೆದೋರಿವೆ. ಹೀಗೆ ಪುರಾತನಾಲಂಕಾರಿಕರು ಮಾತ್ರವೇ 'ರಸವದಲಂಕಾರ'ವೆಂದು ಹೇಳುತ್ತಿದ್ದರೆ, ಆಗಿನ ಕಾಲದಲ್ಲಿ ಮತ್ತಿನ ಕಾಲದಂತೆ ರಸವಿಚಾರವು ಅಷ್ಟು ಪ್ರಚಾರಕ್ಕೆ ಬಾರದುದೇ ಅದಕ್ಕೆ ಕಾರಣವೆಂದು ಭಾವಿಸಬಹುದಾಗಿತ್ತು. ಆದರೆ, ಪುರಾತನ ಲಾಕ್ಷಣಿಕನಾದ ಭರತನೇ ತನ್ನ 'ನಾಟ್ಯಶಾಸ್ತ್ರ'ದಲ್ಲಿ ರಸಭೇದಗಳನ್ನು ಮಾರ್ಗಾನುಸಾರವಾಗಿ ಮಾಡಿದ್ದನಲ್ಲವೆ? ಹಾಗೆಯೇ, ಎಷ್ಟೋ ಮತ್ತಿನ ಅಪ್ಪಯ್ಯ ದೀಕ್ಷಿತನೇ ಮೊದಲಾದ ತಾತ್ತ್ವಿಕ ವಿದ್ಯಾ ಪಾರಂಗತರಾದ ಲಾಕ್ಷಣಿಕರೂ ತಮ್ಮ 'ಕುವಲಯಾನಂದ' ಮುಂತಾದ ಗ್ರಂಥಗಳಲ್ಲಿ 'ರಸವದಲಂಕಾರ'ವನ್ನು ನಿರೂಪಿಸಿದ್ದಾರೆ. ಅದು ಯಾಕೆ? ಎಂಬುದನ್ನು ಒಂದಿಷ್ಟು ಪರ್ಯಾಲೋಚಿಸಬೇಕು.

ಸ್ಥಾಯಿ ಭಾವವು ವಿಭಾವಾನುಭಾವಾದಿಗಳೊಡನೆ ಪೋಷಣಗೊಂಡರೆ, ಅದು ರಸವೇ ಆಗುತ್ತಿದೆ. 'ರಸವದಲಂಕಾರ' ಎಂದರೆ, ಅಂಥ ಅವಸ್ಥೆಯನ್ನೊಂದಿದುದಲ್ಲ. ಅಲ್ಲಿ, 'ರಸ'ವೇ ಪ್ರಧಾನ. ಇಲ್ಲಿ 'ರಸವತ್'—ಎಂದರೆ ರಸಪ್ರಸಾರಕವಾದ—ಉಕ್ತಿ ವೈಚಿತ್ರ್ಯವೇ ಪ್ರಧಾನ. ಜೇನು, ಹಾಲು ಇತ್ಯಾದಿಗಳಂತೆ ರಸಗಳು; ಅವುಗಳನ್ನು ಇಷ್ಟಷ್ಟು ಬೆರಸಿ ಮಾಡಿದ ಪದಾರ್ಥಗಳಂತೆ ಈ ರಸವದಲಂಕಾರಗಳು. ಇವುಗಳ ರಸಕಲಿಕೆಗಳು ಹಿಂದೆ ವಿಸ್ತರಿಸಿದ 'ವಾಸ್ತವ', 'ಔಪಮ್ಯ', 'ಅತಿಶಯ', 'ಶ್ಲೇಷ' ಎಂಬವುಗಳಲ್ಲಿ, ಎಂದರೆ ಸಾರ್ವಾಲಂಕಾರಗಳಲ್ಲಿ, ಅಪ್ರಧಾನಗಳಾಗಿರುತ್ತವೆ; ರಸಗಳಲ್ಲಿ ಅಲಂಕಾರಗಳು ಪರಿಜನಕಲ್ಪಗಳಾಗಿರುತ್ತವೆ. ದೃಷ್ಟಾಂತಕ್ಕೆ ಗ್ರಂಥಕಾರನು ವೀರ ರಸಕ್ಕೆ ಕೊಟ್ಟಿರುವ ಲಕ್ಷ್ಯವನ್ನು ಪರಿಶೀಲಿಸಬಹುದು:

ರಾವಣನಂ ಕೊಂದು ಜಯ
ಶ್ರೀವಧುವಂ ತಾಳ್ದಿ ಮುಯ್ಪಿನೊಳ್ ವರಸೀತಾ
ದೇವತೆಯಂ ತರ್ಪನ್ನೆಗ
ಮೋವದೆ ಪುರುಷಬ್ರತೋಚಿತಂ ವೀರರಸಂ —[iii, 189]

—'ರಾವಣನಂ ಕೊಂದು ಜಯಶ್ರೀವಧುವಂ ಮುಯ್ಪಿನೊಳ್ (ಭುಜಶಿರದಲ್ಲಿ) ತಾಳ್ದಿ ವರಸೀತಾದೇವತೆಯಂ ತರ್ಪ ಅನ್ನೆಗಂ (ಶ್ರೀರಾಮನ) ಪುರುಷಬ್ರತೋಚಿತ ವೀರರಸಂ ಓವದೆ (ಎಡೆಬಿಡದೆ ನೆಲೆಗೊಂಡುದು)'—ಎಂದು ಅನ್ವಯ.

ಇಲ್ಲಿ, 'ರಾವಣನಂ ಕೊಂದು ಜಯಶ್ರೀವಧುವಂ ಮುಯ್ಪಿನೊಳ್ ತಾಳ್ದಿ ವರಸೀತಾ ದೇವತೆಯಂ ತರ್ಪ ಅನ್ನೆಗಂ' ಎಂಬ ಮಾತಿನಿಂದ ಶ್ರೀರಾಮನ 'ಪುರುಷಬ್ರತೋಚಿತ

ವಾದ ವೀರಶ್ರೀಯೇ ಸ್ವಭಾವಾಖ್ಯಾನ ರೂಪವಾಗಿ ವರ್ಣಿತವಾಗಿದೆ. ಇದರಲ್ಲಿ, 'ಭುಜಶಿರದಲ್ಲಿ ಜಯಶ್ರೀಯನ್ನು ಧರಿಸಿ' ಎಂದು ಕವಿಸಮಯಾನುಸಾರವಾಗಿ ಗೆಲುವನ್ನು ಶ್ರೀಯೊಡನೆ ಐಕ್ಯವಾಗಿ ಬಣ್ಣಿಸಿದೆಯಲ್ಲದೆ, ಸಾಕ್ಷಾತ್ತಾಗಿ ವರ್ಣಿಸಿಲ್ಲ. ಭುಜಬಲದಿಂದ ರಾವಣನನ್ನು ಗೆದ್ದುದರಿಂದ, ಹಾಗೆ ವರ್ಣಿಸಲೆಡೆಯಾಯಿತೆಂಬುದು ವಿದಿತವಾಗುತ್ತಿದೆ. ಹೀಗೆ ರಸಗಳನ್ನು ಅಲಂಕಾರಗಳನ್ನಾಗಿ ವರ್ಣಿಸಿದುದರಿಂದ, ಅವು 'ರಸವತ್' ಅಲಂಕಾರಗಳೆನ್ನಿಸಿದುವು.

ರಸವದಲಂಕಾರ ನಿರೂಪಣ ಸಂದರ್ಭದಲ್ಲಿ ನಮ್ಮ ಗ್ರಂಥಕಾರನೆಸಗಿದ ರಸಗಳ ಕ್ರಮಗಣನೆ ಇತರಾಲಂಕಾರಿಕರ ಕ್ರಮಕ್ಕಿಂತ ವ್ಯತ್ಯಸ್ತವಾಗಿದೆ. ಸಾಮಾನ್ಯವಾಗಿ, ಅದು ಶೃಂಗಾರದಿಂದ ಪ್ರಾರಂಭವಾಗಿ ಶಾಂತದಲ್ಲಿ ಕೊನೆಗೊಳ್ಳುವುದು ಪದ್ಧತಿಯಷ್ಟೆ; ಇಲ್ಲಿ ವೀರದಿಂದ ಮೊದಲ್ಗೊಂಡು ಶಾಂತದಲ್ಲಿ ಅಂತವಾಗಿದೆ. ಹಿಂದೆ, ದ್ವಿತೀಯ ಪರಿಚ್ಛೇದದಲ್ಲಿ (ಪದ್ಯಗಳು ೯೬–೯೮) ಯಾವ 'ಗುಣ'ದಿಂದ ಯಾವ 'ರಸ' ಪ್ರಕಟವಾಗಬೇಕೆಂಬುದನ್ನು ಸೂಚಿಸುವಲ್ಲಿ, ಉಳಿದ ರಸಗಳ ನಿರೂಪಣಕ್ರಮಕ್ಕೂ ಪ್ರಕೃತ ಗಣನಾಕ್ರಮಕ್ಕೂ ಒಂದಿಷ್ಟು ವ್ಯತ್ಯಾಸ ತೋರಿದರೂ, ಆದಿಯಲ್ಲಿ ವೀರರಸವೇ ನಿರೂಪಿತವಾಗಿದೆ. ಗ್ರಂಥಾಶ್ರಯದಾತನಾದ ನೃಪತುಂಗದೇವನು ವೀರನಾರಾಯಣನೆಂಬ ಬಿರುದಾಂಕಿತನಾಗಿದ್ದುದೇ ಅದಕ್ಕೆ ಕಾರಣವಾಗಿದ್ದಿರಬಹುದೆ?

## ೩೧. ಭಾವಿಕ[1]

ಭಾವಮೆಂಬುದಕ್ಕುಂ ಕವಿಗಳಾ
ಭಾವಿಸಿ ಮನದ ಬಗೆಯೊಂದಿದರ್ಥಂ
ಕೇವಳಮದಱೊಳಲಂಕೃತಿ
ಭಾವಿಕಮೆಂಬುದಕ್ಕುಂ ನೃಪತುಂಗದೇವ ಮತದಿಂ —[iii, 207]

—"ಕವಿಗಳ ಮನದ ಬಗೆಯನ್ನೊಂದಿದ ಅರ್ಥವೇ ಭಾವಿಕ."

ದಂಡಿಯು ಹೇಳಿರುವಂತೆ, 'ಭಾವ' ಎಂದರೆ ಕವಿಯ ಅಭಿಪ್ರಾಯ—'ಭಾವಃ ಕವೇರಭಿಪ್ರಾಯಃ.' ಕಾವ್ಯಪ್ರಬಂಧದಲ್ಲಿ ಕವಿಯ ಪ್ರತಿಭಾರೂಪಭಾವವು ಹಾಸುಹೊಕ್ಕಾಗಿ ವ್ಯಾಪಿಸಿಕೊಂಡಿರುವುದು; ಕಾವ್ಯದ ಎಲ್ಲೆಡೆಗಳಲ್ಲಿಯೂ ಮಿರುಗುವುದು. ಮಿಂಚಿನಂತಿರುವ ಆ ಮಿರುಕವೇ ಉಕ್ತಿವೈಚಿತ್ರ್ಯಗೊಂಡಲ್ಲಿ 'ಭಾವಿಕ' ಎನ್ನಿಸುವುದು. ಭಾವಿಕಾಲಂಕಾರಕ್ಕೆ ಗ್ರಂಥಕಾರನು ಉದಾಹರಣವನ್ನು ಕೊಟ್ಟಿಲ್ಲವೆಂಬುದೇನೋ ನಿಜ. ಆದರೆ, ಅಲ್ಲಲ್ಲಿ ಉದಾಹರಣವಾಗಿ ನೃಪತುಂಗವರ್ಣನ ಪರವಾದ ಅನೇಕ ಪದ್ಯಗಳನ್ನು ಕೊಟ್ಟಿದ್ದಾನಷ್ಟೆ; ಅವುಗಳಲ್ಲಿ ತೋರುವ, ಗ್ರಂಥಕಾರನಿಗೆ ತನ್ನೊಡೆಯನಲ್ಲಿರುವ, ಪೂಜ್ಯಭಾವನೆಯೇ 'ಭಾವಿಕ' ದೃಷ್ಟಾಂತವೆಂದು ಎಣಿಸಬೇಕು. 'ಉದಾತ್ತಾಲಂಕಾರ' ದೃಷ್ಟಾಂತವೊಂದನ್ನು ಪರಿಶೀಲಿಸಿರಿ—

---

[1] ಗ್ರಂಥಕಾರನು 'ಭಾವಿಕ', 'ಧ್ವನಿ' ಎಂಬ ಎರಡು ಅಲಂಕಾರಗಳನ್ನು ಗ್ರಂಥಾಂತ್ಯದಲ್ಲಿ ವಿವರಿಸಿದ್ದಾನೆ; ಅವುಗಳನ್ನು ಇಲ್ಲಿಯೇ ಸೇರಿಸಿಕೊಳ್ಳುವುದು ಉಚಿತವೆಂದು ನಮ್ಮ ಸೂಚನೆ.

ಪರಚಕ್ರಭೂಪರಟ್ಟಿದ
ಕರಿಗಳ್ ಬಿಡುತರ್ಪ ಮದದ ಪೊನಲಿಂದೆತ್ತಂ
ನರಲೋಕಚಂದ್ರನಾ ಮಂ
ದಿರದೊಳಗೊಳಗೆಲ್ಲ ಕಾಲಮುಂ ಕೆಸಱಿಕ್ಕುಂ —[iii, 181]

—'ಪರಚಕ್ರವರ್ತಿಗಳು ಕಾಣಿಕೆಯಾಗಿ ಕಳುಹುತ್ತಿರುವ ಮದಗಜಗಳ ದಾನಜಲದಿಂದ ತನ್ನ ಅರಮನೆಯೊಳಗೆ ಎತ್ತಲೂ, ಯಾವಾಗಲೂ, ಕೆಸರು ತಪ್ಪುವುದಿಲ್ಲವಾದರೂ ನರಲೋಕಚಂದ್ರನು (ನೃಪತುಂಗನು) ಅವರಲ್ಲಿ ಬೇಸರಗೊಳ್ಳುವುದಿಲ್ಲ'—ಎಂಬ ತಾತ್ಪರ್ಯದ ಈ ಪದ್ಯದೊಳಗೆ ಅವನ ವೀರೋದಾತ್ತತೆ ಹೊಳೆದು 'ಉದಾತ್ತಾಲಂಕಾರ'ವು ವ್ಯಕ್ತವಾಗುತ್ತಿದೆ ಎಂಬುದು ಸರಿ. ಮಾತ್ರನಲ್ಲ, ತನ್ನೊಡೆಯನಾದ ನೃಪತುಂಗನು ಪರಚಕ್ರಭೂಪರಿಗೆಲ್ಲ ಅಧಿಪತಿಯಾದ ಸಾರ್ವಭೌಮ ಚಕ್ರವರ್ತಿ ಎಂಬ ಕವಿಯ ಪೂಜ್ಯಭಾವನೆಯೂ ಮಿರುಗುತ್ತಿದೆಯಷ್ಟೆ. ಅದೇ 'ಭಾವಿಕ.'

## ೩೨. ಧ್ವನಿ

ಧ್ವನಿಯೆಂಬುದಳಂಕಾರಂ
ಧ್ವನಿಯಿಸುಗುಂ ಶಬ್ದದಿಂದಮರ್ಥದೆ ದೂಷ್ಯಂ
—[iii, 208] ಪೂರ್ವಾರ್ಧ

—"ಪ್ರಯೋಗಿಸಿದ ಶಬ್ದದ ಸ್ವರೂಪಕ್ರಮಾದಿಗಳಿಂದ ಅರ್ಥದೊಳಗೆ ದೂಷ್ಯವು ಧ್ವನಿಯಿಸಿದಲ್ಲಿ 'ಧ್ವನಿ' ಎಂಬ ಅಲಂಕಾರ."

ಹಿಂದೆ ಸೂಚಿಸಿದ ರಸವಿಚಾರದಂತೆ 'ಧ್ವನಿ' ಎಂಬ ಅರ್ಥವಿಚಾರವೂ ವ್ಯಾಪಕವಾದುದು. ಸಂಸ್ಕೃತದಲ್ಲಿ 'ಧ್ವನ್ಯಾಲೋಕ' ಮೊದಲಾದ ಗ್ರಂಥಗಳೂ ಕನ್ನಡದಲ್ಲಿ ಸಾಳ್ವಕವಿರಚಿತವಾದ 'ಶಾರದಾವಿಲಾಸ'ವೂ ಪ್ರಸಿದ್ಧವಾಗಿವೆ. ಇವುಗಳಲ್ಲಿ 'ಧ್ವನಿ' ವಿಚಾರವೂ ಅದಕ್ಕೆ ಆಧಾರವಾದ ವಾಚ್ಯಾರ್ಥ ಲಕ್ಷ್ಯಾರ್ಥ ವಿವೇಕವೂ ಸವಿಸ್ತರವಾಗಿವೆ. ನಮಗಿಲ್ಲಿ ಪ್ರಕೃತವಾಗಿರುವುದು, ಆ ಪೂರ್ಣ ಧ್ವನಿವಿಚಾರವಲ್ಲ; ಉಕ್ತಿವೈಚಿತ್ರ್ಯರೂಪವಾಗಿ ಹೊಳೆಯುವ 'ಧ್ವನಿ' ಇಲ್ಲವೆ 'ವ್ಯಂಗ್ಯ'ವೆಂಬ ಅರ್ಥಾಲಂಕಾರ. ಇದಕ್ಕೆ ಗ್ರಂಥಕಾರನು ಕೊಟ್ಟಿರುವ ದೃಷ್ಟಾಂತ ಹೀಗಿದೆ—

ನೆನೆವುದದನಿಂತು ಕಮಳದೊ
ಳನಿಮಿಷಯುಗಮೊಪ್ಪಿ ತೋರ್ಪುದಿಂತಿದು ಚೋದ್ಯಂ
—(iii, 208) ಉತ್ತರಾರ್ಧ

—'ನೆನೆವುದು ಇದಂ ಇಂತು—ಕಮಳದೊಳ್ ಅನಿಮಿಷಯುಗಂ ಒಪ್ಪಿ ತೋರ್ಪುದು; ಇಂತಿದು ಚೋದ್ಯಂ'—ಎಂದು ಅನ್ವಯ.

ಪದ್ಯಭಾಗವಿದು ಸುಂದರಿಯೊಬ್ಬಳ ಮುಖವನ್ನು ವರ್ಣಿಸುವುದು. 'ಕಮಲದಲ್ಲಿ ಎರಡು ಮೀನುಗಳು ಶೋಭಿಸುತ್ತವೆ; ಇದು ಆಶ್ಚರ್ಯ'—ಇದು ಪದ್ಯಭಾಗದ

ವಾಚ್ಯಾರ್ಥ. ಕಮಲಪುಷ್ಪವು ನೀರಲ್ಲಿರುವುದಷ್ಟೆ; ಅದರಿಂದ, ಮೀನುಗಳೆರಡು ಬಂದು ಅದರ ದಳವನ್ನೊಂದಿಜಿಡುವುದೇನೋ ಅಸಂಭವವಲ್ಲ. ಆದರೆ, 'ಒಪ್ಪಿ ತೋರ್ಪುದು' ಎಂಬ ಕ್ರಿಯಾಪದ ಭಾಗವು, ಆ ಮೀನುಗಳು ಪ್ರವಾಹದೊಳಗಿರುವುದಕ್ಕಿಂತಲೂ ಹೆಚ್ಚಿನ ಆನಂದದಿಂದ ಕಮಲದೊಳಗಿರುತ್ತವೆ ಎಂಬ ಅರ್ಥವನ್ನು ಕೊಡುವುದು. ಇದು ಅಸಂಭವವೆನ್ನೀಯುವೇ ಸರಿ. ಅದರಿಂದಲೇ 'ಇಂತಿದು ಚೋದ್ಯಂ' ಎನ್ನಬೇಕಾಯಿತು. ವಾಚ್ಯಾರ್ಥ ಅಲ್ಲವೆ ಅಭಿಧಾವೃತ್ತಿಯಿಂದ ಒದಗುವ ಅರ್ಥ ಇಷ್ಟೆ. ಅದರಿಂದ ಆ ವಾಕ್ಯದಿಂದೊದಗುವ ನಿಷ್ಕೃಷ್ಟಾರ್ಥವು ವ್ಯಕ್ತವಾದಂತಾಗುವುದಿಲ್ಲ. ಅದರಿಂದ ಬೇರೆ ಮಾರ್ಗವನ್ನು ಹುಡುಕಬೇಕಾಯಿತು. ಕವಿ 'ಮೀನದ್ವಯ' ಇತ್ಯಾದಿಯಾಗಿ ಹೇಳಿಲ್ಲ— ಹೇಳಿರುವುದು 'ಅನಿಮಿಷಯುಗಂ' ಎಂದು. 'ಅನಿಮಿಷಯುಗ' ಎಂದರೆ 'ರೆಪ್ಪೆಯಿಲ್ಲದ ಯುಗ್ಮ.' ಅಂಥ 'ಯುಗ್ಮ'ವೆಂದರೆ, 'ಮೀನದ್ವಯ'ವೂ ಆಗಬಹುದು; ಅಮರ (ಅನಿಮಿಷ) ದ್ವಯವೂ ಆಗಬಹುದು; ಅಥವಾ ಸ್ವಲ್ಪ ಸಮಯಕ್ಕಾದರೂ ನಿಮೇಷ ಸಂಚಾರವನ್ನುಳಿದ 'ನಯನದ್ವಯ'ವೂ ಆಗಬಹುದು. ಮೊದಲಿನ ಅರ್ಥವು ಅಸಂಭವ ವೆಂದು ಹಿಂದೆಯೇ ಸೂಚಿಸಿದೆವಷ್ಟೆ. ಎರಡನೆಯ 'ಅಮರಯುಗ್ಮವು ಕಮಲದೊಳಗಿರು ವುದು' ಎಂಬುದು ಅದಕ್ಕಿಂತಲೂ ಹೆಚ್ಚು ಅಸಂಭವ. ಅದರಿಂದ 'ಕಮಲದೊಳ್' ಎಂಬು ದಕ್ಕೆ 'ಕಮಲಸಮಾನವಾದ' ಮುಖದಲ್ಲಿ ಎಂದೂ, 'ಅನಿಮಿಷಯುಗಂ' ಎಂಬುದಕ್ಕೆ 'ಮೀನದ್ವಯ ಸಮಾನವಾದ ನಯನ ಯುಗ್ಮ'ವೆಂದೂ ಅರ್ಥ ಮಾಡಿದರೆ ವಾಕ್ಯಾರ್ಥವು ರಮಣೀಯವಾಗುವುದು. ಈ ಅರ್ಥವು ವಾಚ್ಯವೃತ್ತಿಯಿಂದೊದಗದೆ ವ್ಯಂಜನಾವೃತ್ತಿ ಮಾತ್ರದಿಂದಲೇ ಒದಗುವುದರಿಂದ, ಇದು 'ಧ್ವನಿ', ಆದರೆ ಔಪಮ್ಯಸೂಚಕವಾದ ಉಕ್ತಿ ವೈಚಿತ್ರ್ಯವೇ ಪ್ರಧಾನವಾದುದರಿಂದ, ಇದು 'ಧ್ವನ್ಯಲಂಕಾರ.'

**೩೩. ಊರ್ಜಸ್ವಿ**

ಆರೂಢ ನಿಜ ಮನೋಹಂ
ಕಾರೋತ್ಕರ್ಷ ಪ್ರಕಾಶಮೂರ್ಜಿತ ಸದಳಂ
ಕಾರಂ . . . . . . .
. . . . . . . . . . . . . . —(iii, 198)

—"ಅತಿವೀರ ವ್ಯಕ್ತಿಯ ಏರಿದ ಮನಸ್ಸಿನ ಅಹಂಕಾರೋತ್ಕರ್ಷವನ್ನು ಪ್ರಕಾಶ ಗೊಳಿಸುವ ಮಾತಿನ ಬಗೆ 'ಊರ್ಜಸ್ವಿ' (ಊರ್ಜಿತ)"

ಇದರ ದೃಷ್ಟಾಂತ ಹೀಗೆ—

ಕೊಲ್ಲೆಂ ಬಿಸುಡಾಯುಧಮಂ
ಪುಲ್ಲಂ ಕರ್ಚೆಱು ಪುತ್ತನಡಿಗೆಱಗೆನ್ನಾ
ನಿಲ್ಲದೆ ತೊಲಗಿದಿರಿಂದಂ
ತಲ್ಲೊಡೆಱ್ದಾರ್ಪುರ್ ಕೈಮಗೆಯರ್ ನೀನೀಗಳ್ —(iii, 199)

—'ಆಯುಧವನ್ನು ಬಿಸುಡು, ಹುಲ್ಲು ಕಚ್ಚು, ಹುತ್ತವನ್ನೇರು, (ನನ್ನ) ಅಡಿಗೆರಗು, (ನನ್ನ) ಇದಿರಿಂದ ತೊಲಗು—ಹಾಗಿದ್ದರೆ ಕೊಲ್ಲೆನು; ನೀನು ಹಾಗೆ ಸೋಲನ್ನೊಪ್ಪಿ ಕೊಳ್ಳದಿದ್ದರೆ (ಅಂತಲ್ಲದೊಡೆ), ನೀನೀಗಲೆ ಎದ್ದು ಆರ್ಭಟಿಸಿ (ಆರ್ದು), ಆಯುಧ ವನ್ನು ಪಯೋಗಿಸು.'

ಇದಿರಾದ ಹಗೆಯನ್ನು ಕುರಿತಾಡುವ ಮಹಾವೀರನಾದ ನಾಯಕನ (ನೃಪತುಂಗನ ?) ಅಭಿಮಾನೋತ್ಕರ್ಷದ ಮಾತಿದು.

### ೩೪. ವ್ಯಾವೃತ್ತಿ

ಮಗುಳ್ದುಂ [1][ಮುನ್ನಿ]ನ ಮಾತಂ
ನೆಗಳ್ದಿರೆ ಪೇಳ್ದಗಳಕ್ಕುಮಾ ವ್ಯಾವೃತ್ತಿ
ಸ್ವಗತಾಳಂಕಾರಂ . . . . . .
. . . . . . . . . . . . . . . . —(iii, 200)

—"ಹಿಂದೆ ಸೂಚಿಸಿದ ಮಾತನ್ನು ಮತ್ತೊಮ್ಮೆ ಎತ್ತಿ ಹೇಳಿ ನುಡಿಯನ್ನು ಮುಂಬರಿಯಿ ಸಿದರೆ, 'ವ್ಯಾವೃತ್ತಿ' ಎಂಬ ಅಲಂಕಾರವಾಗುವುದು."

'ವ್ಯಾವೃತ್ತಿ' ಎಂದರೆ, 'ವಿಶೇಷವಾದ ಆವೃತ್ತಿ.' ಇದು ಪುನರುಕ್ತಿದೋಷಕ್ಕೊಳ ಗಾಗುವುದು ಎಂದೆಣಿಸಲಾಗದು. ಇಲ್ಲಿ, ಹಿಂದಿನ ಮಾತು ಮುಂದಿನದಕ್ಕೆ ಕಾರಣ ವಾಗುವುದರಿಂದ, 'ವ್ಯಾವೃತ್ತಿ' ಎಂದು ಹೇಳಬೇಕಾಯಿತು. ನವೀನಾಲಂಕಾರಿಕರು ಇದನ್ನೇ 'ಕಾರಣಮಾಲಾಲಂಕಾರ' ಎನ್ನುತ್ತಾರೆ.

ವಿರಹಂ ಪರಿತಾಪಮನಾ
ಪರಿತಾಪಮುಮಳಿಪನಳಿಪು[ಮಾ] ವಲ್ಲಭನೊಳ್
[2][ನೆರೆ]ದಿರ್ಪ ಬಗೆಯನಾ ನೆರೆ
ದಿರವುಂ ಸುರತಾನುರಾಗಮಂ ಪೆರ್ಚಿಸುಗುಂ —(iii, 201)

—'ವಿರಹವು ಪರಿತಾಪವನ್ನು, ಆ ಪರಿತಾಪವು ಅಳಿಪನ್ನು (ಪ್ರೇಮವನ್ನು), ಅಳಿಪು ಆ ವಲ್ಲಭನಲ್ಲಿ ನೆರೆದಿರುವ ಬಗೆಯನ್ನು, ಆ ನೆರೆದ ಇರವು ಸುರತಾನುರಾಗವನ್ನು ಹೆಚ್ಚಿಸುವುದು.' ಇಲ್ಲಿ ಪ್ರತಿಯೊಂದು 'ಮಾತೂ' ಮುಂದಿನದಕ್ಕೆ ಕಾರಣವಾಗಿರು ವುದು ವ್ಯಕ್ತವಾಗಿದೆ.

---

[1] ಈ ಪದವು ಡಾ. ಪಾಠಕರ ಪ್ರತಿಯಣ 'ಮ....ನ' ಎಂದು ಅಪೂರ್ಣವಾಗಿದೆ; ಮದರಾಸು ಪ್ರತಿಯಲ್ಲಿ ಮ(ತ್ತಿ)ನ ಎಂದಿದೆ. ಆದರೆ ಇದು 'ಮುನ್ನಿನ' ಎಂದಿದ್ದರೆ ಉಚಿತವೆಂದು ತೋರುವುದು.

[2] ಡಾ. ಪಾಠಕರ ಪ್ರತಿಯಲ್ಲಿ 'ಬಗೆದಿರ್ಪ' ಎಂಬ ಪಾಠವಿದೆ. 'ನೆರೆದಿರ್ಪ' ಎಂದು ಮದರಾಸು ಪ್ರತಿಯಲ್ಲಿರುವ ಪಾಠವೇ ಉಚಿತವೆಂದು ನಮ್ಮ ಸೂಚನೆ.

## ೩೫. ಪ್ರಿಯತರ

ಪ್ರಿಯಕುಶಲಪೂರ್ವಕೋಚಿತ
ನಯವಿನಯೋದಾರ ರುಚಿರವಚನಪ್ರಾಯಂ
ಪ್ರಿಯತರಮೆಂಬುದು ಸಕಳ
ಕ್ರಿಯಾನುಗಮಿತಾರ್ಥಂ . . . . . . . —(iii, 203)

—"ಪ್ರಿಯ ಕುಶಲ ಪೂರ್ವಕೋಚಿತವಾದ, ನಯವಿನಯೋದಾರ ರುಚಿರವಚನ ಸಮ್ಮಿಳಿತವೆನಿಸಿದ, ಸಕಲ ಕ್ರಿಯಾನುಸಾರವಾದ ವಾಗ್ವೃತ್ತಿಗೆ, 'ಪ್ರಿಯತರ' ಎಂದು ಹೆಸರು."

ಗುರುಜನದ ಪರಕೆ [ಯುಂ][1] ಬಂ
ಧುರಪುಣ್ಯಫಳಾನುಬಂಧ [ಮುಂ] ನೆರೆದೆನ್ನೊಳ್
ಪರಮಾನುಭಾವ ಭರ [ಮುಂ]
ದೊರೆಕೊಂಡುವದಿಂದು ಬರವಿನೊಳ್ ನಿಮ್ಮಡಿಯಾ —(iii, 204)

—'ಇಂದು ನಿಮ್ಮಡಿಯಾ ಬರವಿನೊಳ್ ಗುರುಜನದ ಪರಕೆಯುಂ ಬಂಧುರಪುಣ್ಯ ಫಳಾನುಬಂಧಮುಂ ಪರಮಾನುಭಾವಭರಮುಂ ನೆರೆದು ಎನ್ನೊಳ್ ದೊರೆ ಕೊಂಡುವು'—ಎಂದು ಅನ್ವಯ.

ಮನೆಗೆ ಬಂದ ಪೂಜ್ಯಾತಿಥಿಯನ್ನು ಕುರಿತು ಮಾನ್ಯ ಗೃಹಸ್ಥನಾದ ನೃಪತುಂಗ ರಾಜನೇ ಆಡಿ ಪೂಜಿಸಿದ ಮಾತಿದು. ಇದು ನೃಪತುಂಗನೇ ಆಡಿದುದೆಂಬುದು, ಮುಂದಿನ 'ಆಶೀರಲಂಕಾರ' ಲಕ್ಷ್ಯವಾಗಿ ಆ ಪೂಜ್ಯಾತಿಥಿಯು ಕೊಟ್ಟ ಉತ್ತರದಿಂದ ವ್ಯಕ್ತವಾಗುವುದು.

## ೩೬. ಆಶೀರಲಂಕಾರ

ದೊರೆಕೊಂಡು ಮನದ ಬಗೆಯಂ
ಪಿರಿದಾಗಿರೆ ಪಿರಿಯರೊಸಗೆಯಂ ಬಗೆದಂದುಂ
ಪರಮಾಶೀರರ್ಥಾಳಿಂ
ಕರಣಾಂತರಮುದಱ ಲಕ್ಷ್ಯಮೀ ತೆಱನಕ್ಕುಂ —(iii, 205)

—"ಗೃಹಸ್ಥನ ಮನದ ಬಗೆಯನ್ನರಿತ ಹಿರಿಯರು ಆನಂದದಿಂದ ವಾಕ್ಪೂರ್ವಕವಾಗಿ ನೀಡುವ ಹರಕೆಗೆ 'ಆಶೀರಲಂಕಾರ' ಎಂಬ ಹೆಸರು." ಅದರ ಲಕ್ಷ್ಯ ಹೀಗೆ:

ಆಯುಂ ಶ್ರೀಯುಂ ವಿಜಯಮು
ಮಾಯತಿಯುಂ ನೃಪತಿ ನಿನಗೆ ನಿಜಸಂತತಿಯುಂ
ನ್ಯಾಯದೆ ಪೆರ್ಚುವುದಕ್ಕೀ
ತೋಯಧಿ ಧರಣೀಧರಾಧರ ಸ್ಥಿತಿ ವರೆಗಂ —(iii, 206)

---

[1] ಇಲ್ಲಿ, 'ಪರಕೆಯಂ', '........ಬಂಧಮಂ', '........ಭರಮಂ' ಎಂದು ಎರಡು ಪ್ರತಿಗಳಲ್ಲೂ ದ್ವಿತೀಯಾ ವಿಭಕ್ತಿಯಿದೆ. ಪಾಠಶುದ್ಧಿಯ ದೃಷ್ಟಿಯಿಂದ ಪ್ರಥಮಾ ವಿಭಕ್ತಿಯಿರುವುದೇ ಉಚಿತವೆಂದು ನಮ್ಮ ಸೂಚನೆ. ಅದರಿಂದ, ಕಂಸದೊಳಗೆ ಈ ಮಾರ್ಪಾಡನ್ನು ಸೂಚಿಸಿದ್ದೇವೆ.

ಇಲ್ಲಿ ಯಥಾಸಂಖ್ಯಬದ್ಧವಾಗಿ 'ಆಶೀರಲಂಕೃತಿ' ಹೊಳೆಯುವುದೆಂದು ತೋರುತ್ತದೆ.

—'ನೃಪತಿಯೆ, ನಿನಗೆ ತೋಯಧಿ ಇರುವ ವರೆಗೆ ಆಯುಸ್ಸೂ, ಧರಣಿ ಇರುವ ವರೆಗೆ ಶ್ರೀಯೂ, ಧರಾಧರ (ಕುಲ ಪರ್ವತ) ಗಳಿರುವ ವರೆಗೆ ವಿಜಯವೂ ಇವೆಲ್ಲವು (ಎಂದರೆ, ತೋಯಧಿ ಧರಣಿ ಧರಾಧರಗಳ) ಸ್ಥಿತಿಯ ವರೆಗೆ ಆಯತಿಯೂ ನಿಜ ಸಂತತಿಯೂ ನ್ಯಾಯಧರ್ಮಾನುಗುಣವಾಗಿ ಹೆಚ್ಚುತ್ತಾ ಇರಲಿ.'

ಇದು ತನ್ನ ಅರಮನೆಗೆ ಆಗತನಾದ ಪೂಜ್ಯಾತಿಥಿಯನ್ನು ಹಿಂದಿನ 'ಪ್ರಿಯತರಾಲಂಕಾರ' ಲಕ್ಷ್ಯ ಪದ್ಯದಲ್ಲಿ ತೋರುವಂತೆ 'ಪ್ರಿಯಕುಶಲ ಪೂರ್ವಕ'ವಾಗಿ ಮನ್ನಿಸಿದ 'ನೃಪತಿ'ಗೆ, ಎಂದರೆ ನೃಪತುಂಗಚಕ್ರವರ್ತಿಗೆ, ಆ ಅತಿಥಿ ಮಹಾಶಯನು ಮಾಡುವ ಆಶೀರ್ವಾದವೆಂದು ಈಗ ವಿಶದವಾಗುತ್ತಿದೆ.

'ಪ್ರಿಯತರ—ಆಶೀರಲಂಕಾರ'ಗಳ ದೃಷ್ಟಾಂತ ಪದ್ಯಗಳನ್ನು 'ಕವಿರಾಜಮಾರ್ಗಕಾರನಾರು?' ಎಂಬ ಪ್ರಕರಣದ ಅಂತ್ಯದಲ್ಲಿ ಉಲ್ಲೇಖಿಸಿ, ಮೊದಲನೆಯ ಪದ್ಯವು ನೃಪತುಂಗನ ಕೃತಜ್ಞತಾ ಸಮರ್ಪಣೆಯಾಗಿರುವಂತೆಯೂ ಮತ್ತಿನದು ನೃಪತುಂಗನಿಗೆ ಗ್ರಂಥಕಾರನ ಆಶೀರ್ವಾದವಾಗಿರುವಂತೆಯೂ ಧ್ವನಿತವಾಗುವುದೆಂದು ಸೂಚಿಸಿರುತ್ತೇವಷ್ಟೆ. ಆ ಸೂಚನೆಯನ್ನು ಇಲ್ಲಿ ಮತ್ತೊಮ್ಮೆ ಪರಾಂಬರಿಸಿಕೊಳ್ಳಬೇಕು. 'ಆಶೀರಲಂಕಾರ' ದೃಷ್ಟಾಂತದಲ್ಲಿ, ಆಶೀರ್ವದಿಸಿದ ಆ ಪೂಜ್ಯಾತಿಥಿ ಯಾರೆಂದು ವ್ಯಕ್ತವಾಗಿಲ್ಲ. ಪ್ರಿಯತರಾಲಂಕಾರ ಲಕ್ಷ್ಯದಲ್ಲಿ, ಆ ಅತಿಥಿಯು ಅರಸನಿಗೆ ಗುರುಕಲ್ಪನಾದವನು ಎಂಬುದು ಸೂಚಿತವಾಗುತ್ತಿದೆ. ಅದರೊಳಗೆ ಅರಸನು (ಹಿಂದೆಯೇ) 'ಗುರುಜನದ ಪರಕೆಯುಂ ಬಂಧುರ ಪುಣ್ಯ ಫಳಾನುಬಂಧಮುಂ ನೆರೆದ ಎನ್ನೊಳ್ ಇಂದು ನಿಮ್ಮಡಿಯಾ ಬರವಿನೊಳ್ ಪರಮಾನುಭಾವಭರಮುಂ ದೊರೆಕೊಂಡುವು'—ಎನ್ನುತ್ತಾನಷ್ಟೆ. ಈ ಸಂದರ್ಭದಲ್ಲಿ, ಗ್ರಂಥಕಾರನು ತನ್ನನ್ನು 'ಪರಮಾನುಭಾವಂ ಅಭಿಮಾನಿ ವಿನೋದಶೀಲಂ (ಪ. ೨೨೮) ಎಂದು ಮೊದಲಾಗಿ ವಿಶೇಷಿಸಿರುವುದನ್ನು ಅವಧರಿಸಿಕೊಳ್ಳಬೇಕು. ಇದರಿಂದ, 'ಪರಮಾನುಭಾವ' ಎಂಬ ಬಿರುದು ಗ್ರಂಥಕಾರನಿಗೂ ಇದ್ದಂತೆ ತೋರುವುದು. ಜೈನರು 'ಪರಮ' ಎಂಬ ಪದವನ್ನು ತೀರ್ಥಂಕರರ ಪರವಾಗಿಯೂ ಜಿನನ ಪರವಾಗಿಯೂ ಹೆಚ್ಚಾಗಿ ಪ್ರಯೋಗಿಸುತ್ತಾರೆ; ಇತರ ಸನಾತನಿಗಳಾದ ತಾತ್ತ್ವಿಕರೂ ಅದನ್ನು 'ಪರಮಾತ್ಮ', 'ಲೋಕಾತೀತ' ಎಂಬ ಅರ್ಥದಲ್ಲಿ ಬಳಸುತ್ತಾರೆ. 'ಪರಮ ವಿವೇಚನೆಯ ಲಕ್ಷಣವುಳ್ಳವನು' ಎಂಬ ತಾತ್ಪರ್ಯಾರ್ಥವೂ ಆ ಪದದಲ್ಲಿ ಹೊಳೆಯುವುದು. ಆ ಲಕ್ಷಣವು ಗ್ರಂಥಕಾರನಲ್ಲಿ ಹೇಗೋ ಹಾಗೆ ನೃಪತುಂಗನಲ್ಲಿಯೂ ವ್ಯಕ್ತವಾಗಿರುವುದನ್ನು ಕಂಡಿರುತ್ತೇವೆ. 'ನೀತಿನಿರಂತರ', 'ಗುಣೋದಯ', ಇತ್ಯಾದಿ ಬಿರುದುಗಳು ಅರಸನಿಂದ ಗ್ರಂಥಕಾರನಿಗೆ ಒದಗಿದುದಾಗಿರಬೇಕೆಂದು ಹಿಂದೆಯೇ ವಿವೇಚಿಸಿದ್ದೇವಷ್ಟೆ. ಇಲ್ಲಿ 'ನಿಮ್ಮಡಿಯಾ ಬರವಿನೊಳ್ ಪರಮಾನುಭಾವ ಭರಮುಂ ದೊರೆಕೊಂಡು' ಎಂಬ ಸ್ಫುಟೋಕ್ತಿಯಿಂದ, ಈ ಬಿರುದು ಗ್ರಂಥಕಾರನಿಂದ ಒದಗಿದು

ದಾಗಿರಬೇಕೆಂದು ಊಹಿಸಬಹುದು. ಈ ಕಾರಣಗಳಿಂದ ಆ ಅತಿಥಿಯೆಂದರೆ, ಪ್ರಕೃತ ಗ್ರಂಥಕಾರನೇ ಆಗಿರಬೇಕೆಂದು ಸಿದ್ಧವಾಗುತ್ತಿದೆ.

ಆದರೆ, ಆಸ್ಥಾನದ ಮಹಾಸಭೆಯೊಳಗೆ ಪ್ರಮುಖ ಸದಸ್ಯನೆನ್ನಿಸಿದ 'ವಾಗಧಿಪ'ನಾದ ಗ್ರಂಥಕಾರನು ಅತಿಥಿಯಾಗುವುದು ಹೇಗೆ? ಎಂದು ಆಕ್ಷೇಪಿಸಬೇಕಾಗಿಲ್ಲ. ಗ್ರಂಥಾದಿಯಲ್ಲಿ 'ಏಕೆ ವಿವೇಕ ಬೃಹಸ್ಪತಿಯ ನಗರಮಂ ಪುಗುತರ್ಪಂ' ಎಂದು ತಾನು ಮಾನ್ಯಖೇಟ ರಾಜಧಾನಿಯನ್ನು ಪ್ರವೇಶಿಸಿದುದನ್ನು ಸಮರ್ಥಿಸುತ್ತಾ ಗ್ರಂಥಕಾರನು ತನ್ನನ್ನು ನೂತನಾತಿಥಿಯನ್ನಾಗಿ ಹೊಳೆಯಿಸಿದುದನ್ನು ಮತ್ತೊಮ್ಮೆ ಪರಿಭಾವಿಸಬೇಕು. ಈ ಪ್ರಿಯತರ ಆಶೀರ್ವಚನಗಳು ಆಡುಮಾತಿನ ಉಪಚಾರ ಆಶೀರ್ವಾದಗಳಲ್ಲ— ಅಲಂಕಾರಿಕೋಕ್ತಿಗಳು, ಎಂಬುದನ್ನೂ ಮನನ ಮಾಡಿಕೊಳ್ಳಬೇಕು. ಮಹಾಸಭಾ ಸದಸ್ಯರೊಳಗೆಲ್ಲ ಬಹುಶಃ ಹೊಸಬನಾಗಿದ್ದು ತನ್ನ ವಿದ್ವತ್ತಾ ಸಂಸ್ಕೃತಿ ಪ್ರಭಾವದಿಂದ ಮೇಲ್ಮೆಗೇರಿದ ಗ್ರಂಥಕಾರನು ನೃಪತುಂಗ ಮಹಾಸಭೆಗೆ ಪ್ರವೇಶಿಸಿದುದನ್ನೂ ಆಗ ಸಭಾಧ್ಯಕ್ಷನಾದ ನೃಪತಿಯ ಆದರೋಪಚಾರವನ್ನು, ಅದಕ್ಕೆ ಪ್ರತಿಯಾಗಿ ತನ್ನ ಆಶೀರ್ವಾದವನ್ನು ಸೂಚಿಸಿದುದನ್ನೂ ಗ್ರಾಂಥಿಕವಾಗಿ ಕಾಣಿಸುವ, ಕ್ರಮವಾಗಿ ವ್ಯಕ್ತೀಕರಿಸುವ ಸ್ಥಾನಗಳೆಂದರೆ ಗ್ರಂಥದ ಆದ್ಯಂತ ಭಾಗಗಳೇ ಸರಿ. ಆದುದರಿಂದ, ಆ ಆದಿಯಲ್ಲಿ ತನ್ನ ಪ್ರವೇಶವನ್ನು ಸೂಚಿಸಿ, ಈ ಅಂತ್ಯದಲ್ಲಿ ರಾಜಪೂಜೆಯನ್ನು ಮತ್ತು ತನ್ನ ಆಶೀರ್ವಾದವನ್ನು ಪ್ರಿಯತರ ಆಶೀರಲಂಕಾರಗಳ ಉದಾಹರಣಪೂರ್ವಕವಾಗಿ ಗ್ರಂಥಕಾರನು ನಿರ್ದೇಶಿಸಿದ್ದಾನೆಂದು ಭಾವಿಸಬೇಕು.

* * *

ಪ್ರಮುಖವಾದ ಸ್ಫೈತು ಕೊಂಕುಗಳಿಂದ ಹೊಳೆವ ಕನ್ನಡದ ಎರಡು ಮಾರ್ಗಗಳನ್ನು ವ್ಯಕ್ತವಾಗುವಂತೆ ಕಾಣಿಸುವುದೇ 'ಕವಿರಾಜಮಾರ್ಗ'ಕಾರನ ಹೆಗ್ಗುರಿ. ಅದಕ್ಕೆ ಬೇಕಾದುವೆಂದು ತೋರಿದ ಎಲ್ಲ ಸಾಧನಗಳನ್ನೂ ಗ್ರಂಥಕಾರನು ಪರಿಚ್ಛೇದಿಸಿ ಕಾಣಿಸಿರುತ್ತಾನೆ. ಆ ಸಾಧನಗಳೊಳಗೆ ಶಬ್ದದೋಷ, ಶಬ್ದಗುಣ, ಪದರಚನಾ ದೋಷ, ಪದರಚನಾಗುಣ, ಅರ್ಥಯೋಜನಾದೋಷ, ಅರ್ಥಯೋಜನಾ ಗುಣ, ಶಬ್ದಾಲಂಕಾರ ದೋಷ, ಶಬ್ದಾಲಂಕಾರ ಗುಣ, ಅರ್ಥಾಲಂಕಾರ ದೋಷ, ಅರ್ಥಾಲಂಕಾರ ಗುಣ, ದುಷ್ಕರ ಕಾವ್ಯ, ಸುಕರಕಾವ್ಯ—ಇವುಗಳೆಲ್ಲವನ್ನೂ ವಿಸ್ತರಿಸಿ, ರಸಭಾವಧ್ವನಿಗಳನ್ನೂ ಅಲಂಕಾರಾಂಗಗಳಾಗಿ ಸೂಚಿಸಿರುತ್ತಾನೆ. ಇವುಗಳಿಂದ ಮಾರ್ಗದ್ವಯ ವಿಭೇದವೆಂದರೆ ಏನು, ಹೇಗೆ, ಎಂಬುದು ಚತುರ ವಿದ್ಯಾರ್ಥಿಗಳಿಗೆ ಮಂದಟ್ಟಾಗದಿರದು. ಆದರೂ ವಿದ್ವಚ್ಛಿರೋಮಣಿಯಾದ 'ನೀತಿನಿರಂತರ'ನು ಸಾಮಾನ್ಯ ವಾಚಕರಿಗಾಗಿ ಅದನ್ನೂ ಉದಾಹರಣ ಪೂರ್ವಕವಾಗಿ, ಎರಡನೆಯ ಪರಿಚ್ಛೇದದ ಗುಣ ನಿರೂಪಣಾನಂತರ, ವಿಸ್ತರಿಸಿದ್ದಾನೆ. ಇವುಗಳನ್ನು ವಿವೇಚಿಸುವಲ್ಲಿ ಗ್ರಂಥಕಾರನ ಭಾವನೆಯ ಹೆಜ್ಜೆಹೆಜ್ಜೆಗಳನ್ನೇ ಹಿಡಿದು ಹಿಂಬಾಲಿಸಿ ಗುರಿಗೊಳಿಸಿರುತ್ತೇವೆ ಎಂದು ನಮ್ಮ ನೆಡುನಂಬುಗೆ.

ದೋಷರಹಿತವಾದ, ಸ್ಫೈತಾಗಿ ಕೊಂಕಾಗಿ ತೋರುವ, ಗುಣಗಳೇ ಮಾರ್ಗಭೇದ

ಘಟಕಗಳು; ಅಲಂಕಾರಗಳೆಂದರೆ, ಆ ಗುಣೋಕ್ತಿಗಳ ವಿಸ್ತೃತ ವೈಚಿತ್ರ್ಯಗಳು ಮಾತ್ರವೇ—ಎಂದು ಅವನೆಣಿಕೆ. ಎಣಿಕೆಯದು ಮಾರ್ಗಬದ್ಧವೇ ಸರಿ. ಮನುಷ್ಯನ ಯೋಗ್ಯತೆಯನ್ನು ವೃದ್ಧಿಗೊಳಿಸುವುದು ದೋಷವಿರಹಿತ ಗುಣಗಳಲ್ಲದೆ, ಅಲಂಕಾರ ಗಳಲ್ಲ. ಅಲಂಕಾರಗಳೇನೋ ಜೀವನಕ್ರಮದ ಉಪಾಂಗವಾಗಿ ಸಮಾಜದೊಳಗೂ ಬೇಕಾಗುತ್ತವೆ ಎಂಬುದು ನಿಜ. ತರತರದ ಭಾವನಾತರಂಗಗಳಿಂದ ಅಲ್ಲೋಲ ಕಲ್ಲೋಲವಾಗಿರುವುದಲ್ಲವೆ ಸಂಸಾರ ಸಾಗರ? ಅದರಿಂದ, ಸಂಸಾರದೊಳಗೆ ಹೇಗೋ ಹಾಗೆ ಸಾಹಿತ್ಯದಲ್ಲಿಯೂ ಸಹೃದಯರು ಅಲಂಕಾರವನ್ನು ಸ್ವೀಕರಿಸಿದ್ದಾರೆ ಎಂದು ಭಾವಿಸಬೇಕು. ಆದರೂ—

'ತದದೋಷೌ ಶಬ್ದಾರ್ಥೌ ಸಗುಣೌ ಅನಲಂಕೃತೀ ಪುನಃ ಕ್ವಾಪಿ'

* * *

ಪರಿವೃತನೃಪತುಂಗ ದೇವಮಾರ್ಗಂ
ತರಗತಬೋಧ ವಿಶೇಷ ಯಾನಪಾತ್ರಂ
ಪರಮಗುಣಪರೀತ ಕಾವ್ಯರತ್ನಾ
ಕರದುರುಪಾರಮನೆಯ್ದುಗುಂ ಮಹಾತ್ಮಂ —(iii, 230)

# ಆಧಾರಗ್ರಂಥ ಲೇಖನಾವಳಿ


1. ಕವಿರಾಜಮಾರ್ಗಂ : (ಸಂ.) ಕೆ. ಬಿ. ಪಾಠಕ (೧೮೯೮).
2. ಕರ್ಣಾಟಕ ಕವಿರಾಜಮಾರ್ಗಂ : (ಸಂ.) ಎ. ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರ್ (ಮದರಾಸು ವಿಶ್ವವಿದ್ಯಾನಿಲಯದ ಪ್ರಕಟನೆ ೧೯೩೦).
3. ಕಾವ್ಯಾವಲೋಕನಂ (ನಾಗವರ್ಮ) : (ಸಂ.) ಎಂ. ಎಸ್. ಬಸವಲಿಂಗಯ್ಯ ಮತ್ತು ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ್ (ಮೈಸೂರು ಓರಿಯಂಟಲ್ ಲೈಬ್ರರಿಯ ಪ್ರಕಟನೆ ೧೯೩೯).
4. ಶಬ್ದಮಣಿದರ್ಪಣಂ (ಕೇಶಿರಾಜ) : ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪ್ರಕಟನೆ (೧೯೨೦).
5. ಕರ್ಣಾಟಕ ಶಬ್ದಾನುಶಾಸನಂ (ಭಟ್ಟಾಕಲಂಕ) : (ಸಂ.) ಆರ್. ನರಸಿಂಹಾಚಾರ್, (೧೯೨೩).
6. ನೇಮಿಜಿನೇಶ ಸಂಗತಿ (ಮಂಗರಸ) : (ಸಂ.) ಎ. ಶಾಂತಿರಾಜಶಾಸ್ತ್ರಿ.
7. ಪಂಚತಂತ್ರ (ದುರ್ಗಸಿಂಹ) : (ಸಂ.) ಎಸ್. ಜಿ. ನರಸಿಂಹಾಚಾರ್ ಮತ್ತು ಎಂ. ರಾಮಾನುಜ ಅಯ್ಯಂಗಾರ್ (ಕರ್ಣಾಟಕ ಕಾವ್ಯಮಂಜರಿ ಗ್ರಂಥಮಾಲೆ, ೧೮೯೮).
8. ಕನ್ನಡ ಕೈಪಿಡಿ : ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ (೧೯೩೬).
9. ವ್ಯಾಕರಣೋಪನ್ಯಾಸ ಮಂಜರಿ : ಆರ್. ರಘುನಾಥರಾವ್.
10. ಸೊಬಗಿನ ಬಳ್ಳಿ : ಮುಳಿಯ ತಿಮ್ಮಪ್ಪಯ್ಯ (೧೯೩೦).
11. ನಾಡೋಜಪಂಪ : ಮುಳಿಯ ತಿಮ್ಮಪ್ಪಯ್ಯ (೧೯೩೮).
12. 'ಕವಿರಾಜಮಾರ್ಗದ ಗ್ರಂಥಕರ್ತೃವು ಯಾರು ?'—ನಾ. ಶ್ರೀ. ರಾಜಪುರೋಹಿತ (ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ೬-೧, ಜುಲೈ, ೧೯೨೧).
13. 'ಕವಿರಾಜಮಾರ್ಗವನ್ನು ಕುರಿತು' : ಎ. ಆರ್. ಕೃಷ್ಣಶಾಸ್ತ್ರೀ ('ವಸ್ತುಕೋಶ'ದಲ್ಲಿ ಟಿಪ್ಪಣಿ, ಪ್ರಬುದ್ಧ ಕರ್ಣಾಟಕ, ೩-೩).
14. 'ಕವಿರಾಜಮಾರ್ಗದ ಕರ್ತೃವು ಯಾರು ?' : ನಾ. ಶ್ರೀ. ರಾಜಪುರೋಹಿತ ಮತ್ತು ಟಿ. ಎಸ್. ವೆಂಕಣ್ಣಯ್ಯ (ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ೭-೧, ೪).
15. 'ನೃಪತುಂಗನೇ ಕವಿರಾಜಮಾರ್ಗದ ಗ್ರಂಥಕರ್ತೃವು' : ನಾ. ಶ್ರೀ. ರಾಜಪುರೋಹಿತ (ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ೮-೨, ಜುಲೈ ೧೯೨೩).
16. 'ನೃಪತುಂಗನ ಮತವಿಚಾರ'—ಮಂ. ಗೋವಿಂದ ಪೈ (ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ೧೨-೪).
17. *Kavyadarasa of Dandin :* Sanskrit Text and English Translation by Dr. Belvalkar, S. K., 1924).
18. *Prakrita Paingala of Pingala :* (Ed.) Chandra Mohan Ghosh (Bibliotheca Series, Calcutta, 1902).
19. *Gatha Saptashati* Satavahana : (Ed.) Pandit Durga Prasad and Wasudeva Laxmana Shstri Panashikar (Nirnaya Sagar Press, 1911.)
20. *Artha Shastra* of Kautilya, (Ed.) R. Shama Shastry (University of Mysore, 1924.)

21. *Karnataka Bhasha Bhushana* of Nagavarma, (Ed.) Lewis Rice (1884).
22. *Shadbhasha Chandrika* of Laxmidhara (Bombay Sanskrit and Prakrit Series) Edited by Trivedi, K. P., 1916.
23. *The Rashtrakutas and Their Times:* Dr. Altekar, A. S.
24. *Eastern Chalukyas:* Dr. Ganguly, D. C.
25. *Elements of South Indian Palaeography:* Dr. Burnell, A. C.
26. *Sources of Karnataka History:* Dr. Srikantha Shastry, S.
27. *History of Kannada Language:* Narasimhachar, R., (University of Mysore, 1934).
28. *History of Kannada Literature:* Narasimhachar, R., (University of Mysore, 1940).
29. *Kavisvara's Kavirajamarga:* J. F. Fleet (Indian Antiquary, vol. XXXIII, Oct. 1904) pp. 268 ff.
30. *Amoghavarsha as a Patron of Letters:* J. F. Fleet (Ibid, pp. 197 ff.)
31. *Epigraphia Indica.*
32. *Epigraphia Carnatica.*
33. Quarterly Journal of *Bharat Itihas Samshodhak Mandal.*
34. Journal of the University of Bombay, Volume VII, Part I.

ಅನುಬಂಧ ೧

# ಅಮೋಘವರ್ಷ ನೃಪತುಂಗನ ಶಾಸನಗಳು

## ೧. ಕೊಣ್ಣೂರು ಶಾಸನ (ಕ್ರಿ.ಶ. ೮೬೧)*

ಶ್ರಿಯಃ ಪ್ರಿಯಃ ಸಂಗತವಿಶ್ವರೂಪಃ
ಸುದರ್ಶನಚ್ಛಿನ್ನ ಪರಾವಲೇಪಃ
ದಿಶ್ಯಾದನಂತಃ ಪ್ರಣತಾಮರೇಂದ್ರಃ
ಶ್ರಿಯಂ ಮಮಾದ್ಯಃ ಪರಮಾಂ ಜಿನೇಂದ್ರಃ ೧

ಅನಂತಭೋಗಸ್ಥಿತಿರತ್ರ ಪಾತು ವಃ
ಪ್ರತಾಪಶೀಲಪ್ರಭವೋ ದಯಾಚಲಃ
ಸುರಾಷ್ಟ್ರಕೂಟೋರ್ಜಿತವಂಶಪೂರ್ವಜಃ
ಸ ವೀರನಾರಾಯಣ ಏವ ಯೋ ವಿಭುಃ ೨

ತದೀಯಭೂಪಾಯತಯಾದವಾನ್ವಯೇ
ಕ್ರಮೇಣ ವಾರ್ಧಾವಿವ ರತ್ನಸಂಚಯಃ
ಬಭೂವ ಗೋವಿಂದಮಹೀಪತಿರ್ಭುವಃ
ಪ್ರಸಾಧನೋ ಪೃಚ್ಛಕರಾಜನಂದನಃ ೩

ಇಂದ್ರಾವನೀಪಾಲಸುತೇನ ಧಾರಿಣೀ
ಪ್ರಸಾರಿತಾ ಯೇನ ಪೃಥುಪ್ರಭಾವಿನಾ
ಮಹೌಜಸಾ ವೈರಿತಮೋ ನಿರಾಕೃತಂ
ಪ್ರತಾಪಶೀಲೇನ ಸ ಕರ್ಕರಪ್ರಭುಃ ೪

ತತೋಽಭವದ್ದಂತಿಘಟಾವಮರ್ದನೋ
ಹಿಮಾಚಲಾದೂರ್ಜಿತ ಸೇತು ಸೀಮತಃ [ಸಿಮ್ನತಃ]
ಖಲೀಕೃತೋದ್ವೃತ್ತಮಹೀಪಮಂಡಲಃ
ಕುಲಾಗ್ರಣೀರ್ಯೋ ಭುವಿ ದಂತಿದುರ್ಗರಾಟ್ ೫

ಸ್ವಯಂವರೀಭೂತ ರಣಾಂಗಣೇ ತತಃ
ಸ ನಿರ್ವ್ಯಪೇಕ್ಷಂ ಶುಭತುಂಗವಲ್ಲಭಃ
ಚಕರ್ಷ ಚಾಲುಕ್ಯಕುಲಶ್ರಿಯಂ ಬಲಾತ್
ವಿಲೋಲಪಾಲಿಧ್ವಜಮಾಲಭಾರಿಣೀಂ ೬

ಜಯೋಚ್ಚಸಿಂಹಾಸನಚಾಮರೋರ್ಜಿತಃ
ಸಿತಾತಪತ್ರಃ ಪ್ರತಿಪಕ್ಷರಾಜ[ಜ್ಯ] ಹಾ

* ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೬, ಸಂಚಿಕೆ ೪.

ಅಕಾಲವರ್ಷೋಽರ್ಜಿತಭೂಪನಾಮಕೋ
ಬಭೂವ ರಾಜರ್ಷಿರಶೇಷಪುಣ್ಯತಃ ೭

ತತಃ ಪ್ರಭೂತವರ್ಷೋಽಭೂತ್ ಧಾರಾವರ್ಷಸುತಃ ಶನೈಃ
ಧಾರಾವರ್ಷಾಯಿತಂ ಯೇನ ಸಂಗರಂ ಭುವಿ ಭೂಭುಜಾ ೮

ತಸ್ಯ ಸುತಃ
ಯಜ್ಜನ್ಮಕಾಲೇ ದೇವೇಂದ್ರೈರಾದಿಷ್ಟಂ ವೃಷಭೋ ಭುವಃ
ಭೋಕ್ತೇತಿ ಹಿಮವತ್ಸೇತುಪರ್ಯಂತಾಂಬುಧಿಮೇಖಲಾಂ ೯

ತತಃ ಪ್ರಭೂತವರ್ಷಃ ಸನ್ ಸ್ವಯಂಪೂರ್ಣಮನೋರಥಃ
ಜಗತ್ತುಂಗಃ ಸುಮೇರುರ್ವಾ ಭೂಭೃತಾಮುಪರಿ ಸ್ಥಿತಃ ೧೦

ಬಂಧೂನಾಂ ಬಂಧುರಾಣಾಮುಚಿತನಿಜಕುಲೇ ಪೂರ್ವಜಾನಾಂ ಪ್ರಜಾನಾಂ
ಜಾತಾನಾಂ ವಲ್ಲಭಾನಾಂ ಭುವನ ಭರಿತಸತ್ಕೀರ್ತಿಮೂರ್ತಿಸ್ಥಿತಾನಾಂ
ತ್ರಾತುಂ ಕೀರ್ತಿಂ ಸಲೋಕಾಂ ಕಲಿಕಲುಷಮತೋ ಹಂತ ಮಂತೋ ರಿಪೂಣಾಂ
ಶ್ರೀಮಾನ್ ಸಿಂಹಾಸನಸ್ಥೋ ಭವನವನಿಮತೋಽಮೋಘವರ್ಷಃ ಪ್ರಶಾಸ್ತಿ ೧೧

ಯಸ್ಯಾಜ್ಞಾಂ ಪರಚಕ್ರಿಣಃ ಸ್ರಜಮಿವಾಜಸ್ರಂ ಶಿರೋಭಿರ್ವಹಂ
ತ್ಯಾ ದಿಗ್ದಂತಿಘಟಾವಲೀಮುಖಪಟ್ಟೈಃ ಕೀರ್ತಿಪ್ರತಾನಸ್ಥಿತಃ
ಯತ್ರಸ್ಥಃ ಸ್ವಕರಪ್ರತಾಪ ಮಹಿಮಾ ಕಸ್ಯಾಪ್ಯದೂರಸ್ಥಿತಃ
ತೇಜಃಕ್ರಾಂತ ಸಮಸ್ತ ಭೂಭೃದಿನ ಏವಾಸೌ ನ ಕಸ್ಯೋಪರಿ ೧೨

ಚತುಸ್ಸಮುದ್ರಪರ್ಯಂತಂ ಸ್ವಮುದ್ರಂ ಯತ್ರಸಾಧಿತಂ
ಭಗ್ನಾ ಸಮಸ್ತಭೂಪಾಲಮುದ್ರಾ ಗಾರುಡಮುದ್ರಯಾ ೧೩

ರಾಜೇಂದ್ರಾಸ್ತೇ ವಂದನೀಯಾಸ್ತು ಪೂರ್ವೇ
ಯೇಷಾಂ ಧರ್ಮಃ ಪಾಲನೀಯೋಽಸ್ಮದಾದ್ಯೈಃ
ಧ್ವಸ್ತಾ ದುಷ್ಟಾ ವರ್ತಮಾನಾಃ ಸಧರ್ಮಾಃ
ಪ್ರಾರ್ಥ್ಯಾ ಏತೇ ಭಾವಿನಃ ಪಾರ್ಥಿವೇಂದ್ರಾಃ ೧೪

ಭುಕ್ತಂ ಕೈಶ್ಚಿದ್ವಿಕ್ರಮೇಣಾಪರೇಭ್ಯೋ
ದತ್ತಂ ಚಾನ್ಯೈಃ ತ್ಯಕ್ತಮೇವಾಪರೈರ್ಯತ್
ಕಾಸ್ಥಾ ನಿತ್ಯಾ ತತ್ರ ರಾಜ್ಯೇ ಮಹದ್ಭಿಃ
ಕೀರ್ತ್ಯಾ [ಕೀರ್ತ್ಯೈ] ಧರ್ಮಃ ಕೇವಲಂ ಪಾಲನೀಯಃ ೧೫

ತೇನೇದಮನಿಲವಿದ್ಯುಚ್ಚಂಚಲಮವಲೋಕ್ಯ ಜೀವಿತಮಸಾರಂ
ಕ್ಷಿತಿದಾನಪರಮಪುಣ್ಯಃ ಪ್ರವರ್ತಿತೋ ದೇವದೇವೋಽಯಂ ೧೬

ಸ ಏವ ಪರಮಭಟ್ಟಾರಕ ಮಹಾರಾಜಾಧಿರಾಜ ಪರಮೇಶ್ವರ ಶ್ರೀ ಜಗತ್ತುಂಗದೇವ ಪಾದಾನುಧ್ಯಾನ [ತ] ಪರಮಭಟ್ಟಾರಕ ಮಹಾರಾಜಾಧಿರಾಜ ಪರಮೇಶ್ವರ ಶ್ರೀ ಪೃಥ್ವೀವಲ್ಲಭ ಶ್ರೀಮದಮೋಘವರ್ಷ ಶ್ರೀವಲ್ಲಭನರೇಂದ್ರದೇವಃ ಸರ್ವಾನೇವ ಯಥಾಸಂಬಧ್ಯಮಾನಕಾನ್ ರಾಷ್ಟ್ರವಿಷಯಪತಿ ಗ್ರಾಮಕೂಟಾಯುಕ್ತಕ ನಿಯುಕ್ತಕಾಧಿಕಾರಿಕ ಮಹತ್ತರಾದೀನ್ ಸಮಾದಿಶತಿ ಅಸ್ತು ವಃ ಸಂವಿದಿತಂ ಯಥಾ—

ವಿಕ್ರಮವಿಲಾಸನಿಲಯೋ
ಮುಕುಲಕುಲೇ ಪೂರ್ವಬಂಧುಭಿರ್ಮಾನ್ಯೈಃ
ಎರಕೋರಿನಾಮಧೇಯಃ
ಪ್ರವಿಕಸಿತೋಽಭೂತ್ಪ್ರಸೂನಸಮಃ ೧೭

ಆವಿರಾಸೀತ್ ಪ್ರಭುಸ್ತಸ್ಮಾತ್ ಪ್ರಸೂನಾತ್ ಫಲಸನ್ನಿಭಃ
ನಾಮ್ನಾಘೋರಃ ಕುಲಾಧಾರಃ ಕೋಲನೂರಾಧಿಪಃ ಸ್ವಯಂ ೧೮

ಸುತೋಽಸ್ಯ ವಿಜಯಾಂಕಾಯಾಮಭೂತ್ ಭುವನಮಾನಿತಃ
ಪ್ರಚಂಡಮಂಡಲಾತಂಕೋ ಬಂಕೇಶಃ ಸೇಲ್ಲಕೇತನಃ ೧೯

ಮದೀಯೋ ವಿತತಜ್ಯೋತಿರ್ನಿಶಿತೋಽಸಿರಿವಾಪರಃ
ಉನ್ಮೂಲಿತದ್ವಿಷದ್ವೃಕ್ಷಮೂಲೋ ಮೌಲಬಲಪ್ರಭುಃ ೨೦

ಮತ್ಪ್ರಸಾದೇನ ಸಂಲಬ್ಧವನವಾಸಿ ಪುರಸ್ಸರಾನ್
ಗ್ರಾಮಾನ್ ತ್ರಿಂಶತ್ಸಹಸ್ರಾಣಿ ಭುನಕ್ತ್ಯವಿರತೋದಯಃ ೨೧

ಮಹಾಪ್ರತಾಪಾದುಚ್ಛೇದಮುದ್ಯಚ್ಛನ್ ಮದಿಚ್ಛಯಾ
ಮೂಲಾದುಚ್ಛೇತ್ತುಮುತ್ತುಂಗಾಂ ಗಂಗವಾಡಿವಟಾಟವೀಂ ೨೨

ತತ್ರಾಂತರೇಽಸ್ಮತ್ಸಾಮಂತೈರ್ಮಾತ್ಸರ್ಯಾಹಿತಮಾನಸೈಃ
ಉಪದ್ರುತೋಽಪಿ ಕೋಪೋದ್ಯತ್ಸಾಹಸೈಕಸಖಃ ಸ್ವಯಂ ೨೩

ಧ್ವಸ್ತರಿಪುನೀತಿಮಾರ್ಗೋ ರಣವಿಕ್ರಮಬುದ್ಧಿಮೇಕಮಭಿನೀಯ
ಸ ಮದೀಯಹೃದಯಸಂಗತಮವಂಧ್ಯಕೋಪತ್ವಮಾವಹತಿ ೨೪

ಯೇನ—

ತತ್ಕೇದಲಾಭಿಧಾನಂ ದುರ್ಗಂ ವಪ್ರಾರ್ಗಲಾದಿದುರ್ಲಂಘ್ಯಂ
ಮೂಲಬಲಾಧಿಷ್ಠಿತಮಪಿ ಸದ್ಯಃ ಪ್ರೋಲ್ಲಂಘ್ಯ ಹೇಲಯಾಽಗ್ರಾಹಿ ೨೫

ಜನಪದಮದಃ ಕೃತ್ವಾ ಹತೇ ವಿಧೂಯ ವಿರೋಧಿನಂ
ತಲವನಪುರಾಧೀಶಂ ಕೃತ್ವಾ ಶ್ರುತಂ ರಣವಿಕ್ರಮಂ
ಮದರಿವಿಜಯೀ ಭರ್ತುಃ ಶ್ಲಾಘ್ಯಃ ಸಮನ್ವಿತಸಂಗರಃ
ಸಮರಸಮಯೇ ವಿದ್ವಿಟ್ಚಕ್ರೈರವಕ್ರಿತವಿಕ್ರಮಃ ೨೬

ಕಾವೇರೀಂ ಗುರುಪೂರದುರ್ಗಮತಮಾಮುಲ್ಲಂಘ್ಯ ಸಿಂಹಕ್ರಮಾತ್
ಪ್ರತ್ಯಗ್ರಸ್ಫುರಿತಪ್ರತಾಪದಹನ ಪ್ರೋದ್ಯಚ್ಛಿಖಾಶ್ರೇಣಿಭಿಃ
ನಿರ್ದಾಹ್ಯೈಕಪದೇನ ಸಪ್ತಪದಕಾನ್ ವಿದ್ವಿಡ್ವನೋಚ್ಛೇದಿನಾ
ಯೇನಾಕಂಪಿ ಜಗತ್ಪ್ರಕಂಪನಪಟೋರ್ವೈರಾಜ್ಯಮಪ್ಯೂರ್ಜಿತಂ ೨೭

ತತ್ರಾಂತರೇ ಮದಂತಿಕಮಂತರ್ಭೇದೇನ ಜಾತಸಂಕ್ಷೋಭೇ
ಪ್ರತ್ಯಾಗಂತವ್ಯಮಿತಿ ತ್ವಯೇತಿ ಮದ್ವಚನಮಾತ್ರೇಣ ೨೮

ಅಪ್ರಾಪ್ತೇ ವಲ್ಲಭೇಂದ್ರೇ ಮಯಿ ಜಯತಿ ಯದಾ ವಿದ್ವಿಷಃ ಸ್ವಾಂ ತದಾಹಂ
ಸನ್ಯಸ್ತಾಶೇಷಸಂಗೋ ಮುನಿರಥ ವಿಧಿನಾ ವಿದ್ವಿಷಾಂ ಸ್ವಾಜ್ಞಯಾಶ್ರೀಃ
ತತ್ರಾಪ್ಯುದ್ಬಾಧಮಧೂಮಧ್ವಜ ವಿತತಶಿಖಾಸೂತ್ಪತಾಮಿ ಪ್ರತಾಪಾತ್
ಇತ್ಯಾರೂಢಪ್ರತಿಜ್ಞಃ ಕತಿಪಯದಿವಸೈಃ ಪ್ರಾಪದಸ್ಮತ್ಸಮಾಪಂ ೨೯

ಮಾಸತ್ರಯಸ್ಯ ಮಧ್ಯೇ ಯದಿ ಭೋಜಯಿತುಂ ನ ಶಕ್ಯತೇ ಸ್ವಾಮಿ
ಕ್ಷೀರಂ ವಿಜಿತ್ಯ ಶತ್ರೂನ್ ತಥಾಪಿ ವಹ್ನಿಂ ವಿಶಾಮ್ಯೇವ ೩೦

ಇತ್ಯುಕ್ತ್ವಾ ವಿಕ್ರಮವಿಕ್ರಮೋಚ್ಛ್ರಿಖ ಶಿಖಿ ಜ್ವಾಲಾವಲೀಢೇ ವ್ರಜೇ
ಧೂಮಶ್ಯಾಮಲಿತೇ ತಿರೋಹಿತತನೌ ಪ್ರಾಯಃ ಪರಪ್ರೇಷಿತೇ
ಯಾತೇ ಮತ್ತಸಯೇ ಸ್ಥಿತಾನ್ಯನೃಪತೀನ್ ನಿರ್ಜಿತ್ಯ ಯೋ ಜಿತ್ವರೋ
ಬಂದೀಕೃತ್ಯ ರಿಪೂನ್ ನಿಹತ್ಯ ಚ ತದಾ ತೀರ್ಣಪ್ರತಿಜ್ಞೋಽಭವತ್ ೩೧

ಆವಿಷ್ಕೃತಕೋಪಶಿಖಾನಿರ್ದಗ್ಧಾರೀಂಧನೋ ವಿನಾಪ್ಯನಿಲಾತ್
ಅಜ್ವಾಲಿತೇಪಿ [ತೋಽಪಿ] ಯಸ್ಯ ಪ್ರತಾಪವಹ್ನಿರ್ಮುಹುರ್ಜ್ವಲತಿ ೩೨

ಯಸ್ಯ ಚ ಕೃಪಾಣವಾರಿಣಿ ರುಧಿರಾಕುಲಿತೇ ದ್ವಿಷಾಂ ಮಹಾಲಕ್ಷ್ಮೀಃ
ಮಜ್ಜತ್ಯುನ್ಮಜ್ಜತಿ ತು ಸ್ವಾಧಿಪತೇಃ ಕುಂಕುಮಾಕ್ತೇವ ೩೩

ಹುತ್ವಾ ಯೇನ ರಿಪುಂ ವಿರೋಧಿರುಧಿರಪ್ರಾಜ್ಯಾಜ್ಯಧಾರಾಹುತಿ
ವ್ರಾತಪ್ರಸ್ಫುರಿತಪ್ರತಾಪದಹನೇ ವಿದ್ವಿಷ್ಟಶಾಂತೇಃ ಶ್ರಿತಂ
ವಿಪ್ರಾನೇವ ರಣಾಧ್ವರೇ ಸುವಿಹಿತೇ ಶ್ರೀಮಂತ್ರಶಕ್ತ್ಯಾರ್ಜಿತಂ
ಕಲ್ಪಾಂತಸ್ಥಿರವೀರಶಾಸನಮಿದಂ ಮದ್ವೀರನಾರಾಯಣಾತ್ ೩೪

ತೇನೈವಂಭೂತೇನ ಬಂಕೆಯಾಭಿಧಾನೇನ ಮದಿಷ್ಟಭೃತ್ಯೇನ
ಪ್ರಾರ್ಥಿತಸ್ಸನ್ ತತ್ಪ್ರಾರ್ಥನಯಾ ಮಾನ್ಯಖೇಟರಾಜಧಾ
ನ್ಯಾಂ ಅವಸ್ಥಿತೇನ ಮಯಾ [ಮಾ] ತಾಪಿತ್ರೋರಾತ್ಮನಶ್ಚೈ
ಹಿಕಾಮುತ್ರಿಕಪುಣ್ಯಯಶೋಭಿವೃದ್ಧಯೇ ಕೋಲನೂರೇ
ತದ್ಬಂಕೇಯ ನಿರ್ಮಾಪಿತ ಜಿನಾಯತನಪರಿಪಾಲನನಿಯುಕ್ತಾಯ

ಶ್ರೀಮೂಲಸಂಘದೇಶೀಯಜನಪುಸ್ತಕಗಚ್ಛತಃ
ಜಾತಸ್ತ್ರಿಕಾಲಯೋಗೀಶಃ ಕ್ಷೀರಾಬ್ಧೇರಿವ ಕೌಸ್ತುಭಃ ೩೫

ತಚ್ಚಾರಿತ್ರವಧೂಪುತ್ರ ಶ್ರೀ ದೇವೇಂದ್ರಮುನೀಶ್ವರಃ
ಸೈದ್ಧಾಂತಿಕಾಗ್ರಣೀಸ್ತಸ್ಮೈ ಬಂಕೇಯೋ ಯಾಮದಾನ್ಮುದಾ ೩೬

ತದ್ವಸತಿಸಂಬಂಧಿ ನವಕರ್ಮೋತ್ತರಭಾವಿಖಂಡಸ್ಫುಟಿತಸಮ್ಮಾರ್ಜನೋಪಲೇಪನ ಪರಿಪಾಲನಾದಿ ಧರ್ಮೋಪಯೋಗಿಕರ್ಮಕರಣನಿಮಿತ್ತಂ ಮಜ್ಜಂತಿಯ ಸಪ್ತತಿ ಗ್ರಾಮಭುಕ್ತ್ಯಂತರ್ಗತಃ ತಲೇಯೂರನಾಮಗ್ರಾಮಃ ತಸ್ಯ ಚಾಘಾತಾಃ—

ತತ್ಕೋಲನೂರ ಪುರಾತ್ ಪೂರ್ವತಃ ಬೇಂಡನೂರು ದಕ್ಷಿಣತಃ ಸಾಸನೇವಾ [ಡು] ತತ್ಪಶ್ಚಿಮತಃ ಪಡಿಲಗೇರೇ ಉತ್ತರತಃ ಕಿಲವಾದಃ ಏವಮಯಂ

ಚತುರಾಘಾ[ತಾನ್]ತೇನ ಉಪಲಕ್ಷಿತಃ ಸೋಽಡ್ರಂಗಃ ಸಪರಿಕರಃ ಸದಂಡದಶಾಪರಾಧಃ ?
ಸಂಭೃತೋಪಾತ್ತಪ್ರತ್ಯಯಃ ಸೋತ್ಪದ್ಯಮಾನವಿಷ್ಟಿತಿಕಃ ಸಧಾನ್ಯಹಿರಣ್ಯಾಧೇ[ದೇ ?]
ಯಃ ದ್ವಾದಶಪುಃಪವಾಟಃ [ಪುಷ್ಪವಾಟಃ] ಪಂಚಾಶದುತ್ತರಶತಹಸ್ತ
ವಿಸ್ತೀರ್ಣ (ಸ್ತಾರಃ) ಪಂಚಶತಹಸ್ತಪ್ರಮಾಣಾಯಾಮಃ ಗೃಹಾಣಾಂ = ಆಘಾತಃ =
ಸಮುದಿತಃ ಪ್ರವೇಶ್ಯಃ = ಸರ್ವರಾಜಕೀಯಾನಾಂ = ಅಹಸ್ತಪ್ರಕ್ಷೇಪಣೀಯಃ
ಆಚಂದ್ರಾರ್ಕಾರ್ಣವ ಕ್ಷಿತಿ ಸರಿತ್ಪರ್ವತ ಸಮಕಾಲೀನಾಃ ಪುತ್ರಪೌತ್ರಾನ್ವಯ
ಕ್ರಮೇಣ ಪ್ರತಿಪಾಲ್ಯಃ ಪೂರ್ವಪ್ರದತ್ತ ದೇವ ಬ್ರಹ್ಮದಾಯ ರಹಿತೋಽ
ಹ್ಯಭ್ಯಂತರ ಸಿದ್ಧ್ಯಾ ಭೂಮಿಚ್ಛಿದ್ರನ್ಯಾಯೇನ
ಶಕನೃಪಕಾಲಾತೀತಸಂವತ್ಸರಶತೇಷು ಸಪ್ತಸು ದ್ವಾ (ದ್ವ್ಯ)ಶೀತ್ಯಧಿಕೇಷು
ತದಭ್ಯಧಿಕಸಮನಂತರ ಪ್ರವರ್ತಮಾನ ತ್ರಯೋಶೀತಿತಮ ವಿಕ್ರಮ ಸಂವತ್ಸರಾಂತರ್ಗತಾ
ಶ್ವಯುಜಪೌರ್ಣಮಾಸ್ಯಾಂ ಸರ್ವಗ್ರಾಸಿಸೋಮಗ್ರಹಣೇ ಮಹಾಪರ್ವಣಿ ಬಳಿಪಕ್ಷ
ವೈಶ್ವದೇವಾಗ್ನಿಹೋತ್ರಾತಿಥಿ ಸಂತರ್ಪಣಾತ್ ಧಾರೋದಕಾತಿಸರ್ಗೇಣ ಪ್ರತಿಪಾದಿತಃ ॥
ತಥಾತ್ರೈವ ತತ್ಕೋಳನೂರ ತದ್ಭುಕ್ತಿ ಮಧ್ಯವರ್ತ್ಯವರವಾಡಿ
ಬೇಂಡನೂರು ಮುಡುಗುಂಡಿ ಕಿಟ್ಟೈ ಬೋಳೇಸುಳ್ಳ ಮುಸಡಘೇರೇ ಮಾವಿನೂರು
ಮಟ್ಟಕಟ್ಟೆ ನೀಲಗುಂಡಗೇ ತಾಳಿಖೇಡ ಬೈಳ್ಗೇರು ಸಂಗಮಪಿರಿಸಿಂಗಿ ಮುತ್ತಲಗೇರೇ
ಕಾಕೇಯನೂರು ಬೇರೂರು ಅಲೂಗು [ಪಾರ್ವನಗೇರೇ ಹೋಸಂಜಳಲು
ಇಂಡುಗಲು ನೇರಿಲಗೇ ಹಗಸೂರು ಉನಲಾರು ಇಂಡಗೇರೇ ಮುನಿವಳ್ಳಿ ಕೊಟ್ಟಸೇ
ಓಡ್ಡಿಟ್ಟಗೇ ಸಿಕಿಮಬಿ?] ಗಿರಿಪಿಡಲು ನಾಮಧೇಯೇಷ್ವೇತೇಷು ಕೋಳನೂರಾಟ
ತದ್ಭುಕ್ತಿವರ್ತಿಷು ತ್ರಿಂಶತ್ಸ್ವಪಿ ಗ್ರಾಮೇಷ್ವೇಕೈಕಗ್ರಾಮೇ ದ್ವಾದಶ ನಿವರ್ತನಾನಿ
ಭೂಮೇಃ ಪ್ರತಿಪಾದಿತಾನಿ ಅತೋಽಸ್ಯೋಚಿತಯಾ ದೇವದಾಯ
ದಾಯಸ್ಥಿತ್ಯಾ ಭುಂಜತೋ ಕೃಷತಃಕರ್ಷಯತಃ ಪ್ರತಿದಿಶತೋ ವಾ ನ
ಕಶ್ಚಿದಲ್ಪಾಪಿ ಪರಿಪಂಥನಾ ಕಾರ್ಯಾ ತಥಾಗಾಮಿಭದ್ರನೃಪತಿಭಿರಸ್ಮದ್ವಂಶ್ಯೈರನ್ಯೈರ್ವಾ
ಸಾಮಾನ್ಯಂ ಭೂಮಿದಾನಫಲಮವೇತ್ಯ ವಿದ್ಯುಲ್ಲೋಳಾನ್ಯೈಶ್ವರ್ಯಾಣಿ
ತೃಣಾಗ್ರಲಗ್ನಜಲಬಿಂದುಚಂಚಲಂ ಚ ಜೀವಿತಮಾಕಲಯ್ಯ ಸ್ವದಾಯನಿರ್ವಿಶೇಷೋಽ
ಸ್ಮದ್ದಾಯೋಽನುಮಂತವ್ಯಃ ಪ್ರತಿಪಾಳಯಿತವ್ಯಶ್ಚ ಯಸ್ತ್ವಜ್ಞಾನತಿಮಿರಪಟಲಾವೃತ
ಮತಿರಾಚ್ಛಿದ್ಯಮಾನಕಂ ಚಾನುಮೋದೇತ ಸ ಪಂಚಭಿರ್ಮಹಾಪಾತಕೈಃ
ಸೋಪಪಾತಕೈಶ್ಚ ಸಂಯುಕ್ತಃ ಸ್ಯಾದಿತ್ಯುಕ್ತಂ ಭಗವತಾ ವೇದವ್ಯಾಸೇನ–

ಷಷ್ಟಿರ್ವರ್ಷಸಹಸ್ರಾಣಿ ಸ್ವರ್ಗೇ ತಿಷ್ಠತಿ ಭೂಮಿದಃ
ಆಚ್ಛೇತ್ತಾ ಚಾನುಮಂತಾ ಚ ತಾನ್ಯೇವ ನರಕೇ ವಸೇತ್ ೩೭

ವಿಂಧ್ಯಾಟವೀಷ್ವತೋ ಯಾಸು ಶುಷ್ಕಕೋಟರವಾಸಿಷು (ನಃ)
ಕೃಷ್ಣಸರ್ಪಾ ಹಿ ಜಾಯಂತೇ ಭೂಮಿದಾನಂ ಹರಂತಿ ಯೇ ೩೮

ಅಗ್ನೇರಪತ್ಯಂ ಪ್ರಥಮಂ ಸುವರ್ಣಂ
ಭೂರ್ವೈಷ್ಣವೀ ಸೂರ್ಯಸುತಾಶ್ಚ ಗಾವಃ
ಲೋಕತ್ರಯಂ ತೇನ ಭವೇದ್ಧಿ ದತ್ತಂ
ಯಃ ಕಾಂಚನಂ ಗಾಂ ಚ ಮಹೀಂ ಚ ದದ್ಯಾತ್ ೩೯

ಬಹುಭಿರ್ವಸುಧಾ ಭುಕ್ತಾ ರಾಜಭಿಃ ಸಗರಾದಿಭಿಃ
ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ ತದಾ ಫಲಂ ೪೦

ಸ್ವದತ್ತಾಂ ಪರದತ್ತಾಂ ವಾ ಯತ್ನಾದ್ರಕ್ಷೇನ್ನರಾಧಿಪಃ
ಮಹೀಂ ಮಹೀಮತಾಂ ಶ್ರೇಷ್ಠಃ ದಾನಾಚ್ಛ್ರೇಯೋಽನುಪಾಳನಂ ೪೧

ಇತಿ ಕಮಲದಳಾಂಬುಬಿಂದುಲೋಳಾಂ
ಶ್ರಿಯಮನುಚಿಂತ್ಯ ಮನುಷ್ಯಜೀವಿತಂ ಚ
ಅತಿವಿಪುಲಮನೋಭಿರಾತ್ಮನೀನೈ
ರ್ನಹಿ ಪುರುಷೈಃ ಪರಕೀರ್ತಯೋ ವಿಲೋಪ್ಯಾಃ ೪೨

ಲಿಖಿತಂ ಚೈತದ್ವಾಳಭ
ಕಾಯಸ್ಥವಂಶಜಾತೇನ
ಧರ್ಮಾಧಿಕರಣ ಸೇನ
ಭೋಗಿಕವತ್ಸರಾಜೇನ
ಶ್ರೀಹರ್ಷಸೂನುನಾ ಗ್ರಾ
ಮಪತ್ತಳಾಧಿಕೃತಲೇಖಕರಣಹಸ್ತಿ
ನಾಗವರ್ಮ ಪೃಥ್ವೀರಾಮಭೃತ್ಯೇನ
ಬಂಕೇಯರಾಜಮುಖ್ಯೋ
ಗಣಪತಿನಾಮಾ ಮಹತ್ತರಃ ಪ್ರಾಜ್ಞಃ
ರಾಜ್ಞಃ ಸಮೀಪವರ್ತೀ
ತೇನೇದಮನುಷ್ಠಿತಂ ಸರ್ವಂ ೪೩

ಮಿಥ್ಯಾಭಾವಭವಾತಿದರ್ಪಪರತದ್ದುಶ್ಶಾಸನೋಚ್ಛೇದಕಂ
ಪ್ರಾಜ್ಞಾ ಜ್ಞಾ ವಶವರ್ತಮಾನಜನತಾಸತ್ಸೌಖ್ಯ ಸಂಪಾದಕಂ
ನಾನಾರೂಪವಿಶಿಷ್ಟವಸ್ತುಪರಮಸ್ಯಾದ್ವಾದ ಲಕ್ಷ್ಮೀಪದಂ
ಜೀಜೀಯಾಜ್ಜಿನರಾಜ ಶಾಸನಮಿದಂ ಸ್ವಾಚಾರಸಾರಪ್ರದಂ ೪೪

ಸಿದ್ಧಾಂತಾಮೃತವಾರ್ಧಿತಾರಕಪತಿಸ್ತರ್ಕಾಂಬುಜಾಹರ್ಪತಿಃ
ಶಬ್ದೋದ್ಯಾನವನಾಮೃತೈಕಸರಣಿರ್ಯೋಗೀಂದ್ರ ಚೂಡಾಮಣಿಃ
ತ್ರೈವಿದ್ಯಾಪರಸಾರ್ಥನಾಮವಿಭವಃ ಪ್ರೋದ್ಧೂತಚೇತೋಭವಃ
ಜೀಯಾದನ್ಯಮತಾವನೀಭೃದಶನಿಃ ಶ್ರೀ ಮೇಘಚಂದ್ರೋ ಮುನಿಃ ೪೫

ಇದೆ ಹಂಸೀ ಭೃಂಗ[ಬೃಂದ?]ಮೀಂಟಲ್ಬಗೆದಪುದು ಚಕೋರೀಚಯಂ ಚಂಚುವಿಂದಂ
ಕರ್ದುಕಲ್ ಸಾರ್ದಪ್ಪುದೀಶಂ ಜಡೆಯೊಳಿರಿಸಲೆಂದಿರ್ದಪಂ ಸೆಜ್ಜೆಗೇಱಲ್
ಪದೆದಪ್ಪಂ ಕೃಷ್ಣನೆಂಬಂತೆಸೆದು ಬಿಸಲಸತ್ಕಂದಲೀಕಂದಕಾಂತಂ
ಪುದಿದತ್ತೀ ಮೇಘಚಂದ್ರಬ್ರತಿತಿಲಕಜಗದ್ವರ್ತಿಕೀರ್ತಿಪ್ರಕಾಶಂ ೪೬

ವೈದಗ್ಧ್ಯ ಶ್ರೀವಧೂಟೀಪತಿರಖಿಲಗುಣಾಲಂಕೃತಿರ್ಮೇಘಚಂದ್ರ
ತ್ರೈವಿದ್ಯಸ್ಯಾತ್ಮಜಾತೋ ಮದನಮಹಿಭೃತೋ ಭೇದನೇ ವಜ್ರಪಾತಃ
ಸೈದ್ಧಾಂತಾಭ್ಯೂಹಚೂಡಾಮಣಿರನುಪಮಚಿಂತಾಮಣಿರ್ಭೂಭುಜಾನಾಂ
ಯೋಽಭೂತ್ಸೌಜನ್ಯರುಂದ್ರಶ್ರಿಯಮವತಿ ಮಹಾವೀರನಂದೀಮುನೀಂದ್ರಃ ೪೭

ಯಶ್ಶಬ್ದಜ್ಞಾನಭಸ್ಸ್ಥಲೀದಿನಮಣಿಃ ಕಾವ್ಯಜ್ಞಚೂಡಾಮಣಿಃ
ಯಸ್ತರ್ಕಸ್ಥಿತಿಕೌಮುದೀಹಿಮಕರಸ್ಸೂತ್ರ್ಯತ್ರಯಾಬ್ಜಾಕರಃ
ಯಸ್ಸಿದ್ಧಾಂತವಿಚಾರಸಾರಧಿಷಣೋ ರತ್ನತ್ರಯೀಭೂಷಣಃ
ಸ್ಥೇಯಾದುದ್ಧತವಾರಿಭೂಭೃದಶನಿಃ ಶ್ರೀವೀರನಂದೀ ಮುನಿಃ ೪೮

ಯನ್ಮೂರ್ತಿರ್ಜಗತಾಂ ಜನಸ್ಯ ನಯನೇ ಕರ್ಪೂರಪೂರಾಯತೇ
ಯದ್ವೃತ್ತಿರ್ವಿದುಷಾಂ ತತೇಃ ಶ್ರವಣಯೋರ್ಮಾಣಿಕ್ಯಭೂಷಾಯತೇ
ಯತ್ಕೀರ್ತಿಃ ಕಕುಭಾಂ ಶ್ರಿಯಃ ಕಚಭರೇ ಮಲ್ಲೀಲತಾಂತಾಯತೇ
ಜೇಜೀಯಾದ್ಭುವಿ ವೀರನಂದಿಮುನಿಪಃ ಸೈದ್ಧಾಂತಚಕ್ರಾಧಿಪಃ ೪೯

ಶ್ರೀ ಕೊಂಡಕುಂದಾನ್ವಯಾಂಬರ ದ್ಯುಮಣಿ ವಿದ್ವಜ್ಜನಶಿರೋಮಣಿ ಸಮಸ್ತಾನವದ್ಯವಿದ್ಯಾವಿಲಾಸಿನೀವಿಲಾಸಮೂರ್ತಿ ಶ್ರೀ ವೀರನಂದಿ ಸೈದ್ಧಾಂತಿಕ ಚಕ್ರವರ್ತಿಗಳು [ಳ್ ?] ಶ್ರೀಮನ್ಮಹಾಸ್ಥಾನಮ್ ಕೊಳನೂರು ಮಹಾಪ್ರಭು ಹುಲಿಯಮರಸನುಂ ಮೂರುಪುರ ಪಂಚಮಠ ಸ್ಥಾನಂಗಳುಂ ತಾಂಬ್ರ ಶಾಸನಮುಂ ನೋಡಿ ಬರೆಯಿಸಿಮೆನಲ್ಕಾ ಶಾಸನದೊಳೆಂತಿರ್ದುದಂತೀ ಶಿಲಾಶಾಸನಮುಂ ಬರೆಯಿಸಿದರು ಮಂಗಳ ಮಹಾಶ್ರೀ ಶ್ರೀ ಶ್ರೀ ನಮೋ ॥

## ೨. ಮಂತ್ರವಾಡಿ ಶಾಸನ (ಕ್ರಿ.ಶ. ೮೬೫)*

ಓಂ ಸ್ವಸ್ತ್ಯಮೋಘವರ್ಷ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ
ಭಟಾರರ ರಾಜ್ಯಾಭಿವೃದ್ಧಿಯೊಳ್ ಶಕನೃಪ ಕಾಲಾತೀತ ಸಂವತ್ಸರ
ಶತಂಗಳೇೞ್ನೂರೆಂಭತ್ತೇೞನೆಯ ಪಾರ್ಥಿವಸಂವತ್ಸರಂ ಪ್ರವರ್ತಿಸೆ
ಪುರಿಗೆಱೆನಾಡಂ ಕುಪ್ಪೇಯನ್ [ಕುಪ್ಪೆಯನ್] ಆೞೆ ವೈಶಾಖಮಾಸದ
ಪೌರ್ಣಮಾಸೆ[ಸಿ]ಯುಂದೆೞ್ಬಣಿಸೆಯ ನಾಲ್ವದಿಂಬರ್ ಮಹಾಜನಮುಂ (? ವುಂ)
ಮೊನಿಗೊರ್ವರುಂ ಮೂಲಸ್ಥಾನದ ಮಹಾದೇವರ್ ಆಳ್ವೆಲಂವಳ್ಳಿಯ
ಶಾಸನಮುಮಾದೇವರ ಮೂಡ ದಿಸೆಯೊಳ್ ಮೂಡವಡ್ಡವನೆಯ
ಪೊಲಮೇರೆಯೆ ತೆಂಕದೇವಂಗೆಯ್ಯ ಮೇರೆ ಪಡುವ ನಿಱುಂಗಲ್ಮೇರೆ ಬಡಗ
ಕಾಲಬೆಯ ಪೊಲ ಮೇರೆಯೆ ಮೇರೆ ಮಾಡಿ ಎನ್ಭತ್ತಯ್ವತ್ತರ್ಕ್ಕೆಯ್ಯುಂ
ಆಱು ತೋಂಟದ ನೆಲನುಂ ಆದಿತ್ಯಭಟಾರರ ಸ್ಥಾನಮುವಂ (?ವುವಂ) ರಕ್ಷಿಸಲ್
ಪೆೞ್ಚಿಸಲ್ ಇವರೇ ಸಮರ್ತ್ಥರ್ ಎಂದು ಗೋಕರ್ಣಪಂಡಿತಭಟಾರರ್ಗೆ
ಸರ್ವಬಾಧಾಪರಿಹಾರಂ ಕಾಲಂ ಕೞ್ಚಿಕೊಟ್ಟರ್ । ಈ ಸ್ಥಾನಮನ್ ಆಳ್ವ
ಗೊರವರ್ ಅಖಂಡಿತಬ್ರಹ್ಮಚಾರಿಯಪುದು ಬ್ರಹ್ಮಚರ್ಯಹೀನರನೀ
ಸಮಯದ ಗೊರವರ್ಕಳ್ ಕಳೆವೊರೀ ಪದ್ಧತಿಯಮ್ ಶಿಲಾಲೇಖೆ ಮಾಡಿ
ನಿಱಿಸಿದರ್ ಪಂಡಿತಭಾಟಾರರೀ ಧರ್ಮವಂ ಕಾದೊನ್ಗಶ್ವಮೇಧದ ಫಲಂ
ಅೞಿಯಲ್ ಬ[ಮ್]ಗೆವ್ವೊನ್ಗೆ ಬ್ರಹ್ಮಾತಿಯ ಪಾಪಮ್ ಅಕ್ಕುಮ್
ನಾಗದೇವನೀ ಧರ್ಮದೊಳ್ ಗೋಷ್ಠಿಯಾದೊಂ ॥

---

* ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೬, ಪುಟ ೨೦೧.

## ೩. ನೀಲಗುಂದ ಶಾಸನ (ಕ್ರಿ.ಶ. ೮೬೬)*

ಜಯತಿ ಭುವನಕಾರಣಂ ಸ್ವಯಂಭೂಃ
ಜಯತಿ ಪುರಂದರ ನಂದನೋ ಮುರಾರಿಃ
ಜಯತಿ ಗಿರಿಸುತಾನಿರುದ್ಧದೇಹೋ
ದುರಿತಭಯಾಪಹರೋ ಹರಶ್ಚ ದೇವಃ

ಸ ವೋಽವ್ಯಾದ್ವೇಧಸಾ ಧಾಮ ಯನ್ನಾಭಿಕಮಲಂ ಕೃತಂ
ಹರ್ಷಶ್ಚ ಯಸ್ಯ ಕಾಂತೇಂದುಕಲಯಾ ಕಮಲಂಕೃತಂ

ಲಬ್ಧಪ್ರತಿಷ್ಠಮಚಿರಾಯ ಕಲಿಂ ಸುದೂರ-
ಮುತ್ಸಾರ್ಯ ಶುದ್ಧಚರಿತೈರ್ಧರಣೀತಲಸ್ಯ
ಕೃತ್ವಾ ಪುನಃ ಕೃತಯುಗಶ್ರಿಯಮಪ್ಯಶೇಷಾಂ
ಚಿತ್ರಂ ಕಥಂ ನಿರುಪಮಃ ಕಲಿವಲ್ಲಭೋಽಭೂತ್

ಪ್ರಭೂತವರ್ಷೋ ಗೋವಿಂದರಾಜಃ ಶೌರ್ಯೇಷು ವಿಕ್ರಮಃ
ಜಿತ್ವಾ ಜಗತ್ಸಮಸ್ತಂ ಯಜ್ಜಗತ್ತುಂಗ ಇತಿ ಶ್ರುತಃ

ಕೇರಳಮಾಳವಗೌಡಾನ್
ಸ ಗೂರ್ಜರಾಂಶ್ಚಿತ್ರಕೂಟಗಿರಿದುರ್ಗ-
ಸ್ಥಾನ್‌ಬಧ್ವಾ ಕಾಂಚಿಶಾ-
ನಥ ಸ ಕೀರ್ತಿನಾರಾಯಣೋ ಜಾತಃ

ಅರಿನೃಪತಿಮುಕುಟಘಟ್ಟಿತ-
ಚರಣಃ ಸಕಲಭುವನವಂದಿತಶೌರ್ಯಃ
ವಂಗಾಂಗಮಗಧಮಾಳವ
ವೆಂಗೀಶೈರರ್ಚಿತೋಽತಿಶಯಧವಳಃ

ಓಂ ಸ್ವಸ್ತಿಶ್ರೀಸಮಧಿಗತಪಂಚಮಹಾಶಬ್ದಮಹಾರಾಜಾಧಿರಾಜ ಪರಮೇಶ್ವರಭಟ್ಟಾರಕ ಚತುರುದಧಿವಲಯವಲಯಿತಸಕಲಧರಾತಲಪ್ರಾತಿರಾಜ್ಯಾನೇಕಮಂಡಲಿಕರ್ಕಳಾ ಕಟಕ ಕಟಿಸೂತ್ರಕುಂಡಲಕೇಯೂರಹಾರಾಭರಣಾಲಂಕೃತಗಣಿಕ (ಕಾ ?) ಸಾಹಸ್ರ ಚಾಮರಾಂಧಕಾರಾಘೋದಿರ್ಯವಿರ್ಯಮಾನಶ್ವೇತಾತಪತ್ರತ್ರಯ ಕಳಹಕಾಹಳಶಂಖ ಪಾಳಿಧ್ವಜೋರುಕೇತುಪತಾಕಾಚ್ಛಾದಿತ ದಿಗಂತರೆಲ್ಲಸೃಷ್ಟಿಸೇನಾಪತಿ

ಪುರವರತಳವರ್ಗ

---

* ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೬, ಪುಟ ೯೮.

ದಂಡನಾಯಕಸಾಮಂತಾದ್ಯನೇಕವಿಷಯ ವಿನಾಮ್ರೋತ್ತುಂಗಕಿರೀಟಮಕುಟಘೃಷ್ಟ
ಪಾದಾರವಿಂದಯುಗ್ಮ ನಿರ್ಜಿತವೈರಿರಿಪು(?)ನಿವಹಕಾಲದಂಡ ದುಷ್ಟಮದಭಂಜನನ ಮೋಘರಾಮಂ
ಪರಚಕ್ರಪಂಚಾನನಂ ಸುರಾಸುರಮರ್ದನಂ ವೈರಿಭಯಂಕರಂ ಬದ್ದಮನೋಹರಂ ಅಭಿಮಾನಮಂದಿರಂ
ರಟ್ಟವಂಶೋದ್ಭವಂ ಗರುಡಲಾಂಛನಂ ಟವಿಳಿಪಱಿ ಘೋಷಣಂ ಲಟ್ಟಲೂರಪುರ ಪರಮೇಶ್ವರಂ
ಶ್ರೀಮದಮೋಘವರ್ಷ ನೃಪತುಂಗನಾಮಾಂಕಿತ ಲಕ್ಷ್ಮೀವಲ್ಲಭೇಂದ್ರ ಚಂದ್ರಾದಿತ್ಯಕಾಲಂ
ಮಹಾವಿಷ್ಣುವ ರಾಜ್ಯಂಬೋಲ್ ಉತ್ತರೋತ್ತರಂ ರಾಜ್ಯಾಭಿವೃದ್ಧಿ ಸಲುತ್ತಿರೆ ಶಕ ನೃಪಕಾಲಾತೀತ
ಸಂವತ್ಸರಶತಂಗಳ್ ಏೞ್ನೂಱಱಂಭತ್ತೆಂಟನೆಯ ವ್ಯಯಸಂವತ್ಸರಂ ಪ್ರವರ್ತಿಸೆ ಶ್ರೀಮದಮೋಘವರ್ಷ
ನೃಪತುಂಗನಾಮಾಂಕಿತನಾ ವಿಜಯರಾಜ್ಯಪ್ರವರ್ಧಮಾನಸಂವತ್ಸರಂಗಳಯ್ವತ್ತೆರಡುಂ
ಉತ್ತರೋತ್ತರಂ ರಾಜ್ಯಾಭಿವೃದ್ಧಿ ಸಲುತ್ತಿರೆ ಅತಿಶಯಧವಳ ನರೇಂದ್ರದೇವ ಪ್ರಸಾದದಿಂದಮೋಘವರ್ಷ
ದೇವಪಾದಪಂಕಜಭ್ರಮರಂ ವಿಶಿಷ್ಟಜನಾಶ್ರಯನಪ್ಪ ಶ್ರೀಮದ್ದೇವಣ್ಣಯ್ಯಂ ಬೆಳ್ವೊಲ
ಮೂನೂಱುಮನ್ ಆಳುತ್ತುಂ ಅನ್ನಿಗೆಱಿಯೊಳಿರೆ ಆತನ ಮೆಯ್ದುನಂ ಕುಲಪ್ಪಯ್ಯಂ
ಮುಳ್ಗುಂದ ಪನ್ನೆರಡುಮನ್ ಆಳುತ್ತಿರೆ ತದನ್ತರ್ಗತಜ್ಯೇಷ್ಠಮಾಸದ ಕೃಷ್ಣ ಪಕ್ಷದಮಾವಾಸ್ಯೆಯುಂ
ಸೂರ್ಯಗ್ರಹಣಮುಮಾಗಿ ಕುಲಪ್ಪಯ್ಯಂ ಬಿನ್ನಪಂಗೆಯ್ಯೆ ದೇವಣ್ಣಯ್ಯಂ ಅಮೋಘವರ್ಷ
ದೇವರೊಳ್ ರಾಜವಿಜ್ಞಾಪಿತಂ ಮಾಡಿ ತದನುಮತದಿಂದಿರ್ವ್ವರುಂ ಮಾತಾಪಿತೃ ಶ್ರೇಯೋಧರ್ಮಾರ್ಥಂ
ಪುಣ್ಯಮಾಗಿಯಾ ಗ್ರಹಣದೊಳ್ ನೀರ್ಗುಂಡದ ನೂಱಿಪ್ಪದಿಂಬರುಂ ಮಹಾಜನದ ಕಾಲಂ ಕರ್ಚ್ಚಿ
ತುಪ್ಪದೆಱೆಯಂ ಸಭೋಗಸಾಧಕಮಾಗಿ ಬಿಟ್ಟೋರ್ ॥

ಧರ್ಮಮಂ ಕಾದೊಂ ವಾರಾಣಾಸಿಯುಳ್ ಸೂರ್ಯಗ್ರಹಣದೊಳ್
ಸಾಸಿರ ಕವಿಲೆಯ ವೇದವಿದರ್ಕಳಪ್ಪ ಬ್ರಾಹ್ಮಣರ್ಕ್ಕಳ್ಗೆ ಕೊಟ್ಟ ಪುಣ್ಯಫಲಮನೆಯ್ದುವೊನ್
ಇದನೞಿದುಂಟಾಪಂ ಸಾಸಿರ ಕವಿಲೆಯುಮಂ ಸಾಸಿರ್ವರ್ ಬ್ರಾಹ್ಮಣರುಮಂ
ವಾರಾಣಾಸಿಯುಮನೞಿದ ಪಂಚಮಹಾಪಾತಕನಕ್ಕುಂ ॥

ಓಂ ವ್ಯಾಸವಾಕ್ಯಂ ॥
ಸ್ವದತ್ತಾಂ ಪರದತ್ತಾಂ ವಾ ಯೋ ಹರೇತಿ ವಸುಂಧರಾಂ
ಷಷ್ಟಿಂ ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕೃಮಿಃ

ದೇವಸ್ವಂ ವಿಷಮಿತ್ಯಾಹುರ್ಬ್ರಹ್ಮಸ್ವಂ ವಿಷಮುಚ್ಯತೇ
ವಿಷಮೇಕಾಕಿನಂ ಹಂತಿ ಬ್ರಹ್ಮಸ್ವಂ ಪುತ್ರಪೌತ್ರಿಕಂ

ಬ್ರಹ್ಮಸ್ವಂ ಪ್ರಣಯಾದ್ಭುಕ್ತಾ ದಹತ್ಯಾಸಪ್ತಮಂ ಕುಲಂ
ವಿಕ್ರಮೇಣ ಯೇ ಭೋಕ್ಷ್ಯಂತೇ ದಶಪೂರ್ವಾನ್ ದಶಾವರಾನ್ ॥

ಜಯತಿ ಸ್ಥಿತಿಸಂಹಾರಸೃಷ್ಟಿಕಾರಣಕಾರಣಂ
ಹರಿರ್ದಿತಿಜಕಾಂತಾಸ್ಯಕುಶೇಶಯಹಿಮಾಗಮಃ

ಸಾಮಾನ್ಯೋಽಯಂ ಧರ್ಮಸೇತುರ್ನೃಪಾಣಾಂ
ಕಾಲೇಕಾಲೇ ಪಾಲನೀಯೋ ಭವದ್ಭಿಃ

ಸರ್ವಾನೇತಾನ್ ಭಾವಿನಃ ಪಾರ್ಥಿವೇಂದ್ರಾನ್
ಭೂಯೋ ಭೂಯೋ ಯಾಚತೇ ರಾಮಚಂದ್ರಃ ॥
....................ಭಟಾರ ಲಿಖಿತಮಿಾ ಕಲ್ಲಂ
ನಾಗಮುದ್ರನ............................

## ೪. ಶಿರೂರು ಶಾಸನ (ಕ್ರಿ.ಶ. ೮೬೬-೬೭)*

ಸ ವೋऽವ್ಯಾದ್ವೇಧಸಾ ಧಾಮ ಯನ್ನಾಭಿಕಮಲಂ ಕೃತಂ
ಹರಶ್ಚ ಯಸ್ಯ ಕಾಂತೇಂದುಕಲಯಾ ಕಮಲಂಕೃತಂ

ಲಬ್ಧ ಪ್ರತಿಷ್ಠಮಚಿರಾಯ ಕಲಿಂ ಸುದೂರ_
   ಮುತ್ಸಾರ್ಯ ಶುದ್ಧ ಚರಿತ್ರೈರ್ಧರಣೀತಲಸ್ಯ
ಕೃತ್ವಾ ಪುನಃ ಕೃತಯುಗಶ್ರಿಯಮಪ್ಯಶೇಷಾಂ
   ಚಿತ್ರಂ ಕಥಂ ನಿರುಪಮಃ ಕಲಿವಲ್ಲಭೋऽಭೂತ್

ಪ್ರಭೂತವರ್ಷೋ ಗೋವಿಂದರಾಜಃ ಶೌರ್ಯೇಷು ವಿಕ್ರಮಃ
ಜಿತ್ವಾ ಜಗತ್ಸಮಸ್ತಂ ಯೋ ಜಗತ್ತುಂಗ ಇತಿ ಶ್ರುತಃ

ಕೇರಳಮಾಳವಶೌಟಾನ್
      ಸ ಗುಜ್ಜರಾನ್ ಚಿತ್ರಕೂಟಗಿರಿದುರ್ಗ ಸ್ಥಾನ್
ಬಧ್ವಾ (ದ್ಧ್ವಾ) ಕಾಂಚೀಶಾನಥ
      ಸ ಕೀರ್ತಿನಾರಾಯಣೋ ಜಗತಿ

ಅರಿನೃಪತಿಮುಕುಟಘಟ್ಟಿತ_
      ಚರಣಃ ಸಕಲಭುವನ ವಲಯ ವಿದಿತ ಶೌರ್ಯಃ
ವಂಗಾಂಗಮಗಧಮಾಳವ_
      ವೆಂಗೀಶೈರರ್ಚಿತೋऽತಿಶಯ ಧವಳಃ

ಸ್ವಸ್ತಿ ಸಮಧಿಗತಪಂಚಮಹಾಶಬ್ದ_ಮಹಾರಾಜಾಧಿರಾಜಪರಮೇಶ್ವರಭಟ್ಟಾರಕ ಚತುರುದಧಿವಲಯವಲಯಿತಸಕಲಧರಾತಲಪ್ರಾತಿರಾಜ್ಯಾನೇಕಮಂಡಲಿಕರ್ಕಳಾ ಕಟಕ ಕಟಿಸೂತ್ರಕುಂಡಲಕೇಯೂರಹಾರಾಭರಣಾಲಂಕೃತ ಗಣಿಕಾಸಹಸ್ರಚಾಮರಾಂಧಕಾರ ನಾದಿಯ್ಯವೀಯ್ಯಮಾನ [ದೇದೀಪ್ಯಮಾನ] ಶ್ವೇತಾತಪತ್ರತ್ರಯಕಳಹಶಂಖ ಪಾಳಿಧ್ವಜೋರುಕೇತುಪತಾಕಾಚ್ಛಾದಿತದಿಗಂತರೆಲ್ಲಂ ಸೃಷ್ಟಿಸೇನಾಪತಿಪುರವರತಳವರ್ಗ ದಂಡನಾಯಕಸಾಮಂತಾದ್ಯಾನೇಕವಿಷಯವಿನಾಪ್ನೋತ್ತುಂಗಕಿರೀಟಮುಕುಟಘೃಷ್ಟ ಪಾದಾರವಿಂದಯುಗ್ಮನಿರ್ಜಿತವೈರಿರಿಪುನಿವಹಕಾಲದಂಡ-ದುಷ್ಟಮವಭಜ್ಜನ[ಭಂಜನ]ನ ಮೋಘರಾಮಂ ಪರಚಕ್ರಪಂಚಾನನಂ ಸುರಾಸುರಮರ್ದನಂ ವೈರಿಭಯಂಕರಂ ಬದ್ದಮನೋಹರಂ ಅಭಿಮಾನಮಂದಿರಂ ರಟ್ಟವಂಶೋದ್ಭವಂ ಗರುಡಲಾಂಛನಂ

ಟವಿಳಿಪಜಿತಘೋ

ಷಣಂ ಲಟ್ಟಲೂರಪುರಪರಮೇಶ್ವರಂ ಶ್ರೀನೃಪತುಂಗನಾಮಾಂಕಿತಲಕ್ಷ್ಮೀವಲ್ಲಭೇಂದ್ರಂ ಚಂದ್ರಾದಿತ್ಯಕಾಲಂಬರೆಗಂ ಮಹಾವಿಷ್ಣುರಾಜ್ಯಂಬೊಲ್ ಉತ್ತರೋತ್ತರಂ ರಾಜ್ಯಾಭಿವೃದ್ಧಿ ಸಲುತ್ತಿರೆ ಶಕನೃಪಕಾಲಾತೀತಸಂವತ್ಸರಂಗಳೇೞ್ನೂರೆಂಭತ್ತೆಂಟನೆಯ ವ್ಯಯಮೆಂಬ ಸಂವತ್ಸರಂ ಪ್ರವರ್ತಿಸೆ ಶ್ರೀಮದಮೋಘವರ್ಷನೃಪತುಂಗನಾಮಾಂಕಿತನಾ ವಿಜಯರಾಜ್ಯ

* ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೭, ಪುಟ ೨೦೨.

ಪ್ರವರ್ಧಮಾನಸಂವತ್ಸರಂಗಳ್ ಆಯ್ವತ್ತೆರಡುಮುತ್ತರೋತ್ತರಂ ರಾಜ್ಯಾಭಿವೃದ್ಧಿ ಸಲುತ್ತಿರೆ ಅತಿಶಯಧವಳನರೇಂದ್ರಪ್ರಸಾದದಿಂದಮೋಘವರ್ಷದೇವಪಾದಪಂಕಜಭ್ರಮರವಿಶಿಷ್ಟ ಜನಾಶ್ರಯನಪ್ಪ ಶ್ರೀಮದ್ದೇವಣ್ಣಯ್ಯಂ ಬೆಳ್ವೊಲ ಮೂನೂಱುಮನಾಳುತ್ತುಂ ಅನ್ನಿ(ಣ್ಣಿ)ಗೆಱೆಯೊಳಿರೆ ಜ್ಯೇಷ್ಠಮಾಸದಮಾವಾಸ್ಯೆಯುಮಾದಿತ್ಯವಾರಮುಮಾಗೆ ಸೂರ್ಯಗ್ರಹಣದಂದು ಶ್ರೀಪೂರದ ರವಿಕಯ್ಯಂ ಮೊದಲಾಗಿ ಇಬ್ನೂರ್ವರುಂ ಮಹಾಜನದ ಕಾಲಂ ಕಟ್ಟಿ ತುಪ್ಪದೆಱೆಯಂ ಬೀಬಿಟ್ಟೊಂ ॥ ಈ ಸ್ಥಿತಿಯಂ ಕಾದಾತಂಗೆ ಬಾರಣಾಶಿವದೊಳ್ (?ವಾರಣಾಸಿಯೊಳ್) ಸಾಸಿರ ಕವಿಲೆಯುಂ ಕೊಟ್ಟ ಫಲಂ ಅಕ್ಕುಂ. ಇದನ್ ಅಱಿದು ತುಪ್ಪಂ ಉಂಡಾತಂ ಬಾರಣಾಸಿಯುಳ್ ಸಾಸಿರ ಕವಿಲೆಯುಮಂ ಸಾಸಿರ್ವರ್ಪಾರ್ವರುಮನ್ ಅಱಿದೊನ್ ಅಕ್ಕುಂ ॥ ನಿಂಬಿಚ್ಛರ ಬಮ್ಮಯ್ಯ ಬೆಸಗೆಯ್ಸಿದೊ ಮಾಧವಯ್ಯನ ಲಿಖಿತಂ ನಾಗಾರ್ಜುನಂ ಬೆಸಗೆಯ್ದೊ ಸಿರಿಗಾವುಣ್ಣನ ಎಱುತು ಪುದಿದುದು ॥

## ೫. ಸೊರಟೂರು ಶಾಸನ (ಕ್ರಿ.ಶ. ೮೬೯)*

ಓಂ ಸ್ವಸ್ತಿ ಶ್ರೀ ಅಮೋಘವರ್ಷ_ಪೃಥ್ವೀವಲ್ಲಭ_ಮಹಾರಾಜಾಧಿರಾಜ_ಪರಮೇಶ್ವರ ಭಟಾರರ್ ಪೃಥ್ವೀರಾಜ್ಯಂ ಗೆಯ್ಯೆ ಓಂ ಸ್ವಸ್ತಿ ಪ್ರಚಂಡಮಂಡಲಾಗ್ರಖಂಡಿತಾರಾತಿ ಮಂಡಲಪ್ರತಾಪಸಂಪನ್ನ_ಆದವವಂಶೋದ್ಭವ_ರಣಮುಖಧವಲ_ಷಡ್ಗುಣಾಲಂಕಾರನ್ ಅಹವಾದಿತ್ಯಂ ಶ್ರೀಮತ್‌ಕುಪ್ಪೇಯಂ ಪುರಿಗೆಱೆ ನಾಡಂ ಆಳೆ ವಿರೋಧಿ ಸಂವತ್ಸರಂ ಪ್ರವರ್ತಿಸೆ ತದನ್ತವರ್ತಿಯಾಗುತ್ತಿಬ್ದ ಆಷಾಢಮಾಸ ಶುದ್ಧ ಅಷ್ಟಮಿಯು ಬೃಹಸ್ಪತಿವಾರದಂದು ನಯವಿನಯಸತ್ಯಶೌಚಾಚಾರಶೀಲಸಂಪನ್ನನಪ್ಪ ಶ್ರೀಮತ್ ವಿಳಿಕ್ಕರನಾಗಿಯಮ್ಮಗಾಮುಂಡಂ ಚಂದ್ರಾದಿತ್ಯರ್ಕಳ್ ಉಳ್ಳಿನಂ ಶ್ರೀವಾಯಿಱನ್ ನಿಱಿಸಿದಾನ್ ॥

* ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೩, ಪುಟ ೧೭೬.

## ೬. ರೋಣ ಶಾಸನ (ಕ್ರಿ.ಶ. ೮೬೪)*

ಓಂ ಸ್ವಸ್ತ್ಯಮೋಘವರ್ಷ ಶ್ರೀ ಪ್ರಿಥುವಿವಲ್ಲಭಮಹಾರಾಜಾಧಿರಾಜ ಪರಮೇಶ್ವರಭಟಾರರಾ ರಾಜ್ಯದುತ್ತರೋತ್ತರಂ ಅಭಿವೃದ್ಧಿಯೊಳ್ ಸ[ಶ]ಕ ನೃಪ ಕಾಲಾತಿ[ತೀ]ತ ಸಂವತ್ಸರಂಗಳೇೞ್ನೂಱ[ಱ]ತ್ತೊಂಬತ್ತು ವರಿಷಮುಂ ಆಱು ವರ್ಷಮುಂ ಪೋದಂದು ಜಯಮೆಂಬ ವರ್ಷದ ಶ್ರಾವಣಮಾಸದ ಸು[ಸೂ]ರ್ಯಗ್ರಹಣದೊಳ್ ಬಲ್ಲವರಸರ್ ರೋಣದ ಮಹಾಜನಕೆ.........ನ ಪು[ಪೂ]ಜ್ಯಮಂ ಕೊಟ್ಟು......ಱು ತುಪ್ಪಮುಂ ಕೋಣಮು...............ಱಿದೊರ್ ಆ(?)ದ್ದೊಗೆ॥
ಇದನ್ ಅಱಿದಕಾ..................ಸಸಾ[ಸಿ]ರ ಕವಿಲೆಯುಂ ಸಾಸಿರ್ವರ್ ಪಾರ್ವರುಮನ್ ಅಱಿದ.....................ರ ತಿಪ್ಪೆ...................
......................ನದಂ ನೀಱಿ[ಱಿ]ಸಿದೊವರ್ ॥

* ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೩.

## ೭. ಸಿಡುಗುಂಡಿ ಶಾಸನ (ಕ್ರಿ.ಶ. ೮೭೪-೭೫)*

ಸ್ವಸ್ತ್ಯಮೋಘವರ್ಷ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜಪರಮೇಶ್ವರ ಭಟಾರರ್ ಒಂದುತ್ತರಂ ರಾಜ್ಯಂಗೆಯುತ್ತಿರೆ ಸತ್ಯಸಮರಸಂಘಟ್ಟನೋಪಲಬ್ಧ ವಿಜಯ ಲಕ್ಷ್ಮೀನಿವಾಸಿತಚೆಲ್ಲಕೇತನ ಶ್ರೀಮತ್ ಬಂಕೆಯರಸರ್ ಬನವಾಸಿ ಪನ್ನಿರ್ಛಾಸಿರಮುಮನ್ ಬೆಳ್ಗಲಿ ಮೂನೂಱುಮಂ ಕುಂದರಗೆ ಎಳುಪತ್ತುಮಂ ಕುಂದೂರಯ್ನೂಱುಮಂ ಬಂಕೇಯರಸರಾಳುತ್ತಿರೆ ಬಂಕೇಯನ ಮಗಂ ಕುಂದಟ್ಟೆ ಸಿಡುಗುಂಡದಗೆ ಪನ್ನೆರಡುಮನ್ ಆಳುತಿಱ್ದು ಬಂಕೇಯಂಗೆ ಧರ್ಮಂ ಅಕ್ಕೆಂದು ಕುಂದಟ್ಟೆಯುಂ ರಾಪನುಮಿಱ್ದು ಸಿಡುಗುಂದಗೆ ಪನ್ನೆರಡಱ ಪೆರ್ಗಡೆ(?ಗರ್ಗಡೆ) ಕುಪ್ಪಣ್ಣನ ದೇಗುಲದ ಮಹಾದೇವರ್ಗೆ ಧರ್ಮತ್ತತೋರ್ಂಟಮುಱುಂ ಅಯ್ಮತ್ತಕ್ಕೆಯ್ಯುಂ ಕೊಟ್ಟರ್ ಮಱದಂ ತಸ್ಯ ಭಾಗಮುಂ ಕುಡೆ ಆವಟ್ಟ್ವರಕುಪ್ಪಂ ದೇಗುಲಮುಂ ಮಾಡಿಸಿ ಸರ್ವಬಾಧಾಪರಿಹಾರಂ ಶಂಕರಂ ನಾಱ್ಗಾಮುಂಡು ಗೆಯ್ಯೆ ಗಾಡಿಯುಮ್ಮನಾ ಬಾಱಮ್ ಪರಿಪಾಲಿಸಿ ನಿಲೆ ಪಡೆದೊರ್(ನ್)॥ ಇದಂ ಕಾದೊಂಗೆ ವಾರಣಾಸಿಯೊಳ್ ಅಶ್ವಮೇಧದ ಫಲಂ। ಇದನ್ ಅಱಿದೊನ್ಗೆ ಸಾಸಿರ ಕವಿಲೆಯುಂ ಸಾಸಿರ್ವರ್ ಪಾರ್ವರುಮನ್ ಅಱಿದ ಮಹಾ

ಪಾತಕಮ್ ಅಕ್ಕು॥ ॥ ಓಂ ॥

**ಈ ಕಲ್ಲಂ ದುರ್ಗದಾಸಂ ಸಮೆದೊಂ॥**



* ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೭, ಪುಟ ೨೦೨.

## ೮. ಸೊರಬ ಶಾಸನ (ಕ್ರಿ.ಶ. ೮೭೬)*

ಸ್ವಸ್ತ್ಯಮೋಘವರ್ಷವಲ್ಲಭಮಹಾರಾಜಾಧಿ
ರಾಜ ಪರಮೇಶ್ವ[ರ]ಭಟಾರಕಾ ಪೃಥುವೀರಾ
ಜ್ಯಙ್ಗೆಯೆ ಬನವಾಸಿ ಪನ್ನಿರ್ಚ್ಛಾಸಿರಮುಮಾನಿನ್ದ
ರಗೊಳೆ ಸಕವರ್ಷಮೇೞ್ನೂಱತೊಮ್ಭತೊಮ್ಭ
ತನೆಯ ಸಂವತ್ಸರಂ ಪ್ರವರ್ತಿಸೆ ಕುಮ್ಬಿಸೆಯುಂ ಕಟ್ಟಿ
ಜಕ್ಗಿಂದರನುಮ್ಮಾರಮಯ್ಯನು ಕೀಱಿಲಸುಂ
ಗೊದೊಳ್ರಾಜಮಾರಮಯ್ಮತ್ತಲ್ಕೈಯ್ಯಂ
ಕೊಟ್ಟರದ ಮಾರಿದರ ಶಿರಿಪುರುರ್ಷನ
ಮಗ ದೇವಾತಿ ಪಡಿಸಲಿಸಿಯುಣ್ಬ
ನಿದಂ ಕಾದೋಜ್ಞಶ್ವಮೇಧದ ಫಲಂ ಕಿಡಿ
ಸಿದೊಜಕ್ಗಿ ಬ್ರಹ್ಮೇತಿ ಸಾರ್ಗ್ಗ ಈ ಕಲ್ಲಂ ಕನ್ನಿಲ್ಲಮ್ಮಾಡಿದೊ

---

* ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೯.

## ೯. ಸಂಜಾನ ಶಾಸನ (ಕ್ರಿ.ಶ. ೮೭೧)*

ಓಂ ಸ ವೋಽವ್ಯಾದ್ವೇಧಸಾ ಧಾಮ ಯನ್ನಾಭಿಕಮಲಂ ಕೃತಂ
ಹರಶ್ಚ ಯಸ್ಯ ಕಾಂತೇಂದುಕಲಯಾ ಕಮಲಂಕೃತಂ ೧

ಅನಂತಭೋಗಸ್ಥಿತಿರತ್ರ ಪಾತು ವಃ ಪ್ರತಾಪಶೀಲಪ್ರಭವೋ ದಯಾಚಲಃ
ಶು[ಸು]ರಾಷ್ಟ್ರಕೂಟೋಚ್ಛಿ[ಚ್ಛ್ರಿ]ತವಂಶಪೂರ್ವಜಃ
ಸ ವೀರನಾರಾಯಣ ಏವ ಯೋ ವಿಭುಃ ೨

ತದೀಯವೀರ್ಯಾಯತಯಾದವಾನ್ವಯೇ
ಕ್ರಮೇಣ ವಾರ್ಧಾವಿವ ರತ್ನಸಂಚಯಃ
ಬಭೂವ ಗೋವಿಂದಮಹೀಪತಿರ್ಭುವಃ
ಪ್ರಸಾಧನೋ ಪೃಚ್ಛಕ ರಾಜ[ನಂ]ದನಃ ೩

ವ[ಬ]ಭಾರ ಯಃ ಕೌಸ್ತುಭರತ್ನವಿಸ್ಫುರ
ಟ್ಗ[ದ್ಗ]ಭಸ್ತಿವಿಸ್ತೀರ್ಣಮುರಸ್ಥಲಂ ತತಃ
ಪ್ರಭಾತಭಾನುಪ್ರಭವಪ್ರಭಾತತಂ
ಹಿರಣ್ಮಯಂ ಮೇರುರಿವಾಭಿತಸ್ತಟಂ ೪

ಮನಾಂಸಿ ಯತ್ರಾಸಮಯಾನಿ ಸಂತತಂ
ವಚಾಂಸಿ ಯತ್ಕೀರ್ತಿವಿಕೀರ್ತನಾನ್ಯಪಿ
ಶಿರಾಂಸಿ ಯತ್ಪಾದನತಾನಿ ವೈರಿಣಾಂ
ಯಶಾಂಸಿ ಯತ್ತೇಜಸಿ ನೇಶುರನ್ಯತಃ ೫

ಧನುಸ್ಸಮುತ್ಸಾರಿತಭೂಭೃತಾ ಮಹೀ
ಪ್ರಸಾರಿತಾ ಯೇನ ಪೃಥುಪ್ರಭಾವಿನಾ
ಮಹೌಜಸಾ ವೈರಿತಮೋ ನಿರಾಕೃತಂ
ಪ್ರತಾಪಶೀಲೇನ ಸ ಕರ್ಕರಾಟ್ಪ್ರಭುಃ ೬

ಇಂಪ್ರರಾಜಸ್ತತೋಽಗೃಹ್ಣಾತ್ ಯಶ್ಚಾಲುಕ್ಯ ನೃಪಾತ್ಮಜಾಂ
ರಾಕ್ಷಸೇನ ವಿವಾಹೇನ ರಣೇ ಖೇಟಕಮಂಡಪೇ ೭

ತತೋಽಭವದ್ದಂತಿಘುಟಾಭಿಮರ್ದನೋ
ಹಿಮಾಚಲಾದಾಸ್ಥಿತಸೇತುಸೀಮತಃ
ಖಿಲೀಕೃತೋದ್ವೃತ್ತಮಹೀಪಮಂಡಲಃ
ಕುಲಾಗ್ರಣೀಯೋರ್ ಭುವಿ ದಂತಿದುರ್ಗರಾಟ್ ೮

* ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೧೮, ಪುಟ ೨೩೪.

ಹಿರಣ್ಯಗರ್ಭಂ ರಾಜನ್ಯೈರುಜ್ಜಯಿನ್ಯಾಂ ಯದಾಸಿತಂ
ಪ್ರತೀಹಾರೀಕೃತಂ ಯೇನ ಗುರ್ಜರೇಶಾದಿ ರಾಜಕಂ ೯

ಸ್ವಯಂವರೀಭೂತರಣಾಂಗಣೇ ತತ
ಸ್ಸ ನಿರ್ವ್ಯಪೇಕ್ಷಂ ಶುಭತುಂಗವಲ್ಲಭಃ
ಚಕರ್ಷ ಚಾಲುಕ್ಯಕುಲಶ್ರಿಯಂ ಬಲಾತ್
ವಿಲೋಲ ಪಾಲಿಧ್ವಜಮಾಲಭಾರಿಣೀಂ ೧೦

ಅಯೋಧ್ಯಸಿಂಹಾಸನಚಾಮರೋರ್ಜಿತಃ
ಸಿತಾತಪತ್ರಃ ಪ್ರತಿಪಕ್ಷ ರಾಜ್ಯಭಾಕ್
ಅಕಾಲವರ್ಷೋ ಹತಭೂಪರಾಜಕೋ
ಬಭೂವ ರಾಜರ್ಷಿರಶೇಷ ಪುಣ್ಯಕೃತ್ ೧೧

ತತಃ ಪ್ರಭೂತವರ್ಷೋಽಭೂದ್ಧಾರಾವರ್ಷಸ್ತತಶ್ಶರೈಃ
ಧಾರಾವರ್ಷಾಯಿತಂ ಯೇನ ಸಂಗ್ರಾಮಭುವಿ ಭೂಭುಜಾ ೧೨

ಯುದ್ಧೇಷು ಯಸ್ಯ ಕರವಾಲನಿಕೃತ್ತಶತ್ರು
ಮೂರ್ಧ್ನಾಂ ಕವೋಷ್ಣರುಚಿರಾಸವಪಾನಮತ್ತಃ
ಆಕಂಠಪೂರ್ಣಜಠರಃ ಪರಿತೃಪ್ತ ಮೃತ್ಯು
ರುದ್ಗಾರಯನ್ನಿವ ಸ ಕಾಹಲಧೀರನಾದಃ ೧೩

ಗಂಗಾಯಮುನಯೋರ್ಮಧ್ಯೇ ರಾಜ್ಞೋ ಗೌಡಸ್ಯ ನಶ್ಯತಃ
ಲಕ್ಷ್ಮೀಲೀಲಾರವಿಂದಾನಿ ಶ್ವೇತಚ್ಛತ್ರಾಣಿ ಯೋಽಹರತ್ ೧೪

ವ್ಯಾಪ್ತಾ ವಿಶ್ವಂಭರಾಂತಂ ಶಶಿಕರಧವಲಾ
ಯಸ್ಯ ಕೀರ್ತಿಸ್ಸಮಂತಾತ್
ಪ್ರೇಂಖಚ್ಛಂಕಾ [ಖಾ]ಲಿಮುಕ್ತಾಫಲಶತಶಫರಾನೇಕ
ಫೇನೋರ್ಮಿರೂಪೈಃ
ಪಾರಾವಾರಾನ್ಯತೀರೋತ್ತರಣಮವಿರತಂ
ಕುರ್ವತೀವ ಪ್ರಯಾತಾ
ಸ್ವರ್ಗಂ ಗೀರ್ವಾಣಹಾರದ್ವಿರದಸುರಸರಿ
ದ್ಧಾರ್ತರಾಷ್ಟ್ರಚ್ಛಲೇನ ೧೫

ಪ್ರಾಪ್ತೋ ರಾಜ್ಯಾಭಿಷೇಕ[ಂ] ನಿರುಪಮತನಯೋ ಯಃ ಸ್ವಸಾಮಂತ ವರ್ಗಾತ್[ನ್]
ಸ್ವೇಷಾಂ ಸ್ವೇಷಾಂ ಪದೇಷು ಪ್ರಕಟಮನುನಯೈಃ ಸ್ಥಾಪಯಿಷ್ಯಾಮ್ಯಶೇಷಾನ್
ಪಿತ್ರಾ ಯೂಯಂ ಸಮಾನಾ ಇತಿ ಗಿರಮರಣೇನ್ಮಂತ್ರಿವರ್ಗ ಶ್ರಿವರ್ಗೋ
ದ್ಯುಕ್ತಃ ಕೃತ್ಯೇಷು ದಕ್ಷಃ ಕ್ಷಿತಿಭವತಿ ಯದೋನ್ಮೋಕ್ಷಯತ್
(ಕ್ಷಿತಿಪತಿ......ಮೋಚಯತ್) ಬದ್ಧಗಂಗಂ ೧೬

ದುಷ್ಟಾಂಸ್ತಾವತ್ಸ್ವ ಭೃತ್ಯಾನ್ವಿಘಟಿತಾ ಸ್ಥಾಪಿತಾನ್ಯೇಶಪಾಶಾನ್
ಯುದ್ಧೇ ಯುದ್ಧೇ ಸ ವಧ್ವಾ ವಿಷಮತರಮಹೋ ಕಸ್ಸನಿವ್ರೋಗ್ರಾನ್ ಸಮುಗ್ರಾಂ[ನ್]

ಮುಕ್ತ್ವಾ ಸಾದ್ರ್ಯಂತರಾತ್ಮಾ ವಿಕೃತಿಪರಿಣತೌ ವಾಡಬಾಗ್ನಿಂ ಸಮುದ್ರಃ
ಕ್ಷೋಭೋ ನಾಭೂದ್ವಿಪಕ್ಷಾನಪಿ ಪ್ರಸರಿವ ತಾಂ ಭೂಭೃತೋ ಯೋ ಬಭಾರ ೧೭

ಉಪಗತವಿಕೃತಿಃ ಕೃತಘ್ನಗಂಗೋ ಯದುದಿತದಂಡಪಲಾಯನೋನುಬಂಧಾ
ಧ್ಯಪಗತಪದಶೃಂಖಲಃ ಖಲೋ ಯಃ ಸನಿಗಲಪಂಧ[ಬದ್ಧ]ಗಲಃ ಕೃತಸ್ಸ ಯೇನ ೧೮

ಶ್ರೀಮಾಂಧಾತಾ ವಿಧಾತು[ಃ] ಪ್ರತಿನಿಧಿರಪರೋ ರಾಷ್ಟ್ರಕೂಟಾನ್ವಯ ಶ್ರೀ
ಸಾರಾನ್[೦]ಸಾರಾಮುರವ್ಯಪ್ರವಿತತನಗರಗ್ರಾಮರಾಮಾಭಿರಾಮಾಂ
ಉರ್ವೀಮುರ್ವೀಶ್ವರಾಣಾಂ ಮಕುಟಮುಕರಿಕಾಶ್ಲಿಷ್ಟಪಾದಾರವಿಂದಃ
ಪಾರಾವಾರೋರುವಾರಿಸ್ಫುಟರವರಶನಾಂ ಪಾತುಮಭ್ಯುದ್ಯತೋ ಯಃ ೧೯

ನವಜಲಧರವೀರಧ್ವಾನಗಂಭೀರಭೇರೀರವಬಧಿರಿತವಿಶ್ವಾಶಾಂತರಾಳೋ ರಿಪೂಣಾಂ
ಪಟುರವಪದಢಕ್ಕಾಕಾಹಲೋತ್ತಾಲತೂರ್ಯತ್ರಿಭುವನಧವಲಸ್ಯೋದ್ಯೋಗ
ಕಾಲಸ್ಯಕಾಲಃ ೨೦

ಭೂಭೃನ್ಮೂರ್ಧ್ನಿ ಸುನೀತಪಾದವಿಸರಃ ಪುಣ್ಯೋದಯಸ್ತೇಜಸಾ
ಕ್ರಾಂತಾಶೇಷದಿಗಂತರಃ ಪ್ರತಿಪದಂ ಪ್ರಾಪ್ತಪ್ರತಾಪೋನ್ನತಿಃ
ಭೂಯೋ ಯೋಽಪ್ಯನುರಕ್ತಮಂಡಲಯುತಃ ಪದ್ಮಾಕರಾನಂದಿತೋ
ಮಾರ್ತಂಡಃ ಸ್ವಯಮುತ್ತರಾಯಣಗತಸ್ತೇಜೋನಿಧಿರ್ದುಸ್ಸಹಃ ೨೧

ಸ ನಾಗಭಟಚಂದ್ರಗುಪ್ತನೃಪಯೋರ್ಯ ಶೌರ್ಯಂ ರ
ಣೇಷ್ವಹಾರ್ಯಮಪಹಾರ್ಯ ಧೈರ್ಯಂ ವಿಕಲಾನಥೋನ್ಮೂಲಯತ್[ನ್]
ಯಶೋಽರ್ಜನಪರೋ ನೃಪಾನ್ ಸ್ವಭುವಿ ಶಾಲಿಸಸ್ಯಾನಿವ
ಪುನಃ ಪುನರತಿಷ್ಠಿಪತ್ ಸ್ವಪದ ಏವ ಚಾನ್ಯಾನಪಿ ೨೨

ಹಿಮವತ್ಪರ್ವತ ನಿರ್ಝರಾಂಬು ತುರಗೈಃ ಪೀತಂ ಚ ಗಾಂಗಂ ಗಜೈಃ
ಧ್ವನಿತಂ ಮಜ್ಜನತೂರ್ಯಕೈರ್ದ್ವಿಗುಣಿತಂ ಭೂಯೋಽಪಿ ತತ್ಕಂದರೇ
ಸ್ವಯಮೇವೋಪನತೌ ಚ ಯಸ್ಯ ಮಹತಸ್ತೌ ಧರ್ಮಚಕ್ರಾಯುಧೌ
ಹಿಮವತ್ಕೀರ್ತಿಸರೂಪತಾಮುಪಗತಸ್ತತ್ಕೀರ್ತಿನಾರಾಯಣಃ ೨೩

ತತಃ ಪ್ರತಿನಿವೃತ್ಯ ತತ್ಪ್ರಕೃತಿಭೃತ್ಯಕರ್ಮೇತ್ಯಯಂ
ಪ್ರತಾಪಮಿವ ನರ್ಮದಾತಟಮನುಪ್ರಯಾತಃ ಪುನಃ
ಸಕೋಶಲಕಳಿಂಗವೇಗಿಡಹಲೌಡ್ರಕಾನ್ ಮಾಳವಾನ್
ವಿಲಭ್ಯ ನಿಜಸೇವಕೈಸ್ಸ್ವಯಮಬೂಭುಜದ್ವಿಕ್ರಮಃ ೨೪

ಪ್ರತ್ಯಾವೃತ್ತಃ ಪ್ರಾತಿರಾಜ್ಯಂ ವಿಧೇಯಂ ಕೃತ್ವಾ ರೇವಾಮುತ್ತರಾಂ ವಿಂಧ್ಯಪಾದೇ
ಕುರ್ವನ್ ಧರ್ಮಾನ್ ಕೀರ್ತನೈಃ ಪುಣ್ಯವೃಂದೈರಧ್ಯಷ್ಠಾತ್ತಾಂ ಸ್ವೋಚಿತಾಂ
ರಾಜಧಾನೀಂ ೨೫

ಮಂಡಲೇಶೋ ಮಹಾರಾಜಃ ಶರ್ವಃ ಸ್ವೋ ಯದಭೂದ್ಭುವಃ
ಮಹಾರಾಜ ಶರ್ವಃ ಸ್ವಾಮೀ ಭಾವೀ ಯಸ್ಯ ಸುತೋಽಜನಿ ೨೬

ಯಜ್ಜನ್ಮಕಾಲೇ ದೈವಜ್ಞೈರಾದಿಷ್ಟಂ ವಿಷಹೋ ಭುವಂ
ಭೋಕ್ತೇತಿ ಹಿಮವತ್ಸೇತುಪರ್ಯಂತಾಂಬುಧಿಮೇಖಲಾಂ ೨೭

ಯೋದ್ಧಾರೋಽಮೋಘವರ್ಷೇಣ ಬದ್ಧಾ ಯೇ ಚ ಯುಧಿ ದ್ವಿಷಃ
ಮುಕ್ತಾ ಯೇ ವಿಕೃತಾಸ್ತೇಷಾಂ ಭಸ್ಮತಃ ಶೃಂಖಲೋದ್ಧೃತಿಃ ೨೮

ತತಃ ಪ್ರಭೂತವರ್ಷಸ್ಸನ್ ಸ್ವಸಂಪೂರ್ಣಮನೋರಥಃ
ಜಗತ್ತುಂಗಸ್ಸ ಮೇರುರ್ವಾ ಭೂಭೃತಾಮುಪರಿ ಸ್ಥಿತಃ ೨೯

ಉದತಿಷ್ಠದವಷ್ಟಂಭಂ ಭಙ್ಕ್ತುಂ ಪ್ರವಿಲಭೂಭೃತಾಂ
ಸಜಾಗರಣಚಿಂತಾಸ್ಥಮಂತ್ರಣಭ್ರಾಂತಚೇತಸಾಂ ೩೦

ಪ್ರಸ್ಥಾನೇನ ಹಿ ಕೇವಲಂ ಪ್ರಚಲತಿ ಸ್ವಚ್ಛಾದಿತಾಚ್ಛಾದಿತಾ
ಧಾತ್ರೀ ವಿಕ್ರಮಸಾಧನೈಃ ಸಕಲುಷಂ ವಿದ್ವೇಷಿಣಾಂ ದ್ವೇಷಿಣಾಂ
ಲಕ್ಷ್ಮೀರಪ್ಯುರಸೋ ಲತೇವ ಪವನಪ್ರಾಯಾಸಿತಾಯಾಸಿತಾ
ಧೂಲಿರ್ನೈವ ದಿಶೋಗಮದ್ರಿಷು ಯಶಸ್ಸಂತಾನಕಂ ತಾನಕಂ ೩೧

ತ್ರಸ್ಯತ್ಕೇರಳ ಪಾಂಡ್ಯ ಚೌಲಿಕ ನೃಪಸ್ಸಂಪಲ್ಲವಂ ಪಲ್ಲವಂ
ಪ್ರಮ್ಲಾನಿಂ ಗಮಯನ್ ಕಲಿಂಗಮಗಧಪ್ರಾಯಾಸಕೋ ಯಾಸಕಃ
ಗರ್ಜದ್ಗುರ್ಜರಮೌಲಿಶೌರ್ಯವಿಲಯೋಽಲಂಕಾರಯನ್ ಕಾರಯನ್
ಉದ್ಯೋಗೈಸ್ತದನಿಂದ್ಯ ಶಾಸನಮತಸ್ತದ್ವಿಕ್ರಮೋವಿಕ್ರಮಃ ೩೨

ನಿಕೃತಿವಿಕೃತಗಂಗಾಃ ಶೃಂಖಲಾಬದ್ಧನಿಷ್ಠಾ
ಮೃತಿಮಯುರನುಕೂಲಾ ಮಂಡಲೇಶಾ ಸ್ವಭೃತ್ಯಾಃ
ವಿರಜಸಮಭಿತೇಮುರ್ಯಸ್ಯ ವಾಹ್ಯಾಲಿಭೂಮಿಂ
ಪರಿವೃತಿಮನುವಿಷ್ಟ್ಯಾ ವೆಂಗಿನಾಥಾದಯೋಽಪಿ ೩೩

ರಾಜಾಮಾತ್ಯವರಾವಿವ ಸ್ವಹಿತಕಾರ್ಯಾಲಸ್ಯನಷ್ಟೌ ಹಠಾ
ದ್ದಂಡೇನೈವ ನಿರಸ್ಯ ಮೂಕಬಧಿರಾವಾನೀಯ ಹೇಲಾಪುರೇ
ಲಂಕಾತಃ ಕಿಲ ತತ್ಪ್ರಭು ಪ್ರತಿಕೃತೀ ಕಾಂಚೀಮುಪೇತೌ ತತಃ
ಕೀರ್ತಿಸ್ತಂಭನಿಭೌ ಶಿವಾಯತನಕೇ ಯೇನೇಹ ಸಂಸ್ಥಾಪಿತೌ ೩೪

ಯಾ ಸ್ಯಾತ್ಕೀರ್ತಿಸ್ತ್ರಿಲೋಕ್ಯಾಂ ನಿಜಭುವನಭರಂ ಭರ್ತುಮಾಸೀತ್ಸಮರ್ಥಃ
ಪುತ್ರಶ್ಚಾಸ್ಮಾಕಮೇಕಃ ಸಫಲಮಿತಿಕೃತಂ ಜನ್ಮಧರ್ಮೈರನೇಕೈಃ
ಕಿಂ ಕರ್ತುಂ ಸ್ಥೇಯಮಸ್ಮಿನ್ನಿತಿ ವಿಮಲಯಶಃ ಪುಣ್ಯಸೋಪಾನಮಾರ್ಗಂ
ಸ್ವರ್ಗಪ್ರೋತ್ತುಂಗಸೌಧಂ ಪ್ರತಿ ಯದನುಪಮಃ ಕೀರ್ತಿಮೇವಾನುಯಾತಃ ೩೫

ಬಂಧೂನಾಂ ಬಂಧುರಾಣಾಮುಚಿತನಿಜಕುಲೇ ಪೂರ್ವಜಾನಾಂ ಪ್ರಜಾನಾಂ
ಜಾತಾನಾಂ ವಲ್ಲಭಾನಾಂ ಭುವನಭರಿತಸತ್ಕೀರ್ತಿಮೂರ್ತಿಸ್ಥಿತಾನಾಂ
ತ್ರಾತುಂ ಕೀರ್ತಿಂ ಸಲೋಕಾಂ ಕಲಿಕಲುಷಮಘೋ ಹಂತುಮಂತೋ ರಿಪೂಣಾಂ
ಶ್ರೀಮಾನ್ ಸಿಂಹಾಸನಸ್ಥೋ ಬುಧನುತಚರಿತೋಽಮೋಘವರ್ಷಃ ಪ್ರಶಾಸ್ತಿ ೩೬

ತ್ರಾತುಂ ಸಮ್ರಾನ್ ವಿಜೇತುಂ ರಣಶಿರಸಿ ಪರಾನ್ ಪ್ರಾರ್ಥಕೇಭ್ಯಃ ಪ್ರದಾತುಂ
ನಿರ್ವೋಢುಂ ರೂಢಿಸತ್ಯಂ ಧರಣಿಪರಿವೃಢೋ ನೇದೃಶೋಽನ್ಯಃ ಸಮರ್ಥಃ
ಇತ್ಥಂ ಪ್ರೋತ್ಥಾಯ ನಾರ್ಥಂ ಪೃಥುರವಪದಢಕ್ಕಾದಿಮಂದ್ರಪ್ರಘೋಷೋ
ಯಸ್ಯೇಂದ್ರಸ್ಯೇವ ನಿತ್ಯಂ ಧ್ವನತಿ ಕಲಿಮಲಧ್ವಂಸಿನೋ ಮಂದಿರಾಗ್ರೇ ೩೭

ದೃಷ್ಟ್ವಾ ತನ್ನವರಾಜ್ಯಮೂರ್ಜಿತಬೃಹದ್ಧರ್ಮಪ್ರಭಾವಂ ನೃಪಂ
ಭೂಯಃ ಷೋಡಶರಾಜ್ಯವತ್ಕೃತಯುಗ ಪ್ರಾರಂಭ ಇತ್ಯಾಕುಲಃ
ಸತ್ಯನ್ನಂತರನುಪ್ರವಿಶ್ಯ ವಿಷಮೋ ಮಾಯಾಮಯೋಽಸೌ ಕಲಿಃ
ಸಾಮಂತಾನ್ ಸಚಿವಾನ್ ಸಬಾಂಧವಜನಾನಕ್ಷೋಭಯತ್ಸ್ವೀಕೃತಾನ್ ೩೮

ಶಠಮಂತ್ರಂ ಪ್ರವಿಧಾಯ ಕೂಟಕಪಟೈರೀಶಃ ಸ್ವತಂತ್ರಾಃ ಸ್ವಯಂ
ವಿನಿಹತ್ಯೋಚಿತಯುಕ್ತಕಾರಿಪುರುಷಾನ್ ಸರ್ವೇ ಸ್ವಯಂಗ್ರಾಹಿಣಃ
ಪರಯೋಷಿದ್ದುಹಿತಾ ಸ್ವಸೇತಿ ನ ಪುನರ್ಭೇದಃ ಪಶೂನಾಮಿವ
ಪ್ರಭುರೇವಂ ಕಲಿಕಾಲ ಇತ್ಯವಸಿತಂ ಸದ್ವೃತ್ತಮುದ್ವೃತ್ತತಃ ೩೯

ವಿತತಮಹಿಮಧಾಮ್ನಿ ವ್ಯೋಮ್ನಿ ಸಂಹೃತ್ಯ ಧಾಮ್ನಾ
ನಿತವತಿ ಮಹತೀಂದೋರ್ಮಂಡಲಂ ತಾರಕಾಶ್ಚ
ಉದಯಮಹಿಮಭಾಜೋ ಭ್ರಾಜಿತಾಃ ಸಪ್ರತಾಪೇ
ವಿರತವತಿ ವಿಜಿಹ್ಮಶ್ಚೋರ್ಜಿತಾಸ್ತಾವದೇವ ೪೦

ಗುರುಬುಧಮುಪಯಾತಃ ಸಾರ್ಯಪಾತಾಲಮಲ್ಲಾ
ದುದಯಗಿರಿಮಹಿಮ್ನೋ ರಟ್ಟಮಾರ್ತಂಡದೇವಃ
ಪುನರುದಯಮುಪೇತ್ಯೋದ್ವೃತ್ತತೇಜಸ್ವಿ ಚಕ್ರಂ
ಪ್ರತಿಹತಮಥ ಕೃತ್ವಾ ಲೋಕಮೇಕಃ ಪುನಾತಿ ೪೧

ರಾಜಾತ್ಮಾ ಮನ ಏವ ತಸ್ಯ ಸಚಿವಸ್ಸಾಮಂತಚಕ್ರಂ ಪುನಃ
ತನ್ನಿತ್ಯೇಂದ್ರಿಯವರ್ಗ ಏವ ವಿಧಿವದ್ವಾಗಾದಯಃ ಸೇವಕಾಃ
ದೇಹಸ್ಥಾನಮಧಿಷ್ಠಿತಃ ಸ್ವವಿಷಯಂ ಭೋಕ್ತುಂ ಸ್ವತಂತ್ರಃ ಕ್ಷಮಃ
ತಸ್ಮಿನ್ ಭೋಕ್ತರಿ ಸನ್ನಿಪಾತವಿವಶೇ ಸರ್ವೇಽಪಿ ನಶ್ಯಂತಿ ತೇ ೪೨

ದೋಷಾನೌಷಧವದ್ವನಾನನಿಲವಚ್ಛುಷ್ಕೇಂಧನಾನ್ಯಗ್ನಿವತ್
ಧ್ವಾಂತಂ ಭಾನುವದಾತ್ಮಪೂರ್ವಜಸಮಾಮ್ನಾಯಾಗತಾನ್ ದ್ರೋಹಕಾನ್
ಸಂತಾಪಾದ್ವಿನಿಹತ್ಯ ಯಃ ಕಲಿಮಲಂ ಧಾತ್ರ್ಯಾದಿ ಸಂಪ್ರಾಂತತಃ
ಕೀರ್ತ್ಯಾ ಚಂದ್ರಿಕಯೇವ ಚಂದ್ರಧವಲಚ್ಛತ್ರಶ್ರಿಯಾ ಭ್ರಾಜಿತಃ ೪೩

ಯದ್ದಂಡಾಭಿಹತಾತ್ತರೋರಿವ ಫಲಂ ಮುಕ್ತಾಫಲಂ ಮಂಡಲಾತ್
ಯಾತಂ ಸೂಕರಯೂಥವದ್ಗಹನತಃ ತನ್ಮಂದಿರಂ ಹಾಸ್ತಿಕಂ
ಯತ್ಕೋಪೋಗ್ರದವಾಗ್ನಿದಗ್ಧತನವಃ ಪ್ರಾಪ್ತಾ ವಿಭೂತಿಂ ಪರೇ
ತತ್ಪಾದೋಪನತಪ್ರಸಾದತನವಃ ಪ್ರಾಪ್ತಾ ವಿಭೂತಿಂ ಪರೇ ೪೪

ಯಸ್ಯಾಜ್ಞಾಂ ಪರಚಕ್ರಿಣಃ ಸ್ರಜಮಿವಾಜಸ್ರಂ ಶಿರೋಭಿರ್ವಹಂ
ತ್ಯಾ ದಿಗ್ದಂತಿಘಟಾವಲೀಮುಖಪಟಃ ಕೀರ್ತಿಪ್ರತಾನಃ ಸಿತಃ
ಯತ್ರಸ್ಥಃ ಸ್ವಕರಪ್ರತಾಪಮಹಿಮಾ ಕಸ್ಯಾಪಿ ದೂರಸ್ಥಿತಃ
ತೇಜಃಕ್ರಾಂತ ಸಮಸ್ತಭೂಭೃದಿನ ಏವಾಸೌ ನ ಕಸ್ಯೋಪರಿ ೪೫

ಯದ್ದ್ವಾರೇ ಪರಮಂಡಲಾಧಿಪತಯೋ ದೌವಾರಿಕೈರ್ವಾರಿಕೈ
ರಾಸ್ಥಾನಾವಸರಂ ಪ್ರತೀಕ್ಷ್ಯ ಬಹಿರಪ್ಯಧ್ಯಾಸಿತಾಯಾಸಿತಾ

ಗಾಣಿಕ್ಯಂ ವರರತ್ನಮೌಲಿಖಚಿತಂ ತದ್ವಾಸ್ತಿಕಂ ಹಾಸ್ತಿಕಂ
ನಾದಾಸ್ಯಾಮ ಯದೀತಿ ಯತ್ರ ನಿಜಕಂ ಪಶ್ಯಂತಿ ನಶ್ಯಂತಿ ಚ ೪೬

ಸರ್ಪಂ ಪಾತುಮಸೌ ದದೌ ನಿಜತನುಂ ಜೀಮೂತಕೇತೋಸ್ಸುತಃ
ಶ್ಯೇನಾಯಾಥ ಶಿಬಿಃ ಕಪೋತಪರಿರಕ್ಷಾರ್ಥಂ ದಧೀಚೋಽರ್ಥಿನೇ
ತೇಽಪ್ಯೇಕೈಕಮತರ್ಪಯನ್ ಕಿಲ ಮಹಾಲಕ್ಷ್ಮ್ಯೈ ಸ್ವವಾಮಾಂಗುಲಿಂ
ಲೋಕೋಪದ್ರವಶಾಂತಯೇ ಸ್ಮ ದಿಶತಿ ಶ್ರೀ ವೀರನಾರಾಯಣಃ ೪೭

ಹತ್ವಾ ಭ್ರಾತರಮೇವ ರಾಜ್ಯಮಹರದ್ದೇವೀಂ ಚ ದೀನಸ್ತತೋ
ಲಕ್ಷಂ ಕೋಟಿಮಲೇಖಯನ್ ಕಿಲ ಕಲೌ ದಾತಾ ಸ ಗುಪ್ತಾನ್ವಯಃ
ಯೇನಾತ್ಯಾಜಿ ತನುಃ ಸ್ವರಾಜ್ಯಮಸಕೃದ್ಬಾಹ್ಯಾರ್ಥಕೈಃ ಕಾ ಕಥಾ
ಹ್ರೀಸ್ತಸ್ಯೋನ್ನತಿ ರಾಷ್ಟ್ರಕೂಟ ತಿಲಕೋ ದಾತೇತಿ ಕೀರ್ತ್ಯಾಮಪಿ ೪೮

ಸ್ವಭುಜಭುಜಗ ನಿಸ್ತ್ರಿಂಶೋಗ್ರದಂಷ್ಟ್ರಾಗ್ರ ದಷ್ಟ
ಪ್ರಬಲರಿಪುಸಮೂಹೇಽಮೋಘವರ್ಷೇ ಮಹೀಶೇ
ನ ದಧತಿ ಪದಮಿತಿವ್ಯಾಧಿದುಷ್ಕಾಲಕಾಲೇ
ಹಿಮಶಿಶಿರವಸಂತಗ್ರೀಷ್ಮವರ್ಷಾಶರತ್ಸು ೪೯

ಚತುಸ್ಸಮುದ್ರಪರ್ಯಂತಂ ಸ್ವಮುದ್ರಂ ಯತ್ರ ಸಾಧಿತಂ
ಭಗ್ನಾಸ್ಸಮಸ್ತಭೂಪಾಲಮುದ್ರಾ ಗರುಡಮುದ್ರಯಾ ೫೦

ರಾಜೇಂದ್ರಾಸ್ತೇ ವಂದನೀಯಾಸ್ತು ಪೂರ್ವೇ
ಯೇಷಾಂ ಧರ್ಮಾಃ ಪಾಲನೀಯೋಽಸ್ಮದಾದ್ಯೈಃ
ಧ್ವಸ್ತಾ ದುಷ್ಟಾ ವರ್ತಮಾನಾಃ ಸ್ವಧರ್ಮ
ಪ್ರಾರ್ಥ್ಯಾ ಯೇ ತೇ ಭಾವಿನಃ ಪಾರ್ಥಿವೇಂದ್ರಾಃ ೫೧

ಭುಕ್ತಂ ಕೈಶ್ಚಿದ್ವಿಕ್ರಮೇಣಾಪರೇಭ್ಯೋ
ದತ್ತಂ ಚಾನ್ಯೈಸ್ತ್ಯಕ್ತಮೇವಾಪರೈರ್ಯತ್
ಕಾಸ್ಥಾ ನಿತ್ಯೇ ತತ್ರ ರಾಜ್ಯೇ ಮಹದ್ಭಿಃ
ಕೀರ್ತ್ಯೈ ಧರ್ಮಃ ಕೇವಲಂ ಪಾಲನೀಯಃ ೫೨

ತೇನೇದಮನಿಲವಿದ್ಯುಚ್ಚಂಚಲಮವಲೋಕ್ಯ ಜೀವಿತಮಸಾರಂ
ಕ್ಷಿತಿದಾನಪರಮಪುಣ್ಯಂ ಪ್ರವರ್ತಿತೋ ಬ್ರಹ್ಮದಾಯೋಽಯಂ ೫೩

ಸ ಚ ಪರಮ ಭಟ್ಟಾರಕ ಮಹಾರಾಜಾಧಿರಾಜ ಪರಮೇಶ್ವರ ಶ್ರೀ ಜಗತ್ತುಂಗ ದೇವ ಪಾದಾನುಧ್ಯಾತ ಪರಮ ಭಟ್ಟಾರಕ ಮಹಾರಾಜಾಧಿರಾಜ ಪರಮೇಶ್ವರ ಶ್ರೀಪೃಥ್ವೀ ವಲ್ಲಭ ಶ್ರೀಮದಮೋಘವರ್ಷ ಶ್ರೀವಲ್ಲಭ ನರೇಂದ್ರ ದೇವಃ ಕುಶಲೀ ಸರ್ವಾನೇವ ಯಥಾ ಸಂಬಧ್ಯಮಾನಕಾನ್ ರಾಷ್ಟ್ರಪತಿ-ವಿಷಯಪತಿ-ಗ್ರಾಮಕೂಟ-ಯುಕ್ತಕ ನಿಯುಕ್ತಾಧಿಕಾರಿಕ ಮಹತ್ತರಾದೀನ್ ಸಮಾದಿಶತಿ ಅಸ್ತು ವಃ ಸಂವಿದಿತಂ ಯಥಾ ಮಾನ್ಯಖೇಟ ರಾಜಧಾನ್ಯವಸ್ಥಿತೇನ ಮಯಾ ಮಾತಾಪಿತ್ರೋರಾತ್ಮನಶ್ಚ ಐಹಿಕಾಮುತ್ರಿಕ ಪುಣ್ಯ ಯಶೋಭಿವೃದ್ಧಯೇ॥ ಕರಹಡ ವಿನಿರ್ಗತ ಭರದ್ವಾಜಾಗ್ನಿ ವೇಶ್ಯಾಂಗಿರಸ ಬಾರ್ಹಸ್ಪತ್ಯಾನಾಂ—ಭಾರದ್ವಾಜಗೋತ್ರಸಬ್ರಹ್ಮಚಾರಿಣೇ ಸಾವಿಕೂವಾರಕ್ರಮವಿತ್ಪುತ್ರಾಯ ಗೋಲಷಡಂಗವಿತ್ಪುತ್ರಾಯ ನರಸಿಂಹದೀಕ್ಷಿತಾಯ

ಪುನರಪಿ ತದ್ವಿಷಯ ವಿನಿರ್ಗತಾಯ ತಸ್ಮಿನ್ ಗೋತ್ರೇ ಚ ಭಟ್ಟಪೌತ್ರಾಯ ಗೋವಿಂದಭಟ್ಟ ಪುತ್ರಾಯ ರಚ್ಛಾಡತ್ರಿಕ್ರಮವಿದೇ ತಸ್ಮಿನ್ ದೇಶೇ ವಡ್ಡಮುಖ ಸಬ್ರಹ್ಮಚಾರಿಣೇ ದಾವಡಿಗಪಿಯ ಸಹಾಸಪೌತ್ರಾಯ ವಿಷ್ಣುಭಟ್ಟ ಪುತ್ರಾಯ ತ್ರಿವಿಕ್ರಮಷಡಂಗವಿದೇ ಪುನರಪಿ ತಸ್ಮಿನ್ ದೇಶೇ ವತ್ಸಗೋತ್ರಸಬ್ರಹ್ಮಚಾರಿಣೇ ಹರಿಭಟ್ಟಪೌತ್ರಾಯ ಗೋವಾದಿತ್ಯಭಟ್ಟಪುತ್ರಾಯ ಕೇಶವಗಹಿಯಸಾಹಾಸಾಯ

ಚತುಷ್ಕಾ(ಣಾಂ)ನಾಂ ಬಹ್ವೃಚಶಾಖಾನಾಂ ಏವಂ ಚತುಷ್ಕಸ್ಯ ಬ್ರಾಹ್ಮಣಾನಾಂ ಗ್ರಾಮೋ ದತ್ತಃ ಸಂಜಾಣಸಮಾಪವರ್ತಿನಃ ಚತುರ್ವಿಂಶತಿ ಗ್ರಾಮಮಧ್ಯೇ ದುರಿವಲ್ಲಿಕಾ ನಾಮಗ್ರಾಮಃ ತಸ್ಯ ಚಾಘಾಟನಾನಿ ಪೂರ್ವತಃ ಕಲ್ಲುವೀ ಸಮುದ್ರಗಾಮಿನೀ ನದೀ ದಕ್ಷಿಣತಃ ಉಪ್ಪಲಪತ್ಥಕೋ ಭಟ್ಟಗ್ರಾಮಃ ಪಶ್ಚಿಮತಃ ನಂದಗ್ರಾಮಃ ಉತ್ತರತಃ ಧನ್ನವಲ್ಲಿಕಾಗ್ರಾಮಃ ಅಯಂ ಗ್ರಾಮಸ್ಯ ಸಂಜ್ಞಾನೇ ಪತ್ತನೇ ಶುಂಕಂ ನ ಶುಷ್ಣಯಾಮಿ ಗ್ರಾಮಂ ಸವೃಕ್ಷಮಾಲಾಕುಲಂ ಭೋಕ್ತವ್ಯಂ ಏವಮಯಂ ಚತುರಾಘಾಟನೋಪಲಕ್ಷಿತಃ ಸೋದ್ರಂಗಃ ಸಪರಿಕರಃ ಸದಂಡದಶಾಪರಾಧಃ ಸಭೂತಾಪಾತಪ್ರತ್ಯಾಯಃ ಸೋತ್ಪದ್ಯಮಾನವಿಷ್ಟಿಕಃ ಸಧಾನ್ಯಹಿರಣ್ಯಾದೇಯಃ ಅಚಾಟಭಟಪ್ರವೇಶ್ಯಃ ಸರ್ವರಾಜಕೀಯಾನಾಮಹಸ್ತಪ್ರಕ್ಷೇಪಣೀಯಃ ಆಚಾಂದ್ರಾರ್ಕಾರ್ಣವಕ್ಷಿತಿಸರಿತ್ಪರ್ವತಸಮಕಾಲೀನಃ ಪುತ್ರಪೌತ್ರಾನ್ವಯ ಕ್ರಮೋಪಭೋಗ್ಯಃ ಪೂರ್ವಪ್ರದತ್ತ ಬ್ರಹ್ಮದೇವದಾಯರಹಿತೋಽಭ್ಯಂತರಸಿದ್ಧ್ಯಾ ಭೂಮಿಚ್ಛಿದ್ರನ್ಯಾಯೇನ ಶಕನೃಪಕಾಲಾತೀತಸಂವತ್ಸರಶತೇಷು ಸಪ್ತಸು ನವತ್ಯುತ್ತರ ತ್ರ್ಯಧಿಕೇಷು ನಂದನಸಂವತ್ಸರಾಂತರ್ಗತ ಪುಷ್ಯಮಾಸ ಉತ್ತರಾಯಣ ಮಹಾಪರ್ವಣಿ ಬಲಿಚರು ವೈಶ್ವದೇವಾಗ್ನಿಹೋತ್ರಾತಿಥಿ ಸಂತರ್ಪಣಾರ್ಥಂ ಅದ್ಯೋದಕಾದಿಸರ್ಗೇಣ ಪ್ರತಿಪಾದಿತಃ ಅತೋಽಸ್ಯೋಚಿತಯಾ ಬ್ರಹ್ಮದಾಯಸ್ಥಿತ್ಯಾ ಭುಂಜತೋ ಭೋಜಯತಃ ಕೃಷತಃ ಕರ್ಷಯತಃ ಪ್ರವಿಶತೋ ವಾ ನ ಕೈಶ್ಚಿದಲ್ಪಾಪಿ ಪರಿಪಂಥನಾ ಕಾರ್ಯಾ ತಥಾಗಾಮಿಾ (ಮಿ) ಭದ್ರನೃಪತಿಭಿರಸ್ಮದ್ವಂಶ್ಯೈರನ್ಯೈರ್ವಾ ಸಾಮಾನ್ಯಂ ಭೂಮಿದಾನ ಫಲಮವೇತ್ಯ ವಿದ್ಯುಲ್ಲೋಲಾನ್ಯನಿತ್ಯೈಶ್ವರ್ಯಾಣಿ ತೃಣಾಗ್ರ ಲಗ್ನ ಜಲಬಿಂದುಚಂಚಲಂ ಚ ಜೀವಿತಮಾಕಲಯ್ಯ ಸ್ವದಾಯ ನಿರ್ವಿಶೇಷೋಽಯಮಸ್ಮದ್ದಾಯೋಽನುಮಂತವ್ಯಃ ಪ್ರತಿಪಾಲನೀಯಶ್ಚ ॥ ಯಶ್ಚಾಜ್ಞಾನತಿಮಿರಪಟಲಾವೃತಮತಿ ರಾಚ್ಛಿಂದ್ಯಮಾನಕಂ ಚಾನುಮೋದೇತ ಸ ಪಂಚಭಿರ್ಮಹಾಪಾತಕ್ಯೈಃ ಸೋಪಪಾತಕೈಶ್ಚ ಸಂಯುಕ್ತಃ ಸ್ಯಾದಿತ್ಯುಕ್ತಂ ಚ ಭಗವತಾ ವೇದವ್ಯಾಸೇನ ವ್ಯಾಸೇನ ॥

ಷಷ್ಟಿಂ ವರ್ಷಸಹಸ್ರಾಣಿ ಸ್ವರ್ಗೇ ತಿಷ್ಠತಿ ಭೂಮಿದಃ
ಆಚ್ಛೇತ್ತಾ ಚಾನುಮಂತಾ ಚ ತಾನ್ಯೇವ ನರಕೇ ವಸೇತ್
ವಿಂಧ್ಯಾಟವೀಷ್ವತೋಯಾಸು ಶುಷ್ಕಕೋಟರವಾಸಿನಃ
ಕೃಷ್ಣಸರ್ಪಾ ಹಿ ಜಾಯಂತೇ ಭೂಮಿದಾನಂ ಹರಂತಿ ಯೇ ೫೫

ಅಗ್ನೇರಪತ್ಯಂ ಪ್ರಥಮಂ ಸುವರ್ಣಂ ಭೂರ್ವೈಷ್ಣವೀ ಸೂರ್ಯಸುತಾಶ್ಚ ಗಾವಃ
ಲೋಕತ್ರಯಂ ತೇನ ಭವೇದ್ಧಿ ದತ್ತಂ
ಯಃ ಕಾಂಚನಂ ಗಾಂ ಚ ಮಹೀಂ ಚ ದದ್ಯಾತ್ ೫೬

ಬಹುಭಿರ್ವಸುಧಾ ಭುಕ್ತಾ ರಾಜಭಿಃ ಸಗರಾದಿಭಿಃ
ಯಸ್ಯ ಯಸ್ಯ ಯದಾ ಭೂಮಿಃ ತಸ್ಯ ತಸ್ಯ ತದಾ ಫಲಂ ೫೭

ಸ್ವದತ್ತಾಂ ಪರದತ್ತಾಂ ವಾ ಯತ್ನಾದ್ರಕ್ಷ ನರಾಧಿಪ
ಮಹೀಂ ಮಹೀಮತಾಂ ಶ್ರೇಷ್ಠ ದಾನಾಚ್ಛ್ರೇಯೋಽನುಪಾಲನಂ ೫೮

ಇತಿ ಕಮಲದಲಾಂಬುಬಿಂದುಲೋಲಾಂ
ಶ್ರಿಯಮನುಚಿಂತ್ಯ ಮನುಷ್ಯಜೀವಿತಂ ಚ
ಅತಿವಿಮಲಮನೋಭಿರಾತ್ಮನೀನೈ
ರ್ನಹಿ ಪುರುಷೈಃ ಪರಿಕೀರ್ತಯೋ ವಿಲೋಪ್ಯಾಃ ೫೯

ಲಿಖಿತಂ ಚೈತತ್ ಧರ್ಮಾಧಿಕರಣಸೇನಭೋಗಿಕೇನ ವಾಲಭಕಾಯಸ್ಥವಂಶ
ಜಾತೇನ ಶ್ರೀಮದಮೋಘವರ್ಷ(ಪಾದ)ಕಮಲಾನುಜೀವಿನಾ ಗುಣಧವಲೇನ
ವತ್ಸರಾಜಸೂನುನಾ ಮಹತ್ತಕೋಗೋಗುರಾಣಕೋ ರಾಜಸ್ವಮುಖಾದೇಶೇನ
ದೂತಕ ಇತಿ ಮಂಗಲಂ ಮಹಾಶ್ರೀ ೬೦

## ೧೦. ಖಾಜಿಪೇಟೆ ಶಾಸನ (ಕ್ರಿ.ಶ. ೮೭೨)*

..................
ತ್ರೆಂಟನೇಯ ಸಂಡನ ಯೆಂ
ನ್ಬ ಸನ್ವಚ್ಛರವಾಗೆ ಕ
ನ್ನೆಯೊೞ್ ಬೃಹಸ್ಪತಿ ಪ್ರವ
ರ್ತಿಸೆ ಸ್ವಸ್ತ್ಯಮೋಘವ
ರ್ಷ ಶ್ರೀ ಪೃಥ್ವೀವಲ್ಲಭ
ಮಹಾರಾಜಾಧಿರಾಜ ಪರ
ಮೇಶ್ವರ ಭಟ್ಟರರ ಪಾದ
ಪದ್ಮೋಪಸೇವಿತಲಬ್ಧ [ಬ್ಧ]
ಸಮಧಿಗತಪಞ್ಚ
ಮಹಾಶಬ್ದ ಮಹಾಸಾಮಂತಾ
ಧಿಪತಿ ಸತ್ಯಾಶ್ರಯ
ಶ್ರೀಮದ್ಭೀಮರಸರ್ ಸರ್ವಗು
ಣ ಜನ ಸಂಸ್ತೂಯಮಾನ ಧ
ರ್ಮ [ರ್ಮ್ಮ] ಸಾರತಿ ಚತುಸ್ಸಮು
ಯಾಶ್ರಯ ಸಕಳ ಭುವ
ನ ವಿಖ್ಯಾತ ಕೀರ್ತಿ [ರ್ತ್ತಿ] ಶ್ರೀ ಮ
ದಮ್ಮರ್ಕೊಣ್ಡಗೆ ಶ್ರಾವಣ
ಮಾಸ ಶುದ್ಧ ಪಕ್ಷದ
ಪಞ್ಚಮಿಯುಮ್ ಆದಿತ್ಯ
..................
ಧ್ರಮ್ಮ ಸಾಸಿರದ ಮೂನು
ಪೊಟಿಲ ನಿಗ್ಗುರ್ಂಡಿ ಆಚ
ದೊಳ್ = ಎರಡು ದ್ರಮ್ಮ ಮಾವ
ನಿಾಲ್ಲಾದ ಮಣೆಯೊಳ್ = ಮೂ
ರುಪಣ ಬಾದುಬ್ಬೆಯ ಪ
ರ್ವ[ರ್ವ್ವ]ದನ್ದು ಪೆರ್ಗ್ಗಡೆ ಗೊಪಗ
ರಣದ ದ್ರಮ್ಮಮ್ = ಎಣ್ಬತ್ತು
ಕರಣಕ್ಕೆ ಇರ್ಪತ[ತ್ತು]ನಾಲ್ಕು
ದ್ರಮ್ಮ ತಳಾರಜಕ್ಗಿ ಇಪ್ಪ
ತ್ತನಾಲ್ಕು ದ್ರಮ್ಮ ದೀವಳಿಗೆ
ಯ ಪರ್ವ[ರ್ವ್ವದ]ನ್ದು ಕರಣಕ್ಕೆ
ಇರ್ಪತ್ತನಾಲ್ಕು ದ್ರಮ್ಮಟಿ

* Annual Report of the Archaeological Department of H.E.H. The Nizam's Dominions 1343 F (1933–34 A.C.)

ಳಾರಱ್ಗೆ ಇರ್ಪ್ಪತ್ತನಾಲ್ಕು
ದ್ರಮ್ಮ ಇಱಿದೊಡೆ ಇಱ್ನೂ
ರ ಅಯ್ವತು ದ್ರಮ್ಮ ಬಾ
ಱಿ ಇಱಿದೊಡೆ ನೂಱ ಇ
ರ್ಪ್ಪತ್ತ ಅಯ್ವತು ದ್ರಮ್ಮ ಪಾರ
ದಾರ ಮಾಡಿದೊಡೆ ಇಱ್ನೂಱ
(ಇ)ರ್ಪ್ಪತ್ತನಾಲ್ಕು ದ್ರಮ್ಮ ಆ
...ಮಿಣ್ಕಡೆ ಇರ್ಪ್ಪತ್ತನಾಲ್ಕು
(ದ್ರ)ಮ್ಮ ಇಟ್ವಲವ್ ಇಲ್ಲ ಅಭಿ
(ರ್)ಆಗಮ್ = ಇಲ್ಲ ಅಮವಾಸ್ಯ
ಯಂದು ತಳಱಱ್ಗೆ ಆವಣ
ದೊಳ್ = ಒರ್ವ್ವಳ್ಳ ಜೋಳಮ್ = ಮನೆ
ಯೊಳ್ = ಒರ್ವ್ವಳ್ಳಮ್ ಜೋಳಂ ಸತ್ಯಾ
ಸ್ರಯದೊಳ ಸಗರಕ್ಕೊ
ಲ್ಲಿ ತಳಱಱ್ಗೆ ಪದಿಯ
ಡಿಯೊನ್ದು ಬೋವಱ್ಗೆ ಪಡಿ
ಯಡಿಯೊನ್ದು ತಳಱಱ್ಗ
ಬಾವಱ್ಗವ್ = ಮದುವೆಯೊಱ್ = ಓ
ರೊನ್ದು ದ್ರಮ್ಮ ಮಯ್ ನಱಿದೊ
ಡೆ ಬೋವಱ್ಗೆ ಪಣಮೂರುತ
ಳಾರಱ್ಗೆ ಪಣಮೂರು ಬಾ
ರಸಱ್ಗೆ ಯೊದ್ಡೆ ಬೋವಱ್ಗೆ ಪ
ಣಮೂಱು ತಳಾರಱ್ಗೆ ಪಣ
ಮೂಱು ಮಾಲೆಗಱ ಪೊದೆ
ರ್ = ಉಳ್ಳನ್ನೆಗಂ ಸಲ್ಲೆ ಈ ಸ್ಥಿ
ತಿಯನ್ = ತಪ್ಪಿಕೊಣ್ಡರಪ್ಪೊ
ಡೆ ಬಾರಣಾಸಿಯೊಳ್ ಸಾಸಿ
ರ್ವ್ವರ್ ಪಾ(ಪ್ಪಾ)ರ್ವ(ರ್ವ್ವ)ರು ಸಾಸಿರಜ್ ಕೆಱೆ
ಯು ಸಾಸಿರನ್ = ದೇಗುಲಮು
ಸಾಸಿರಜ್ = ಕವಿಲೆಯುಮಾ
ನಱಿದ ಪಾಪಮ್ = ಅಕ್ಕ ದೇವ
ಬ್ರಾಹ್ಮಣ ವರ್ಜ(ರ್ಜ್ಜ)ತಂ ಶಾಸನಂ
ಮುಱಿಪ್ಪೊಕ್ಕಱ್ಗೆ ಮೂಱು ಬಿಟ್ಟ
ಬಹುಭಿರ್ = ವ(ವ್ವ)ಸುಧಾ ಭುಕ್ತಾ
ರಾಜನೋ(ಭಿಃ) ಸಕ(ಗ)ರಾದಿಭಿಃ
ಯಸ್ಯ ಯಸ್ಯ ಯದಾ ಭೂಮಿ(ಃ)
ತಸ್ಯ ತಸ್ಯ ತದಾ ಫಲಂ

## ೧೧. ಕಾನ್ಹೇರಿ ಶಾಸನ*

ಕ್ರಮಾಂಕ ೧೫ (ಕ್ರಿ.ಶ. ೮೫೪)

ಓಂ ಸ್ವಸ್ತಿ ಶಕನೃಪಕಾಲಾತೀತಸಂವತ್ಸರಶತೇಷು
ಸಪ್ತಸು ಪಂಚಸಪ್ತತಿಷ್ವಂಕತಃ (ಅಪಿ ಸಮ್ವ)ತ್ಸರಶಃ
೭೭೫ ತದಂತರ್ಗ್ಗತ ಪ್ರಜಾಪತಿ ಸಮ್ವತ್ಸರಾಂತಃಪಾತಿ
ಆಶ್ವಿನ ಬಹುಲದ್ವಿತೀಯಾ (ಯಾಂ ಬುಧ) ದಿನೇ ಅಸ್ಯಾಂ
ಸಮ್ವ(ತ್ಸರ)

(೨) ಮಾಸಪಕ್ಷದಿವಸಪೂರ್ವಾಯಾಂ ತಿಥೌ ಪರಮಭಟ್ಟಾರಕ
ಮಹಾರಾಜಾಧಿರಾಜಪರಮೇಶ್ವರ ಶ್ರೀಮಜ್ಜಗತ್ತುಂಗದೇವ
ಪಾದಾನುಧ್ಯಾತ ಪರಮಭಟ್ಟಾರಕ ಮಹಾರಾಜಾಧಿರಾಜಪರಮೇಶ್ವರ
ಶ್ರೀಮದಮೋಘವರ್ಷದೇವಪ್ರವರ್ಧಮಾ

(೩) ನ ವಿಜಯರಾಜ್ಯೇ ತತ್ಪ್ರಸಾಕೃತಃ ಅಶೇಷಕೊಂಕಣವಲ್ಲಭಃ
ಶ್ರೀ ಪುಲ್ಲಶಕ್ತಿಃ ಸಮಧಿಗತಪಂಚಮಹಾಶಬ್ದ ಮಹಾಸಾಮಂತ
ಶೇಖರಃ ತತ್ಪಾದಾನುಧ್ಯಾತಸಮಧಿಗತಪಂಚಮಹಾಶಬ್ದ ಮಹಾಸಾಂತಶೇಖರಃ
ಶ್ರೀ ಕಪರ್ದ್ದಿ ರಾ(ಜ್ಞಃ ಪ್ರವರ್ಧ)

(೪) ಮಾನವಿಜಯರಾಜ್ಯೇ ಇಹೈವ ಗೌಡವಿಷಯಾದಾಗತಃ
ಪರಮಸ್ಯೆಗತಃ ಗೌಮಿನಃ ಅವಿಘ್ನಾಕರೇಣ ಅಸ್ಮಿಂ
ಶ್ರೀ ಕೃಷ್ಣ ಗಿರಿಮಹಾರಾಜಮಹಾವಿಹಾರೇ ಉಪಶಮಕೋ[ಲಿಹಿವೇಶ್ಮಿ]ಕಾ
(ಃ ಸಚೀ)ವರಿಕಾಃ ಸಮೇತಾ ಅಕ್ಷ್ಯನೀತಿಃ ದ್ರಾಮ್ಮಶತೈಕೇನ ಕಾರಾಪಿತಾಃ
ಇಯಂ ಚಾಕ್ಷಯನೀತೀರ್ಯಾವದಹಂ ಜೀವಾಮಿ ತಾವನ್ಮಮೋಪಭೋಗಃ
ಮಮೋಪರತೌ ಕ್ಷಶ[ಲೈಃ] ಕಾರೀ ನಿರೂಪ್ಯಾನಶ್ಯಂ ದಾ

(೫) ತವ್ಯಾ ನ ಪರಿಪಂಥನಾ ಕಾರ್ಯಾ ಯಃ ಪ್ರಲೇಪಿಷ್ಯತಿ ಸ
ಅವೀಚಿಪರೀ(ತಾಪ ಕುಂಭೀ)ಪಾಕಾದಿಷು ನರಕೇಷೂತ್ಪ
ತ್ಸ್ಯತೇ ಶ್ವಾನೋದ್ಗಿರ್ಣ್ಣಗೋಮಾಂಸಂ ಸ ಭಕ್ಷಯಿಷ್ಯತ್ಯೇವ
ವ್ಯವಸ್ಥಾ(ಚಾ)ರ್ಯಸಂಘಸ್ಯ ಪುರ(ತೋ) ಆರೋಚ್ಯ
ಪ್ರತಿಷ್ಠಾಪ್ಯ ಲಿಖಾಪಿತಾ ಸಾಕ್ಷಿಣಶ್ಚಾತ್ರ ಪಾತ್ತಿಯಾಣಕ ಯೋಗನಾಮಾ
ಚಿಖ್ಯಿಲ್ಲಪ (ಲ್ಲಿ)ಕಾ ಆಚಾರ್ಯಶ್ಚಾತ್ರ ಸಾಕ್ಷೀ (ಪುಣ್ಯಂ)ಮ
[ನ್ತ್ರೀ] ಸಾಕ್ಷಿ(ಣಾಂ)ಭೋ

(೬) ಭೋದಿ(ವ್ಯಬುದ್ಧಶ್ರೀ)ಕದಾಚೀದಪಾತ್ರಂ ಸ (ತ್ವಾಪಾ)
ಚಾರಿಣೋ ಸಾಧ್ವಾಚಾರಸ್ಯ ಪ್ರತಿಪಾದಯಿಷ್ಯೇ ಸ

---

* ಇಂಡಿಯನ್ ಆಂಟಿಕ್ವೆರಿ, ಸಂಪುಟ ೧೩.

